# ಕರ್ನಾಟಕ-ಆಂಧ್ರಪ್ರದೇಶದ ಗಡಿನಾಡ ಕುರುಬ ಸಮುದಾಯ: ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ವಿರುಪಾಕ್ಷಿ ಎನ್ ಬಿ

ಮಾರ್ಗದರ್ಶಕರು

ಡಾ. ಎಫ್.ಟಿ.ಹಳ್ಳಿಕೇರಿ

ಪ್ರಾಧ್ಯಾಪಕರು






ಭಾಷಾ ನಿಕಾಯ

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ- ೫೮೩ ೨೭೬

೨೦೧೬

# ಕರ್ನಾಟಕ–ಆಂಧ್ರಪ್ರದೇಶದ ಗಡಿನಾಡ ಕುರುಬ ಸಮುದಾಯ: ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು

**ವಿರುಪಾಕ್ಷಿ ಎನ್ ಬಿ**

ಮಾರ್ಗದರ್ಶಕರು

**ಡಾ. ಎಫ್ ಟಿ ಹಳ್ಳಿಕೇರಿ**

ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ



**ಭಾಷಾ ನಿಕಾಯ**

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೬

# ದೃಢೀಕರಣ ಪತ್ರ

**ವಿರುಪಾಕ್ಷಿ ಎನ್.ಬಿ** ಇವರು **ಕರ್ನಾಟಕ–ಆಂಧ್ರಪ್ರದೇಶದ ಗಡಿನಾಡ ಕುರುಬ ಸಮುದಾಯ: ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 05-11-16

**ಡಾ. ಎಫ್.ಟಿ. ಹಳ್ಳಿಕೇರಿ**

ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

# ಪ್ರಮಾಣ ಪತ್ರ

**ಕರ್ನಾಟಕ–ಆಂಧ್ರಪ್ರದೇಶದ ಗಡಿನಾಡ ಕುರುಬ ಸಮುದಾಯ: ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಎಫ್.ಟಿ. ಹಳ್ಳಿಕೇರಿ ಅವರ ಮಾರ್ಗದರ್ಶನ ದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಭಾಷಾ ನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ವಿರುಪಾಕ್ಷಿ ಎನ್.ಬಿ**

ಸ್ಥಳ : ವಿದ್ಯಾರಣ್ಯ

ದಿನಾಂಕ : 05-11-16

# ಪರಿವಿಡಿ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ–ವ್ಯಾಪ್ತಿ ಮತ್ತು ಸ್ವರೂಪ

## ಪ್ರವೇಶ

ಭಾರತದಾದ್ಯಂತ ಕಂಡುಬರುವ ಜನಸಮುದಾಯಗಳು ಜಗತ್ತಿನ ಇತರೆ ಸಮುದಾಯಗಳಿಗಿಂತ ಭಿನ್ನ ಮತ್ತು ವಿಶಿಷ್ಟ ಸಂಸ್ಕೃತಿ ಉಳ್ಳವುಗಳಾಗಿವೆ. ಅಂದರೆ ತಮ್ಮದೇ ಆದ ಆಚಾರ–ವಿಚಾರ, ಉಡುಗೆ–ತೊಡುಗೆ, ಭಾಷೆ, ನಂಬುಗೆ, ದೈವಾರಾಧನೆಯಂತಹ ವಿಷಯಗಳಲ್ಲಿ ಬಹುರೂಪತೆಯನ್ನು ಹೊಂದಿದೆ. ಹಾಗಾಗಿಯೇ ಭಾರತೀಯ ಸಮಾಜವನ್ನು ವಿಶಿಷ್ಟ ಸಂಸ್ಕೃತಿಯ ತೊಟ್ಟಿಲು ಎಂದು ಕರೆಯುವರು. ಹೀಗೆ ತಮ್ಮದೇ ಆದ ಸಾಂಸ್ಕೃತಿಕ ಚಹರೆಗಳಿಂದ ಗುರುತಿಸಿಕೊಂಡಿರುವ ದೇಶದ ಮೇಲೆ ಹಿಂದಿನಿಂದಲೂ ವಿದೇಶಿಯರ ದಾಳಿಗಳು ನಡೆಯುತ್ತಲೇ ಬಂದಿವೆ; ಒಂದಿಲ್ಲೊಂದು ರೀತಿಯಲ್ಲಿ ಇಂದಿಗೂ ನಡೆಯುತ್ತಲೇ ಇವೆ. ಅದರಲ್ಲಿಯೂ ವ್ಯಾಪಾರಕ್ಕಾಗಿ ಬಂದ ಯುರೋಪಿಯನ್ನರು ಭಾರತದಲ್ಲಿದ್ದ ಅರಾಜಕತೆಯನ್ನು ಬಳಸಿಕೊಂಡು ರಾಜಕೀಯವಾಗಿಯೂ ಪ್ರಬಲರಾಗಿ ಸುಮಾರು ಮೂರು ಶತಮಾನಗಳವರೆಗೆ ನಮ್ಮನ್ನು ಆಳಿದ್ದಾರೆ. ಆದರೂ ಅವರಿಗೆ ಬಗೆಹರಿಯಲಾರದ ಕಗ್ಗಂಟಾಗಿ ಪರಿಣಮಿಸಿದ್ದು ಬಾರತೀಯ ಬಹುರೂಪಿ ಸಂಸ್ಕೃತಿ.

ಭಾರತೀಯರನ್ನು ತಮ್ಮ ಅಧೀನದಲ್ಲಿ ಇಟ್ಟುಕೊಳ್ಳುವುದಕ್ಕಾಗಿಯೇ ಭಾರತೀಯ ಬಹುಮುಖಿ ಸಮಾಜವನ್ನು ವಿವಿಧ ಆಯಾಮಗಳಲ್ಲಿ ಅಧ್ಯಯನ ಮಾಡಲು ತೊಡಗಿದರು. ಇದರ ಉದ್ದೇಶ ಏನೇ ಇದ್ದರೂ ಕಾಲಾಂತರದಲ್ಲಿ ಇದು ಭಾರತೀಯರಿಗೆ ವರವಾಗಿಯೇ ಪರಿಣಮಿಸಿತು. ಏಷ್ಯಾಟಿಕ್ ಸೊಸೈಟಿಯಿಂದ ಪ್ರಾರಂಭವಾದ ಈ ಅಧ್ಯಯನಗಳು ಎಡ್ವರ್ಡ್ ಥರ್ಸ್ಟನ್. ಎಂಥೋಮನ್, ಮ್ಯಾಕ್ಸ್‌ಮುಲ್ಲರ್, ಎಲ್ವಿನ್, ಇ.ಬಿ.ಟೇಲರ್, ರ್‍ಯಾಡ್‌ಕ್ಲಿಪ್ ಬ್ರೌನ್ ರಿಂದ ಮೊದಲ್ಗೊಂಡು ಭಾರತದ ಎಮ್.ಎನ್.ಶ್ರೀನಿವಾಸ್, ಎಚ್.ವಿ.ನಂಜುಂಡಯ್ಯ, ಅನಂತಕೃಷ್ಣ ಅಯ್ಯರ್ ಮುಂತಾದವರಿಂದ ಮುಂದುವರಿದವು ಇವರು ಭಾರತದ ವಿವಿಧ ಪ್ರದೇಶಗಳಲ್ಲಿ ನೆಲೆಸಿರುವ ವಿಭಿನ್ನ ಜನಸಮುದಾಯಗಳನ್ನು ಕುರಿತು ಅಧ್ಯಯನಗಳನ್ನು ಆರಂಭಿಸಿದರು.

ಇಂಗ್ಲಿಷ್ ಶಿಕ್ಷಣ ಮತ್ತು ಸಮಾಜ ವಿಜ್ಞಾನಗಳ ಬೆಳವಣಿಗೆಯಿಂದಾಗಿ ವಿದೇಶಿ ವಿದ್ವಾಂಸರ ಜೊತೆಗೆ ಭಾರತೀಯ ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು ಸಾಮಾಜಿಕ ಅಧ್ಯಯನಗಳನ್ನು ಆರಂಭಿಸಿದರು. ಅವರಲ್ಲಿ ಜಿ.ಎಸ್.ಘುರ್ಯೆ, ಎಮ್.ಎನ್. ಶ್ರೀನಿವಾಸ, ಅನಂತಕೃಷ್ಣಯ್ಯ ಪ್ರಮುಖರು. ಇವರು ಪಾಶ್ಚಾತ್ಯರ ಚಿಂತನಾ ಕ್ರಮವನ್ನು ಅನುಸರಿಸಿ ಲಭ್ಯವಿರುವ ಪ್ರಾಚೀನ ಸಾಹಿತ್ಯ ಆಕರಗಳ ಮುಖೇನ ಭಾರತೀಯ ಸಮಾಜವನ್ನು ತಿಳಿಸುವ ಪ್ರಯತ್ನ ಮಾಡಿದರು. ಇದನ್ನೇ 'ದಿ ಬುಕ್ ರಿವಿವ್ಯೂ' ದೃಷ್ಟಿಕೋನ ಎನ್ನುವರು. ಇದರ ಮುಂದುವರೆದ ಭಾಗವಾಗಿ ಕಾಮ್ಟೆಯವರ ಪ್ರತ್ಯಕ್ಷ ಪ್ರಮಾಣವಾದ ಮತ್ತು ಡರ್ಖಿಮ್ ಅವರ ಸಮಾಜಶಾಸ್ತ್ರೀಯ ಮಾದರಿಗಳ ಅಧ್ಯಯನ ಕ್ರಮಗಳು ಆರಂಭವಾದವು. ಇದು ಸಾಮಾಜಿಕ ರಚನೆಯನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವುದರ ಜೊತೆಗೆ ಪೂರಕವಾಗಿ ಸಮಾಜದ ಉಪ ಭಾಗಗಳು ಹೇಗೆ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ಗ್ರಹಿಸುವಲ್ಲಿ ಸಹಾಯಕವಾದವು. ಇದು ಮುಂದುವರೆದು ಸಮುದಾಯ ಅಧ್ಯಯನಗಳಿಗೆ ದಾರಿಯಾಯಿತು. ಇದರಲ್ಲಿ ಕ್ಷೇತ್ರಕಾರ್ಯ ದೃಷ್ಟಿಕೋನದಲ್ಲಿ ಸಮುದಾಯಗಳನ್ನು ಅಧ್ಯಯನ ಕೈಗೊಳ್ಳುವುದು ಮುಖ್ಯವಾಗಿರುತ್ತದೆ. ಏಕೆಂದರೆ ಸಮುದಾಯಗಳ ಒಟ್ಟಾರೆ ಜೀವನ ಕ್ರಮವನ್ನು ಸಮಗ್ರವಾಗಿ ಕಟ್ಟಿಕೊಡಲು ಸಹಕಾರಿಯಾಗಿದೆ.

ಈ ಎರಡೂ ದೃಷ್ಟಿಕೋನಗಳಿಗೆ ಭಿನ್ನವಾಗಿ ಮಾರ್ಕ್ಸ್‌ವಾದಿ ದೃಷ್ಟಿಕೋನವನ್ನು ಆರ್.ಕೆ. ಮುಖರ್ಜಿಯವರು ಪ್ರತಿಪಾದಿಸಿದರು. ಅದರ ಮಿತಿಗಳು ಏನೇ ಇದ್ದರೂ ಗತಿತಾರ್ಕಿಕ ಭೌತವಾದದ ಹಿನ್ನೆಲೆಯಲ್ಲಿ ಭಾರತೀಯ ಸಮಾಜವನ್ನು ಚಾರಿತ್ರಿಕವಾಗಿ ವಿಶ್ಲೇಷಣೆಗೆ ಒಳಪಡಿಸುವಲ್ಲಿ ಮುಖ್ಯವಾಯಿತು ಎಂದರೆ ತಪ್ಪಾಗಲಿಕ್ಕಿಲ್ಲ. ಬ್ರಿಟಿಷರ ವಸಾಹತುಶಾಹಿಗೆ ಒಳಪಟ್ಟ ಭಾರತದಲ್ಲಿ ಮಾರ್ಕ್ಸ್‌ವಾದಿ ಸಿದ್ಧಾಂತಕ್ಕಿಂತಲೂ ಆಂತೋನಿಯೋ ಗ್ರಾಂಶಿ ಅವರ ಸಬಾಲ್ಟ್ರನ್ ಅಧ್ಯಯನ ವಿಧಾನವು ಹೆಚ್ಚು ಉಪಯುಕ್ತವಾಯಿತು. ರಾಮಚಂದ್ರ ಗುಹಾ ಅವರು ಭಾರತಕ್ಕೆ ಈ ದೃಷ್ಟಿಕೋನವನ್ನು ಅನ್ವಯಿಸಿದರು. ದಲಿತ, ಆದಿವಾಸಿ, ಹಿಂದುಳಿದ, ಮಹಿಳೆ, ವೃದ್ಧರ ಕುರಿತಾದ ಈ ಅಧ್ಯಯನಗಳು ಸಮುದಾಯಗಳ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ ವಿಷಯಗಳನ್ನು ಗ್ರಹಿಸುವಲ್ಲಿ ಸಹಕಾರಿಯಾದವು. ಹೀಗೆ ವಿದೇಶಿ ಮತ್ತು ದೇಸೀ ವಿದ್ವಾಂಸರು ಈ ಸಮುದಾಯಗಳ ಚರಿತ್ರೆ, ಸಾಮಾಜಿಕ ಚಲನೆ, ಅಭಿವೃದ್ಧಿ, ಅನನ್ಯತೆ ಮತ್ತು ಸಾಂಸ್ಕೃತಿಕ ವಿಷಯಗಳಿಗೆ ಸಂಬಂಧಿಸಿದಂತೆ ಅಧ್ಯಯನ ನಡೆಸಿದ್ದಾರೆ. ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಇಂತಹ ಸಮುದಾಯಗಳ ಅಭಿವೃದ್ಧಿಯ ಬಗೆಗೆ ಗಮನ ಹರಿಸುತ್ತಾ ಹಲವಾರು ಯೋಜನೆಗಳನ್ನು ರೂಪಿಸುತ್ತಾ ಬಂದಿವೆ. ಈ ಸಮುದಾಯಗಳಲ್ಲಿ ಕೆಲವು ಸಂವಿಧಾನಬದ್ಧ ಸವಲತ್ತುಗಳನ್ನು ಪಡೆಯುತ್ತಾ ಸಮಾಜ ಮುಖ್ಯವಾಹಿನಿಗೆ ಬರಲು ಪ್ರಯತ್ನಿಸುತ್ತವೆ. ಆದರೆ ಕೆಲವು ಸಮುದಾಯಗಳು ತುಂಬಾ ಹಿಂದುಳಿದಿರುವಿಕೆಯಿಂದ ಸಂವಿಧಾನ ಬದ್ಧ ಸೌಕರ್ಯಗಳನ್ನು ಪಡೆಯುವ ಅವಕಾಶವಿದ್ದರೂ

ಅವುಗಳನ್ನು ಪಡೆಯಲು ಸಾಧ್ಯವಾಗುತ್ತಿಲ್ಲ. ಏಕೆಂದರೆ ಈ ಸಮುದಾಯಗಳು ಇನ್ನೂ ಅಕ್ಷರ ಪ್ರಪಂಚದಿಂದ ದೂರವೇ ಉಳಿದಿವೆ. ಕೆಲವರು ಶಿಕ್ಷಣವನ್ನು ಪಡೆದಿದ್ದರೂ ಸರ್ಕಾರಿ ಸೌಲಭ್ಯಗಳಿಂದ ವಂಚಿತರಾಗಿರುವುದು ಕಂಡುಬರುತ್ತದೆ. ಇದಕ್ಕೆ ಹಲವು ಕಾರಣಗಳಿವೆ. ಈ ರೀತಿಯ ಅವಕಾಶಗಳಿಂದ ವಂಚಿತವಾದ ಸಮುದಾಯಗಳು ಸಾಮಾಜಿಕವಾಗಿ ಪ್ರತ್ಯೇಕಗೊಂಡಿವೆ. ಇಂತಹ ಹಿಂದುಳಿದ ಮತ್ತು ದಲಿತ ಸಮುದಾಯಗಳು ಅತ್ತ ತನ್ನ ಪರಂಪರೆ ಮತ್ತು ಮೂಲ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಸಾಧ್ಯವಾಗದೇ ಇತ್ತ ಆಧುನಿಕ ಸಂಸ್ಕೃತಿಯನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳದೇ ಬಿಕ್ಕಟ್ಟಿನಲ್ಲಿ ಸಿಲುಕಿವೆ. ಇಂತಹ ಸಮುದಾಯಗಳಲ್ಲಿ ಕರ್ನಾಟಕ–ಆಂಧ್ರಪ್ರದೇಶದಲ್ಲಿ ನೆಲೆಸಿರುವ ಕುರುಬ ಸಮುದಾಯವೂ ಒಂದಾಗಿದೆ.

ಪ್ರಾಚೀನ ಭಾರತದ ಜನ ಸಮುದಾಯಗಳಲ್ಲಿ ಕುರುಬ ಸಮುದಾಯವು ಪ್ರಮುಖವಾದುದು. ಆಹಾರ ಸಂಗ್ರಹಿಸಲು ಬಹಳ ಕಷ್ಟಪಡುತ್ತಿದ್ದ ಆದಿ ಮಾನವ ಬೇಟೆಯಿಂದ ಹಿಡಿದು ಪ್ರಾಣಿಗಳನ್ನು ಸಾಕುವ ಹಂತದವರೆಗೆ ಸಾಗಿ ಬಂದು ನಂತರದ ಕಾಲಘಟ್ಟದಲ್ಲಿ ಕೃಷಿಯಲ್ಲಿ ತೊಡಗಿದ. ಕುರಿ ಮತ್ತು ದನಗಳೇ ಮೊದಲ ಸಾಕಿ ಸಲಹಲು ದೊರೆತ ಆಹಾರೋತ್ಪನ್ನ ಪ್ರಾಣಿಗಳಾದವು. ಮೊದಮೊದಲು ಮರದ ತೊಗಟೆ, ಇತರೆ ನೈಸರ್ಗಿಕ ಸಸ್ಯ ಮೂಲಗಳನ್ನು ತನ್ನ ಉಡುಪುಗಳನ್ನಾಗಿ ಬಳಸುತ್ತಿದ್ದ. ಕಾಲಾಂತರದಲ್ಲಿ ಕುರಿಗಳ ಉಣ್ಣೆಯಿಂದ ಉಡುಪುಗಳನ್ನು ತಯಾರಿಸಲು ಆರಂಭಿಸಿ ಬಳಸತೊಡಗಿದ. ಹೀಗೆ ಮಾನವನು ಭೌತಿಕವಾಗಿ ವಿಕಾಸವಾದಂತೆ ಬೌದ್ಧಿಕ ಮಟ್ಟದಲ್ಲಿ ಕೆಲವೊಂದು ಪರಿವರ್ತನೆಗಳು ಕಂಡುಬಂದವು. ಕಾಲ ಸರಿದಂತೆ ವೃತ್ತಿಯಾಧಾರಿತ ಸಮುದಾಯಗಳ ಹುಟ್ಟಿಗೆ ಕಾರಣಗಳಾದವು.

ಈ ಕುರಿಗಳು ಮತ್ತು ಅವುಗಳಿಂದ ಪಡೆಯುವ ಉಣ್ಣೆಯು ಕುರುಬ ಸಮುದಾಯದ ಆರ್ಥಿಕ ಚಟುವಟಿಕೆಗಳಿಗೆ ಮೂಲಗಳಾದವು. “ಕರ್ನಾಟಕ ಮತ್ತು ಭಾರತದಲ್ಲಿ ಬಹುಸಂಖ್ಯಾತರಾಗಿ ಜೀವಿಸುತ್ತಿದ್ದರೂ ಹೆಚ್ಚಾಗಿ ಕುರಿಸಾಕಾಣಿಕೆ ಮತ್ತು ಕೃಷಿ ಕಾಯಕದಲ್ಲಿ ತೊಡಗಿಕೊಂಡಿದ್ದು, ತಮ್ಮ ಜೀವನ ವೃತ್ತಿಯ ಕಾರಣದಿಂದ ಅಲೆಮಾರಿತನವನ್ನು ಮೈಗೂಡಿಸಿಕೊಂಡಿದ್ದಾರೆ. ಒಂದೆಡೆ ನೆಲೆನಿಂತು ಸುಖ ಜೀವನಕ್ಕೆ ತಮ್ಮನ್ನು ಒಡ್ಡಿಕೊಳ್ಳದೇ ಸರಳವಾದ ಮಿತ ಆಸೆ ಆಕಾಂಕ್ಷೆಗಳ ವರ್ತುಲದಲ್ಲಿ ತಮ್ಮನ್ನು ತಾವೇ ಬಂಧಿಸಿಕೊಂಡಿದ್ದು ಮತ್ತು ತಾವಾಗಿಯೇ ಇಷ್ಟಪಟ್ಟು ವರಿಸಿದ್ದ ಈ ಬಗೆಯ ಜೀವನಕ್ರಮಕ್ಕೆ ಶಿಕ್ಷಣ ಅಗತ್ಯವೆಂದು ಪರಿಗಣಿಸದೇ ಒಂದೇ ವೃತ್ತಿಯ ಹಾಗೂ ಸಮುದಾಯಕ್ಕೆ ಸೇರಿದ ತಾವೆಲ್ಲರೂ ವಿಚಾರ ವಿನಿಮಯಕ್ಕಾಗಿ ಒಂದುಗೂಡಬೇಕೆಂಬ ಪರಿಕಲ್ಪನೆಯೇ ಇರದಿದ್ದ ಕಾರಣಕ್ಕಾಗಿ ತಮ್ಮ ಮೂಲವನ್ನು ಹುಡುಕಿಕೊಳ್ಳುವ, ಅದರಿಂದ ಅಸ್ಮಿತೆ, ಅಭಿಮಾನಗಳನ್ನು ರೂಢಿಸಿಕೊಳ್ಳುವ ತಮ್ಮ ಹಿರಿಮೆ, ಗರಿಮೆ ಕಲಾವಂತಿಕೆ ವೈಶಿಷ್ಟ್ಯಗಳನ್ನು ಸ್ಫುಟಗೊಳಿಸುವ ಪ್ರಯತ್ನವನ್ನು ಈ ಸಮುದಾಯ ಮಾಡಲಿಲ್ಲ ಎಂದು ಎಚ್.ಜೆ. ಲಕ್ಕಪ್ಪಗೌಡ ಅವರು ಹೇಳಿದ ಮಾತು ಇಂದಿಗೂ

ಸತ್ಯವೆನಿಸುವಂತಿದೆ. ಈ ಬಗೆಯಲ್ಲಿ ಅವಜ್ಞೆಗೆ ಒಳಗಾದಂತಹ ಸಮುದಾಯ ಕಾಲಾಂತರದಲ್ಲಿ ತನ್ನ ಪಾರಂಪರಿಕ ಚಹರೆಯ ಅಸ್ಮಿತೆಯನ್ನು ಗುರುತಿಸಿಕೊಳ್ಳುವ ಮುಖೇನ ಮುನ್ನೆಲೆಗೆ ಬರುತ್ತಿದೆ. ಈ ಬದಲಾವಣೆ ಕರ್ನಾಟಕದಲ್ಲಿ ಕಂಡುಬರುತ್ತಿದೆಯಾದರೂ ಕರ್ನಾಟಕ–ಆಂಧ್ರಪ್ರದೇಶದ ಗಡಿ ಭಾಗಗಳಲ್ಲಿ ಇಂದಿಗೂ ಅಭಿವೃದ್ಧಿಯ ಪಥದತ್ತ ಸಾಗಿ ಬರಲು ಸಾಧ್ಯವಾಗುತ್ತಿಲ್ಲ. ಈ ಭಾಗದಲ್ಲಿನ ಕುರುಬರು ಶೈಕ್ಷಣಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಹಲವಾರು ಸಮಸ್ಯೆಗಳನ್ನು ಇಂದಿಗೂ ಎದುರಿಸುತ್ತಲೇ ಇದ್ದಾರೆ. ಆದರೆ ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಶ್ರೀಮಂತ ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡು ಬರುತ್ತಿದ್ದಾರೆ.

ಕುರುಬ ಸಮುದಾಯವು ವಿವಿಧ ಹೆಸರುಗಳಿಂದ ಗುರುತಿಸಲ್ಪಡುತ್ತಿದೆ. ಮುಖ್ಯವಾಗಿ ಕುರುಬ ಎಂಬ ಪದ ಕುರಿತಂತೆ ಹೇಳುವುದಾದರೆ, ಶಂಬಾ ಜೋಷಿ ಅವರು ತಮ್ಮ ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ ಗ್ರಂಥದಲ್ಲಿ 'ಕುಱುಂಬ' ಎಂಬುದು ಕಂದಮಿಳ ಶಬ್ದ ಹಳೆಯ ಕುಱುಂಬ ಈಗ ಕುರುಂಬ>ಕುರುಬ ಆಗಿದೆ. ಕುರು ಎಂದರೆ ಗುಡ್ಡ, ಮರಡಿ, ಎತ್ತರವಾದ ಪ್ರದೇಶ ಎಂದರ್ಥ. ಅಂದರೆ ಅವರ ದೃಷ್ಟಿಯಲ್ಲಿ ಎತ್ತರವಾದ ಪ್ರದೇಶ, ಗುಡ್ಡ, ಮರಡಿ ಎಂಬರ್ಥದ ಕುರು ಎಂಬುದರಿಂದ ಪದ ನಿಷ್ಪನ್ನವಾಗಿದೆಯೆಂದು ಅರ್ಥೈಸಬಹುದು. ದ್ರಾವಿಡ ಭಾಷೆಯಲ್ಲಿ ಕು, ಕೋ ಎಂದರೆ ಬೆಟ್ಟ ಗುಡ್ಡಗಳೆಂದು, ಕೋರಿ ಎಂದರೆ ಕುರಿಯೆಂದು, ಕುರು ಎಂದರೆ ಕುರುಚು, ಕುಳ್ಳ ಎಂಬರ್ಥಗಳಿವೆ. ಬೆಟ್ಟಗುಡ್ಡಗಳಲ್ಲಿ ವಾಸಮಾಡಿಕೊಂಡು ಕುರಿಗಳನ್ನು ಕಾಯುತ್ತಿದ್ದರಿಂದ ಕುರುಬರೆಂಬ ಹೆಸರು ಬಂತೆಂಬುದು ವಿದ್ವಾಂಸರ ಅಭಿಪ್ರಾಯ. ಇನ್ನು ಕೆಲವರ ಅಭಿಪ್ರಾಯದಲ್ಲಿ ಕನ್ನಡದ ಕುರಿ ಎಂಬುದರಿಂದಲೇ ಕುರುಬ ಪದ ರೂಪುಗೊಂಡಿದೆ ಎಂಬುದಾಗಿದೆ.

ಗಡಾರಿಯಾ ಎಂಬ ಹಿಂದಿ ಪದ 'ಗಡಾರ್' ಮತ್ತು 'ಯಾ' ಸೇರಿಕೊಂಡಂಥದ್ದು. 'ಗಡ್ಡಾರ್' ಎನ್ನುವುದು ಪ್ರಾಕೃತ ಪದವಾಗಿದ್ದು, ಇದರ ಅರ್ಥ ಕುರಿ ಎಂದು. ಇದರೊಂದಿಗೆ ಸೇರುವ 'ಯಾ'ದಿಂದಾಗಿ ಇದು ಕುರುಬ ಸಮುದಾಯ ಎಂಬ ಅರ್ಥ ಕೊಡುತ್ತದೆ. ಗಡಾರ್ ಅಥವಾ ಗಡಾರಿಯಾ ಎಂಬುದಕ್ಕೆ ಸಂಬಂಧಿಸಿದಂತೆ ಹಲವು ಅಭಿಪ್ರಾಯಗಳು ವ್ಯಕ್ತವಾಗಿರುವುದು ಕಂಡುಬರುತ್ತದೆ. ಕೆಲವು ವಿದ್ವಾಂಸರು 'ಗಡಾರ್ ಮತ್ತು ಆರ್ಯ' ಎಂಬ ಪದಗಳಿಂದ ಗಡಾರಾರ್ಯ ಅಥವಾ ಗಡಾರಿಯಾ ಎನ್ನುವ ಪದ ಬಳಕೆಗೆ ಬಂದಿದೆ. ಅದೇ ನಂತರದಲ್ಲಿ ಗಡಾರಿಯಾ ಎಂದಾಗಿರಬಹುದೆಂದು ತಿಳಿಸಿರುವರು. ಇನ್ನು ಕೆಲವರು ಹೇಳುವಂತೆ ಈ ಜನಾಂಗದವರು 'ಗಡ್' ಎಂದರೆ 'ಕೋಟೆ'ಯ ರಕ್ಷಕರಾಗಿದ್ದು, ಇದರಿಂದಾಗಿ ಗಡಾರಿಯಾ ಎಂಬ ಹೆಸರು ಬಂದಿರಬಹುದೆಂದು ಊಹಿಸಿದ್ದಾರೆ.

ಪಶು ಸಂಪತ್ತಿನಿಂದಾಗಿ ಬಂದಿರುವ ಪದ 'ದನಗಾರ್' 'ಗಾರ್' ಎಂಬುದು ಧನ ಕಾಯುವವರು ಅಥವಾ 'ಕುರುಬರು' ಎಂಬುದನ್ನು ಸೂಚಿಸುತ್ತದೆ. ಮಹಾರಾಷ್ಟ್ರದ ಪೂನ ಜಿಲ್ಲೆಯ ಬೌದ್ಧ ಗವಿಯೊಂದರಲ್ಲಿ 'ಧನ್ಗರ್' ಎಂದು ಕೆತ್ತಲಾಗಿದೆ. ಈ ಗವಿಯು ಮೊದಲನೆಯ ಮತ್ತು ಮೂರನೆಯ ಶತಮಾನದ ಮಧ್ಯಕಾಲಕ್ಕೆ ಸಂಬಂಧಿಸಿದ್ದು ಎಂದು ನಂಬಲಾಗಿದೆ. ಈ ಪದ 'ಧನ್‌ಗರ್' ಎಂಬ ಪದದಿಂದ ಬಂದಿದೆ ಎಂದು ಭಗವಾನ್ ಲಾಲ್ ಇಂದ್ರಾಜಿ ಅಭಿಪ್ರಾಯಪಡುತ್ತಾರೆ. ಆದರೆ ಕೆಲವು ವಿದ್ವಾಂಸರು ಈ ಪದ ಸಂಸ್ಕೃತದ 'ದಂಗ್' ಅಂದರೆ 'ಬೆಟ್ಟ' ಎಂಬ ಪದದಿಂದ ಬಂದಿದೆ ಎಂದು ಗ್ರಹಿಸಿದ್ದಾರೆ. ವಿ.ಆರ್. ಹನುಮಂತಯ್ಯ ಅವರು 'ಧನಗರ್' ಎನ್ನುವ ಪದ ಜಾನುವಾರುಗಳನ್ನು ಮೇಯಿಸುವವರು ಎಂಬುದರ ಪರ್ಯಾಯವಾಗಿಯೇ ಬಂದಿದೆ ಎಂದು 'ಭಾರತದ ಕುರುಬರ ಚರಿತೆ' ಪುಸ್ತಕದಲ್ಲಿ ತಿಳಿಸಿದ್ದಾರೆ. ಹೀಗೆ ಹಲವು ವಿದ್ವಾಂಸರು ವೃತ್ತಿ, ಪ್ರದೇಶ ಮೂಲಗಳನ್ನು ಆಧರಿಸಿ ಈ ಸಮುದಾಯದ ಕುರಿತು ಚರ್ಚಿಸಿದ್ದಾರೆ. ಒಟ್ಟಾರೆಯಾಗಿ ಬೆಟ್ಟಗುಡ್ಡಗಳಲ್ಲಿ ವಾಸಿಸುತ್ತಾ ದನ-ಕುರಿ ಸಾಕಾಣಿಕೆಯನ್ನು ಮಾಡುತ್ತಾ ತನ್ನ ಅಸ್ಮಿತೆಯನ್ನು ಉಳಿಸಿಕೊಂಡು ಬಂದಿರುವ ಪ್ರಾಚೀನ ಪಶುಪಾಲಕ ಸಮುದಾಯಗಳಲ್ಲಿ ಇದೂ ಒಂದಾಗಿದೆ. ಕರ್ನಾಟಕದಲ್ಲಿ ವೃತ್ತಿ ಸೂಚಕವಾಗಿ ಕುರುಬ ಸಮುದಾಯವೆಂದು ಕರೆಯುವರು. ಹಾಗೆಯೇ ಹಾಲುಮತ, ಹೆಗ್ಗಡೆಗಳು, ಕುರುಬನ್, ಗೊರವಗೊಂಡ, ಮಧ್ಯಗೊಂಡ, ರಾಜಗೊಂಡ, ಗೊಡಾರಿ. ಕುರ್ಮ, ಕಾಡು ಕುರುಬ, ಜೇನುಕುರುಬ ಎಂಬಿತ್ಯಾದಿಯಾಗಿ ಗುರುತಿಸುವರು. ಆಂಧ್ರಪ್ರದೇಶದಲ್ಲಿ ಗೊಲ್ಲವಾಡು, ಕುರುಪು, ಯಾದವುಲು, ಕುರುಮ(ಕುರುಮವಾಡು), ಪಾಲವಾಡು ಎಂಬ ಹೆಸರುಗಳಿಂದ ಕರೆಯಲ್ಪಡುತ್ತಿದ್ದಾರೆ. ಪ್ರಸ್ತುತ ಅಧ್ಯಯನವು ಕರ್ನಾಟಕ-ಆಂಧ್ರಪ್ರದೇಶದ ಗಡಿಯಲ್ಲಿನ ಕುರುಬರ ಕುರಿತ ಸಾಂಸ್ಕೃತಿಕ ಅಧ್ಯಯನವಾಗಿದ್ದು, ಗಡಿಭಾಗ ಅಥವಾ ಗಡಿ ಪ್ರದೇಶ ಎಂಬುದರ ಕುರಿತಂತೆ ವಿವರಿಸಿಕೊಳ್ಳುವುದು ಅಗತ್ಯವಾಗಿದೆ. ಗಡಿನಾಡು ಎಂಬುದು ವಿಶಿಷ್ಟ ವಲಯ. ಭೌಗೋಳಿಕವಾಗಿ ಒಂದು ನಿರ್ದಿಷ್ಟ ಪ್ರದೇಶದ ಕಟ್ಟಕಡೆಯ ಸ್ಥಳಗಳನ್ನು ಗಡಿ ಭಾಗಗಳೆಂದು ಗುರುತಿಸಲಾಗುತ್ತದೆ. ಕರ್ನಾಟಕವು ಬೀದರ್‌ನಿಂದ ಕೋಲಾರದವರೆಗೆ, ತೆಲಂಗಾಣವು ಮೆದಕ್‌ನಿಂದ ಮೆಹಬೂಬ ನಗರದವರೆಗೆ ಮತ್ತು ಆಂಧ್ರಪ್ರದೇಶವು ಕರ್ನೂಲಿನಿಂದ ಕಡಪದವರೆಗೆ ಈ ರಾಜ್ಯಗಳು ಗಡಿ ಹಂಚಿಕೊಂಡಿವೆ.

## ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನವು ಕರ್ನಾಟಕ-ಆಂಧ್ರಪ್ರದೇಶದ ಗಡಿಯಲ್ಲಿನ ಕುರುಬರ ಕುರಿತ ಸಾಂಸ್ಕೃತಿಕ ಅಧ್ಯಯನವಾಗಿದ್ದು, ಹಲವು ಉದ್ದೇಶಗಳನ್ನು ಹೊಂದಿದೆ

ಪ್ರತಿಯೊಂದು ಜನಾಂಗಕ್ಕೂ ವಿಭಿನ್ನ ಸಂಸ್ಕೃತಿ ಇರುವಂತೆ ಕುರುಬ ಸಮುದಾಯಕ್ಕೂ ತನ್ನದೇ ಆದ ವಿಶಿಷ್ಟ ಸಂಸ್ಕೃತಿ ಇದೆ. ಈ ಸಾಂಸ್ಕೃತಿಕ ಚಹರೆಯನ್ನು ಕಟ್ಟಿಕೊಡಬೇಕಾದರೆ ಸಮಾಜಮುಖಿ

ಅಧ್ಯಯನಗಳ ಅಗತ್ಯತೆ ಇದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಆಂಧ್ರಪ್ರದೇಶದ ಗಡಿ ಭಾಗಗಳಲ್ಲಿನ ಕುರುಬ ಸಮುದಾಯದ ಸಾಂಸ್ಕೃತಿಕ ಚಿತ್ರಣವನ್ನು ಪರಂಪರೆಯ ಹಿನ್ನಲೆಯಲ್ಲಿ ಕಟ್ಟಿಕೊಡುವುದಾಗಿದೆ. ಹಾಗೆಯೇ ಈ ಸಮುದಾಯದ ಮೌಲ್ಯಗಳೊಂದಿಗೆ ಇತರೆ ಸಮುದಾಯಗಳು ಹೊಂದಿರುವ ಅವಿನಾಭಾವ ಸಂಬಂಧ ಯಾವ ರೀತಿಯದ್ದು ಮತ್ತು ಆ ಸಂಬಂಧಗಳ ಮೂಲಕ ತಮ್ಮ ಸಾಂಸ್ಕೃತಿಕ ಚಹರೆಯನ್ನು ಹೇಗೆ ರೂಪಿಸಿಕೊಂಡಿವೆ ಎಂಬುದನ್ನು ತಿಳಿಯುವ ಉದ್ದೇಶವನ್ನು ಹೊಂದಿದೆ.

ಗಡಿನಾಡ ಕುರುಬ ಸಮುದಾಯದ ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಕಲಾತ್ಮಕ ನೆಲೆಯ ಮುಖಾಂತರ ಗಡಿನಾಡ ಕುರುಬರ ಜೀವನ ಪದ್ಧತಿ, ಅವರ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಕಂಡುಕೊಳ್ಳುವುದು. ಆ ಮೂಲಕ ಸಾಮಾಜಿಕ ವ್ಯವಸ್ಥೆಯ ಒಳಗಡೆ ಅವರಿಗಿರುವ ಸ್ಥಾನಮಾನಗಳು ಮತ್ತು ಅನನ್ಯತೆಯನ್ನು ಗುರುತಿಸುವುದು. ಹಾಗೆಯೇ ಬದಲಾಗುತ್ತಿರುವ ಜೀವನ ಕ್ರಮಕ್ಕೆ ಹೊಂದಿಕೊಂಡು ತಮ್ಮ ಅನನ್ಯತೆಯನ್ನು ಉಳಿಸಿಕೊಳ್ಳುವುದು ಮತ್ತು ಸ್ಥಿತ್ಯಂತರಗೊಂಡ ಅಂಶಗಳನ್ನು ಗುರುತಿಸುವ ಮುಖೇನ ವಿಶ್ಲೇಷಣೆಗೆ ಒಳಪಡಿಸುವ ಉದ್ದೇಶವನ್ನಿಟ್ಟುಕೊಳ್ಳಲಾಗಿದೆ.

ಕರ್ನಾಟಕ ಆಂಧ್ರ ಗಡಿ ಪ್ರದೇಶದಲ್ಲಿ ಕುರುಬರ ದ್ವಿಭಾಷಿಕತೆ, ಭಿನ್ನ ಸಂಸ್ಕೃತಿ, ಇವುಗಳ ನಡುವೆಯೂ ಕೊಡುಕೊಳುವಿಕೆಯ ಮೂಲಕ ಸಮನ್ವಯ ನೆಲೆಯಲ್ಲಿ ಬದುಕುವ ಅವರ ಜೀವನವನ್ನು ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಗಡಿ ಪ್ರದೇಶಗಳಲ್ಲಿ ನೆಲೆಸಿರುವ ಕುರುಬ ಸಮುದಾಯವು ನಿರೀಕ್ಷಿತ ಪ್ರಮಾಣದಲ್ಲಿ ಆರ್ಥಿಕ, ರಾಜಕೀಯ, ಶೈಕ್ಷಣಿಕವಾಗಿ ಪ್ರಬಲವಾಗುವುದಕ್ಕೆ ಸರಕಾರಿ ಮತ್ತು ಸರಕಾರೇತರ ಸಂಘ-ಸಂಸ್ಥೆಗಳು ಯಾವ ಕ್ರಮಗಳನ್ನು ಕೈಗೊಂಡಿವೆ ಎಂಬುದನ್ನು ಮತ್ತು ಅವುಗಳು ನಿರೀಕ್ಷಿತ ಪ್ರಮಾಣದಲ್ಲಿ ಆ ಸಮುದಾಯಕ್ಕೆ ತಲುಪಿವೆಯೇ ಅಥವಾ ಇಲ್ಲವೇ ಎಂಬುದನ್ನು ತಿಳಿಯುವುದಾಗಿದೆ. ಮತ್ತು ಗಡಿ ಪರಿಸರದ ಅಭಿವೃದ್ಧಿಗಾಗಿ ಕೈಗೊಳ್ಳಬೇಕಾದ ಯೋಜನೆಗಳೇನು ಎಂಬುದನ್ನು ಚರ್ಚಿಸಲಾಗಿದೆ.

ಗಡಿನಾಡ ಕುರುಬ ಸಮುದಾಯವು ಕುರಿ ಸಾಕಾಣಿಕೆ, ಕಂಬಳಿ ನೇಯ್ಗೆ ಮತ್ತು ಕೃಷಿಯನ್ನು ಮೂಲವೃತ್ತಿಗಳಾಗಿಸಿಕೊಂಡಿದೆ. ಇವು ಆಧುನಿಕತೆಗೆ ಹೇಗೆ ಮುಖಾಮುಖಿಯಾಗಿವೆ ಎಂಬುದನ್ನು ತಿಳಿಯುವುದರ ಜೊತೆಗೆ ಜಾಗತೀಕರಣ, ಕೈಗಾರಿಕೀಕರಣಗಳು ಈ ಮೂಲ ವೃತ್ತಿಗಳ ಮೇಲೆ ಬೀರಿದ ಪ್ರಭಾವ ಎಂಥದ್ದು ಎಂಬುದನ್ನು ಗುರುತಿಸುವುದಾಗಿದೆ. ಜೊತೆಗೆ ಇವುಗಳಿಂದ ಕುರುಬ ಸಮುದಾಯದ ಅಭಿವೃದ್ಧಿಯ ಸೂಚಕಗಳು ಏನಾಗಿವೆ ಎಂಬುದನ್ನು ತಿಳಿಯುವ ಉದ್ದೇಶವನ್ನು ಹೊಂದಿದೆ.

### ಅಧ್ಯಯನದ ವ್ಯಾಪ್ತಿ

'ಕರ್ನಾಟಕ-ಆಂಧ್ರಪ್ರದೇಶದ ಗಡಿನಾಡ ಕುರುಬ ಸಮುದಾಯ: ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯದ ಅಧ್ಯಯನಕ್ಕಾಗಿ ವೇದಾವತಿ ಮತ್ತು ತುಂಗಭದ್ರಾ ನದಿಗಳ ಮಧ್ಯದಲ್ಲಿ ಬರುವ

ಗಡಿ ಪರಿಸರವನ್ನು ವ್ಯಾಪ್ತಿಯನ್ನಾಗಿಸಿಕೊಳ್ಳಲಾಗಿದೆ. ಇಲ್ಲಿನ ಅಧ್ಯಯನಕ್ಕೊಳಪಡುವ ಪ್ರದೇಶಗಳೆಂದರೆ ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲೂಕುಗಳು, ಹಾಗೆಯೇ ಬಳ್ಳಾರಿ ಜಿಲ್ಲೆಯ ಬಳ್ಳಾರಿ, ಸಿರುಗುಪ್ಪ, ಸಂಡೂರು ತಾಲೂಕುಗಳನ್ನು ಅದರಂತೆಯೇ ಆಂಧ್ರಪ್ರದೇಶದ ಅನಂತಪುರಂ ಜಿಲ್ಲೆಯ ಕುಂದುರ್ಪಿ, ಕಲ್ಯಾಣದುರ್ಗಂ, ಶೆಟ್ಟೂರು, ಬ್ರಹ್ಮಸಮುದ್ರಂ, ಬೆಳಗುಪ್ಪ, ಗುಮ್ಮಗಟ್ಟ, ರಾಯದುರ್ಗಂ, ಬೊಮ್ಮನಹಾಳ್, ಡಿ.ಹಿರೇಹಾಳ್, ಗುಂತಕಲ್ಲು ಮಂಡಲಗಳನ್ನು ಮತ್ತು ಕರ್ನೂಲು ಜಿಲ್ಲೆಯ ಆದೋನಿ, ಆಲೂರು, ಹಾಲಹರವಿ, ಆತ್ಮಕೂರು, ಎಮ್ಮಿಗನೂರು, ಆಸ್ಪರಿ ಮಂಡಲಗಳು. ಈ ಎಲ್ಲಾ ಪ್ರದೇಶಗಳು ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತವೆ.

**ಅಧ್ಯಯನದ ವಿಧಾನ**

ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಕರ್ನಾಟಕ ಆಂಧ್ರ ಗಡಿ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯ ವನ್ನು ಕೈಗೊಳ್ಳುವುದರ ಮೂಲಕ ವಿಷಯವನ್ನು ಸಂಗ್ರಹಿಸಲಾಗಿದೆ. ಅಧ್ಯಯನಕ್ಕೆ ಕ್ಷೇತ್ರಕಾರ್ಯದ ಮಾಹಿತಿಯೇ ಪ್ರಾಥಮಿಕ ಆಕರವಾಗಿದ್ದು, ಅವಲೋಕನ, ಸಂದರ್ಶನ, ಪ್ರಶ್ನಾವಳಿ, ಸಹಭಾಗಿತ್ವ, ಗುಂಪು ಚರ್ಚೆ, ಜಾತ್ರೆ ಉತ್ಸವಗಳಲ್ಲಿ ಭಾಗವಹಿಸುವ ಮೂಲಕ ಮಾಹಿತಿಯನ್ನು ಕ್ರೋಢಿಕರಿಸಲಾಗಿದೆ. ಜೊತೆಗೆ ಸರ್ಕಾರಿ ಮತ್ತು ಸರ್ಕಾರೇತರ ಇಲಾಖೆಗಳಿಗೆ ಭೇಟಿ ಕೊಡುವುದರ ಮೂಲಕ ವಿಷಯಗಳನ್ನು ಕಲೆಹಾಕಲಾಗಿದೆ. ಹಾಗೆಯೇ ಅಧ್ಯಯನಕ್ಕೆ ಸಂಬಂಧಿಸಿದ ಆಕರಗಳನ್ನು ಪೂರಕವಾಗಿ ಬಳಸಿಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ**

"ಕರ್ನಾಟಕ-ಆಂಧ್ರಪ್ರದೇಶದ ಗಡಿನಾಡ ಕುರುಬ ಸಮುದಾಯ: ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯದ ಅಧ್ಯಯನವು ಒಟ್ಟು ಏಳು ಅಧ್ಯಾಯಗಳನ್ನು ಹೊಂದಿದೆ.

ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ, ಅಧ್ಯಯನದ ವಿಧಾನ ಮತ್ತು ಅಧ್ಯಯನದ ಸ್ವರೂಪವನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯವು ಸಂಸ್ಕೃತಿಯ ಇತಿಹಾಸ ಮತ್ತು ಕುರುಬ ಸಮುದಾಯ ಎಂಬುದಾಗಿದ್ದು, ಈ ಅಧ್ಯಾಯದಲ್ಲಿ ಬೇಟೆ, ಪಶುಪಾಲನೆ, ಕೃಷಿ ಸಂಸ್ಕೃತಿಗಳ ಮುಖೇನವಾಗಿ ಕುರುಬ ಸಮುದಾಯದ ಚಹರೆಗಳನ್ನು ಗುರುತಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕರ್ನಾಟಕ-ಆಂಧ್ರಪ್ರದೇಶದ ಗಡಿನಾಡ ಕುರುಬ ಸಮುದಾಯದ ಸಾಮಾಜಿಕ ಸಂಬಂಧಗಳು, ಈ ಸಮುದಾಯದಲ್ಲಿನ ಬೆಡಗುಗಳ ಹಿನ್ನೆಲೆ, ಐತಿಹ್ಯ, ಕೊಡು ಕೊಳುಪಿಕೆಯ ಸಂಬಂಧಗಳು, ಬಂಧುತ್ವ, ಜೀವನಾವರ್ತನಾ ಆಚರಣೆಗಳು(ಹುಟ್ಟಿನಿಂದ ಸಾವಿನವರೆಗೆ),

ನ್ಯಾಯ ಪಂಚಾಯತಿ, ಹಾಗೆಯೇ ಸಮುದಾಯದ ಆರ್ಥಿಕ ಸ್ಥಿತಿಗತಿ, ರಾಜಕೀಯ ಸಂಘಟನೆ ವಿಷಯಗಳನ್ನು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಕರ್ನಾಟಕ–ಆಂಧ್ರಪ್ರದೇಶದಲ್ಲಿನ ಕುರುಬ ಸಮುದಾಯದ ಧಾರ್ಮಿಕ ಆಚರಣೆಗಳು, ಬೀರಪ್ಪ, ಮೈಲಾರಲಿಂಗ ಮತ್ತು ರೇವಣಸಿದ್ಧ ಪರಂಪರೆಯ ಕುರಿತು ಚರ್ಚಿಸಲಾಗಿದೆ. ಜೊತೆಗೆ ಈ ಭಾಗದಲ್ಲಿ ಸಮುದಾಯ ಹೊಂದಿರುವ ಪಾರಂಪರಿಕವಾದ ಭಾಷೆ–ಸಾಹಿತ್ಯ–ಜಾನಪದ ಕುರಿತು ವಿಶ್ಲೇಷಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಗಡಿನಾಡ ಕುರುಬ ಸಮುದಾಯದಲ್ಲಿನ ಕೊಡು–ಕೊಡುವಿಕೆಯ ಸಂಬಂಧಗಳು, ವಿಧಿ–ನಿಷೇಧಗಳು ಹಾಗೆಯೇ ಕುರುಬ ಸಮುದಾಯವು ಇತರ ಸಮುದಾಯಗಳೊಂದಿಗೆ ಹೊಂದಿರುವ ಸಾಂಸ್ಕೃತಿಕ ಅನನ್ಯತೆಯನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಗಡಿನಾಡ ಕುರುಬ ಸಮುದಾಯದ ಸಮಸ್ಯೆ ಮತ್ತು ಸವಾಲುಗಳನ್ನು ಚರ್ಚಿಸುವ ಜೊತೆಗೆ ಸಲಹೆಗಳನ್ನು ನೀಡಲಾಗಿದೆ.

ಏಳನೆಯ ಅಧ್ಯಾಯವು ಸಮಾರೋಪವಾಗಿದ್ದು, ಅಧ್ಯಯನದ ಫಲಿತಗಳನ್ನು ವಿವರಿಸಲಾಗಿದೆ.

ಅನುಬಂಧದಲ್ಲಿ ಶಾಸನ ಪಠ್ಯಗಳು, ಪರಾಮರ್ಶನ ಗ್ರಂಥಗಳು, ವಕ್ತೃಗಳ ವಿವರ, ಪ್ರಶ್ನಾವಳಿ ಮಾದರಿ, ನಕಾಶೆ ಹಾಗೂ ಛಾಯಾಚಿತ್ರಗಳನ್ನು ನೀಡಲಾಗಿದೆ.

## ಅಧ್ಯಾಯ ಎರಡು

# ಸಂಸ್ಕೃತಿಯ ವಿಕಾಸ ಮತ್ತು ಕುರುಬ ಸಮುದಾಯ

ಪ್ರಕೃತಿಯಲ್ಲಿನ ಜೀವ ಸಂಕುಲದಲ್ಲಿ ಮಾನವ ಸಂಸ್ಕೃತಿಯ ಪ್ರತಿನಿಧಿ. ಈ ಮಾನವನಿಂದ ರೂಪುಗೊಂಡ ವಿವಿಧ ಸಮುದಾಯಗಳ ಸಮಗ್ರ ಜೀವನಕ್ರಮವೇ ಸಂಸ್ಕೃತಿ. ೨೧ನೆಯ ಶತಮಾನದ ಈಚೆಗೆ ಬಹುಮುಖವಾದ ಅರ್ಥ ಪಡೆದು ಬೆಳೆಯುತ್ತ ಬಂದಿರುವ ಇದಕ್ಕೆ ಸರ್ವಸಮ್ಮತವಾದ ಒಂದು ವ್ಯಾಖ್ಯಾನವನ್ನು ಕೊಟ್ಟು ಅರ್ಥೈಸಲು ಸಾಧ್ಯವಿಲ್ಲ ಎಂಬುದು ಸಂಸ್ಕೃತಿ ನಿರ್ವಚಕರ ಅಭಿಪ್ರಾಯ. ಐತಿಹಾಸಿಕ ಸಂಗತಿಗಳಿಂದ ಹಿಡಿದು ನಾಗರಿಕತೆಯ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಮತ್ತು ವೈಜ್ಞಾನಿಕ ವಿಷಯಗಳವರೆಗೂ ಅದರ ಹರವಿದ್ದು, ಮಾನವನ ಬದುಕನ್ನು ಇಡಿಯಾಗಿ ತೆರೆದಿಡುತ್ತದೆ. ನಾವಿಂದು ಪಾಶ್ಚಾತ್ಯರ ಕಲ್ಚರ್ ಎಂಬ ಪದವನ್ನು ಸಂಸ್ಕೃತಿಗೆ ಸಂವಾದಿಯಂತೆ ಬಳಸುತ್ತಿದ್ದೇವೆ. ಈ ಪದ ನಮಗೆ ಇತ್ತೀಚಿನದ್ದಾದರು, ಇದರ ಹಿಂದಿರುವ ಅರ್ಥ ಹೊಸದಲ್ಲ. culture ಎಂಬುದರ ಮೂಲಪದ 'cult'. ಇದು ಗೌರವಿಸು, ಆರಾಧಿಸು, ಸೇವೆ ಮಾಡು ಎಂಬಿತ್ಯಾದಿ ಅರ್ಥಗಳನ್ನು ಕೊಡುತ್ತದೆ. ಹಾಗಾಗಿ ಇದು ದೈವಭಕ್ತಿ ಎಂಬ ಅರ್ಥವನ್ನು ಒಂದು ಕಡೆ ಪಡೆದರೆ, ಇನ್ನೊಂದು ಕಡೆ ಭೂದೇವಿಯ ಆರಾಧನೆ ಅಂದರೆ ಕೃಷಿ ಎಂಬ ಅರ್ಥ ಪಡೆಯುತ್ತದೆಂದು ಡಿ.ವಿ. ಗುಂಡಪ್ಪ ಅವರು ಹೇಳಿರುವರು. "ಮಾನವನು ಕಾರ್ಯನಿರತನಾದಾಗ ಆತನ ಮನಸ್ಸು ವಿಕಾಸಗೊಳ್ಳುತ್ತದೆ. ನಡವಳಿಕೆ, ವರ್ತನೆ ಹೀಗೆ ತೋರಿಬರುವ ಮನೋವಿಕಾಸವನ್ನು ಸಂಸ್ಕೃತಿ ಎಂದು ಭಾವಿಸಬಹುದು."[೧] ಇನ್ನೊಂದು ಅರ್ಥದಲ್ಲಿ "ಒಂದು ನಿರ್ದಿಷ್ಟ ಕಾಲದಲ್ಲಿ ಒಂದು ಪ್ರದೇಶದಲ್ಲಿ ವಾಸಿಸುವ ಜನಾಂಗದ ಸಾಮಾಜಿಕ ಅಭಿವೃದ್ಧಿಯ ರೂಪಗಳು ಅಥವಾ ಅಭಿವೃದ್ಧಿಗೊಂಡ ನಾಗರಿಕ ಸ್ವರೂಪಗಳು ಎಂದು ಸಂಕ್ಷಿಪ್ತವಾಗಿ ಹೇಳಬಹುದಾದರೂ ಇದರ ಅರ್ಥವ್ಯಾಪ್ತಿ ವಿಶಾಲವಾದುದು. ಅದು ಅವರ ಸಾಮಾಜಿಕ ನಡೆನುಡಿಗಳು, ಕಲೆ, ನೃತ್ಯ, ಸಂಗೀತದ ಭಾವಕಲ್ಪನೆಗಳು; ಮದುವೆ, ಹಬ್ಬ, ಉತ್ಸವ, ಸಂಪ್ರದಾಯಗಳು, ವಿದ್ಯೆ,

ವೈದ್ಯ, ಉದ್ಯೋಗ, ಕೌಶಲ್ಯಗಳು; ಧಾರ್ಮಿಕ ಸಂಪ್ರದಾಯಗಳು; ಸಂಘ ಸಂಸ್ಥೆಗಳು ಇತ್ಯಾದಿ ಅಂಶಗಳನ್ನು ಒಳಗೊಂಡ ವಿಶಾಲವಾದ ಅರ್ಥವ್ಯಾಪ್ತಿಯುಳ್ಳ ಶಬ್ದ"[೨] ಎಂದು ಗ್ರಹಿಸಲಾಗಿದೆ.

ಮಾನವಶಾಸ್ತ್ರಜ್ಞರು 'ಮಾನವ ಸಮುದಾಯದ ಚರಿತ್ರೆಯನ್ನು ಚಿತ್ರಿಸುವಾಗ ಸಂಸ್ಕೃತಿ ಮತ್ತು ನಾಗರಿಕತೆ(civilization)ಗಳನ್ನು ಸಮಾನಾರ್ಥಕಗಳೆಂಬಂತೆ ಬಳಸಿದ್ದಾರೆ. ಇದು ಒತ್ತಟ್ಟಿಗಿರಲಿ. ನಾವು ಸಂಸ್ಕೃತಿಯ ವಿಷಯಕ್ಕೆ ಬರುವುದಾದರೆ culture ಪದವನ್ನು ಮೊದಲು ಪ್ರಯೋಗಿಸಿದ್ದು ಕ್ರಿ.ಶ. ೧೫೧೦ರಲ್ಲಿ 'ಕಾಕ್ಸಟನ್' ಎಂಬ ಯೂರೋಪ್ ವಿದ್ವಾಂಸ. ಸುಮಾರು ೫೦೦ ವರ್ಷಗಳ ಇತಿಹಾಸವಿರುವ ಈ ಪದವನ್ನು ಮೊದಲಿಗೆ ನಾಮಪದವಾಗಿ ನಂತರ ರೂಪಕವಾಗಿ ಪ್ರಯೋಗಿಸಲಾಗಿದೆ. ಇಂಗ್ಲೆಂಡಿನ ಆಕ್ಸಫರ್ಡ್ ವಿಶ್ವವಿದ್ಯಾಲಯ ಮಾನವಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾಗಿದ್ದ 'ಎಡ್ವರ್ಡ್ ಬರ್ನೆಟ್ ಟೈಲರನು 'Researches into the Early History of Making' ಎಂಬ ಗ್ರಂಥದಲ್ಲಿ ಕಲ್ಚರ್ ಪದವನ್ನು 'ಮಾನವನ ಮೂಲಭೂತ ಕಲಿಕೆಯ ಗುಣ ಮೌಲ್ಯ' ಎಂಬ ಅರ್ಥದಲ್ಲಿ ಮೊಟ್ಟಮೊದಲ ಬಾರಿ ಪ್ರಯೋಗಿಸಿ ಆಸಕ್ತರೆಲ್ಲರ ಕುತೂಹಲ ಮೂಡಿಸಿದನು. ಕರ್ನಾಟಕದ ಸಂಸ್ಕೃತಿ ಅಧ್ಯಯನದ ವಿದ್ವಾಂಸರಾದ ನಂ.ತಪಸ್ವಿಕುಮಾರ್ ಅವರು ಪ್ರತಿಯೊಬ್ಬನು ತನ್ನ ಸಮಾಜದ ಸದಸ್ಯನಾಗಿದ್ದುಕೊಂಡು ಬದುಕಲು ಕಲಿತ ಎಲ್ಲ ಒಳ್ಳೆಯ ಹಾಗೂ ಕೆಟ್ಟ ನಡೆ–ನುಡಿ, ಕಲೆ, ಕಾನೂನು, ಬೇಸಾಯ, ಬಹುಮಾನ, ಅವಮಾನ ಪ್ರಸಂಗಗಳು ಇವೆಲ್ಲವನ್ನು ಒಡಮೂಡಿಸಿಕೊಂಡ ಒಟ್ಟು ಜೀವನಕ್ರಮವೇ ಸಂಸ್ಕೃತಿ. ಒಂದು ಜೀವನಕ್ರಮ(ಸಂಸ್ಕೃತಿ) ಇರದ ಸಮಾಜ ಇರುವುದು ಅಸಾಧ್ಯ. ಮನುಷ್ಯ ಮತ್ತು ಸಂಸ್ಕೃತಿ ಅವಿಭಾಜ್ಯ ಅಂಗಗಳು. ಒಂದಿರದೆ ಮತ್ತೊಂದು ಇರಲು ಸಾಧ್ಯವೇ ಇಲ್ಲ ಎಂದು ಸೂಚಿಸಬಹುದು"[೩] ಎಂದಿರುವರು.

ಭಾರತದಲ್ಲಿ ಸಂಸ್ಕೃತಿಯ ಅಧ್ಯಯನ ಬೆಳೆದುಬರಲು ಪ್ರಮುಖ ಕಾರಣ ಯೂರೋಪ್ ಮತ್ತು ಅದರ ವಸಾಹತು ರಾಜಕಾರಣ. ಬ್ರಿಟೀಷರು ದೀರ್ಘಕಾಲ ಆಳ್ವಿಕೆ ನಡೆಸಲು ಸ್ಥಳೀಯರ ಕಲೆ, ನಂಬಿಕೆ, ಧಾರ್ಮಿಕ ಆಚರಣೆಗಳನ್ನು ತಿಳಿದುಕೊಂಡರು. ಅದರ ಮೂಲಕ ಒಡೆದು ಆಳುವ ನೀತಿಯನ್ನು ತರುವ ಮೂಲಕ ಅಂದರೆ ಸಾಮಾಜಿಕ ಧಾರ್ಮಿಕ ಸಂಗತಿಗಳನ್ನು ಆರ್ಯ–ದ್ರಾವಿಡರ ನಿರಂತರ ತಿಕ್ಕಾಟಗಳಿಂದ ಬೆಳೆದುಬಂದವು ಎಂಬಂತೆ ಒತ್ತಿ ಹೇಳುವ ಮುಖೇನ ತಮ್ಮ ಹತೋಟಿಯಲ್ಲಿಟ್ಟುಕೊಳ್ಳಲು ಪ್ರಯತ್ನಿಸಿದರು. ಆದರೆ ಅದು ಭಾರತೀಯರಿಗೆ ವರವಾಗಿಯೇ ಪರಿಣಮಿಸಿತು. ಏಕೆಂದರೆ ಅಂದಿನವರೆಗೂ ಭಾರತೀಯ ಸಂಸ್ಕೃತಿ ಅಥವಾ ಚರಿತ್ರೆ ಎಂದರೆ ರಾಜ–ಮಹರಾಜರ, ಶ್ರೀಮಂತರ, ಉಳ್ಳವರದ್ದು ಎಂಬಂತಿದ್ದದ್ದು ಸಾಮಾನ್ಯ ಸಮುದಾಯಗಳತ್ತ ತಿರುಗಲು ಕಾರಣವಾಯಿತು. ಕನ್ನಡದಲ್ಲಿಯೂ "೨೦ನೆಯ ಶತಮಾನದಿಂದ ಸಂಸ್ಕೃತಿಯ ಬಗೆಗೆ ಚರ್ಚೆಗಳಾದರೂ, ಅವು ಸಂಸ್ಕೃತಿ ಎಂಬ ಪರಿಭಾಷೆಯ ಬದಲಾಗಿ ವಿಮರ್ಶಾತ್ಮಕ, ಸಾಹಿತ್ಯಿಕ, ಸಮಗ್ರವಾಗಿ ನಡೆದ ಅಧ್ಯಯನಗಳಾಗಿದ್ದವು. ಚಿದಾನಂದಮೂರ್ತಿ ಎಂ. ಅವರ 'ಕನ್ನಡ ಶಾಸನಗಳು

ಸಾಂಸ್ಕೃತಿಕ ಅಧ್ಯಯನವು ಕನ್ನಡದಲ್ಲಿ ಬಹುಶಿಸ್ತೀಯವಾದ ಈ ಪರಂಪರೆಯನ್ನು ಹುಟ್ಟುಹಾಕಿತ್ತೆನ್ನ ಬಹುದು. ಸಾಂಸ್ಕೃತಿಕ ಶಬ್ದ ಬಳಕೆ ಇಲ್ಲದೆಯೂ ನಮ್ಮಲ್ಲಿ ಅನೇಕ ಅಧ್ಯಯನಗಳು ನಡೆದಿವೆ ಎಂದು ಸಾಂಸ್ಕೃತಿಕ ಅಧ್ಯಯನ ಕೃತಿಯಲ್ಲಿ ರಹಮತ್ ತರೀಕೆರೆ ಅವರು ಚರ್ಚಿಸಿದ್ದಾರೆ. "೨೦ನೆಯ ಶತಮಾನದಲ್ಲಿ ಅಪಾರವಾಗಿ ಬಳಕೆಯಾದ ಸಂಸ್ಕೃತಿಯನ್ನು ಉಪಯೋಗಿಸಿಕೊಂಡು ಹುಟ್ಟಿರುವ ಪರಿಭಾಷೆಗಳು ಸಾಕಷ್ಟಿವೆ. ಧರ್ಮ ಎನ್ನುವ ಹೆಸರುಗಳ ಜೊತೆ ಸೇರಿಸಿ ಹಿಂದೂ ಸಂಸ್ಕೃತಿ, ಜೈನ ಸಂಸ್ಕೃತಿ, ಬೌದ್ಧ ಸಂಸ್ಕೃತಿ ಎಂಬ ಪರಿಕಲ್ಪನೆಗಳು ಹುಟ್ಟಿವೆ. ಜಾತಿ ಬುಡಕಟ್ಟುಗಳಿಗೆ ಹೊಂದಿಸಿ ಸಿದ್ಧಿಯರ ಸಂಸ್ಕೃತಿ, ಸೋಲಿಗರ ಸಂಸ್ಕೃತಿ, ಗೊಂಡರ ಸಂಸ್ಕೃತಿ, ಕಾಡುಗೊಲ್ಲ ಸಂಸ್ಕೃತಿ, ಮ್ಯಾಸಬೇಡ ಸಂಸ್ಕೃತಿ ಎಂಬ ಪರಿಕಲ್ಪನೆಗಳು. ದೇಶವಾಚಕವಾಗಿ ಭಾರತೀಯ ಸಂಸ್ಕೃತಿ, ರಷ್ಯಾ ಸಂಸ್ಕೃತಿ, ಶ್ರೀಲಂಕಾ ಸಂಸ್ಕೃತಿಗಳು ಬಳಕೆಯಾಗಿವೆ. ಮರಾಠಿ ಸಂಸ್ಕೃತಿ, ತೆಲುಗು ಸಂಸ್ಕೃತಿ, ಕನ್ನಡ ಸಂಸ್ಕೃತಿ ಇವು ಭಾಷಾ ವಾಚಕಗಳು. ಇದರ ಜೊತೆಗೆ ಪರ್ಯಾಯ ಕಲ್ಪನೆಗಳು ಅಂದರೆ ಕೃಷಿ ಸಂಸ್ಕೃತಿ, ಪುಸ್ತಕ ಸಂಸ್ಕೃತಿ, ಸ್ತ್ರೀವಾದಿ ಸಂಸ್ಕೃತಿಗಳು ಹುಟ್ಟಿವೆ".[೪] ಇಂತಹ ಸಾಂಸ್ಕೃತಿಕ ಅಧ್ಯಯನಗಳು ಜ್ಞಾನ ಶೋಧನೆಯ ಉಪಯುಕ್ತತೆಯತ್ತ ಕೊಂಡೊಯ್ಯುತ್ತಿವೆ. ಹಾಗೆಯೇ ಭೂತಕಾಲ, ವರ್ತಮಾನ ಮತ್ತು ಭವಿಷ್ಯದ ಅಂತರಂಗದಲ್ಲಿಯ ಸಮುದಾಯಗಳ ಬದುಕಿನ ಅನೇಕ ಸಂಗತಿಗಳನ್ನು ಅಖಂಡವಾಗಿ ಹಿಡಿದಿಟ್ಟುಕೊಳ್ಳುವ ಪರಿಭಾಷೆಯಾಗಿ 'ಸಂಸ್ಕೃತಿ' ಪದವನ್ನು ಬಳಸಿಕೊಳ್ಳಲಾಗಿದೆ. ಪ್ರಸ್ತುತ ಭಾರತದಲ್ಲಿ ಸಂಸ್ಕೃತಿಯ ವಿಕಾಸದ ವಿವಿಧ ಮಜಲುಗಳನ್ನು ಚರ್ಚಿಸುವ ಮುಖೇನ ಕುರುಬ ಸಮುದಾಯದ ಚಾರಿತ್ರಿಕ ಚಹರೆಗಳನ್ನು ಗುರುತಿಸಲಾಗಿದೆ.

ಪ್ರಪಂಚದಾದ್ಯಂತ ಮಾನವನ ವಿಕಾಸ(ಆಗಮನ)ಕ್ಕೆ ಸಂಬಂಧಿಸಿದಂತೆ ಅವರದೇ ಆದ ಸಾವಿರಾರು ಪುರಾಣ, ನಂಬಿಕೆ, ಐತಿಹ್ಯಗಳಿವೆ. ಭಾರತದಂಥ ಭಾವನಿಷ್ಠ ರಾಷ್ಟ್ರದಲ್ಲಿ ಇದಕ್ಕೆ ಸಂಬಂಧಿಸಿದಂತೆ ಸೃಷ್ಟಿಪುರಾಣ, ನಂಬಿಕೆಗಳು ಲೆಕ್ಕವಿಲ್ಲದಷ್ಟು ಕಾಣಸಿಗುತ್ತವೆ. ನಮ್ಮಲ್ಲಿನ ಪ್ರತಿಯೊಂದು ಸಮುದಾಯವು ತಮ್ಮ ಮೂಲವನ್ನು ಮಾನವ ವಿಕಾಸಕ್ಕೆ ಸಮೀಕರಿಸಿ ಹೇಳುವುದು ಕಾಣಬಹುದಾಗಿದೆ. ಈ ಸೃಷ್ಟಿಪುರಾಣಗಳಲ್ಲಿ ವೈವಿಧ್ಯಮಯ ಕಥೆಗಳುಂಟು. ಕೆಲವು ಕಥೆಗಳಲ್ಲಿ ಮಾನವನು ದೇವರಿಂದ ಹಾಗೂ ದೇವಲೋಕದಿಂದ ಸೃಷ್ಟಿಸಲ್ಪಟ್ಟು, ನಂತರ ಭೂಮಿಗೆ ಕಳುಹಿಸಲ್ಪಟ್ಟವನಾದರೆ, ಮತ್ತೆ ಕೆಲ ಕಥೆಗಳಲ್ಲಿ ಭೂಮಿಯನ್ನು ನೋಡಲು ದೇವರು ಬಂದಾಗ ಸೃಷ್ಟಿಸಲ್ಪಟ್ಟಿರುತ್ತಾನೆ. ಮತ್ತೆ ಕೆಲವಲ್ಲಿ ಮರದಿಂದ, ಮಣ್ಣಿನಿಂದ ಬೊಂಬೆಯಾಗಿ ಜೀವ ಪಡೆದಂಥ ವಸ್ತು ವೈವಿಧ್ಯತೆ ಹೊಂದಿರುವುದು ಕಂಡುಬರುತ್ತದೆ.

ಪ್ರಕೃತಿಯಲ್ಲಿ ಮಾನವನ ಉಗಮ ಕ್ರಮವನ್ನು ಮಾನವಶಾಸ್ತ್ರಜ್ಞರು ವೈಜ್ಞಾನಿಕ ದೃಷ್ಟಿಯಿಂದ ವಿವರಿಸಲು ಪ್ರಯತ್ನಿಸಿದ್ದಾರೆ. ಪ್ರಪಂಚದ ಇತರ ಜೀವರಾಶಿಗಳಂತೆಯೇ ಮಾನವ ವಿಕಾಸ ಗೊಂಡಿರುವುದು ಸಹಜ. ಸರಳತೆಯಿಂದ ಸಂಕೀರ್ಣತೆಯೆಡೆಗೆ ನಡೆದ ವಿಕಾಸದಲ್ಲೆ ಬಾಹ್ಯ ಪರಿಸರವು

ನೆರವಾಯಿತು ಎಂಬುದು ನಂಬಿಕೆ. ಹಾಗಾಗಿಯೇ ಜೀವ ಉಗಮದ ಬಗ್ಗೆ ತಿಳಿಯಲು ಈಗಾಗಲೇ ವಿಕಾಸಗೊಂಡಿರುವ ಜೀವ ವೈವಿಧ್ಯತೆಯನ್ನು ಅಂದರೆ ಸಸ್ಯ, ಪ್ರಾಣಿ ಮತ್ತು ಸೂಕ್ಷ್ಮಜೀವಿಗಳ ಅಧ್ಯಯನ ಮಾಡಿ ಮೂಲವನ್ನು ಹುಡುಕತೊಡಗಿದರು. ಜೀವಿಗಳ ಮಧ್ಯೆ ಇರುವ ಹೋಲಿಕೆಗಳನ್ನು ಹುಡುಕಿ ಹೊರಟ ಚಾರ್ಲ್‌ಸ್ ಡಾರ್ವಿನ್‌ಗೆ ಒಂದು ಸ್ಪಷ್ಟ ಚಿತ್ರಣ ಕಂಡಿತು. ಅದನ್ನು ತನ್ನ ಕೃತಿಯಾದ ದಿ ಆರಿಜನ್ ಆಫ್ ಸ್ಪೀಷಿಸ್(ಜೀವ ಸಂಕುಲಗಳ ಉಗಮ)ನಲ್ಲಿ ಹೀಗೆ ಚರ್ಚಿಸಿದ್ದಾನೆ. ಈಗಿನ ಸಂಕೀರ್ಣವಾದ ಜೀವಿಗಳೆಲ್ಲವೂ ಒಂದು ಸರಳ ಜೀವಿಯಿಂದ ಪ್ರಾರಂಭವಾಗಿ ಕೋಟ್ಯಾಂತರ ವರ್ಷಗಳ ವಿಕಾಸದಿಂದ ಅದ್ಭುತವಾದ ವೈವಿಧ್ಯತೆಯನ್ನು ಪಡೆದುಕೊಂಡವು ಎಂದು ಕಂಡುಕೊಂಡ. ಅಂದರೆ, ವಿಕಾಸದ ಹಾದಿಯಲ್ಲಿ ಹಿಂದೆ ಹೋಗಿ ಹುಡುಕಿದಾಗ ಎಲ್ಲಾ ಜೀವಿಗಳ ಮೂಲ ಒಂದು ಸರಳ ಜೀವಿ ಹಾಗೂ ಆ ಸರಳ ಜೀವಿಯು ಸಹ ಒಂದು ಸರಳ ರಸಾಯನಿಕ ಕ್ರಿಯೆಯಿಂದ ಪ್ರಾರಂಭವಾದದ್ದು ಎಂದು. ಅದು ತನ್ನನ್ನು ತಾನೆ ಸೃಷ್ಟಿಸಿಕೊಳ್ಳಬಲ್ಲ ಆದಿಜೀವ ಎಂದು ಕರೆಯಬಹುದಾದ ಕ್ರಿಯೆ. ಕಾಲಕ್ರಮೇಣ ಈ ಜೈವಿಕ ಕ್ರಿಯೆ ಸ್ವತಃ ಜೀವವಾಗಿ ಬೆಳೆಯಿತು. ಈ ಕ್ರಮದಿಂದಲೇ ಮಾನವನ ವಿಕಾಸದ ವಿವಿಧ ಕೊಂಡಿಗಳನ್ನು ಗುರುತಿಸಿದನು. ಆದರೆ ಮಂಗನಿಂದ ಮಾನವ ವಿಕಾಸಗೊಂಡನು ಎಂಬುದಕ್ಕೆ ಸಾಕಷ್ಟು ಆಧಾರಗಳು ದೊರೆಯದೆ, ಉಳಿದಿದ್ದನ್ನು 'ತಪ್ಪಿಹೋದ ಕೊಂಡಿ'(Missing Link) ಎಂದು ಕರೆದನು.

ಡಾರ್ವಿನ್‌ನ ತತ್ವಗಳನ್ನು ಆಧಾರವಾಗಿಟ್ಟುಕೊಂಡು 'ಥಾಮಸ್ ಹಕ್ಸ್‌ಲಿ'ಯು ಮಾನವ ಜನಾಂಗವು ದೀರ್ಘಕಾಲೀನ ವಿಕಾಸ ಪ್ರಕ್ರಿಯೆಯ ಪರಿಣಾಮವಾಗಿ ಅಸ್ತಿತ್ವಕ್ಕೆ ಬಂದಿದೆ ಎಂದು ಸಾರಿದನು. ಆಗ ಮಾನಸಿಕ ಮತ್ತು ದೈಹಿಕವಾಗಿ ಆಧುನಿಕನಾದ ಮಾನವ ಹಾಗೂ ಅವನಿಗಿಂತ ಹಿಂದೆ ವಿಕಾಸವಾದ ವಾನರಗಳಂಥ ಪ್ರಾಣಿಗಳ ಮಧ್ಯೆಯ 'Missing Link' ಅಂದರೆ ಕಳೆದುಹೋದ ಕೊಂಡಿಯ ಹುಡುಕಾಟ ಪ್ರಾರಂಭವಾಯಿತು. ಇದಕ್ಕೆ ಮುಖ್ಯ ಸಾಕ್ಷಿ ಒದಗಿಸಿದ್ದು ಪಳಿಯುಳಿಕೆಗಳು. ಆದರೆ ವಾನರ ಹಂತದ ಮಾನವನ ವಿಕಾಸವಾಯಿತು ಎಂಬ ವಾದಕ್ಕೆ ಉಳಿದ ವಾನರಗಳು ಏಕೆ ಮಾನವರಾಗಲಿಲ್ಲ? ಎಂಬ ಪ್ರಶ್ನೆ ಉದ್ಭವಿಸಿತು. ಅದಕ್ಕೆ ನಿಖರವಾಗಿ ಉತ್ತರಿಸುವುದು ಕಠಿಣವಾಯಿತು. ಮುಂದೆ 'ವ್ಯಾಲ್ಲಾಸ'ನು ವಾನರ ಮತ್ತು ಮಾನವನ ವಿಕಾಸದ ನಡುವೆ ಮತ್ತೊಂದು ಘಟ್ಟವಿದ್ದು, ಅಲ್ಲಿ ಜೀವಿಸುತ್ತಿದ್ದವನು 'ನರ' ಎಂದು ತಿಳಿಸಿದನು. ಆ ನರನೇ ನಿರಂತರ ವಿಕಾಸ ಪ್ರಕ್ರಿಯೆಯ ಮುಖೇನ ಮಾನವನಾದನೆಂಬ ವಾದಗಳಿವೆ. ಇದಕ್ಕೆ ಸಂಬಂಧಿಸಿದಂತೆ ವೇದಗಳಲ್ಲಿ 'ನರ' ಎಂಬ ಉಲ್ಲೇಖಗಳು ಸಿಗುತ್ತವೆ. ಇದಕ್ಕೆ ವ್ಯತಿರಿಕ್ತವಾಗಿ ಸಾಕಷ್ಟು ಸಂಶೋಧನೆಗಳು ಪ್ರಪಂಚದಾದ್ಯಂತ ನಡೆದಿವೆ.

'ಎ.ಎಲ್. ಕ್ರೋಬರ್'ನು "ಮಾನವನ ಪೂರ್ವಿಕ ಕಪಿಯಲ್ಲ, ಪ್ರಾಚೀನ ಕಾಲದ ಮನುಷ್ಯ ಕಪಿಯಂತಿದ್ದರೂ ಆ ಗುಣಗಳು ಅಲ್ಪವಾಗಿಯೂ, ಮನುಷ್ಯ ಗುಣಗಳು ಅಧಿಕವಾಗಿ ಇದ್ದವು.

ಹಾಗಾಗಿ ಕಪಿ ಮತ್ತು ಮನುಷ್ಯನ ನಡುವಿನ 'ಕಳೆದುಹೋದ ಕೊಂಡಿ' ಇಲ್ಲವೆಂದು ತೀರ್ಮಾನಿಸಲಾಯಿತು."[೫] ಆದುದರಿಂದ ಡಾರ್ವಿನ್ನನ ಅಭಿಪ್ರಾಯಗಳು ಟೀಕೆಗೆ ಗುರಿಯಾಗಿವೆ. ಹೀಗೆ ಹಿಂದಿನಿಂದಲೂ ಭೂಮಿಯ ಮೇಲೆ ಮಾನವನ ವಿಕಾಸಕ್ಕೆ ಸಂಬಂಧಿಸಿದಂತೆ ಸಾಕಷ್ಟು ವಾದ-ವಿವಾದಗಳು ನಡೆದಿವೆ; ನಡೆಯುತ್ತಲಿವೆ.

ಭಾರತದಲ್ಲಿ ಮಾನವ ಸಂಕುಲಗಳು ಹೇಗೆ ರೂಪುಗೊಂಡವು ಎಂಬ ವಾದಕ್ಕೆ ಮಾನವಶಾಸ್ತ್ರಜ್ಞರು, ಪುರಾತತ್ವ ತಜ್ಞರು, ಸಮಾಜಶಾಸ್ತ್ರಜ್ಞರು ತಮ್ಮದೇ ಆದ ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದಾರೆ. ಅವುಗಳಲ್ಲಿ ಬಿಂಬಿತವಾದಂತೆ ಇಲ್ಲಿ ಮೂಲವಾಗಿ ಯಾವುದೇ ಮಾನವ ಸಂಕುಲ ವಿಕಾಸವಾಗಿಲ್ಲ. ವಿಕಾಸವಾದಂತಿದ್ದವರು ಆಫ್ರಿಕಾ, ಮಧ್ಯಏಷ್ಯಾಗಳಂಥ ಪ್ರದೇಶಗಳಿಂದ ಬಂದು ನೆಲೆಸಿದವರು. ಮೊದಲು ಬಂದವರು ಮತ್ತು ನಂತರ ಬಂದವರ ನಡುವೆ ತಮ್ಮ ಅನನ್ಯತೆಗಳನ್ನು ಉಳಿಸಿಕೊಳ್ಳುವ ಸಲುವಾಗಿ ನಿರಂತರ ತಿಕ್ಕಾಟಗಳು ನಡೆದಿವೆ.

ಪ್ರಸ್ತುತ ವಿವಿಧ ಪ್ರದೇಶಗಳಿಂದ ವಲಸೆ ಬಂದು ಭಾರತದಲ್ಲಿ ನೆಲೆನಿಂತ ಮಾನವ ಸಂಕುಲದ ಜೀವನಕ್ರಮವನ್ನು ಬೇಟೆ, ಪಶುಪಾಲನೆ, ಕೃಷಿಸಂಸ್ಕೃತಿಗಳ ಮೂಲಕ ಅವಲೋಕಿಸುವುದಾಗಿದೆ. ಅದರ ಮುಖೇನವಾಗಿ ಭಾರತದಲ್ಲಿ ಸಮುದಾಯ(ಜಾತಿ)ಗಳ ಉಗಮವನ್ನು ಚರ್ಚಿಸುವ ಜೊತೆಗೆ ದೇಶದಾದ್ಯಂತ ವಿಸ್ತರಿಸಿರುವ ಕುರುಬ ಸಮುದಾಯದ ವಿಶಿಷ್ಟವೂ, ಪ್ರಾಚೀನವೂ ಆದ ಸಾಂಸ್ಕೃತಿಕ ಪರಂಪರೆಯನ್ನು ಈ ವಿಕಾಸದ ಹಂತಗಳಲ್ಲಿ ಗುರುತಿಸುವುದು. ಹಾಗೆಯೇ ಸಮುದಾಯದ ಚಾರಿತ್ರಿಕ ಹಿನ್ನೆಲೆಯನ್ನು ಸೃಷ್ಟಿಪುರಾಣ, ಪುರಾತತ್ವ, ಸಾಹಿತ್ಯಿಕ ಆಕರಗಳು ಮತ್ತು ಆರ್ಯ-ದ್ರಾವಿಡ ಪರಿಕಲ್ಪನೆಗಳ ಮುಖೇನ ಚರ್ಚಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಬೇಟೆಗಾರಿಕೆ:** ಜಗತ್ತಿನ ವಿವಿಧ ಭಾಗಗಳಲ್ಲಿದ್ದ ಬೇಟೆಯ ಪ್ರಕ್ರಿಯೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಮೊದಲಿಗೆ ಆದಿಮ ಮಾನವ ಮೂಲತಃ ಕಾಡಿನಲ್ಲಿದ್ದು, ಗೆಡ್ಡೆ-ಗೆಣಸುಗಳನ್ನು ತಿಂದು ಜೀವಿಸುತ್ತಿದ್ದನು. ಒಂದೆಡೆ ಪ್ರಕೃತಿಯ ಸೃಷ್ಟಿವೈಚಿತ್ರ್ಯಗಳು ಸೋಜಿಗದ ಸಂಗತಿಗಳಾಗಿದ್ದರೆ, ಮತ್ತೊಂದೆಡೆ ಹೊಟ್ಟೆ ತುಂಬಿಸಿಕೊಳ್ಳಲು ಮಾಡುತ್ತಿದ್ದ ಹೋರಾಟ ನಿತ್ಯದ ಕಾಯಕವಾಗಿತ್ತು. ಅಂದಿನ ಜೀವನ ಗಿಡಮರ ಮತ್ತು ಸಸ್ಯಪ್ರಪಂಚವನ್ನು ಅವಲಂಬಿಸಿತ್ತು. ಜೊತೆಗೆ ಮರದ ಎಲೆ, ತೊಗಟೆಯು ಉಡುಗೆಗಳಾಗಿ, ಗವಿ ಗುಂಡಾರಗಳು ವಾಸಸ್ಥಳಗಳಾಗಿದ್ದವು. ಸಸ್ಯಹಾರದ ಕೊರತೆ ಕಂಡುಬಂದಂತಹ ವೇಳೆಯಲ್ಲಿ ತನ್ನ ಜೀವನದ ಉಳಿವಿಗಾಗಿ ಕಲಿತದ್ದು ಬೇಟೆ. "ಮಾನವ ಆದಿಯಲ್ಲಿ ಕಂಡುಹಿಡಿದ ಜೀವನ ನಿರ್ವಹಣೆಯು ಬೇಟೆ ಶೋಧನೆಯಿಂದ ಆಹಾರ ಸಂಗ್ರಹಣೆ ವಿಕಾಸವಾಗಿ ಮಾನವನ ಸಾಮಾಜಿಕ ವಿಕಾಸಕ್ಕೂ ಕಾರಣವಾಯಿತು."[೬] ಬೇಟೆ ಭೌತಿಕ ವಿಕಾಸವಾದರೆ, ಬೇಟೆಯ ಜೀವನ ಸಾಮಾಜಿಕ ವಿಕಾಸವಾಗಿರುತ್ತದೆ. ಬೇಟೆಗಾರರ ಆಹಾರ ಸಂಗ್ರಹಕಾರರು ನಿಷ್ಠೆಯಿಂದ ಪೂರ್ವಗ್ರಹಗಳಿಲ್ಲದೆ.

ಹಗೆತನವಿಲ್ಲದೆ ಜೀವಿಸುತ್ತಿದ್ದರು. ಬೇಟೆಗಾರಿಕೆ ಆರ್ಥಿಕ ಪರಿಸರದ ಸ್ಥಿತಿಗೆ, ಸಮಾಜದ ಮುನ್ನಡಿಗೆ ಕಾರಣವಾಯಿತು.

ಕಾಡಿನಲ್ಲಿದ್ದ ಮನುಷ್ಯ ಪ್ರಾಣಿಗಳ ಜೊತೆ ಬದುಕುತ್ತ ಆಹಾರಕ್ಕಾಗಿ ಅವುಗಳನ್ನು ಕೊಲ್ಲುತ್ತ ಇದ್ದ ವೈರುಧ್ಯ ವಿಶೇಷವಾದುದು. ಕೊಲ್ಲುವ ಕ್ರಿಯೆ ಬದುಕಿನ ಅನಿವಾರ್ಯ ಆಹಾರೋತ್ಪಾದನಾ ವಿಧಾನವಾದ್ದರಿಂದ 'ಹಿಂಸೆ' ಎಂಬ ಕಲ್ಪನೆಗೆ ಅವಕಾಶವೇ ಇರಲಿಲ್ಲ. ಕೊಂದ ಪ್ರಾಣಿಯ ಮಾಂಸ ಸೇವನೆ ಮತ್ತು ಗುಹೆಗಳಲ್ಲಿ ವಾಸಿಸುವುದನ್ನು ಮಾನವನ ಅನಾಗರಿಕ ವ್ಯವಸ್ಥೆ ಎನ್ನುವುದು ವಾಡಿಕೆ. ಆದರೆ ಅಂದಿನ ಮಾನವನ ವಿಕಾಸ ಕಾಲಕ್ಕೆ ಅದು ನಾಗರಿಕ ವ್ಯವಸ್ಥೆಯಾಗಿತ್ತು ಎಂಬುದು ಗಮನಾರ್ಹ. "ಬೇಟೆಯ ಪರಿಕಲ್ಪನೆ ಮತ್ತು ಪ್ರಕ್ರಿಯೆ ನಮ್ಮ ಜೀವನದಷ್ಟೇ ಮಹತ್ವ ಪಡೆದಿದೆ. ಜೀವನವಿಲ್ಲದೆ ಆಹಾರವಿಲ್ಲ, ಆಹಾರವಿಲ್ಲದೆ ಜೀವನವಿಲ್ಲ ಎಂಬ ಮಾತು ಬದುಕುವುದಕ್ಕೆ ಆಹಾರದ ಅವಶ್ಯಕತೆಯನ್ನು ತೋರಿಸುತ್ತದೆ. ಆಹಾರ ಸಂಗ್ರಹ ಮತ್ತು ಸ್ವಯಂ ರಕ್ಷಣೆಯೂ ಬೇಟೆಗಾರಿಕೆಯ ಉಗಮಕ್ಕೆ ಕಾರಣವಾಗಿದೆ."[೭] ಅದು ಉದರ ಪೋಷಣೆ ನೀಗಿಸುವುದರ ಜೊತೆಗೆ ಉಡುಗೆ-ತೊಡುಗೆಗೆ ಚರ್ಮವನ್ನು, ಬೇಟೆಯಾಡಲು ಮೂಳೆ, ಕೋಡುಗಳಂಥ ಆಯುಧಗಳನ್ನು ಬಳಸಿಕೊಳ್ಳಲು ಸಹಕಾರಿಯಾಯಿತು. ನಂತರ ಬೇಟೆಗಾರಿಕೆಯಲ್ಲಿ ಕತ್ತಿ, ಕೊಡಲಿ, ಬಿಲ್ಲು-ಬಾಣಗಳು, ನವನವೀನ ಆಯುಧಗಳ ತಂತ್ರಜ್ಞಾನ ಕಾಲದಿಂದ ಕಾಲಕ್ಕೆ ಬೆಳೆದು ಬಂದಿತು.

ಪ್ರಾರಂಭಿಕ ಕಾಲದಿಂದಲೂ ತಮ್ಮದೇ ಆದ ಮೂಲ ಸಂಸ್ಕೃತಿಯನ್ನು ರೂಪಿಸಿಕೊಳ್ಳುತ್ತ ಅಂದರೆ ಜೀವನಕ್ರಮವನ್ನು ಕಟ್ಟಿಕೊಳ್ಳುವ ಪ್ರಯತ್ನವನ್ನು ಮಾಡುತ್ತ ಬರುವುದರ ಜೊತೆಗೆ ಪ್ರಕೃತಿ ಸನ್ನಿವೇಶಗಳನ್ನು ಗೆದ್ದದ್ದು ಇಲ್ಲವೆ, ಪ್ರಕೃತಿಯೊಡನೆ ಮಾಡಿಕೊಂಡ ಹೊಂದಾಣಿಕೆ ಪ್ರತಿಬಿಂಬಿತ ವಾಗಿಸಿಕೊಂಡಿದ್ದಾರೆ. ಹೀಗೆ ಪ್ರಾರಂಭದಲ್ಲಿ ಆಹಾರ ಶೇಖರಣೆ ಮಾಡುವ ಸಮಾಜವೊಂದು ಕಾಣಿಸಿಕೊಂಡು ಅದು ಮಾಂಸಹಾರಿ ಆಹಾರಕ್ಕೆ ಎಡೆಮಾಡಿಕೊಟ್ಟಿತು. ಕ್ರಮೇಣವಾಗಿ ಬೇಟೆಗಾರ ಸಮುದಾಯಗಳು ಸೃಷ್ಟಿಯಾದವು. "ಬೇಟೆಯನ್ನು ಕುರಿತು ವಿವರಿಸುವಾಗ ಪಶುಪಾಲನೆ ಮತ್ತು ಕೃಷಿಸಂಸ್ಕೃತಿಗಿಂತ ಹಿಂದಿನ ಹಂತ ಎಂದು ಖಚಿತಪಡಿಸಿಕೊಳ್ಳಬೇಕು. ಏಕೆಂದರೆ ಮಾನವನ ವೃತ್ತಿ ಬೇಟೆಯಾಗಿದ್ದು, ಪ್ರಾಚೀನ ಕಾಲದಿಂದಲೂ ಜನಜೀವನದ ವಿಧಾನವಾಗಿ ರೂಪಪಡೆದು. ಇಡೀ ಮಾನವ ಜನಾಂಗದ ಜೀವನಾರಂಭಕ್ಕೆ ಬಳುವಳಿಯಾಗಿದೆ."[೮] ಆದಿಯಲ್ಲಿ ಸಾರ್ವತ್ರಿಕವಾಗಿದ್ದ ಬೇಟೆಯು ಇಂದು ಕೆಲವೇ ಬುಡಕಟ್ಟು ಸಮುದಾಯಗಳಿಗೆ ಸೀಮಿತವಾಗಿದೆ. ಬೇಡ, ಸೋಲಿಗ, ಕಾಡುಕುರುಬ, ಜೇನುಕುರುಬ, ಹಕ್ಕಿಪಿಕ್ಕಿ, ಪಾರ್ಧಿ, ಅಡ್ವಿಚೆಂಚರು, ಮುಂತಾದ ಬುಡಕಟ್ಟುಗಳಲ್ಲಿ ಈ ಕಾಯಕ ಮುಂದುವರೆದಿದೆ. ಆದರೂ ಬೇಟೆಯ ಕಾನೂನುಗಳು ಬೇಟೆಗಾರಿಕೆಯಿಂದ ಬದುಕುತ್ತಿದ್ದ ಸಮುದಾಯಗಳ ಬದುಕಿಗೆ ತಿರುವು ನೀಡಿವೆ. ಅರಣ್ಯ, ವನ್ಯಜೀವಿ, ಮರಗಳ ಸಂರಕ್ಷಣೆ, ಭಾರತ ಮೀನುಗಾರಿಕೆಗಳಿಗೆ ಸಂಬಂಧಿಸಿದ ಅಧಿನಿಯಮಗಳು ಬೇಟೆಯನ್ನೆ ನಂಬಿದ ಬುಡಕಟ್ಟು ಸಮುದಾಯಗಳ ಬದುಕನ್ನು ಕಸಿದಿವೆ. ಅದರಲ್ಲಿಯೂ ಅರಣ್ಯವಾಸಿಗಳ ಜೀವನವನ್ನು ಅತಂತ್ರವಾಗಿಸಿವೆ.

ಬೇಟೆಯನ್ನು ಅವಲಂಬಿಸಿ ಬದುಕುತ್ತಿದ್ದ ಕಾಲದಲ್ಲಿ ಆಹಾರ ಸಂಗ್ರಹಣೆಯಲ್ಲಿ ಸಾಕಷ್ಟು ಮಾರ್ಪಾಡುಗಳಾದವು. "ಬೇಟೆಯಾಡುವುದರಿಂದ ಪಡೆಯುವ 'ಆಹಾರ ಶೇಖರಣೆ' ಶಾಶ್ವತವಲ್ಲ ಎಂಬುದನ್ನು ಮನಗಂಡು ಕಾಡಲ್ಲಿದ್ದ ಸಾಧುಪ್ರಾಣಿಗಳನ್ನು ಸಾಕಿ ಸಲಹುವುದು ಬೆಳೆಯಿತು. ಮೇಕೆ, ಕುರಿ, ದನಗಳೇ ಪ್ರಥಮ ಸಾಕು ಪ್ರಾಣಿಗಳಾದವು. ಮಾನವನಿಗೆ ಬೇಟೆ ದೊರೆಯದಾಗ ಅಥವಾ ಮಾಂಸ ತಿಂದು ಬೇಸರವಾದಾಗ ಹಸುವಿನ ಹಾಲು, ಮೊಸರು, ಜೇನು, ಮೊಟ್ಟೆಗಳು ಆಹಾರ ಮಾಧ್ಯಮವಾಗಿದ್ದವು."[೬] ಪಶುಪಾಲನೆ ಬೆಳೆದಂತೆಲ್ಲ ಬೇಟೆಯ ಮೇಲೆ ಆಧಾರವಾಗಿದ್ದ ಜೀವನ ಕಡಿಮೆಯಾಯಿತು. ಎಲೆ, ಬಳ್ಳಿ, ತೊಗಟೆ ಮತ್ತು ಚರ್ಮಗಳಂಥ ಉಡುಪುಗಳಿಂದ ವಿಮುಕ್ತವಾಗಿ, ಕುರಿಯ ಉಣ್ಣೆಯಿಂದ ವಸ್ತ್ರಗಳನ್ನು ತಯಾರಿಸಿ ಬಳಸುವುದು ಬೆಳೆದು ಬಂದಿತು.

ಕ್ರಿ.ಪೂ ೬೦೦೦ದವರೆಗೆ ಅಂದರೆ ಹಳೆ ಶಿಲಾಯುಗದಿಂದ ಹಿಡಿದು ನವಶಿಲಾಯುಗದವರೆಗೆ ಬೇಟೆಯ ಮೇಲೆ ಪ್ರಧಾನವಾಗಿ ಅವಲಂಬಿತವಾಗಿದ್ದ ಜೀವನ ಪಶುಪಾಲನೆಯ ಹಂತದಲ್ಲಿ ಹಿಂದೆ ಅಸ್ಪಷ್ಟವಾಗಿ ಬೆಳೆದು ಬರುತ್ತಲಿದ್ದ ಸಂಘಜೀವನ, ಕುಟುಂಬಕ್ಕೆ ಭದ್ರ ತಳಹದಿಯನ್ನು ಒದಗಿಸಿತು. ಮುಂದುವರಿದಂತೆ ಬೀಜವನ್ನು ನೆಲಕ್ಕೆ ಹಾಕುವ ಮೂಲಕ ಆಹಾರ ಬೆಳೆಯ ಬಹುದೆಂಬುದರತ್ತ ಚಲಿಸಿತು. ಅಂದಿನಿಂದ ಆಹಾರಕ್ಕಾಗಿ ಕೇವಲ ಬೇಟೆ ಮತ್ತು ಕಾಡುಧಾನ್ಯ(ಗೆಡ್ಡೆ-ಗೆಣಸು)ಗಳಿಗೆ ಸೀಮಿತವಾಗಿದ್ದ ಬದುಕು ನಿರ್ದಿಷ್ಟ ನೆಲೆಯನ್ನು ಕಂಡುಕೊಳ್ಳಲು ಕಾರಣವಾಯಿತು. ಹೀಗೆ ಕೃಷಿಯು ಹೆಚ್ಚು ಹರಡಿದಂತೆಲ್ಲ 'ಪಶುಪಾಲನೆ'ಗೆ ಗಟ್ಟಿಯಾದ ತಳಹದಿಯೊಂದು ಒದಗಿಬಂತು. ಉತ್ತು ಬಿಟ್ಟ ಮೇಲೆ ಉಳಿದ ಕೂಳೆಗಳು ಜಾನುವಾರುಗಳಿಗೆ ಮೇವಾಗಿ ಲಭ್ಯವಾದವು. ಪಶುಪಾಲನೆಯು ಹೆಚ್ಚು ಹಾಲು, ಮಾಂಸವನ್ನು ಒದಗಿಸುವ ಮೂಲಕ ಬೇಟೆಯ ಮೇಲಿನ ಅವಲಂಬನೆಯು ಕಡಿಮೆಯಾಯಿತು. ಸಮೂಹ ಜೀವನ ಪ್ರಾರಂಭವಾಗಿ 'ಪಶುಪಾಲನ ಸಮಾಜಗಳು' ಉದಯಗೊಳ್ಳಲು ಸಾಧ್ಯವಾಯಿತು.

**ಪಶುಪಾಲನೆ:** ಹಳೆಯ ಶಿಲಾಯುಗದ ಆದಿ ಮಾನವನ ಬದುಕು ಬೇಟೆಯಿಂದ ದೊರೆತ ಮಾಂಸ, ಹಣ್ಣು-ಹಂಪಲು, ಗೆಡ್ಡೆ-ಗೆಣಸುಗಳಂಥ ಆಹಾರ, ಮರದ ಪೊಟರೆ, ಗುಹೆಗಳ ವಾಸ ಮತ್ತು ಅಲೆಮಾರಿ ಜೀವನವನ್ನು ಅವಲಂಬಿಸಿತ್ತು. ಹೋಮೋ ಎರೆಕ್ಟಸ್ ಮಾನವನ ಕೊನೆಯ ಆವೃತ್ತಿ. ಅಂದಿನ ಜನರು ಆಧುನಿಕ ಮಾನವರಿಗಿಂತ ಭೌತಿಕವಾಗಿ ಭಿನ್ನರಾಗಿದ್ದು, ಗೋರಿಲ್ಲಾ, ಚಿಂಪಾಜಿಗಳನ್ನು ಹೋಲುತ್ತಿದ್ದರು. ಕಾಲ ಸರಿದಂತೆ ದುಡಿಮೆಯ ಸಾಧನ ಸಾಮಗ್ರಿಗಳು ಬದಲಾಗುವುದರೊಂದಿಗೆ ಜೀವನಕ್ರಮವೂ ಬದಲಾಯಿತು.

"ಕಾಡು ನಾಯಿಗಳು ಮಾನವ ನೆಲೆಗಳ ಸಮೀಪದಲ್ಲಿಯೇ ಸುತ್ತಾಡುತ್ತ, ಅಳಿದುಳಿದ ಆಹಾರ ಸೇವಿಸುವುದರೊಂದಿಗೆ ಮಾನವನಿಗೆ ಬೇಟೆಯಲ್ಲಿ ಸಹಕರಿಸುತ್ತಿದ್ದವು. ಮತ್ತು ಪರಕೀಯರನ್ನು ನೋಡಿ ಬೊಗಳುವುದರಿಂದ ಎಚ್ಚರಗೊಳಿಸುತ್ತಿದ್ದವು. ಹೀಗಾಗಿ ನಾಯಿಯೂ ಪ್ರಥಮ ಸಾಕು

ಪ್ರಾಣಿಯಾಯಿತು. ಮಾನವ ಬಿಲ್ಲು-ಬಾಣಗಳನ್ನು ತಯಾರಿಸಲು ಮತ್ತು ಅವುಗಳನ್ನು ಬೇಟೆಗಾಗಿ ಬಳಸಲು ಕಲಿತ ಮೇಲೆ ನಾಯಿಗಳ ಪಾತ್ರ ಬೇಟೆಯಲ್ಲಿ ಮತ್ತು ಮನೆಯ ರಕ್ಷಣೆಯಲ್ಲಿ ಗುರುತರವಾಯಿತು. ಬಿಲ್ಲು ಬಾಣ ಮತ್ತು ನಾಯಿಗಳ ಸಹಾಯದಿಂದ ಯಥೇಚ್ಚವಾಗಿ ಬೇಟೆ ಲಭ್ಯವಾಗುತ್ತಿದ್ದಂತೆ ಅವರು ಕುರಿ, ಮೇಕೆ, ಕಾಡುಹಂದಿ, ದನ ಇವುಗಳನ್ನು ಬೇಟೆಯಾಡದೆ ತಮ್ಮೊಂದಿಗೆ ಸಾಕಿ ಸಲಹಲಾರಂಭಿಸಿದರು. ಹೀಗೆ ಬೇಟೆಗಾರಿಕೆಯಿಂದ ಪಶುಪಾಲನೆಯತ್ತ ಮಾನವ ವಾಲಿದ."[೧೦] ಮಾನವ ಕಾಡಿನಲ್ಲಿ ಅಲೆಯುತ್ತಿದ್ದ ಪ್ರಾಣಿಗಳನ್ನು ಪಳಗಿಸಿ ಸಾಕುವುದರ ಜೊತೆಗೆ ಅವುಗಳಿಂದ ನಾನಾ ಪ್ರಯೋಜನಗಳು ಪಡೆಯಲು ಅನುವಾಯಿತು. ಪಶುಪಾಲನೆಯಲ್ಲಿ ತೊಡಗಿ ಕುರಿ, ದನಕರುಗಳಿಗೆ ಹುಲ್ಲು, ನೀರು ಸಮೃದ್ಧಿಯಾಗಿರುವ ಫಲವತ್ತಾದ ಭೂಪ್ರದೇಶ, ನದಿ ಬಯಲುಗಳಲ್ಲಿ ನೆಲೆಸಿದರು.

ಆದಿಮಾನವನಂತೆ ಇಂದಿನ ಸುಧಾರಿಸಿದ ಸಾಕುಪ್ರಾಣಿಗಳು ಸಹ ಒಂದು ಕಾಲಕ್ಕೆ ಕಾಡು ಮೃಗಗಳಾಗಿ ಅಡವಿಯಲ್ಲಿದ್ದವು. ಪ್ರಕೃತಿಯ ಸೃಷ್ಟಿಯಲ್ಲಿ ಮಾನವನಿಗಿಂತ ಮುಂಚೆಯೇ ಉಗಮವಾಗಿ ಅಸ್ತಿತ್ವಕ್ಕೆ ಬಂದಂತವು ಪ್ರಾಣಿಗಳು. ಅವುಗಳಲ್ಲಿ ಮಾನವನು ಸಾಕುಪ್ರಾಣಿಗಳನ್ನು ಜೋವಿಡಿ ಕುಟುಂಬಕ್ಕೆ ಸೇರಿದವುಗಳೆಂದು ಹೆಸರಿಸಲಾಗಿದೆ. ಇವು ಮೆಲುಕು ಹಾಕುವ ಕಾಲಿನ ಗೊರಸು ಸೀಳಾಗಿರುವ ಮತ್ತು ಕೊಂಬುಗಳಿರುವಂತವು. ಕಾಡೆತ್ತು, ಗೌರ ಅಥವಾ ಹಿಂದೂಸ್ತಾನದ ಬೈಸನ್, ಕಡವೆ, ಕಾಡುಕೋಣ, ಕಾಡೆಮ್ಮೆ, ಕುರಿ, ಮೇಕೆ, ಯಾಕೆ ಇವೆಲ್ಲ ಈ ಬಳಗಕ್ಕೆ ಸೇರಿದ ಪ್ರಾಣಿಗಳು. ಅಂದು ಪಶುಸಂಪತ್ತು ಯಾರ ಬಳಿ ಹೆಚ್ಚಾಗಿರುತ್ತಿತ್ತೋ ಅವರನ್ನು ಒಂದು ಬುಡಕಟ್ಟು ಅಥವಾ ಸಮುದಾಯಕ್ಕೆ ಯಜಮಾನ ಮತ್ತು ಸಮಾಜಕ್ಕೆ ಮುಖ್ಯಸ್ಥನಾಗಿ ನೇಮಿಸಲಾಗಿತ್ತು.

ಅಂದಿನ ಶ್ರೀಮಂತಿಕೆಯ ಸಂಕೇತ ಪಶುಪಾಲನೆಯ ಕುರಿ ದನಗಳ ಹಿಂಡೆ ಆಗಿತ್ತು. "ಸಾರ್ವಜನಿಕ ಆಸ್ತಿಯಾಗಿದ್ದ ಭೂಮಿಯ ಮೇಲೆ ಪಶುಪಾಲನೆ ಸ್ವಚ್ಛಂದವಾಗಿ ನಡೆಯುತ್ತಿತ್ತು. ಈ ಯುಗದ ನಿವೇಶನಗಳು ರಾಜಸ್ಥಾನ, ಉತ್ತರಪ್ರದೇಶ, ಮಧ್ಯ ಹಾಗೂ ಪೂರ್ವ ಭಾರತ, ದಕ್ಷಿಣದಲ್ಲಿ ಕೃಷ್ಣ ನದಿಯಿಂದಾಚೆಗೆ ದೊರೆತಿವೆ."[೧೧] ಅಲ್ಲಿನ ಜನ ಬೇಟೆ ಮತ್ತು ಪಶುಪಾಲನೆಯಿಂದ ಜೀವನ ನಡೆಸುತ್ತಿದ್ದರು. ಇಲ್ಲಿ ಪಶುಪಾಲನೆ ನಡೆಯುತ್ತಿದ್ದುದಕ್ಕೆ ದೊರೆತಿರುವ ಸಾಕ್ಷ್ಯಾಧಾರಗಳು ಭಾರತದಲ್ಲಿ ಈ ವೃತ್ತಿಯನ್ನು ಕುರಿತು ದೊರೆತಿರುವ ಮೊದಲನೆಯದಾಗಿದೆ. ಕ್ರಿಪೂ. ೫೦೦೦ದಿಂದ ಸುಮಾರು ಐದು ಸಾವಿರ ವರ್ಷಕಾಲ ಅಲ್ಲಿ ಜನರು ನೆಲೆಸಿದ್ದರು. "ಮಧ್ಯಪ್ರದೇಶದ ಆದಮ್‌ಘರ್‌ಲ್ಲಿಯೂ ಅಂತಹದೇ ಸಾಕ್ಷ್ಯಾಧಾರಗಳು ದೊರೆತಿವೆ."[೧೧] ಈ ಅವಧಿಯಲ್ಲಿ ಬೆಟ್ಟ ಇಲ್ಲವೆ ನದಿ ತೀರಗಳಲ್ಲಿ ವಾಸ ಮಾಡುತ್ತಿದ್ದರು. ಜೊತೆಗೆ "ಈ ಅವಧಿಯಲ್ಲಿ ಕುಮ್ರಿ ಬೇಸಾಯದ ಮೂಲಕ ಆಹಾರ ಧಾನ್ಯಗಳನ್ನು ಉತ್ಪಾದಿಸುವುದು ತಿಳಿದಿತ್ತು"[೧೨] ಹೀಗೆ ಸಾಕಷ್ಟು ಸುಧಾರಣೆಯತ್ತ ಸಾಗಿ ಬಂದಿರುವರು.

ಅಲೆಮಾರಿ ಪಶುಪಾಲಕರಾಗಿದ್ದವರು ಆಗಿಂದ್ದಾಗೆ ತಮ್ಮ ವಸತಿಯನ್ನು ಬದಲಿಸುತ್ತ ಹೊಸ ಹೊಸ ಶಿಬಿರಗಳನ್ನು ನಿರ್ಮಿಸಿಕೊಳ್ಳುತ್ತಿದ್ದರು. ಶಿಬಿರದ ಸುತ್ತಲು ಮರದ ಕಂಬ, ಕೋಲುಗಳನ್ನು

ಬಳಸಿ ಕುರಿ ಅಥವಾ ದನದ ದೊಡ್ಡಿ(ಹಟ್ಟಿ)ಗಳನ್ನು ಕಟ್ಟುತ್ತಿದ್ದರು. ಇಲ್ಲಿ ಸಗಣಿ ಮತ್ತು ಹಿಕ್ಕೆ(ಕುರಿ)ಯು ಸಂಗ್ರಹವಾಗುತ್ತಿತ್ತು. ಶಿಬಿರಗಳನ್ನು ಬಿಡುವಾಗ ಬೆಂಕಿ ಹಾಕುತ್ತಿದ್ದರು. ಹೀಗಾಗಿ ಬೂದಿಯ ಗುಡ್ಡಗಳು ಹಾಗೂ ವಾಸದ ನೆಲೆಗಳು ಅಕ್ಕಪಕ್ಕದಲ್ಲಿಯೇ ಕಂಡುಬಂದಿವೆ. ಹೀಗೆ ಪಶುಪಾಲನೆಯ ಸಮುದಾಯಗಳು ಬೆಳೆಯಲು ಕಾರಣವಾಯಿತು. ಸಹಸ್ರಾರು ವರ್ಷಗಳಿಂದ ಸಾಗಿ ಬಂದ ಈ ಪಾರಂಪರಿಕ ಸಂಪ್ರದಾಯದವರು ಬೇಟೆಗಾರಿಕೆಯಿಂದ ಕವಲೊಡೆದ ಧನಗಾರರು, ಕುರುಬರು, ಮ್ಯಾಸಬೇಡರು, ಕಾಡುಗೊಲ್ಲರು ಕರ್ನಾಟಕದಲ್ಲಿ ಮುಖ್ಯವಾಗಿ ಕಾಣಸಿಗುತ್ತಾರೆ. ಅದರಲ್ಲಿಯೂ ಕುರುಬರ ಚಹರೆಗಳು ಸ್ಫುಟವಾಗಿ ಗೋಚರಿಸುತ್ತವೆ. "ಶಿಲಾಯುಗದ ಅವಧಿಯಲ್ಲಿ ಭೀಮಾ, ಕೃಷ್ಣ, ತುಂಗಭದ್ರ, ಗೋದಾವರಿ ನದಿ ಕಣಿವೆಗಳಲ್ಲಿ ನಿಧಾನವಾಗಿ, ದೀರ್ಘಕಾಲ, ಋತುಮಾನಕ್ಕೆ ಅನುಗುಣವಾಗಿ ಒಳ್ಳೆಯ ಮೇವು ಮತ್ತು ನೀರನ್ನು ಹುಡುಕಿಕೊಂಡು ಆಚೀಚೆ ಅಲೆದಾಡಿದಂತೆ ಕಾಣುತ್ತದೆ."[೧೩] ಇವರ ಈ ಗುಳೆ ಹೋಗುವುದು ದೂರದ ಸ್ಥಳಗಳಿಗೆ ಹೋಲಿಸಿದರೆ ಇದರ ವ್ಯಾಪ್ತಿ ಸೀಮಿತವೆಂದು ಹೇಳಬೇಕು.

ಸೂಕ್ಷ್ಮ ಶಿಲಾಯುಗ ಮತ್ತು ಬೃಹತ್ ಶಿಲಾಯುಗದ ಜನರು ಎರಡೂ ರೀತಿಯಲ್ಲಿ ಸುತ್ತುತ್ತಿದ್ದರು. ಮುಂಗಾರು ಮಳೆ ಪ್ರಾರಂಭವಾದಾಗ ನೆಲ ಸದಾ ತೇವವಾಗಿರುತ್ತದೆ. ಇದರಿಂದ ಕುರಿಗಳ ಗೊರಸು ಕೊಳೆಯಲಾರಂಭಿಸುತ್ತದೆ. ಆಗ ಅವರು ಹೆಚ್ಚು ಒಣ ಹವೆಯಿರುವ ಪೂರ್ವದ ಬಯಲು ಪ್ರದೇಶದ ಕಡೆಗೆ ಗುಳೆ ಹೋಗುತ್ತಿದ್ದರು. ಮುಂಗಾರು ಮುಗಿದ ಮೇಲೆ ಮರಳಿ ಬರುತ್ತಿದ್ದರು. ಪಶ್ಚಿಮದ ಕಡೆ ಕೈಗೊಂಡ ಪಯಣದಿಂದ ಕರಾವಳಿಯ ಪರಿಚಯವಾಯಿತು. ಹೀಗೆ ನಿರಂತರ ವಲಸೆಯಿಂದಾಗಿ ಅಲ್ಲಲ್ಲಿ ಚದುರಿ ಎಲ್ಲ ಕಡೆಯೂ ನೆಲೆಸಿದರು.

ದಖ್ಖನ್ ಮತ್ತು ಮಧ್ಯ ಭಾರತದಲ್ಲಿ ಧನಗಾರ(ಕುರುಬ)ರು ಟಗರು ಮತ್ತು ಹೋತಗಳಿಗೆ "ಒಡಮಾಡಲು"[೧೪] ಆಗಷ್ಟೆ ಸಿದ್ಧಪಡಿಸಿದ ಬೆಣಚುಕಲ್ಲಿನ ಆಯುಧವನ್ನು ಬಳಸುತ್ತಾರೆ. ಇವು ಅತ್ಯಂತ ಒರಟಾಗಿದ್ದರೂ ಅಕ್ಷರಶಃ ಸೂಕ್ಷ್ಮ ಶಿಲಾಯುಧಗಳು. ಪೂರ್ವ ಇತಿಹಾಸದ ತಂತ್ರಗಾರಿಕೆಯನ್ನು ಇಂದಿಗೂ ಕಾಣಬಹುದಾಗಿದೆ. ಪಾರಂಪರಿಕ ಜ್ಞಾನದೊಂದಿಗೆ ಜೀವಿಸುತ್ತಿರುವ ಈ ಸಮುದಾಯವು ಕಾಲದಿಂದ ಕಾಲಕ್ಕೆ ಸಾಕಷ್ಟು ಏಳು ಬೀಳುಗಳನ್ನು ಕಂಡರೂ ತನ್ನ ಪಾರಂಪರಿಕ ವೃತ್ತಿಗಳನ್ನು ಮಾಡುತ್ತ ಬಂದಿದೆ.

"ಕರ್ನಾಟಕ ಮತ್ತು ಭಾರತದಲ್ಲಿ ಬಹುಸಂಖ್ಯಾತರಾಗಿ ಜೀವಿಸುತ್ತಿದ್ದರೂ ಹೆಚ್ಚಾಗಿ ಪಶುಪಾಲನೆ, ಕುರಿಸಾಕಾಣಿಕೆ ಮತ್ತು ಕೃಷಿ ಕಾಯಕದಲ್ಲಿ ತೊಡಗಿಸಿಕೊಂಡಿದ್ದು, ತಮ್ಮ ಜೀವನವೃತ್ತಿಯ ಕಾರಣದಿಂದ ಅಲೆಮಾರಿತನವನ್ನು ಮೈಗೂಡಿಸಿಕೊಂಡಿದ್ದಾರೆ. ಒಂದೆಡೆ ನೆಲೆನಿಂತು ಸುಖಜೀವನಕ್ಕೆ ತಮ್ಮನ್ನು ಒಡ್ಡಿಕೊಳ್ಳದೆ ಸರಳವಾದ ಮಿತ ಆಸೆ-ಆಕಾಂಕ್ಷೆಗಳ ವರ್ತುಲದಲ್ಲಿ ತಮ್ಮನ್ನು ತಾವೇ ಬಂಧಿಸಿ ಕೊಂಡಿದ್ದರು. ತಾವಾಗಿಯೇ ಇಷ್ಟಪಟ್ಟು ವರಿಸಿದ್ದ ಈ ಬಗೆಯ ಜೀವನಕ್ರಮಕ್ಕೆ ಶಿಕ್ಷಣ ಅಗತ್ಯವೆಂದು ಪರಿಗಣಿಸಿರಲಿಲ್ಲ. ಒಂದೇ ವೃತ್ತಿಯ ಹಾಗೂ ಸಮುದಾಯಕ್ಕೆ ಸೇರಿದ ತಾವೆಲ್ಲರೂ ವಿಚಾರ

ವಿನಿಮಯಕ್ಕಾಗಿ ಕಷ್ಟ ಸುಖಗಳನ್ನು ಹಂಚಿಕೊಳ್ಳುವುದಕ್ಕಾಗಿ ಒಂದುಗೂಡಬೇಕೆಂಬ ಪರಿಕಲ್ಪನೆಯೇ ಇರದಿರುವುದು ಪ್ರಮುಖ ಕಾರಣ. ತಮ್ಮ ಮೂಲವನ್ನು ಹುಡುಕಿಕೊಳ್ಳುವ, ಅದರಿಂದ ಅಸ್ಮಿತ ಅಭಿಮಾನಗಳನ್ನು ರೂಢಿಸಿಕೊಳ್ಳುವ, ತಮ್ಮ ಹಿರಿಮೆ ಗರಿಮೆ, ಕಲಾವಂತಿಕೆ, ವೈಶಿಷ್ಟ್ಯಗಳನ್ನು ಪುಟಗೊಳಿಸಿಕೊಳ್ಳುವ ಪ್ರಯತ್ನವನ್ನು ಈ ಜನಾಂಗ ಮಾಡಲಿಲ್ಲ. ಇದಕ್ಕಿಂತ ಹೆಚ್ಚಾಗಿ ಪ್ರಾಮಾಣಿಕತೆ, ಪರಾಕ್ರಮ ಆಡಳಿತ ನೈಪುಣ್ಯಗಳಿಂದ ಇತಿಹಾಸದಲ್ಲಿ ದೊಡ್ಡದಾದ ರಾಜ್ಯಗಳನ್ನು ಸ್ಥಾಪಿಸಿ, ಮೆರೆದ ರಾಜರು, ಚಕ್ರವರ್ತಿಗಳು ತಮ್ಮ ಕೀರ್ತಿ ವೈಭವಗಳ ಪ್ರಚಾರಕ್ಕಾಗಿ ಮೇಲ್ವರ್ಗದ ಜನರಿಗೆ ಆಸ್ಥಾನದಲ್ಲಿ ಮಹತ್ತರವಾದ ಸ್ಥಾನಮಾನಗಳನ್ನು ನೀಡಿ ಗೌರವಿಸಿದರೆ ವಿನಃ ಇವರ ಸಮುದಾಯದ ಅಭಿವೃದ್ಧಿ ವಿಕಾಸಕ್ಕಾಗಿ ಯಾವುದೇ ಯೋಜನೆಗಳನ್ನು ರೂಪಿಸಲಿಲ್ಲ. ಆಸ್ಥಾನದಲ್ಲಿದ್ದ ವಿದ್ವಾಂಸರೂ ಇವರ ಚರಿತ್ರೆಯನ್ನು ದಾಖಲಿಸಲಿಲ್ಲ. ಹೀಗಾಗಿ ಈ ಜನಾಂಗದ ಪುರಾಣ, ಇತಿಹಾಸ, ಜ್ಞಾನ–ವಿಜ್ಞಾನಗಳೆಲ್ಲವೂ ಮರೆವಿನ ಅವಜ್ಞೆಯ ಅನಾದರದ ಕಮರಿಗಳಲ್ಲಿ ಹೂತು ಹೋದವು."[೧೫] ಈ ಮಾತು ಕುರುಬ ಸಮುದಾಯವನ್ನು ಒಳಗೊಂಡಂತೆ ಹಿಂದುಳಿದ ಮತ್ತು ಬುಡಕಟ್ಟು ಸಮುದಾಯಗಳಿಗೂ ಅನ್ವಯಿಸುತ್ತದೆ. ಏಕೆಂದರೆ ಪ್ರಾಚೀನ ಕಾಲದಲ್ಲಿ ಆರ್ಯರು ಬರುವುದಕ್ಕಿಂತ ಪೂರ್ವದಲ್ಲಿ ಪಶುಪಾಲನೆಯಲ್ಲಿ ಕುರಿ, ಮೇಕೆಗಳ ಮತ್ತು ಅದರಿಂದ ಬರುವ ಉಣ್ಣೆ, ಕಂಬಳಿ ವಸ್ತ್ರಗಳು ಪ್ರಮುಖವಾಗಿದ್ದವು. ಆರ್ಯರು ಬಂದ ನಂತರದಲ್ಲಿ ಗೋವು ಪೂಜ್ಯನೀಯವಾಗಿ ಉಳಿದ ಸಾಕುಪ್ರಾಣಿಗಳು, ಅವುಗಳ ಪಾಲಕರು ಅವಜ್ಞೆಗೆ ಗುರಿಯಾಗುತ್ತ ಬಂದರು.

ಭಾರತದಲ್ಲಿ ಹೆಚ್ಚಿನ ದನಗಾರರು ಅಲೆಮಾರಿ ಕುರುಬರು. "ವರ್ಷದ ಹೆಚ್ಚು ಸಮಯ ತಮ್ಮ ಕುರಿಮಂದೆಗಳನ್ನು ಒಟ್ಟುಮಾಡಿಕೊಂಡು ನಿರಂತರವಾಗಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಅಲೆಯುತ್ತಿರುತ್ತಾರೆ. ಮಳೆಗಾಲದಲ್ಲಿ ಮಾತ್ರ ಒಂದೆಡೆ ಬೀಡುಬಿಡುತ್ತಾರೆ. ಗಂಡಸರು ಕುರಿಗಳನ್ನು ಮೇಯಿಸುತ್ತಿದ್ದರೆ, ಹೆಂಗಸರು ಬಿಡಾರಗಳಲ್ಲಿ ಕುರಿಮರಿ, ಮಕ್ಕಳನ್ನು ನೋಡಿಕೊಳ್ಳುತ್ತಾರೆ. ವಾಸ್ತವ್ಯ ಬದಲಾಯಿಸಿದರೆ ಗಂಡಸರು ಕುರಿಗಳನ್ನು ಮೇಯಿಸುತ್ತ ಬಂದರೆ ಹೆಂಗಸರು ಹೋಗಬೇಕಾಗಿರುವ ಸ್ಥಳಕ್ಕೆ ಪಾತ್ರೆ–ಪಗಡ, ಗುಡಾರ ಮುಂತಾದವುಗಳನ್ನು ಕುದುರೆಗಳ ಮೇಲೆ ಹೇರಿಕೊಂಡು ಮಕ್ಕಳನ್ನು ಕರೆದುಕೊಂಡು ಹೋಗುತ್ತಿದ್ದರು."[೧೬] ಹಿಂದೆ ಕುರಿಹಿಕ್ಕೆಯನ್ನು ಹೊರಡುವ ಸಮಯದಲ್ಲಿ ಬೆಂಕಿಯಿಂದ ಸುಡುತ್ತಿದ್ದರು. ಇಂದು ದನಗಾರರು ಕೃಷಿಯನ್ನು ಅವಲಂಬಿಸಿದ್ದಾರೆ. ಕುರಿಯ ಮಾಂಸವಾಗಲಿ ಹಾಗೆಯೇ ಕಾಡಿನಲ್ಲಿ ಸಂಗ್ರಹಿಸಿದ ವಸ್ತುವಾಗಲಿ ಅವರ ಆಹಾರವಲ್ಲ. ಬದಲಾಗಿ ರೈತರ ಜಮೀನಿನಲ್ಲಿ ದಿನಕ್ಕಿಷ್ಟು ಧಾನ್ಯ ಅಥವಾ ಹಣಕ್ಕಾಗಿ ಕುರಿಮಂದೆಯನ್ನು ಬಿಡುವರು.

ಹಿಂದೆ ಅವರು ಹುಲ್ಲುಗಾವಲುಗಳಲ್ಲಿ ಕುರಿ ಮೇಯಿಸಿಕೊಂಡು ಅಲೆಮಾರಿಗಳಂತೆ ತಿರುಗುತ್ತಿದ್ದವರ ಬದುಕು ಇಂದು ಅದು ಕೊಂಚ ಬದಲಾಗಿದೆಯಾದರೂ ಅಲೆಮಾರಿತನ ಪೂರ್ತಿಯಾಗಿ ನಿಂತಿಲ್ಲ;

ನಿಲ್ಲುವುದಿಲ್ಲ. ಹೀಗಾಗಿ ಅವರಲ್ಲಿ ಬಡತನ, ಶಿಕ್ಷಣದ ಕೊರತೆ ಕಷ್ಟಕರವಾಗಿರುವ ಜೀವನಕ್ರಮವನ್ನು ಕಾಣುತ್ತೇವೆ. ಅವರು ಮೂಲದಲ್ಲಿ ಕುರಿಗಳನ್ನು ಮೇಯಿಸಲು ತಿರುಗಾಡುತ್ತಿದ್ದ ಸ್ಥಳಗಳು 'ಕರ್ನಾ' ಕಣಿವೆಯ ಎಡದಂಡೆಯ ಅಂಚಿಗೆ ಬರುತ್ತವೆ. ದಟ್ಟವಾದ ಕಾಡಿಲ್ಲದ ಈ ಪ್ರದೇಶವು "ಪ್ರಾಗೈತಿಹಾಸ ಕಾಲಕ್ಕೆ ಸೇರಿತ್ತು. ಇದೇ ದಖ್ಖನ್ನಿನ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಗೆ ಬಲವಾದ ಬುನಾದಿಯಾಗಿತ್ತು."[೧೭] ಹಾಗಾಗಿಯೇ ದನಗಾರರ ಜೀವನಕ್ರಮದ ಮೂಲ ಇರುವುದು ಪ್ರಾಗೈತಿಹಾಸ ಕಾಲದಲ್ಲಿ.

ಚಾರಿತ್ರಿಕವಾಗಿ ಸಾಂಸ್ಕೃತಿಕವಾಗಿ ಪರಂಪರೆಯನ್ನು ಹೊಂದಿದ್ದು, ಸಮಾಜದೊಂದಿಗೆ ವ್ಯವಹರಿಸುವ ನಂಟು ಬೆಳಸಿಕೊಂಡಿರುವುದು ಜಾತಿಶ್ರೇಣಿಯಲ್ಲಿ ಅವರೊಬ್ಬರಂತೆ ಗುರುತಿಸಲಾಗುತ್ತಿದೆ. ಹೀಗೆ ಕುರಿ ಪಾಲನೆಯನ್ನು ಇಂದಿಗೂ ಮುಂದುವರಿಸಿಕೊಂಡು ಬರುತ್ತಿದ್ದರೂ ಗೋಮಾಳ(ಹುಲ್ಲುಗಾವಲು), ಗಾಯರಾಣ, ಪರಂಪೋಕ ಭೂಮಿಯ ಕೊರತೆಯೊಂದಿಗೆ ಕೆರೆಕಟ್ಟೆಗಳ ನಿರ್ಮಾಣ, ಗ್ರಾಮ ಮತ್ತು ಪಟ್ಟಣಗಳ ಬೆಳವಣಿಗೆಯಿಂದ ಪಶುಪಾಲನೆಯ ಬೆಳವಣಿಗೆಗೆ ಅವಶ್ಯವಿರುವ ವಾತಾವರಣದ ಕೊರತೆಯಿಂದಾಗಿ ಪಶುಪಾಲನೆಯನ್ನು ನಂಬಿದ ಸಮುದಾಯಗಳು ಅನಿವಾರ್ಯವಾಗಿ ಅನ್ಯ ಕಾಯಕಗಳತ್ತ ಮುಖ ಮಾಡುತ್ತಿವೆ.

**ಕೃಷಿ ಸಂಸ್ಕೃತಿ:** ಕೃಷಿಯು ಮಾನವ ಬದುಕಿನ ಆಕಸ್ಮಿಕ ಆವಿಷ್ಕಾರ. ಅದನ್ನು ಕಲಿತದ್ದು ಹೇಗೆ ಎಂದು ಪ್ರಶ್ನಿಸಿ ಕೊಂಡರೆ ಬಹುಶಃ ಹಿಂದೆ ಹಣ್ಣು-ಹಂಪಲು ತಿಂದುಗಿದ ಬೀಜ ಮಣ್ಣಿಗೆ ಬಿದ್ದು, ಮಳೆ ಬಂದು ಸಸಿಯಾಗಿ, ಮರವಾಗಿ, ಹೂಬಿಟ್ಟು, ಕಾಯಿಕಚ್ಚಿ ಹಣ್ಣಾಗಿ ಬೆಳೆದದ್ದು. ಗಿಡಮರ ತನ್ನದೇ ಪ್ರತಿರೂಪದ ಸಸ್ಯಕ್ಕೆ ಜನ್ಮ ನೀಡಬಲ್ಲದೆಂಬ ಸತ್ಯವನ್ನು ಅರಿತ ಮಾನವ ಅಲ್ಲಲ್ಲಿ ತಳವೂರಿ ನಿಂತು ತನ್ನ ಆಹಾರಕ್ಕಾಗಿ ಅವುಗಳನ್ನು ಬೆಳೆಸುವುದನ್ನು ಕಲಿತ. ಈ ನೈಸರ್ಗಿಕ ಚಹರೆಯನ್ನು ಅನುಗ್ರಹಿಸಿದ ಪರಿಣಾಮವೇ ಮೂಲ ಕೃಷಿಯ ಉಗಮಕ್ಕೆ ನಾಂದಿಯಾಯಿತು.

ಕೃಷಿಯು ಸಮಾಜದ ಭದ್ರ ನೆಲೆಗೆ ಕಾರಣವಾದುದು. ಆರಂಭದಲ್ಲಿ ಕುಮ್ರಿ ಬೇಸಾಯ ಹಾಗೂ ಸ್ಥಳಾಂತರದ ಬೇಸಾಯ ಮಾಡುತ್ತ ಕ್ರಮೇಣ ಪಾರಂಪರಿಕ ಬೇಸಾಯದತ್ತ ಸಮುದಾಯಗಳು ಚಲಿಸಿವೆ; ಚಲಿಸುತ್ತಿವೆ. ಪಶುಪಾಲನೆ ಮತ್ತು ಕೃಷಿ ಮಾನವನ ಉದ್ಯೋಗಗಳಾಗಿ ಬೆಳವಣಿಗೆ ಹೊಂದಿ, ನಾಗರೀಕತೆಗಳ ಉಗಮಕ್ಕೆ ಪ್ರೇರಣೆಯಾದವು. ಕೃಷಿ ಕಾಣಿಸಿಕೊಂಡಾಗ ಮಾನವ ನಾಗರಿಕನಾದ ಎಂದೂ, ಸಂಸ್ಕೃತಿಯ ಮೂಲ ರೂಪವೇ ಕೃಷಿ ಎಂದು ವಿಲ್‌ಡ್ಯುರ್ಯಾಂಟ್ ಹೇಳಿದ್ದಾನೆ. ಕೃಷಿಯ ಉಗಮ ಹಲವಾರು ಕುಲಕಸುಬು ಸಮುದಾಯಗಳು, ಕುಶಲ ಕೈಗಾರಿಕೆಯ ಉತ್ಪಾದನೆಯು ತೀವ್ರತರನಾಗಿ ಬೆಳೆಯಲು ಅನುವಾಯಿತು. ಕೃಷಿಯು ಭೂಮಿಯ ಮೇಲೆ ಸುಮಾರು ಹತ್ತು ಸಾವಿರ ವರ್ಷಗಳ ಹಿಂದೆ ಪ್ರಾರಂಭವಾಗಿರಬಹುದೆಂದು ಊಹಿಸಲಾಗಿದೆ. ಪುರಾತತ್ವ ಅವಶೇಷಗಳಿಂದ ಸಿಂಧೂ ನಾಗರಿಕತೆ, ಸರಸ್ವತಿ ನದಿ ಕಣಿವೆಯಲ್ಲಿ ಕೃಷಿಯು ಹೆಚ್ಚು ಬೆಳವಣಿಗೆ ಹೊಂದಿದ್ದು,

ಗೋಧಿ, ಬಾರ್ಲಿ, ಖರ್ಜೂರ, ಎಳ್ಳು, ನವಣೆ, ಹತ್ತಿ ಮುಂತಾದ ಬೆಳೆಗಳು ಬೆಳೆಯುತಿದ್ದರೆಂದು ತಿಳಿದುಬರುತ್ತದೆ. ಋಗ್ವೇದ ಕಾಲದ ಆರಂಭದಲ್ಲಿ ತುರುಗಾಹಿಗಳ ಸಮಾಜವಾಗಿದ್ದು, ಉತ್ತರ ವೇದಗಳ ಕಾಲಕ್ಕೆ ಸಂಪೂರ್ಣವಾದ ಕೃಷಿಕ ಸಮಾಜವಾಗಿತ್ತು. ತುರುಗಾಹಿ ಬಣಗಳ ಅಥವಾ ಪಶುಪಾಲನ ಜನರು ಕೃಷಿಕರಾಗಿ ಪರಿವರ್ತಿತರಾದರು.

ಬೇಟೆಗಾರಿಕೆ, ಪಶುಪಾಲನೆಯ ಸಂದರ್ಭದಲ್ಲಿ ಸಾರ್ವಜನಿಕ ಆಸ್ತಿಯಾಗಿದ್ದ ಭೂಮಿ, ಯಾವಾಗ ಉಳುಮೆ ಆರಂಭವಾಯಿತೋ ಆಗ ಹಿರಿಯರು ಕುಟುಂಬವಾರು ಭೂಮಿಯನ್ನು ಹಂಚಿದರು. "ಕುಟುಂಬವೂ ಒಂದು ಘಟಕವಾಯಿತು, ಸ್ವ ಕುಲದ ಕುಟುಂಬಗಳ ಕೂಟವು ಸಮುದಾಯವಾಯಿತು. ಪ್ರತಿಯೊಂದು ಕುಟುಂಬವು ತನಗೆ ಸಂಬಂಧಿಸಿದ ಭೂಮಿಯಲ್ಲಿ ತನ್ನದೆಯಾದ ಸಾಧನ ಸಾಮಗ್ರಿಗಳೊಂದಿಗೆ ಉಳುಮೆ ಮುಂದುವರಿಸಿತು. ಸಮುದಾಯದ ಆರ್ಥಿಕ ಸ್ಥಿತಿ ಸ್ವಕುಲದ ಕುಟುಂಬಗಳನ್ನು ಅವಲಂಬಿಸಿತು. ಹೀಗಾಗಿ ಸಮುದಾಯದ ಮೂಲ ರಚನಾ ಸ್ವರೂಪವೂ ಬದಲಾಯಿತು."[೧೮] ಒಂದು ವಾದದ ಪ್ರಕಾರ ಸಿಂಧೂ ನಾಗರಿಕತೆಯನ್ನು ಕಟ್ಟಿ ಬೆಳೆಸಿದವರು ದ್ರಾವಿಡರು. ಇವರು ಭಾರತಕ್ಕೆ ಬಂದು ನೆಲೆಸಿದ್ದವರಲ್ಲಿ ಪುರಾತನರಾಗಿದ್ದು, ಮೂಲ ನಿವಾಸಿಗಳೇ ಆದವರು. ಏಕೆಂದರೆ ಭಾರತೀಯ ಸಂಸ್ಕೃತಿಯನ್ನು ಕಟ್ಟುತ್ತ ಅದರೊಂದಿಗೆ ಬದುಕುತ್ತ ಬಂದವರಾಗಿದ್ದರು. ಹಾಗೆಯೇ ತಮ್ಮ ಸಾಂಸ್ಕೃತಿಕ ಚಹರೆಗಳನ್ನು ವಿಸ್ತೃತಪಡಿಸಿಕೊಳ್ಳುತ್ತ ಬದುಕು ನಡೆಸುತ್ತಿದ್ದರು. ಮಧ್ಯಏಷ್ಯಾದಿಂದ ಬಂದ ಆರ್ಯರು ಸಿಂಧು ಬಯಲನ್ನು ಆಕ್ರಮಿಸಿದರು. ಆಗ ಸಂಭವಿಸಿದ ಆರ್ಯ-ದ್ರಾವಿಡ ಸಂಘರ್ಷದಲ್ಲಿ ದ್ರಾವಿಡರು ಅಲ್ಲಿಂದ ದೇಶದ ಇತರೆ ಭಾಗಗಳಿಗೆ ವಲಸೆ ಹೋದರು. ಅದರಲ್ಲೂ ದಕ್ಷಿಣದ ಕಡೆ ಹೆಚ್ಚಾಗಿ ಬಂದರು. ಹೀಗೆ ಬಂದು ತಮ್ಮ ಪಶುಪಾಲನೆ ಮತ್ತು ಕೃಷಿ ಚಟುವಟಿಕೆಗಳನ್ನು ಕೈಗೊಂಡರು. ಮತ್ತೊಂದು ವಾದದ ಪ್ರಕಾರ ಭೂಕಂಪ ಅಥವಾ ಇನ್ನಿತರ ಕಾರಣಗಳಿಂದಾಗಿ ಸರಸ್ವತಿ ನದಿಯು ತನ್ನ ದಿಕ್ಕು ಬದಲಿಸಿದ ಪರಿಣಾಮವಾಗಿ, ಅಲ್ಲಿಯ ಜನರು ದೇಶದ ವಿವಿಧೆಡೆ ವಲಸೆ ಹೋದರೆಂದು ಊಹಿಸಲಾಗಿದೆ. ಸರಸ್ವತಿ ನದಿಯಿದ್ದ ಬಗ್ಗೆ ಇತ್ತೀಚಿನ ಕೃತಕ ಉಪಗ್ರಹದ ಚಿತ್ರಗಳು ಸಹ ದೃಢಪಡಿಸಿವೆ. ಮತ್ತೆ ಕೆಲ ವಾದಗಳಲ್ಲಿ ಮೂಲತಃ ಇಲ್ಲಿಯ ನಿವಾಸಿಗಳೆ ಕ್ರಮೇಣ ವಿಕಾಸ ಹೊಂದಿ ಸಂಸ್ಕೃತಿ ಮತ್ತು ನಾಗರಿಕತೆಯನ್ನು ಕಟ್ಟಿಕೊಂಡಿದ್ದಾರೆಂದು ಹೇಳುವರು.

ಸಿಂಧೂ ನಾಗರಿಕತೆಯ ವೇಳೆಗಾಗಲೇ ದಕ್ಷಿಣ ಭಾರತದಲ್ಲಿಯೂ ಜನವಸತಿಗಳು, ಬೂದಿದಿಬ್ಬಗಳು ಇದ್ದು, ಪಶುಪಾಲನೆ ಮತ್ತು ಕೃಷಿ ಚಟುವಟಿಕೆಗಳು ನಡೆಯುತ್ತಿದ್ದವೆಂದು ಹೇಳಲು ಸಹಾಯಕವಾಗಿವೆ. ಹೀಗೆ ಸಾಗುತ್ತ ಬರುತ್ತಲಿದ್ದ ಪಶುಪಾಲನೆ ಮತ್ತು ಕೃಷಿಯ ಕುರಿತು ಅನಂತರದಲ್ಲಿ ಬಂದಂತಹ ವೇದಗಳು, ರಾಮಾಯಣ, ಮಹಾಭಾರತ, ಸ್ಮೃತಿಗಳು, ಉಪನಿಷತ್ತುಗಳು, ಪುರಾಣಗಳು ಕೆಲವಾರು

ವಿಷಯಗಳ ಮೇಲೆ ಬೆಳಕು ಚೆಲ್ಲಿವೆ. ಆದಿಮ ಸಂಸ್ಕೃತಿಯಲ್ಲಿ ಬೇಟೆಗಾರಿಕೆಯಿಂದ, ನಂತರದಲ್ಲಿ ಪಶುಪಾಲನೆಯಿಂದ ಮುಂದುವರೆದು ಕೃಷಿಯನ್ನು ಅಳವಡಿಸಿಕೊಂಡ ಸಮುದಾಯಗಳು ವೇದಗಳ ನಂತರದ ಕಾಲಕ್ಕೆ ವೃತ್ತಿಯಾಧಾರಿತವಾಗಿ ಜಾತಿ ಜನಾಂಗಗಳಾಗಿ ಹಂಚಿ ಹೋದರು. ಹೀಗೆ ಜಾತಿಗಳಾಗಿ ಕವಲೊಡೆದ ನಂತರ ಭಾರತದಲ್ಲಿ ಸಾಕಷ್ಟು ಚಾರಿತ್ರಿಕ ಪಲ್ಲಟಗಳು ನಡೆದಿವೆ. ಅವುಗಳನ್ನೆಲ್ಲವನ್ನು ಸಹಿಸುತ್ತ ಇಲ್ಲವೇ ಪ್ರತಿಭಟಿಸುತ್ತ ಸಮುದಾಯಗಳು ತಮ್ಮ ಸಾಂಸ್ಕೃತಿಕ ಅನನ್ಯತೆಗಳನ್ನು ಉಳಿಸಿಕೊಂಡು ಬಂದಿವೆ. ನಾವು ದ್ರಾವಿಡರು ಅಥವಾ ಭಾರತದ ಮೂಲನಿವಾಸಿ ಬುಡಕಟ್ಟುಗಳು ಎಂದು ಕರೆದುಕೊಳ್ಳುವ ಆಂಧ್ರರು, ಕುರುಂಬರು, ಮಲೆವೇಡರು, ಗೊಲ್ಲರು, ಬೇಡರು, ಸೋಲಿಗರು, ಇರುಳಿಗ ಮುಂತಾದವರು ಅಂದಿನಿಂದ ಇಂದಿನವರೆಗೆ ತಮ್ಮ ಚಹರೆಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಅದರಲ್ಲಿಯೂ ಕುರುಬರು ಜೀವನ ವೃತ್ತಿಯನ್ನು ಅನುಸರಿಸಿ ಕಾಡುಕುರುಂಬ, ಜೇನುಕುರುಬರಿಂದ ಭಿನ್ನವಾಗಿ ಪಶುಪಾಲಕರಾದ ಇವರು ಅರಣ್ಯವಾಸಿಗಳಾದರು.

ಆರ್ಯರು ಮಧ್ಯ ಏಷ್ಯಾದಿಂದ ಉತ್ತರ ಭಾರತದ ಕಡೆ ವಲಸೆ ಬಂದ ಮೇಲೆ ಆರ್ಯ ಮತ್ತು ದ್ರಾವಿಡರ ನಡುವೆ ಸಂಘರ್ಷಗಳು ನಡೆದು, ಕ್ರಮೇಣ ಉತ್ತರದ ದ್ರಾವಿಡರು ದಕ್ಷಿಣ ಭಾರತದ ಕಡೆ ವಲಸೆ ಬಂದಿದ್ದಾರೆ. ಇವರನ್ನು ವಲಸೆಗಾರ ದ್ರಾವಿಡರೆಂದು ಕರೆಯುತ್ತಾರೆ. ವ್ಯವಸಾಯಗಾರರಾದ ಒಕ್ಕಲಿಗರು, ಕುರಿಗಾಹಿಗಳಾದ ಕುರುಬರು, ಪಶುಪಾಲಕರಾದ ಗೊಲ್ಲ ಮುಂತಾದವರನ್ನೆಲ್ಲ ದಕ್ಷಿಣ ಭಾರತದಲ್ಲಿದ್ದ ಆದಿದ್ರಾವಿಡರೊಂದಿಗೆ ಸಂಘರ್ಷಗಳನ್ನು ನಡೆಸಿ ಕಾಲಾಂತರದಲ್ಲಿ ಪರಸ್ಪರರಲ್ಲಿ ಸಾಂಸ್ಕೃತಿಕ ಸಮನ್ವಯ ಆಗಿರಬಹುದೆಂದು ಹೇಳುವರು. ಈ ವಾದವನ್ನು ಸೂಕ್ಷ್ಮವಾಗಿ ಗಮನಿಸಿದರೆ ಅಷ್ಟು ಸಮಂಜಸವೆನಿಸದು. ಏಕೆಂದರೆ ಮೂಲನಿವಾಸಿ ದ್ರಾವಿಡರದೇ ಭಾರತವಾಗಿತ್ತು. ಅವರು ಎಲ್ಲ ಕಡೆಯಲ್ಲಿಯೂ ವ್ಯಾಪಿಸಿದರು. ಆರ್ಯರ ಆಕ್ರಮಣ ಅವರನ್ನು ದಕ್ಷಿಣದತ್ತ ತಳ್ಳಿತು ಇಲ್ಲವೆ, ಇವರೇ ತಮ್ಮ ಸಾಂಸ್ಕೃತಿಕ ಅಸ್ಮಿತೆಯನ್ನು ಉಳಿಸಿಕೊಳ್ಳುವ ಸಲುವಾಗಿ ಈ ಪ್ರದೇಶದತ್ತ ಸಾಗಿ ಬಂದಿರಬಹುದಾಗಿದೆ.

ಒಟ್ಟಾರೆಯಾಗಿ ಕುರುಬ ಸಮುದಾಯವು ಚರಿತ್ರೆಯ ಪುಟಗಳಲ್ಲಿ ಏರಿಳಿತಗಳನ್ನು ಕಾಣುತ್ತ ಬೆಳೆದು ಬಂದಿರುವುದು ಗೋಚರಿಸುತ್ತದೆ. ಬೇಟೆ, ಪಶುಪಾಲನೆ, ಕೃಷಿ ಸಂಸ್ಕೃತಿಯ ಕುರಿತಂತೆ ದೇ.ಜವರೇಗೌಡ ಅವರು "ಬೇಟೆಗಾರಿಕೆಯಲ್ಲಿಯ ಮೂಲ ಸಮುದಾಯಗಳು ಕಾಲಾಂತರದಲ್ಲಿ ಪಶುಪಾಲನೆಗೆ ಒಲಿದು ಅಲ್ಲಿಂದ ಕೃಷಿ ವಾಣಿಜ್ಯದತ್ತ ಧಾವಿಸಿವೆ. ಮಾನವ ವಿಕಾಸದ ಮೊದಲನೆಯ ಘಟ್ಟದಲ್ಲಿ ಬೇಟೆಗಾರಿಕೆಯಲ್ಲಿನ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಸಾಧು ಪ್ರಾಣಿಗಳನ್ನು ಸಲಹುತ್ತ ಭಕ್ಷಿಸುತ್ತಲೇ, ಬೇಟೆಗಾರರ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಹಲವರು ಪಶುಪಾಲಕರಾದರು.

ಪಶುಪಾಲನೆಯಲ್ಲಿನ ಸಮಸ್ಯೆಗಳಿಗೆ ಪರಿಹಾರ ಕಾಣಲು ಅವರು ಕೃಷಿಯತ್ತ ವಾಲಿದರು. ಇವು ನಮ್ಮ ಮನುಕುಲದ ಸಮಾಜೀಕರಣ ಹಾಗೂ ಸಂಸ್ಕೃತಿಕರಣದ ಮಜಲುಗಳು. ಬೇಟೆಗಾರಿಕೆಯಲ್ಲಿ ಹಲವರು ಪಶುಪಾಲನೆಯಲ್ಲಿ ನೆಮ್ಮದಿಯನ್ನು ಕಂಡುಕೊಂಡು, ಪಶುಪಾಲನೆಗಾಗಿ ಅಲೆಯ ಲಾರಂಭಿಸಿದರು. ಇದು ಅವರಲ್ಲಿ ಸಹಸ್ರಾರು ವರ್ಷಗಳಿಂದ ಸಾಗಿ ಬಂದ ಪಾರಂಪರಿಕ ಸಂಪ್ರದಾಯ.

ಬೇಟೆಗಾರಿಕೆಯಿಂದ ಕವಲೊಡೆದ ಪಶುಪಾಲಕರಲ್ಲಿ ಮ್ಯಾಸಬೇಡರು, ಕಾಡುಗೊಲ್ಲರು, ದನಗಾರರು, ಕುರುಬರು ಮುಖ್ಯರಾಗಿರುವರು. ಒಂದೇ ಕೌಟುಂಬಿಕ ಕಳ್ಳುಬಳ್ಳಿಯಿಂದ ಬೇರ್ಪಟ್ಟ ಸಮುದಾಯ ಗಳಿವು. ಕಾಡುಗೊಲ್ಲರಿಗೆ ಮ್ಯಾಸಬೇಡರು, ಕುರುಬರಿಗೆ ಕುಂಚಟಿಗರೊಂದಿಗೆ ಬಳಕೆ ಹೆಚ್ಚು. ಕುಂಚಟಿಗರು, ಕುರುಬರು, ಗೊಲ್ಲರು ಮೂಲತಃ ಒಂದೇ ವಂಶದವರಿರಬೇಕು. ಮುಂದೆ ಒಂದೇ ಆಗಿದ್ದ ಜನರ ಕಸುಬೇ ಕಾರಣವಾಗಿ ಬೇರೆಯಾದ ಮೇಲೆ ಕೊಳು-ಕೊಡೆ ಕೆಲವು ದಿನ ಮುಂದುವರಿದಿರಬೇಕು. ಆಮೇಲೆ ನಿಂತು ಹೋಗಿರಬೇಕು. ಈ ನಿಲುಗಡೆಯಿಂದ ಅವರು ಸಂಪೂರ್ಣವಾಗಿ ಬೇರ್ಗೊಂಡರು"[೯] ಎಂದು ಹೇಳಿರುವರು. ಈ ಮಾತು ಕುರುಬ ಸಮುದಾಯವು ಬೆಳೆದು ಬಂದ ಚಾರಿತ್ರಿಕ ಹಿನ್ನೋಟವನ್ನು ತಿಳಿಯಲು ಸಹಾಯವಾಗಿದೆ.

ಭಾರತದಲ್ಲಿ ಸಂಸ್ಕೃತಿಯ ವಿಕಾಸವನ್ನು ಗುರುತಿಸುವ ಸಂದರ್ಭದಲ್ಲಿ ಮೊದಲಿಗೆ ಇಲ್ಲಿಯ ಮೂಲನಿವಾಸಿ ದ್ರಾವಿಡ ಜನಾಂಗಗಳಲ್ಲಿ ಕುರುಬ ಸಮುದಾಯವು ಒಂದೆಂದು ಗ್ರಹಿಸಬೇಕಾಗುತ್ತದೆ. ಏಕೆಂದರೆ ಸಂಸ್ಕೃತಿ ವಿಕಾಸದ ವಿವಿಧ ಘಟ್ಟಗಳಲ್ಲಿ ತನ್ನ ಚಹರೆಗಳನ್ನು ಉಳಿಸಿಕೊಳ್ಳುತ್ತ ಸಕ್ರಿಯವಾಗಿದ್ದು, ಕಾಲಾಂತರ ಪಶುಪಾಲನೆಯಲ್ಲಿ ತನ್ನ ಅನನ್ಯತೆಯನ್ನು ಗುರುತಿಸಿಕೊಂಡಿದೆ. ಪಶುಪಾಲನೆಯೇ ಪ್ರಮುಖ ಉದ್ಯೋಗವಾದ್ದರಿಂದ ಈ ಸಮುದಾಯದ ಹರವು ಭಾರತದಾದ್ಯಂತ ವಿಸ್ತರಿಸಿದೆ. ನಾನಾ ಹೆಸರುಗಳಿಂದ ಕರೆಸಿಕೊಳ್ಳುತ್ತಿದ್ದು, ಹಿಂದಿನಿಂದಲೂ ತನ್ನದೇ ಆದ ನಂಬುಗೆ, ಆಚರಣೆಗಳನ್ನು ಉಳಿಸಿಕೊಂಡು ಪಾಲಿಸುತ್ತ ಬಂದಿದೆ; ಬರುತ್ತಲಿದೆ.

**ಚಾರಿತ್ರಿಕ ಹಿನ್ನೆಲೆ:** ಭೂಮಿಯ ಮೇಲೆ ಮಾನವ ಆಗಮನದ ಕುರಿತು ಪ್ರಪಂಚದಾದ್ಯಂತ ಸಾಕಷ್ಟು ವೈವಿಧ್ಯಮಯ ಪೌರಾಣಿಕ ಕಥೆಗಳಿವೆ. ಭಾರತದಂಥ ಭಾವನಿಷ್ಠ ರಾಷ್ಟ್ರದಲ್ಲಿಯೂ ಇದಕ್ಕೆ ಸಂಬಂಧಿಸಿದಂತೆ ಸಾವಿರಾರು ಪುರಾಣ ಕಥೆಗಳಿವೆ. ಇಲ್ಲಿನ ಪ್ರತಿ ಸಮುದಾಯವು ಪೌರಾಣಿಕ ಹಿನ್ನೆಲೆಯಲ್ಲಿಯೇ ತನ್ನ ಪರಂಪರೆ, ಪ್ರಾಚೀನತೆಯನ್ನು ಗುರುತಿಸಿಕೊಳ್ಳಲು ಪ್ರಯತ್ನಿಸುತ್ತದೆ. ಇದಕ್ಕೆ ಕುರುಬ ಸಮುದಾಯವು ಹೊರತಾಗಿಲ್ಲ. ತಗರಪವಾಡ, ಸಿದ್ಧಮಂಕ ಚರಿತೆ, ಹಾಲ್ಮತೋತ್ತೇಜಕ ಪುರಾಣ, ಹಾಲುಮತ ಪುರಾಣ, ಜನಪದ ಹಾಲುಮತ ಮಹಾಕಾವ್ಯ ಈ ಸಮುದಾಯದ ಹಿನ್ನೆಲೆಯ ಬಗ್ಗೆ ಅಧಿಕೃತವಾದ ಮಾಹಿತಿಯನ್ನು ಒದಗಿಸುವ ಮೂಲ ಆಕರಗಳು. ಈ ಕೃತಿಗಳು ಡೊಳ್ಳಿನ ಹಾಡುಗಳು, ಸಾಹಿತ್ಯಿಕ, ಪುರಾತತ್ವ, ಚಾರಿತ್ರಿಕ ಆಕರಗಳು, ಪುರಾಣ ಮತ್ತು ಐತಿಹ್ಯಗಳ

ಹಿನ್ನಲೆಯು ಕುರುಬ ಸಮುದಾಯದ ಪಶುಪಾಲನ ಸಂಸ್ಕೃತಿಯ ಕುರುಹುಗಳನ್ನು ಗ್ರಹಿಸಲು ನೆರವಾಗಿವೆ. ಜೊತೆಗೆ ಕುರುಬ ಸಮುದಾಯದ ಮೂಲಪುರುಷ ಶಿವಪದ್ಮ ಅಥವಾ ಉಂಡಾಡು ಪದ್ಮಣ್ಣನೆಂದು ಹೇಳುತ್ತವೆ. ಅವುಗಳನ್ನು ಇಲ್ಲಿ ಗಮನಿಸಲಾಗಿದೆ.

"ಒಮ್ಮೆ ಸದಾಶಿವನು ಬ್ರಹ್ಮನಿಂದ ರಚಿತವಾದ ಈ ಬ್ರಹ್ಮಾಂಡವನ್ನು ನೋಡ ಬಯಸಿ, ಪಾರ್ವತಿ ಸಮೇತ ಭೂಲೋಕದಲ್ಲಿ ಸಂಚರಿಸುತ್ತಿರುವಾಗ ರಮಣೀಯವಾದ ವನದಲ್ಲಿ ಒಂದು ಜಗುಲಿಯನ್ನು ಕಂಡರು. ಈ ಜಗುಲಿಯ ಮೇಲೆ ಕೂಡಲಾಗಿ, ಪಾರ್ವತಿಯು ಸದಾಶಿವನಿಗೆ ನಾಥನೇ! ಒಬ್ಬ ಕರ್ತನನ್ನು ನೇಮಿಸಿ ಯಾವತ್ತು ಪ್ರಾಣಿಗಳ ಸಂರಕ್ಷಣೆ ಮಾಡಬೇಕೆಂದು ಬೇಡಿಕೊಂಡಳು. ಅದೇ ವೇಳೆಗೆ ಮುಂದೆ ಹಾಲುಮತದ ಉತ್ಪತ್ತಿಯಾಗಬೇಕೆಂಬ ಉದ್ದೇಶದಿಂದಲೋ, ಪಾರ್ವತಿ ಸಂತತಿಯಾಗಬೇಕೆಂಬ ಆತುರದಿಂದಲೋ ಆಕೆಯ ಮೊಲೆಗಳು ಒಮ್ಮಿಂದೊಮ್ಮೆಲೇ ತೊರೆಯ ಹತ್ತಿದವು. ಆ ಮೊಲೆಯ ಹಾಲು ನೆಲಕ್ಕೆ ಬಿದ್ದು ಹೊಳೆಯಾಗಿ ಹರಿದು ವ್ಯರ್ಥವಾಗಬಾರದೆಂದು ಪಾರ್ವತಿಯು ಬಲಮೊಲೆಯ ಹಾಲನ್ನು ಕೈಯಲ್ಲಿ ಹಿಡಿದು ಮಣ್ಣಲ್ಲಿ ಬೆರೆಯಿಸಿ ಪುರುಷರೂಪವನ್ನು ಮಾಡಿ, ಎಡಮೊಲೆಯ ಹಾಲಿನಲ್ಲಿ ಮಣ್ಣನ್ನು ಬೆರೆಸಿ ಸ್ತ್ರೀರೂಪವನ್ನು ಮಾಡಿ, ಸಾಕ್ಷಾತ್ ಸದಾಶಿವನ ಮುಂದೆ ಇಟ್ಟು, ಇವರು ಈ ಪೃಥ್ವಿಯ ಆದಿಗೆ ಕರ್ತರಾಗಬೇಕೆಂದು ಬೇಡಿಕೊಂಡಳು. ಶಿವನು ಪಾರ್ವತಿಯ ಬೇಡಿಕೆಗೆ ಮುಗುಳ್ನಗೆ ಬೀರಿ ಸಮ್ಮತಿಸಿ, ಆ ಎರಡು ಮಣ್ಣಿನ ಬೊಂಬೆಗಳಿಗೆ ಜೀವ ಕಳೆಯನ್ನು ತುಂಬಿದನು. ಮಣ್ಣಿನ ಮುದ್ದೆಯಿಂದ ನಿರ್ಮಿತರಾದ್ದರಿಂದ ಪುರುಷ ಬೊಂಬೆಗೆ ಮುದ್ದಪ್ಪ, ಸ್ತ್ರೀ ಬೊಂಬೆಗೆ ಮುದ್ದವ್ವ ಎಂದು ಹೆಸರನ್ನಿಟ್ಟು ಅವರಿಗೆ ನೀವು ಈ ಭೂಮಿಯಲ್ಲಿನ ಸಕಲ ಪ್ರಾಣಿಗಳನ್ನು ಕಾಪಾಡಿರಿ ಎಂದು ಹೇಳಿ ಅವರನ್ನು ದಂಪತಿಗಳಾಗಿಸಿ ಕೈಲಾಸಕ್ಕೆ ಹಿಂತಿರುಗಿದರು. ಈ ದಂಪತಿಗಳಿಗೆ ಆದಿಗೊಂಡನೆಂಬ ಮಗನು ಜನಿಸಿದನು. ಆದಿಗೊಂಡನಿಗೆ ಅಮರಗೊಂಡ, ಶಿವಗೊಂಡ, ಬೀರಗೊಂಡ, ಮಾರಗೊಂಡ, ಮುದ್ದುಗೊಂಡ, ಪದ್ಮಗೊಂಡ(ಉಂಡಾಡು ಪದ್ಮಣ್ಣ) ಹೀಗೆ ಆರು ಮಂದಿ ಮಕ್ಕಳು.

ಶಿವನಾಜ್ಞೆಯಂತೆ ಕುರಿಕಾಯುವ ವೃತ್ತಿ ಕೈಗೊಂಡು ಕುರುಬ ಸಮುದಾಯದ ಹುಟ್ಟಿಗೆ ಕಾರಣನಾದ ಶಿವಪದ್ಮ(ಉಂಡಾಡಿ ಪದ್ದಣ್ಣ) ಇವರಿಂದ ಮುಂದೆ ಕಾಲಾಂತರದಲ್ಲಿ ಹಾಲುಮತದಲ್ಲಿ ಎರಡು ಬಣಗಳಾದವು. ಮೊದಲನೆಯದು ಹತ್ತಿಕಂಕಣವೆಂದೂ ಎರಡನೆಯದು ಉಣ್ಣೆಕಂಕಣವೆಂದು ಇಬ್ಭಾಗವಾಗಿ, ಈಗಲೂ ತುಂಬಾ ಊರ್ಜಿತ ಸ್ಥಿತಿಯಲ್ಲಿರುವುದು."[೨೦] ಈ ಕಥೆಯ ಪ್ರಕಾರ ಕುರುಬ ಜನಾಂಗದ ಹುಟ್ಟು ಶಿವ-ಪಾರ್ವತಿಯ ಮೂಲವನ್ನು ಮುಟ್ಟುತ್ತದೆ. ಇದನ್ನು ದಂತ ಕಥೆಯೆಂದು ತಳ್ಳಿಹಾಕಿದರೂ ಎರಡು ಅಂಶಗಳು ಸ್ಪಷ್ಟವಾಗುತ್ತವೆ. ಒಂದು ಈ ಸಮುದಾಯದ ಮುಖ್ಯ ದೇವತೆ ಶಿವ. ಎರಡು ಇದು ಪ್ರಾಚೀನ ಚರಿತ್ರೆಯ ಚಹರೆಗಳನ್ನು ಹೊಂದಿರುವ ಸಮುದಾಯ ಎಂಬುದನ್ನು ಗಮನಿಸಬಹುದು.

ಈ ಸಮುದಾಯದ ಮೂಲವನ್ನು ಹೇಳುವ ಇನ್ನೊಂದು ಕಥೆಯು ಹೀಗಿದೆ "ಒಮ್ಮೆ ಶಿವನ ಒಡ್ಡೋಲಗದಲ್ಲಿ ಒಂದು ಕೈಯಿಂದ ಶಿವನಿಗೆ ನಮಸ್ಕರಿಸಿದ ಭೃಂಗಿಯನ್ನು ಪಾರ್ವತಿ ತರಾಟೆಗೆ ತೆಗೆದುಕೊಳ್ಳುತ್ತಾಳೆ. ಭೃಂಗಿಗೆ ಪಾರ್ವತಿ ಮರಿ–ಮಾಂಸಗಳಿಗೆ ತಾನು ಕಾರಣಳೆಂದು ಹೇಳಿ, ಅವನ ಮಾಂಸವನ್ನು ತಿರುಗಿ ಪಡೆದಾಗ ಜೋತಾಡುತ್ತಾನೆ. ಅದಕ್ಕೆ ಭೃಂಗಿಯು ಶಿವನ ಸ್ತುತಿಗೈದಾಗ ತನ್ನ ತ್ರಿಶೂಲವನ್ನು ನೀಡುವ ಮೂಲಕ ಭಕ್ತ ರಕ್ಷಕನೆಂಬ ಬಿರುದನ್ನು ಉಳಿಸಿಕೊಳ್ಳುತ್ತಾನೆ. ಇದರಿಂದ ಪಾರ್ವತಿಗೆ ಅಪಮಾನವಾಗಿ ನೆರದವರ ಹಾಸ್ಯಕ್ಕೆ ಗುರಿಯಾಗುತ್ತಾಳೆ. ಕೋಪಗೊಂಡ ಪಾರ್ವತಿಯು ಮುಂದೆ ನಕ್ಕವರು ಕುರಿಗಳಾಗಿ ಹಿಂದೆ ನಕ್ಕವರು ಮೇಕೆಗಳಾಗಿ ಭೂಲೋಕದಲ್ಲಿ ಜನಿಸಿರೆಂದು ಶಾಪ ಕೊಡುತ್ತಾಳೆ. ಹೀಗೆ ಕುರಿ–ಮೇಕೆಗಳನ್ನು ಸರದಿಯಂತೆ ದೇವಾನುದೇವತೆಗಳು, ತ್ರಿಮೂರ್ತಿಗಳು ಕೆಲಕಾಲ ಕಾಯುತ್ತಾರೆ. ಕೊನೆಗೆ ಪಾರ್ವತಿಯ ಸರದಿ ಬರುತ್ತದೆ. ಕೆಲಕಾಲ ಕಾಯ್ದು ಬೇಸತ್ತು ಒಂದು ಗವಿಯಲ್ಲಿ ಅವನ್ನು ಕೂಡಿಟ್ಟು ಬಾಗಿಲು ಮುಚ್ಚಿ ಬಾಗಿಲ ಕೊಂಡಿಗೆ ಮೂಗುತಿಯನ್ನು ಸಿಕ್ಕಿಸಿ ಕೈಲಾಸಕ್ಕೆ ಹಿಂತಿರುಗುತ್ತಾಳೆ. ಕೆಲ ಕಾವ್ಯಗಳಲ್ಲಿ ಹುತ್ತದಲ್ಲಿ ಕುರಿಗಳನ್ನು ಹುದುಗಿಸಿ ಮೂಗುತಿಯನ್ನು ಸಿಕ್ಕಿಸಿದ ಪ್ರಸ್ತಾಪವನ್ನು ಕಾಣಬಹುದು. ಕಾಲಾಂತರದಲ್ಲಿ ಮೂಗುತಿ ಮುತ್ತಲ ಗಿಡವಾಗಿ ಬೆಳೆಯುತ್ತದೆ.

ಈ ಭೂಮಿಯು ಆದಿಗೊಂಡನಿಗೆ ಸೇರಿದ್ದಾಗಿತ್ತು. ಆತನಿಗೆ ಆರು ಜನ ಮಕ್ಕಳಿದ್ದರು. ಕೊನೆಯವನು ಉಂಡಾಡು ಪದ್ಮಣ್ಣ(ಶಿವಪದ್ಮ). ಸಹೋದರರ ಒತ್ತಾಯಕ್ಕೆ ಮಣಿದು ಹೊಲ ಹಸನು ಮಾಡುತ್ತಿರುವಾಗ, ಹೊಲದಲ್ಲಿದ್ದ ಮುತ್ತಲ ಗಿಡವನ್ನು ಕಡಿದಾಗ ಅದರಡಿಯಿದ್ದ ನೂರಾರು ಕುರಿಗಳು ಹೊರಬರುತ್ತವೆ. ಇಷ್ಟೊಂದು ಕರಿಮೈಯ್ಯ ವಿಚಿತ್ರ ಪ್ರಾಣಿಗಳನ್ನು ಕಂಡ ಪದ್ಮಣ್ಣ ಓಡುತ್ತಾನೆ. ಶಿವ ಪ್ರತ್ಯಕ್ಷನಾಗಿ ಪದ್ಮಣ್ಣನಿಗೆ ಕುರಿ ಕಾಯುವ ವೃತ್ತಿಯನ್ನು ಕೈಗೊಳ್ಳಬೇಕೆಂದು ಹೇಳುವುದಲ್ಲದೆ, ಆತನ ರಕ್ಷಣೆಗೆ ಬೀರೇಶನನ್ನು ಕಳುಹಿಸಿ ಕೊಡುತ್ತಾನೆ. ಹೀಗೆ ಪದ್ಮಣ್ಣ ಕುರುಬರ ಮೂಲ ಪುರುಷನಾದರೆ ಆತನ ಕುರಿಗಳ ರಕ್ಷಣೆಗಾಗಿ ಭೂಮಿಯಲ್ಲಿ ಅವತರಿಸಿದ ಬೀರೇಶ ಬೀರದೇವರಾಗಿ ಕುರುಬರಿಂದ ಪೂಜಿಸಲ್ಪಡುತ್ತಿದ್ದಾನೆ."[೨೧]

ಹೀಗೆ ಕುರುಬ ಸಮುದಾಯದ ಮೂಲವನ್ನು ಕುರಿತು ಹೇಳುವ ಹಲವಾರು ಕಥೆಗಳು ಹಾಲುಮತ ಪುರಾಣಗಳಲ್ಲಿಯೂ ಮತ್ತು ಡೊಳ್ಳಿನ ಹಾಡುಗಳಲ್ಲಿಯೂ ಪ್ರಚಲಿತದಲ್ಲಿವೆ. ಅವುಗಳನ್ನು ಕಟ್ಟುಕಥೆಗಳೆಂದು ತಳ್ಳಿಹಾಕಿದರೂ ಕೆಲ ಅಂಶಗಳಿಂದ ನಮ್ಮ ಗಮನವನ್ನು ಸೆಳೆಯುತ್ತವೆ. ಮುಖ್ಯವಾಗಿ ಆದಿಗೊಂಡನ ಕೊನೆಯ ಮಗನಾದ ಪದ್ಮಗೊಂಡನು ಶಿವನ ಅನುಗ್ರಹದಿಂದ ಜನಿಸಿದವನಾಗಿದ್ದು, ಕುರಿಪಾಲನೆಯನ್ನು ವೃತ್ತಿಯಾಗಿಸಿಕೊಂಡ ಸಮುದಾಯದ ಮೊದಲ ವ್ಯಕ್ತಿ. ಹಾಗೆಯೇ ಕುರಿ ಕಾಯುತ್ತ ಅಲೆಮಾರಿಯಾಗಿ ಒಂದೆಡೆಯಿಂದ ಮತ್ತೊಂದೆಡೆ ಸಂಚರಿಸುತ್ತ, ಕುರಿ ಉಣ್ಣೆಯಿಂದ ಕಂಬಳಿ ತಯಾರಿಕೆ, ಹಾಲು ಉತ್ಪನ್ನಗಳ ಬಳಕೆಯನ್ನು ಬದುಕಿಗೆ ಅಳವಡಿಸಿಕೊಂಡಿದ್ದು, ರಕ್ಕಸಿಯನ್ನು ಕೊಂದು ಅವಳ ಸಾಕು ಮಗಳನ್ನು ಕಾಪಾಡಿ ಅವಳನ್ನು ಮದುವೆಯಾದನು. ಇಂತಹ ಸಾಕಷ್ಟು ಸಂಗತಿಗಳು ಸಮುದಾಯ ವಿಕಾಸದ ಚಹರೆಗಳನ್ನು ಗ್ರಹಿಸಲು ಸಹಕಾರಿಯಾಗಿದೆ.

ಈ ಪುರಾಣಗಳ ಜೊತೆಗೆ ಇತಿಹಾಸಜ್ಞರು, ಮಾನವಶಾಸ್ತ್ರಜ್ಞರು, ಸಮಾಜವಿಜ್ಞಾನಿಗಳು ಸಂಶೋಧನೆ ಮಾಡಿ ಭಾರತದ ಜನಸಮುದಾಯಗಳಲ್ಲಿ ಕುರುಬ ಸಮುದಾಯವು ಪ್ರಾಚೀನವಾದ ಸಂಸ್ಕೃತಿಯನ್ನು ಹೊಂದಿದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಈ ಸಂಶೋಧನೆಗಳ ಬೆಳಕಿನಲ್ಲಿ ಇಂದಿಗೂ ಸಮುದಾಯದಲ್ಲಿ ಉಳಿದು ಬಂದಿರುವ ಪ್ರಾಚೀನ ನಂಬುಗೆ, ಆಚರಣೆ, ಜೀವನಾವರ್ತನ ವಿಧಾನಗಳು, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಇತ್ಯಾದಿಗಳ ಹಿನ್ನೆಲೆಯಲ್ಲಿ ಕುರುಬ ಸಮುದಾಯದ ಇತಿಹಾಸವನ್ನು ಕಟ್ಟಿಕೊಳ್ಳಬೇಕಾಗುತ್ತದೆ.

ಸಮುದಾಯದ ಕುರಿತಾಗಿ ಬಂದಿರುವ ಪುರಾಣ ಕಥೆಗಳಲ್ಲಿ ಎರಡನ್ನು ಮಾತ್ರ ಸಮುದಾಯದ ಚಹರೆಗಳನ್ನು ಗುರುತಿಸಲು ಸಂಕ್ಷಿಪ್ತವಾಗಿ ತೆಗೆದುಕೊಳ್ಳಲಾಗಿದೆ. ಈ ಮಾದರಿಯಲ್ಲಿಯೇ ಉಳಿದ ಕಾವ್ಯಗಳಲ್ಲಿ ಉಲ್ಲೇಖಗಳು ಇವೆಯಾದರೂ ಅಲ್ಲಲ್ಲಿ ಕೆಲ ಪಾಠಾಂತರಗಳನ್ನು ಕಾಣಬಹುದು. ಉದಾಹಣೆಗೆ ಕುರಿಗಳು ಗವಿ, ಹುತ್ತಗಳಲ್ಲಿ ಅಡಗಿದ್ದು, ಪದ್ಮಗೊಂಡನಿಗೆ ದೊರೆತಿದ್ದು, ಭೂಮಿಯ ಮೂಲವಾಸಿಗಳಾಗಿ ಮುದ್ದುಗೊಂಡ–ಮುದ್ದವ್ವರಂತೆ, ಮಾಸಿ(ಆದಿ)ರೆಡ್ಡಿ–ನೀಲಮ್ಮರು ಬಂದಂತಹ ಚಿತ್ರಣಗಳು, ಪಾರ್ವತಿಯ ಶಾಪದಿಂದ ಕುರಿಗಳು ಹುಟ್ಟಿದರೆ, ಕೆಲವೆಡೆ ಭೃಂಗಿಯಿಂದ, ರೇವಣಸಿದ್ಧನಿಂದ ಕುರಿಗಳು ಜನ್ಮ ತಳೆದ ಚಿತ್ರಣ ಇತ್ಯಾದಿ ಅಂಶಗಳು. ಈ ಕಾವ್ಯಗಳಲ್ಲಿರುವಂತೆಯೇ "ದಕ್ಷಿಣ ಸೂಡಾನಿನ ಹುಲ್ಲುಗಾವಲಿನಲ್ಲಿ ವಾಸವಾಗಿರುವ ನೀಲೋಟಿಕ್ ಮತ್ತು ದಕ್ಷಿಣ ಆಫ್ರಿಕಾದ ವೆಲ್ಡ್ ಹುಲ್ಲುಗಾವಲಿನ ಹೆರೇರೋ ಬುಡಕಟ್ಟುಗಳಲ್ಲಿ 'ಕುರಿ–ಮೇಕೆಗಳು ಭೂಮಿಯ ಒಂದು ರಂಧ್ರದಿಂದ ಹೊರಬಂದವೆಂಬ ನಂಬುಗೆಯಿದೆ."[೨೨] ಈ ಪಾಠಾಂತರಗಳು ಪ್ರಪಂಚದಾದ್ಯಂತ ದೊರೆಯುತ್ತವೆ. ಪ್ರಸ್ತುತ ಆಕರಗಳ ಮುಖೇನ ಕುರುಬ ಸಮುದಾಯದ ಚಹರೆಗಳನ್ನು ತಿಳಿಯುವುದು ಮುಖ್ಯವಾಗುತ್ತವೆ.

ಭಾರತದಲ್ಲಿ ಪಶುಪಾಲನೆ ಅದರಲ್ಲಿಯೂ ಕುರಿಸಾಕಾಣಿಕೆ, ಕಂಬಳಿ ನೇಕಾರಿಕೆಯನ್ನು ಪ್ರಧಾನ ವೃತ್ತಿಯನ್ನಾಗಿಸಿಕೊಂಡು ಬಂದ ಇವರನ್ನು ಕುರುಂಬ, ಧನಗರ, ಪಾಲ್, ಗಡಾರಿಯಾ, ಹಾಲುಮತದವರೆಂದು ಕರೆಯುವುದು ವಾಡಿಕೆ. ಕುರುಂಬ ಎಂದರೆ ಬೆಟ್ಟ, ಭೂಮಿ ಎಂದರ್ಥ. ಹಾಗಾಗಿ ಇದು ಬೆಟ್ಟದ ವಾಸಿಗಳೆಂಬ ಅರ್ಥವನ್ನು ಧ್ವನಿಸುತ್ತದೆ. ಅಂತೆಯೇ ಧನಗರ, ಪಾಲ್, ಗಡಾರಿಯಾಗಳು ಬೆಟ್ಟ, ಭೂಮಿ ಮತ್ತು ಜನಾಂಗ ಸೂಚಕ ಪದಗಳು. ಕುರುಬ ಸಮುದಾಯದ ಇತಿಹಾಸವನ್ನು ಕುರಿತು ವ್ಯಾಪಕವಾದ ಚರ್ಚೆ ಮಾಡಿರುವ ಶಂಬಾ ಜೋಷಿಯವರು ತಮ್ಮ 'ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ' ಗ್ರಂಥದಲ್ಲಿ "ಕುರುಂಬ ಎಂಬುದು ಕಂದಮಿಳ ಶಬ್ದ ಹಳೆಯ 'ಕುರುಂಬ' ಈಗ ಕುರುಂಬ>ಕುರುಬ ಆಗಿದೆ. 'ಕುರು' ಎಂದರೆ ಗುಡ್ಡ, ಮರಡಿ, ಎತ್ತರವಾದ ಪ್ರದೇಶ. ಆದ ಕಾರಣ ಮೂಲಾರ್ಥ ದೃಷ್ಟಿಯಿಂದ ಕುರುಂಬರೂ, ಮರವರೂ ಒಂದೇ ಅರಣ್ಯವಾಸಿ ಜನ ಎಂದಿರುವರು."[೨೩] ಅಂದರೆ ಅವರ ದೃಷ್ಟಿಯಲ್ಲಿ ಎತ್ತರವಾದ ಪ್ರದೇಶ, ಗುಡ್ಡ, ಮರಡಿ ಎಂಬರ್ಥದ ಕುರು ಎಂಬುದರಿಂದ ಕುರುಬ ಪದ ನಿಷ್ಪನ್ನವಾಗಿದೆ ಎಂದು ಅರ್ಥೈಸಿದ್ದಾರೆ.

“ದ್ರಾವಿಡ ಭಾಷೆಯಲ್ಲಿ ಕುರಿ, ಕೋರಿ ಎಂದರೆ ಬೆಟ್ಟಗುಡ್ಡಗಳೆಂದೂ ಕೋರಿ ಎಂದರೆ ಕುರಿ ಎಂದೂ, ‘ಕುರು’ ಎಂದರೆ ಕುರುಚು, ಕುಳ್ಳ ಎಂದು ಅರ್ಥವಾಗುವುದು. ಈ ಅರ್ಥಾನುಸಾರವಾಗಿ ಕುರುಬರು ಬೆಟ್ಟಗುಡ್ಡಗಳಲ್ಲಿ ವಾಸಮಾಡಿಕೊಂಡು ಕುರಿಗಳನ್ನು ಕಾಯುತ್ತಿದ್ದುದ್ದರಿಂದ ಕುರುಬರೆಂಬ ಹೆಸರು ದ್ರಾವಿಡ ಭಾಷೆಯಲ್ಲಿ ಮೂಡಲು ಸಾಧ್ಯವಾಯಿತೆಂದು ಬಹುಜನರ ಅಭಿಪ್ರಾಯವಾಗಿದೆ.”೨೪ ಇವರು ಸಹ ಶಂಬಾ ಅವರಂತೆ ಬೆಟ್ಟಗುಡ್ಡಗಳಲ್ಲಿ ವಾಸಮಾಡಿಕೊಂಡು ಕುರಿಗಳನ್ನು ಕಾಯುತ್ತಿದ್ದರಿಂದ ಕುರುಬರು ಎಂದು ಹೆಸರು ಬರಲು ಕಾರಣವಾಗಿದೆ ಎಂದು ಹೇಳಿದ್ದಾರೆ. ಭಾರತೀಯ ಸಂಸ್ಕೃತಿಯಲ್ಲಿ ಗೋವಿನ ನಂತರ ಸಾಕುಪ್ರಾಣಿಯಾಗಿ ಅತಿಹೆಚ್ಚು ಪರಿಚಿತವಾಗಿರುವುದು ಕುರಿ. ಇದನ್ನು ಮೇಷ ಎಂದು ಕರೆಯಲಾಗುತ್ತದೆ. ಒಂದಲ್ಲಾ ಒಂದು ರೂಪದಲ್ಲಿ ವೈದಿಕಸಾಹಿತ್ಯ, ಖಗೋಳಶಾಸ್ತ್ರ, ಪುರಾಣಗಳು ಮತ್ತಿತರ ಕೃತಿಗಳಲ್ಲಿ ಇದರ ಉಲ್ಲೇಖಗಳಿವೆ. ಋಗ್ವೇದದಲ್ಲಿ ‘ಓ ದೇವರೇ! ಕುರಿ ಮತ್ತು ದನಗಳಲ್ಲಿ ನಾವು ಸಂಮೃದ್ಧಿಯನ್ನು ಹೊಂದೋಣ. ನಾವು ಯಾರನ್ನು ಕೊಲ್ಲುವುದಿಲ್ಲ ಹಾಗೂ ಕಾಡುಗಳಲ್ಲಿ ವಿರಾಮ ಜೀವನ ನಡೆಸುತ್ತಾ ಮಂತ್ರಗಳನ್ನು ಜಪಿಸುತ್ತ ಪಶುಪಾಲನೆ ಮಾಡುತ್ತೇವೆ ಎಂದು ಪ್ರಾರ್ಥಿಸಲಾಗಿದೆ.

ಖಗೋಳಶಾಸ್ತ್ರದಲ್ಲಿ ಮೇಷಕ್ಕೆ ಮೊದಲ ಸ್ಥಾನವಿದೆ. ಹನ್ನೆರಡು ರಾಶಿಗಳಲ್ಲಿ ಅದು ಮೊದಲನೆಯದು. ತಾವೇ ಹೊಲೆದ ಉಣ್ಣೆ ಬಟ್ಟೆಗಳನ್ನು ಧರಿಸುತ್ತಿದ್ದುದನ್ನು ಯಜುರ್ವೇದ(೧೯-೮೦)ದಲ್ಲಿ ಹೇಳಲಾಗಿದೆ. ಋಗ್ವೇದ ಕಾಲದ ಋಷಿಮುನಿಗಳು ತಮ್ಮ ಆಶ್ರಮಗಳಲ್ಲಿ ಆಡು ಮತ್ತು ಕುರಿಗಳನ್ನು ಸಾಕುತ್ತಿದ್ದರು. ಅವುಗಳನ್ನು ಅವರ ಶಿಷ್ಯರು ಕಾಯುತ್ತಿದ್ದರು. ರಾಮಾಯಣದಲ್ಲಿ ‘ಅರಸನಿಲ್ಲದ ನಾಡಿನಲ್ಲಿ ಮಿಂಚುಗಳ ಮಾಲೆ ಧರಿಸಿ, ಗುಡು-ಗುಡುಗಿಸಿ ಮೋಡ ಮಳೆ ಸುರಿಸದು ಎಂದು ಹೇಳುತ್ತ ಸಾಗಿ ಇಂತಹ ನಾಡಿನಲ್ಲಿ ಕುರುಬರು, ರೈತರು ಗುಡಿಸಲೋಳು ಮಲಗಿರೆ ಕದವಿಕ್ಕಿ ಎಂಬ ಉಲ್ಲೇಖ ಬರುತ್ತದೆ. ಇದರಿಂದ ಅಂದು ಕುರಿಸಾಕಾಣಿಕೆಯನ್ನು ವೃತ್ತಿಯಾಗಿಸಿಕೊಂಡ ಕುರುಬ ಸಮುದಾಯದ ಚಹರೆಗಳು ಇದ್ದವು ಎಂಬುದನ್ನು ಗಮನಿಸಲಾಗಿದೆ. ಋಗ್ವೇದ ಕಾಲದ ಕೊನೆಗೆ ಸಂಪೂರ್ಣವಾಗಿ ಆರ್ಯರ ಕಲ್ಪನೆ ಮತ್ತು ಪ್ರಭಾವಗಳ ಮೂಲಕವೋ ವಿಶ್ವವೇ ಒಂದು ಬಲಿಕೊಡುವ ಪುರಾತನ ಯಜ್ಞದ ಫಲವಾಗಿ ಹೊರಹೊಮ್ಮಿತೆಂದು ನಂಬಲಾಯಿತು. ಅದನ್ನು ತಿಳಿಸುವ ಪುರಾಣ ಪುರುಷ ಗೀತೆ ಅಸ್ಪಷ್ಟತೆಯಿಂದ ಕೂಡಿದೆಯಾದರೂ ಪ್ರಪಂಚ, ಮಾನವನ ಉಗಮದ ಜೊತೆಗೆ ಸಾಕುಪ್ರಾಣಿಗಳಾದ ದನ, ಕುರಿ, ಮೇಕೆಗಳ ಉಗಮದ ಉಲ್ಲೇಖಗಳು ದೊರೆಯುತ್ತವೆ.

‘ಶತಪಥ ಬ್ರಾಹ್ಮಣ’ದಲ್ಲಿ ಪುರೂರವ ಮತ್ತು ಊರ್ವಶಿಯರ ಅಂದರೆ ಭೂವಾಸಿ ಪ್ರಿಯತಮ-ಸ್ವರ್ಗವಾಸಿ ಪ್ರೇಯಸಿಯ ಮಧ್ಯೆಯ ಕಥೆಯು ಋಗ್ವೇದದಷ್ಟೇ ಹಳೆಯದಾಗಿದ್ದು, ನಂತರದ ಕಾಲದಲ್ಲಿ ಕಾಳಿದಾಸನ ನಾಟಕವೊಂದರ ವಸ್ತುವು ಆಗಿದೆ. ಊರ್ವಶಿಯು ಪುರೂರವನನ್ನು ಮದುವೆಯಾಗುವಾಗ ಕೆಲ ನಿಬಂಧನೆಗಳನ್ನು ಹಾಕಿದಳು. ದಿನಕ್ಕೆ ಮೂರು ಭಾರಿ ತಬ್ಬಿಕೊಳ್ಳಬೇಕು, ನಗ್ನವಾಗಿ ನನ್ನೆದುರು

ಕಾಣಿಸಿಕೊಳ್ಳಬಾರದು. ಏಕೆಂದರೆ ಇದುವೆ ನಮ್ಮ ಸ್ತ್ರೀಯರ ಜೊತೆ ವರ್ತಿಸುವ ಸರಿಯಾದ ರೀತಿ. ಹೀಗೆಯೇ ಕಥೆಯು ಸಾಗುತ್ತದೆ. ದೇವಲೋಕವನ್ನು ದೀರ್ಘಕಾಲ ಬಿಟ್ಟು ಬಂದಿದ್ದರಿಂದ ಮತ್ತೆ ಮರಳಲು ರಾತ್ರಿ ಮಲಗುವ ಮಂಚದ ಕಾಲುಗಳಿಗೆ ಒಂದು ಹೆಣ್ಣು ಕುರಿ ಮತ್ತು ಎರಡು ಮರಿಕುರಿಗಳನ್ನು ಕಟ್ಟಿದಳು. ಗಂದರ್ವರು ಅವುಗಳನ್ನು ಅಪಹರಿಸುತ್ತಾರೆ. ಅವುಗಳನ್ನು ಕಾಪಾಡಲು ಹೋದ ಪುರೂರವ ಬೆತ್ತಲೆಯಾಗಿ ಕಾಣುತ್ತಾನೆ. ಹೀಗೆ ಈ ಕಥೆಯಲ್ಲಿ ಕುರಿಯ ಕುರಿತ ಪ್ರಸ್ತಾಪ ರಾಜ ಮಹಾರಾಜರು ಸೇರಿದಂತೆ ಇಂದು ಸ್ವರ್ಗದ ದೇವತೆಗಳೆಂದು ಕರೆಯುವವರು ಅಂದು ಪಶುಪಾಲನೆಗೆ ಕೊಟ್ಟ ಪಾಶಸ್ತ್ಯವನ್ನು ತಿಳಿಯಲು ಸಹಾಯಕವಾಗುತ್ತದೆ. ಕುರಿಗಳು ಅಂದು ಬೃಹದಾಕಾರವಾಗಿದ್ದು, ಉತ್ತಮ ಉಣ್ಣೆ ಮತ್ತು ಹಾಲಿನ ಉತ್ಪನ್ನಗಳನ್ನು ಒದಗಿಸುತ್ತಿದ್ದವು. ಕುರಿಯ ಅತೀ ಪ್ರಾಚೀನ ಕಾಲದ ಮತ್ತು ಅತಿ ದೊಡ್ಡ ಆಕಾರದ ತಲೆಬುರುಡೆ 'ನಾರ್‌ಫೋಕ್' ತೀರಪ್ರದೇಶದಲ್ಲಿಯ ಭೂಗರ್ಭದಲ್ಲಿ ಸಿಕ್ಕಿದೆ. ಇದು ಸುಮಾರು ೨೫ ಲಕ್ಷ ವರ್ಷಗಳ ಹಿಂದಿನದಿರಬಹುದೆಂದು ಪ್ರಾಚ್ಯವಸ್ತು ಸಂಶೋಧನಾಧಿಕಾರಿಗಳು ಹೇಳುತ್ತಾರೆ. ಇದರ ಕೊಂಬುಗಳು ಬಹಳ ದೊಡ್ಡದಾಗಿ ಅತಿ ಉದ್ದವಾಗಿರುತ್ತವೆ. ಕ್ರಿ.ಶ ೧೮೮೦ರಲ್ಲಿ ನ್ಯೂಟನ್ ಇದಕ್ಕೆ 'ಓವಿಸ್ ಸಾವನಿ' ಎಂಬ ಹೆಸರು ಕೊಟ್ಟಿರುವನೆಂದು ಎಂ.ಎಲ್. ರೈಡರ್ ತನ್ನ 'ಜೂಆಲಜಿ ಆಫ್ ಶೀಪ್' ಪುಸ್ತಕದಲ್ಲಿ ಹೇಳಿರುವನು.

ಲಿಕೀ ಅವರು ಪೂರ್ವ ಆಫ್ರಿಕಾ ದೇಶದ ಭೂಗರ್ಭ ಉತ್ಖನನದಲ್ಲಿ ಕೆಲವು ಕುರಿಗಳ ಅವಶೇಷಗಳನ್ನು ಹುಡುಕಿ ತೆಗೆದಿದ್ದಾರೆ. ಇದರಲ್ಲಿ ಒಂದು ದೊಡ್ಡ ಕುರಿಯ ತಲೆಬುರುಡೆ ಕೊಂಬು ಸಹಿತ ಸಿಕ್ಕಿರುತ್ತದೆ. ಈ ತಲೆಬುರುಡೆಯ ವ್ಯಾಸ ೪ ಅಡಿಗಿಂತ ಹೆಚ್ಚಾಗಿದ್ದು, ೧೨ ಅಡಿ ಉದ್ದವಿತ್ತೆಂದು ಹೇಳಲಾಗಿದೆ. ಇದರಿಂದ ಕುರಿಗಳು ಎಷ್ಟು ಪುರಾತನ ಕಾಲಕ್ಕೆ ಸೇರಿದವು ಮತ್ತು ಬೃಹದಾಕಾರವಾಗಿದ್ದವು ಎಂಬುದನ್ನು ಊಹಿಸಬಹುದಾಗಿದೆ. "ಏಷ್ಯಾ, ಆಫ್ರಿಕಾ, ದಕ್ಷಿಣ ಅಮೇರಿಕಾ, ಅಂಟಾರ್ಟಿಕಾ, ಆಸ್ಟ್ರೇಲಿಯಾ ಖಂಡಗಳನ್ನು ಗೊಂಡವಾನ ಖಂಡಗಳೆಂದು ಕರೆಯುವರು."[೫] ಈ ಎಲ್ಲ ಪ್ರದೇಶಗಳಲ್ಲಿಯೂ ಕುರಿಪಾಲನೆಯು ಅಂದು ಪ್ರಮುಖ ವೃತ್ತಿಯಾಗಿತ್ತು. ಅವೆಲ್ಲ ಕುರಿಪಾಲಕರ ಪ್ರದೇಶಗಳಾಗಿದ್ದವು. ಹೀಗೆ ಹೇಳಿದ ಮಾತ್ರಕ್ಕೆ ಇವೆಲ್ಲ ಕುರುಬ ಸಮುದಾಯ ವಾಸಿಸಿದ್ದ ನೆಲೆಗಳು ಎಂದರ್ಥವಲ್ಲ. ಆ ವೃತ್ತಿಯನ್ನು ಮಾಡುತ್ತಿದ್ದ ಜನ ಸಮುದಾಯಗಳ ಸ್ಥಳಗಳಾಗಿದ್ದವು ಎಂಬುದನ್ನು ಗ್ರಹಿಸಬೇಕಾಗುತ್ತದೆ.

ವಿಶ್ವದ ಯಾವುದೇ ಭಾಗದಲ್ಲಿ ಇರುವುದಕ್ಕಿಂತಲೂ ಹೆಚ್ಚು ಬುಡಕಟ್ಟು ಸಮುದಾಯಗಳು ಭಾರತದಲ್ಲಿ ಕೇಂದ್ರಿಕೃತವಾಗಿವೆ. ಅವು ಇತ್ತೀಚಿನ ಕಾಲಘಟ್ಟದವರೆಗೂ ಅಲೆಮಾರಿತನವನ್ನು ಮೈಗೂಡಿಸಿಕೊಂಡು ಕಾಡಿನಲ್ಲಿಯೇ ಜೀವನ ಕಳೆಯುತ್ತ, ತನ್ನ ಪರಂಪರೆ, ನಂಬುಗೆ, ಸಂಪ್ರದಾಯ ಗಳನ್ನು ಉಳಿಸಿ, ಬೆಳಸಿಕೊಂಡು ಬಂದಿವೆ. ಅದರಲ್ಲಿಯೂ ಕೆಲ ಸಮುದಾಯಗಳು ದಿನಕಳೆದಂತೆ ತಮ್ಮದೇ ಆದ ಹಟ್ಟಿ, ಹಳ್ಳಿಗಳನ್ನು ಕಟ್ಟಿಕೊಳ್ಳುತ್ತ ಬದುಕು ಸಾಗಿಸುತ್ತ ಬರುತ್ತಲಿವೆ. ಅಂತಹ ಸಮುದಾಯಗಳಲ್ಲಿ ಮುಖ್ಯವಾಗಿ ಭಾರತದಲ್ಲಿ ಉತ್ತರ ಮತ್ತು ಉತ್ತರ ಪೂರ್ವ ವಲಯ, ಕೇಂದ್ರಿಯ

ಅಥವಾ ಮಧ್ಯವಲಯ, ದಕ್ಷಿಣವಲಯದಲ್ಲಿ ಚದುರಿರುವ ಸಮುದಾಯಗಳೆಂದು ವಿಂಗಡಿಸಲಾಗಿದೆ. ಅದರಲ್ಲಿಯೂ ಅಧ್ಯಯನಕ್ಕೆ ಒಳಪಡಿಸಿರುವ "ದಕ್ಷಿಣ ವಲಯದಲ್ಲಿ, ಚೆಂಚು, ತೋಡ, ಬಡಗ, ಕುರುಮನೆ, ಕುರುಂಬ, ಗೊಂಡ, ನಾಯಕ, ಕುರುಬ, ಕಾಡುಕುರುಬ, ಜೇನುಕುರುಬ ಇತ್ಯಾದಿ ಬುಡಕಟ್ಟುಗಳು ಪ್ರಮುಖವಾಗಿವೆ."[೨೬] ಈ ಸಮುದಾಯಗಳಲ್ಲಿ ಒಂದಾದ ಕುರುಬ ಸಮುದಾಯವು ಭಾರತದಾದ್ಯಂತ ವ್ಯಾಪಿಸಿದ್ದು, ಅನೇಕ ಹೆಸರುಗಳಿಂದ ವಿವಿಧೆಡೆ ಕರೆಯಿಸಿಕೊಳ್ಳುತ್ತಿದೆ. ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಈ ಸಮುದಾಯವು ಕುರುಬ, ಹಾಲುಮತ, ಹೆಗ್ಗಡೆ, ಜೇನುಕುರುಬ, ಕಾಡುಕುರುಬ, ಗೊಲ್ಲವಾಡು, ಕುರುಂಬ, ಕುರುಮ ಎಂಬಿತ್ಯಾದಿ ಹೆಸರುಗಳಿಂದ ಕರೆಯಿಸಿಕೊಳ್ಳುತ್ತ ವಾಸಿಸುತ್ತಿದ್ದಾರೆ. ಈ ಸಮುದಾಯವು ಹುಲ್ಲುಗಾವಲು ಮತ್ತು ನದಿ ಆಶ್ರಿತ ಪ್ರದೇಶಗಳಲ್ಲಿ ನೆಲೆಸಿದ್ದನ್ನು ಪ್ರಮುಖವಾಗಿ ಗಮನಿಸಬಹುದು. ಪಶುಪಾಲಕ ಸಮುದಾಯವಾಗಿದ್ದೂ ಇವರು ವಿವಿಧೆಡೆಗಳಲ್ಲಿ ಚದುರಿ ಹೋಗಿದ್ದಾರೆ. ಅದರಂತೆಯೇ ಆಂಧ್ರಪ್ರದೇಶದ ತೆಲಂಗಾಣ ಮತ್ತು ರಾಯಲಸೀಮ ಪ್ರದೇಶಗಳಲ್ಲಿ ಸಾಂಪ್ರದಾಯಿಕ ವೃತ್ತಿಯಾದ ಕುರಿ ಸಾಕಾಣಿಕೆಯನ್ನು ಮುಂದುವರಿಸಿಕೊಂಡು ಬರುವುದರ ಜೊತೆಗೆ ಕೃಷಿಯನ್ನು ಮಾಡುವುದರ ಮುಖೇನ ಒಂದೆಡೆ ನೆಲೆನಿಂತು ಜೀವಿಸುವುದನ್ನು ಇಂದು ಕಾಣಬಹುದಾಗಿದೆ.

ಅರೆ ಅಲೆಮಾರಿತನ ಅಂದರೆ ವರ್ಷದಲ್ಲಿ ಇಂತಿಷ್ಟು ತಿಂಗಳು ಕುರಿ, ಹೋತಗಳಿಗೆ ಮೇವು–ನೀರು ಅರಸಿ ಒಂದು ಹುಲ್ಲುಗಾವಲಿನಿಂದ ಮತ್ತೊಂದು ಹುಲ್ಲುಗಾವಲಿಗೆ ಚಲಿಸುವುದು ಕಂಡುಬರುತ್ತದೆ. ಹೀಗೆ ಅಲೆಯುವ ಸಂದರ್ಭದಲ್ಲಿ ಅಲ್ಲಿನ ರೈತರೊಂದಿಗೆ ಸಾಂಕೇತಿಕ ಸಂಬಂಧ ಹೊಂದಿ, ಕುರಿ, ಹೋತ, ಕಂಬಳಿ ಮಾರಾಟ ಮತ್ತು ರೈತರ ಕೃಷಿ ಭೂಮಿಯಲ್ಲಿ ಗೊಬ್ಬರಕ್ಕಾಗಿ ಕುರಿಗಳನ್ನು ಮಂದೆ ನಿಲ್ಲಿಸುವುದರ ಮೂಲಕ ಅವರಿಂದ ನಿಗದಿಪಡಿಸಿದ ಹಣ ಮತ್ತು ದವಸಧಾನ್ಯಗಳಿಂದ ಜೀವನ ಸಾಗಿಸುತ್ತಾರೆ. ಹೀಗೆ ಭಾರತದಾದ್ಯಂತ ನೆಲೆಸಿರುವ ಕುರುಬ ಸಮುದಾಯವು ಪ್ರಾದೇಶಿಕ ಆರ್ಥಿಕ ಸ್ಥಿತಿಗೆ ಅನುಗುಣವಾಗಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಂಡಿದೆ. ಕುರುಬ ಸಮುದಾಯದ ಪ್ರಮುಖ ಉದ್ಯೋಗ ಪಶುಪಾಲನೆಯಾದ್ದರಿಂದ ಇವರನ್ನು ಆರ್ಯರು ಎಂದು ಕೆಲ ವಿದ್ವಾಂಸರು ಕರೆದಿದ್ದಾರೆ. ಆದರೆ ಅವರ ಆಚರಣೆ, ನಂಬುಗೆ, ಸಂಪ್ರದಾಯಗಳು ಅವರನ್ನು ದ್ರಾವಿಡ ಮೂಲ ಸಮುದಾಯವೆಂದೆ ಬಿಂಬಿಸುತ್ತದೆ. ಅದಕ್ಕೆ ಸಾಕಷ್ಟು ನಿದರ್ಶನಗಳಿವೆ. ಈ ಅಭಿಪ್ರಾಯವನ್ನು ಬೆಂಬಲಿಸುವಂತೆ ಗಸ್ಟೋವ್ ಓಪರ್ಟ್ ಅವರು ತಮ್ಮ 'Original Inhabitants of India' ಎಂಬ ಕೃತಿಯಲ್ಲಿ ಕುರುಬರ ಪ್ರಾಚೀನತೆಯನ್ನು ಕುರಿತು 'Indeed the Kurubas must be regarded as very old in habitant of the land. Who can contested with their Dravidian Kingmen the priority of occupation of the Indian soil`(p. 123) ಎಂದು ಹೇಳಿರುವರು. ಅಂದರೆ ಕುರುಬರು ಈ ನೆಲದ ಪ್ರಾಚೀನ ಜನಾಂಗವೆಂದು ಮತ್ತು ಅವರು ದ್ರಾವಿಡ ಮೂಲದ ಜನಾಂಗವೆಂದು ಸ್ಪಷ್ಟಪಡಿಸುತ್ತದೆ.

“ಗಾಂಧಾರ ಪ್ರದೇಶವು ಕುರಿಕಾಯುವವರ ನೆಲೆಯಾಗಿತ್ತು. ಮಹಾರಾಷ್ಟ್ರದ ಕುರುಬರ ಒಂದು ಭಾಗವಾದ ಉತ್ತರಪ್ರದೇಶದ ‘ದನಗರ್’ ಮತ್ತು ‘ನಿಖರ್’ಗಳು ಮಧ್ಯಪ್ರದೇಶ, ರಾಜಸ್ಥಾನ ಮತ್ತು ದೆಹಲಿಗಳಿಂದ ಅತಿದೂರದ ಪ್ರದೇಶಗಳಿಗೆ ತಮ್ಮ ಜಾನುವಾರುಗಳೊಂದಿಗೆ ಪ್ರಯಾಣ ಬೆಳೆಸಿದರು. ಮತ್ತೊಂದು ಗುಂಪು ತಮಿಳುನಾಡು, ಕರ್ನಾಟಕದ ಕಡೆಗೂ, ಮೂರನೆಯದೊಂದು ಬಂಗಾಳ ಮತ್ತು ಓರಿಸ್ಸಾದೆಡೆಗೂ ಹೋದವು”[೨೭] ಎಂದಿರುವ ಈ ಅಭಿಪ್ರಾಯದಲ್ಲಿ ಕುರುಬರು ಗಾಂಧಾರ ಪ್ರದೇಶದಿಂದ ಬಂದವರೆಂದು ಮತ್ತು ಅವರು ಆರ್ಯಮೂಲ ಜನಾಂಗವೆಂದು ಒಪ್ಪುವುದು ಸಾಧ್ಯವಿಲ್ಲ. ಏಕೆಂದರೆ ಕುರುಬ ಜನಾಂಗವು ಆರ್ಯಪೂರ್ವ ಜನಾಂಗ ಮತ್ತು ದ್ರಾವಿಡ ಜನಾಂಗ ಎಂಬುದನ್ನು ಹೇಳಲು ಆಧಾರಗಳಿವೆ. ಅಥರ್ವಣವೇದದ ರಹಸ್ಯಾರ್ಥವನ್ನೊಳಗೊಂಡ ಮಂತ್ರಗಳಲ್ಲಿ ಮಾಗಧನನ್ನು ವ್ರಾತ್ಯನೊಂದಿಗೆ ಸೇರಿಸಲಾಗಿದೆ. ಅಲ್ಲಿ ಅವನನ್ನು ವಿಶ್ವಶಕ್ತಿಯ ಒಂದು ರೂಪ ಎಂದು ಸ್ತುತಿಸಲಾಗಿದೆ. ಯಜುರ್ವೇದವು ವ್ರಾತ್ಯರು ಒಂದು ಅಲೆಮಾರಿ ಜನಾಂಗವಾಗಿದ್ದು, ವೇದಾಧ್ಯಯನವನ್ನಾಗಲಿ, ಕೃಷಿಯನ್ನಾಗಲಿ, ವ್ಯಾಪಾರವನ್ನಾಗಲಿ ಮಾಡುತ್ತಿರಲಿಲ್ಲ. ಅವರು ವಿಚಿತ್ರ ರೀತಿಯ ಧನುರ್ಧಾರಿಗಳಾಗಿ, ಪೇಟಗಳನ್ನು ಧರಿಸಿ, ತಮ್ಮ ಕುರಿ–ಮೇಕೆಗಳೊಂದಿಗೆ ಒರಟು ಬಂಡಿಗಳಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಅಲೆಯುತ್ತಿದ್ದರೆಂದು ತಿಳಿಸುತ್ತದೆ. ಈ ಮಾತನ್ನು ಗಮನಿಸಿದರೆ ಆರ್ಯಪೂರ್ವ ಜನಾಂಗ ಅದು ದ್ರಾವಿಡ ಜನಾಂಗವೇ ಆಗಿತ್ತು ಎಂಬುದು ಸ್ಪಷ್ಟವಾಗುತ್ತದೆ. “ಕುರುಬ ಸಮುದಾಯವು ಆರ್ಯಮನೆತನಕ್ಕಿಂತಲೂ ಹಳೆಯದೆಂದೂ ಅವರು ನಿಶ್ಚಿತವಾಗಿ ದ್ರಾವಿಡ ಗುಂಪಿಗೆ ಸೇರುತ್ತಾರೆಂದು” ರಿಸ್ಲೇನ್‌ನ ಅಭಿಪ್ರಾಯವನ್ನು ಪುಷ್ಟೀಕರಿಸುತ್ತದೆ.

ಈ ಎಲ್ಲ ಹೇಳಿಕೆಗಳನ್ನು ಗಮನಿಸಿದರೆ ಕುರುಬ ಸಮುದಾಯ ಆರ್ಯರಿಗಿಂತ ಮೊದಲೇ ಭಾರತದಲ್ಲಿ ನೆಲೆನಿಂತಿದ್ದು, ಕುರಿ ಸಾಕಾಣಿಕೆ, ಉಣ್ಣೆ ವಸ್ತ್ರ, ಕಂಬಳಿ ನೇಯ್ಗೆಯಂಥ ಮೂಲ ವೃತ್ತಿಯಿಂದ ತನ್ನ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಂಡಿತ್ತು ಎಂದು ಹೇಳಬಹುದಾಗಿದೆ. ಮೆಗಾಸ್ತನಿಸ್ ಅವರು ಆರ್ಯರು ಭಾರತಕ್ಕೆ ಬರುವುದಕ್ಕಿಂತ ಮುಂಚೆಯೇ ಈ ದೇಶದ ಜನಾಂಗಗಳ ಸಂಸ್ಕೃತಿಗೆ ಸಾವಿರಾರು ವರ್ಷಗಳ ಇತಿಹಾಸವಿತ್ತೆಂದು ಹೇಳಿರುವ ಮಾತು ಮುಖ್ಯವಾಗುತ್ತದೆ. ಇದನ್ನು ಕುರುಬ ಸಮುದಾಯದಲ್ಲಿನ ಮಾತೃದೇವತಾ ಎಲ್ಲಮ್ಮ, ಮಾಯಮ್ಮ, ಸೂರಮ್ಮದೇವಿ, ಓರಂಗಲಮ್ಮ, ಲಕ್ಕಮ್ಮರ ಆರಾಧನೆ, ಪ್ರಕೃತಿ ಆರಾಧನೆ, ಸಾಂಸ್ಕೃತಿಕ ವೀರರ ಆರಾಧನೆಗಳು ಪುಷ್ಟೀಕರಿಸಿವೆ. ಹೀಗೆ ಕುರುಬ ಜನಾಂಗದ ಮೂಲವನ್ನು ಕುರಿತು ಹೇಳಿದ ಬಹುಸಂಖ್ಯಾತ ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು ಅವರನ್ನು ದ್ರಾವಿಡ ಜನಾಂಗವೆಂದು ಹೇಳಿರುವುದು ಆಕಸ್ಮಿಕವಲ್ಲ ಎನಿಸುತ್ತದೆ. ಏಕೆಂದರೆ ವೇದ–ಪುರಾಣಗಳಲ್ಲಿನ ಉಲ್ಲೇಖಗಳು, ಪುರಾತತ್ವ, ಭಾಷಿಕ, ಸಾಂಸ್ಕೃತಿಕ ಆಚರಣೆಗಳು ಅವರು ದ್ರಾವಿಡ ಭಾಷಾಗುಂಪಿಗೆ ಸೇರಿದವರು ಎಂಬುದನ್ನು ಪುಷ್ಟೀಕರಿಸುತ್ತವೆ. ಇವರಲ್ಲಿ ಆರ್ಯರಂತೆ ಯಜ್ಞ–

ಯಾಗಾದಿಗಳ ಪರಿಕಲ್ಪನೆ ಎಲ್ಲಿಯೂ ಕಂಡುಬರುವುದಿಲ್ಲ. ಈ ಎಲ್ಲ ಅಂಶಗಳ ಹಿನ್ನಲೆಯಲ್ಲಿ ಅವರ ಜೀವನ ವಿಧಾನವನ್ನು ಗಮನಿಸಿದರೆ ಅವರನ್ನು ದ್ರಾವಿಡ ಮೂಲಕ್ಕೆ ತಂದು ಸೇರಿಸುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಹಾಗಾಗಿ ಈ ಅಧ್ಯಯನವನ್ನು ದ್ರಾವಿಡಮೂಲ ಹಿನ್ನೆಲೆಯನ್ನು ಒಳಗು ಮಾಡಿಕೊಂಡು ಸಮುದಾಯದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಭಾರತದ ಉದ್ದಗಲಕ್ಕೂ ವ್ಯಾಪಿಸಿರುವ ಕುರುಬ ಸಮುದಾಯ ತನ್ನದೇ ಆದ ನಾಗರಿಕತೆ, ಆಡಳಿತ, ಸಂಸ್ಕೃತಿಯ ವರ್ತುಲದಲ್ಲಿ ಜೀವಿಸುತ್ತಿದೆ. ಮೊದಲೇ ತಿಳಿಸಿದಂತೆ ಆರ್ಯರಿಗಿಂತ ಮುಂಚೆಯೆ ಭಾರತದಲ್ಲಿನ ಸಮುದಾಯಗಳಿಗೆ ತಮ್ಮದೇ ಆದ ಚರಿತ್ರೆ ಇದ್ದದ್ದು, ಆರ್ಯರ ಆಗಮನದ ನಂತರ ಭಾರತೀಯ ಸಂಸ್ಕೃತಿ ಎಂದರೆ ಆರ್ಯರ ಸಂಸ್ಕೃತಿ ಎನ್ನುವಷ್ಟರ ಮಟ್ಟಿಗೆ ಮೂಲದ್ರಾವಿಡರ ಮೇಲೆ ಪ್ರಭುತ್ವ ಸಾಧಿಸಿದೆ. ಧಾರ್ಮಿಕ, ಸಾಂಸ್ಕೃತಿಕ ಸಂಗತಿಗಳ ಮುಖೇನ ಸೋದರ ಸಮುದಾಯಗಳಂತೆ ಜೀವಿಸುತ್ತಿದ್ದ ಅವರಲ್ಲಿಯೇ ಶ್ರೇಷ್ಠ-ಕನಿಷ್ಠ ಎಂಬ ಭೇದ-ಭಾವಗಳನ್ನು ತುಂಬುವುದರಿಂದ ಚಾತುರ್ವರ್ಣ ಜಾತಿಗಳ ಉಗಮಕ್ಕೆ ನಾಂದಿ ಹಾಡಿದರು. ಹೀಗೆ ವರ್ಣಗಳು ಜಾತಿಗಳಾಗಿ ವೃತ್ತಿಯನ್ನು ಆಧರಿಸಿ ವಿಘಟನೆಯಾಗುತ್ತ ಸಾಗಿ ಬರುವುದು ನಡೆಯಿತು.

ಇಂದು ಪ್ರಸ್ತುತ ಭಾರತದ ಮಹಾನುಗ್ರಂಥಗಳನ್ನು ಬರೆದ ವಾಲ್ಮೀಕಿ-ರಾಮಾಯಣ, ವ್ಯಾಸ-ಮಹಾಭಾರತ, ಕಾಳಿದಾಸ-ಅಭಿಜ್ಞಾನ ಶಾಕುಂತಲಾ, ಈ ಕವಿಗಳು ಬೇಡ, ಬೆಸ್ತ, ಕುರುಬ ಸಮುದಾಯಕ್ಕೆ ಸೇರಿದವರು. ಕಾಲಾಂತರದಲ್ಲಿ ಈ ಕೃತಿಗಳನ್ನಷ್ಟೇ ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡು ಆ ಸಮುದಾಯಗಳನ್ನು ನಿರ್ಲಕ್ಷಿಸುತ್ತ ಬಂದಿರುವುದು ಚರಿತ್ರೆಯಲ್ಲಿನ ನಗ್ನಸತ್ಯ. ಎಂಬುದನ್ನು ದೇವನೂರ ಮಹಾದೇವ ಅವರು 'ಎದೆಗೆ ಬಿದ್ದ ಅಕ್ಷರ' ಎಂಬ ತಮ್ಮ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಹಾಗೆಯೇ ಮೂಲತಃ ದ್ರಾವಿಡರ ದೈವಗಳಾಗಿದ್ದ ತಿರುಪತಿ ತಿಮ್ಮಪ್ಪ, ಮಲೆಯ ಮಾದೇಶ್ವರ, ಶ್ರೀಶೈಲದ ಮಲ್ಲಿಕಾರ್ಜುನ (ಮಲ್ಲಯ್ಯ), ಹಂಪೆಯ ವಿರೂಪಾಕ್ಷ ಮುಂತಾದ ದೈವಗಳ ಇಂದಿನ ಸ್ಥಿತಿಯು ಗೊತ್ತಿರುವುದೇ ಆಗಿದೆ. ಅದೇನೆ ಇದ್ದಾಗ್ಯೂ ಕೂಡ ಇಂದಿಗೂ ಈ ದೈವಗಳಿಗೆ ನಡೆದುಕೊಳ್ಳುವ, ಆರಾಧಿಸುವ ಸಮುದಾಯಗಳು ಇವೆ ಎಂಬುದು ನಿರ್ವಿವಾದ ಸಂಗತಿಯಾಗಿದೆ.

ಪ್ರಾರಂಭಿಕ ಹಂತದಿಂದಲೂ ಕುರುಬ ಸಮುದಾಯದ ಜೀವನ ಕ್ರಮ ನಂಬುಗೆ, ಆಚರಣೆ, ಪಾರಂಪರಿಕ ಜ್ಞಾನವನ್ನು ವಿದೇಶಿಯರ ದಾಳಿಗಳು ಮತ್ತು ಬೌದ್ಧ, ಜೈನ, ಕ್ರೈಸ್ತ, ಇಸ್ಲಾಂ ಧರ್ಮಗಳ ಪ್ರಭಾವಗಳಿಗೆ ಒಳಗಾಗದೇ ತಮ್ಮತನವನ್ನು ಉಳಿಸಿ-ಬೆಳಸಿಕೊಂಡು ಬಂದಿರುವುದು ಸೋಜಿಗವೆನಿಸುತ್ತದೆ. ಇಂತಹ ಅಲಕ್ಷಿತ ಸಮುದಾಯಗಳ ಕುರಿತು ೧೯ನೆಯ ಶತಮಾನದಿಂದ ಈಚೆಗೆ ಅಧ್ಯಯನಗಳು ನಡೆಯುತ್ತಿವೆ. ಆ ಮೂಲಕ ಇತಿಹಾಸ, ಪುರಾಣ, ಮೌಖಿಕ ಜ್ಞಾನಗಳ ಸಂಶೋಧನೆ, ವ್ಯಾಖ್ಯಾನಗಳು ಆರಂಭವಾದವು. Gurutav Opert ಅವರ Original Inhabitant

in India, Thurston ಅವರ Tribes and Castes in Southern India, R.S.Enthovar ಅವರ Tribes and Castes in Bombay ಮುಂತಾದ ಕೃತಿಗಳು, ರಾಜ್ಯ ಸರ್ಕಾರಗಳು ಪ್ರಕಟಿಸಿದ ವರದಿಗಳು ಈ ಬಗ್ಗೆ ಬೆಳಕು ಚೆಲ್ಲಿದವು. ಜೊತೆಗೆ ಶಂಬಾ ಜೋಷಿ ಅವರ ಸಂಶೋಧನ ಬರಹಗಳು, ಶ್ಯಾಂ ಸಿಂಗ್ ಶಶಿ ಅವರ Sheperds in India ಕೃತಿ, ವಿ.ಆರ್. ಹನುಮಂತಯ್ಯ ಅವರ ಭಾರತದ ಕುರುಬರ ಚರಿತ್ರೆ ಮುಂತಾದ ಕೃತಿಗಳು ಸಮುದಾಯದ ಇತಿಹಾಸವನ್ನು ತಿಳಿಸುವುದರ ಜೊತೆಗೆ ಸಾಂಸ್ಕೃತಿಕ ಪರಂಪರೆಯನ್ನು ಗ್ರಹಿಸಲು ಸಹಾಯಕವಾಗಿವೆ.

ಭಾರತದ ಭೂಪ್ರದೇಶದಲ್ಲಿ ಕುರುಬ ಸಮುದಾಯ ವಿವಿಧೆಡೆ ಬೇರೆ ಬೇರೆ ಹೆಸರುಗಳಿಂದ ಕರೆಯಿಸಿಕೊಳ್ಳುತ್ತ ಜೀವಿಸುತ್ತ ಬಂದಿದೆ. ಭಾರತದ ಚರಿತ್ರೆಯಲ್ಲಿ ಪ್ರಾಚೀನ ಜನಾಂಗವಾದ ಇದು ಅನೇಕ ಸಾಮ್ರಾಜ್ಯಗಳನ್ನು ಕಟ್ಟಿ ಬೆಳಸಿದ ಸಮುದಾಯ. ಯಜುರ್ವೇದದ ೩೦ನೆಯ ಅಧ್ಯಾಯದಲ್ಲಿ ಕೆಲವು ಹೆಸರುಗಳ ಪಟ್ಟಿಯಿದೆ. ೬೩ನೆಯ ಗೋಪಾಲ ಅಂದರೆ ದನಕಾಯುವವನು, ೬೪ನೆಯದು ಅಭಿಯಾಲ ಅಂದರೆ ಕುರುಬ ಅಥವಾ ಕುರಿಕಾಯುವವ, ೬೫ನೆಯದು ಅಜಪಾಲ ಅಂದರೆ ಹೋತ(ಮೇಕೆ) ಕಾಯುವವನು. ಈ ಮೂರು ಹೆಸರುಗಳಿಗೆ ಗಡಾರಿಯ ಎಂದು ಕರೆಯಲಾಗುತ್ತದೆ. ವೇದಕಾಲದ ಶಬ್ದಗಳಾದ ಇವನ್ನು ಕಾಲಾಂತರದಲ್ಲಿ ಅಹಿರ್, ಗುಜಾರ್ ಎಂದು ಏಕರೂಪ ಅರ್ಥದಲ್ಲಿ ಬಳಸಲಾಯಿತು.

ಸಂಸ್ಕೃತ ಭಾಷೆಯಲ್ಲಿ ಪಾಲ್ ಎಂಬ ಶಬ್ದಕ್ಕೆ ಕುರುಬ ಎಂಬ ಅರ್ಥವಿದೆ. ನೇಪಾಳ, ಸಿಕ್ಕಿಂ ಹಾಗೂ ಟಿಬೆಟ್ ಭಾಷೆಗಳಲ್ಲಿ ಪಾಲ್ ಎಂದರೆ ಹೋಲ್(ಹೋತ). ಉತ್ತರ ಭಾರತದಲ್ಲಿ ಬೆಟ್ಟ-ಗುಡ್ಡಗಳ ಅರಣ್ಯ ಪ್ರದೇಶಗಳು ಹೆಚ್ಚಾಗಿರುವ ಜಲಾನಯದ ಪ್ರದೇಶಗಳಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ. ದಕ್ಷಿಣ ಭಾರತದಲ್ಲಿ ಮಹಾರಾಷ್ಟ್ರ, ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡುಗಳಲ್ಲಿ ಅವರನ್ನು ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಇಲ್ಲಿ ಅವರ ನಂಬಿಕೆ, ಸಂಪ್ರದಾಯ, ದೈವಿಕ ಆಚರಣೆಗಳಲ್ಲಿ ಕೆಲ ಭಿನ್ನತೆಗಳು ಇದ್ದರೂ ಸಾಮ್ಯತೆಗಳಿಂದ ಕೂಡಿವೆ. "ಕನ್ನಡ, ಮರಾಠಿ, ತೆಲುಗು, ತಮಿಳು, ಮಲೆಯಾಳಿ ಭಾಷೆಗಳ ಮೂಲವಾಸಿಗಳು ಮಲೆಯ(ಕುರುಬ)ರೆ ಆಗಿರುವರು. ಮಲಬಾರ ಕುರುಂಬರ ನಾಡೆಂದು ಹೆಸರುವಾಸಿಯಾಗಿತ್ತು. ಇವರ ಪ್ರಾಚೀನತೆಯನ್ನು ಬಿಂಬಿಸುವ ಹೆಸರು, ಗ್ರಾಮ, ಪ್ರದೇಶಗಳು ಎಲ್ಲೆಡೆಯೂ ಲಭ್ಯವಾಗುವವು."[೨] ಹೀಗೆ ಕುರುಬ ಸಮುದಾಯದ ಚಹರೆಗಳನ್ನು ಗುರುತಿಸುವ ಸಂದರ್ಭದಲ್ಲಿ ನಮಗೆ ಮುಖ್ಯವಾಗಿ ಗೋಚರಿಸುವ ಅಂಶಗಳು ಈ ಸಮುದಾಯ ಹೆಚ್ಚಾಗಿ ಅರಣ್ಯ(ಕಾಡು-ಬೆಟ್ಟಗುಡ್ಡ) ಪ್ರದೇಶ ಮತ್ತು ಜಲಾನಯನ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡುಬರುವುದು. ಅದರಲ್ಲಿಯೂ ಕರ್ನಾಟಕ ಮತ್ತು ಆಂಧ್ರಪ್ರದೇಶದಲ್ಲಿ ಹೆಚ್ಚಾಗಿದ್ದು, ಅಲ್ಲಿನ ಸಾಂಸ್ಕೃತಿಕ ಚರಿತ್ರೆಯಲ್ಲಿ ತನ್ನದೇ ಆದ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ.

ಪ್ರಾಚೀನ ಕಾಲಘಟ್ಟದಲ್ಲಿ ಭೂಮಿ ಮತ್ತು ಜಲ ಸಾರ್ವಜನಿಕ ಆಸ್ತಿಯಂತಿದ್ದದ್ದು, ಕಾಲದಿಂದ ಕಾಲಕ್ಕೆ ಬೇಟೆಗಾರಿಕೆ, ಪಶುಪಾಲನೆ ಭೂಮಿಯ ಮೇಲೆ ಸ್ವಚ್ಛಂದವಾಗಿ ಸಾಗುತ್ತಿದ್ದದ್ದು, ಕೃಷಿಯ ಚಟುವಟಿಕೆಗಳು ಆಧುನಿಕತೆಯತ್ತ ಸಾಗಿದಂತೆಲ್ಲ ಭೂ ಒಡೆತನ ಜಾರಿಗೆ ಬಂದಿತು. ರಾಜ ಮಹಾರಾಜರು ಕೃಷಿಯ ಜೊತೆಗೆ ಪಶುಪಾಲನೆಗಾಗಿಯೇ ಕೆಲ ಸೀಮಿತ ಪ್ರದೇಶಗಳನ್ನು ಗೋಮಾಳ, ಕಾಯ್ದಿರಿಸಿದ ಹುಲ್ಲುಗಾವಲುಗಳೆಂದು ವಿಂಗಡಿಸಿದ್ದರು. ಕರ್ನಾಟಕದಲ್ಲಿ ವಿಜಯನಗರದ ಅರಸರು ಪಶುಪಾಲನೆಗಾಗಿ ಇಂತಹ ಭೂಮಿಯನ್ನು ಬಿಟ್ಟಿರುವುದನ್ನು ಕಾಣತ್ತೇವೆ. 'ಪಶುಪಾಲನೆ ವಿಜಯನಗರ ಕಾಲದಲ್ಲಿ ಬಹು ಲಾಭದಾಯಕ ವೃತ್ತಿಯಾಗಿತ್ತು. ಪಶುಗಳ ಸಗಣಿ ಹಾಗೂ ಹಾಲಿನ ಉತ್ಪನ್ನಗಳು ಗ್ರಾಮೀಣರ ಆರ್ಥಿಕ ಮಟ್ಟವನ್ನು ಸುಧಾರಿಸಿತ್ತು. ಈ ಭಾಗದ ತುಂಗಭದ್ರ ಮತ್ತು ವೇದಾವತಿ ನದಿಯ ಮಧ್ಯದಲ್ಲಿರುವ ಪ್ರದೇಶದಲ್ಲಿ ಸಾಕಷ್ಟು ಹುಲ್ಲುಗಾವಲು, ಕೆರೆಕಟ್ಟೆ, ಬೆಟ್ಟಗುಡ್ಡ ಪ್ರದೇಶಗಳು ಪಶುಪಾಲನೆಯ ನೆಲೆಗಳಾಗಿ ಕಂಡುಬರುತ್ತವೆ. ಈ ಅಧ್ಯಯನವು ಪಶುಪಾಲನ ಸಮುದಾಯಗಳಲ್ಲಿ ಒಂದಾದ ಕುರುಬ ಸಮುದಾಯದ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ, ಜನಪದೀಯ ಅಂಶಗಳನ್ನು ಒಳಗುಮಾಡಿಕೊಂಡು ವೇದಾವತಿ ನದಿ ಮತ್ತು ತುಂಗಭದ್ರ ನದಿಯ ಗಡಿಯಲ್ಲಿ ವಾಸಿಸುತ್ತಿರುವ ಸಮುದಾಯದ ಚಹರೆಗಳನ್ನು ಗುರುತಿಸುವುದು. ಹಾಗೆಯೇ ಅಲ್ಲಿನ ಜನಸಮುದಾಯಗಳ ಸಾಂಸ್ಕೃತಿಕ ಬದುಕನ್ನು ಇಡಿಯಾಗಿ ಕಟ್ಟಿಕೊಡುವುದಾಗಿದೆ.

**ಕೊನೆಟಿಪ್ಪಣಿಗಳು**

೧. ಕನ್ನಡ ನಿಘಂಟು, ಸಂ-೮, ಪು. ೮೨೭೩.

೨. ಅಮುಚವಾಡಿ ಅರಸ್(ಅನು), ಆಫ್ರಿಕಾದ ಧರ್ಮ ಮತ್ತು ಸಂಸ್ಕೃತಿ ಒಂದು ಅವಲೋಕನ, ಪು. ೯೩.

೩. ತಪಸ್ವೀಕುಮಾರ್ ನಂ., ಸಂಸ್ಕೃತಿ ಅಧ್ಯಯನ, ಪು. ೪.

೪. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ, ಪು. ೩.

೫. ಶಿವಣ್ಣ ಡಿ.ಕೆ., ಮಾನವಶಾಸ್ತ್ರ, ಪು. ೫೦-೫೧.

೬. ಇಂಟರ್‌ನ್ಯಾಷನಲ್ ಎನ್‌ಸೈಕ್ಲೊಪೀಡಿಯಾ ಆಫ್ ದಿ ಸೋಷಿಯಲ್ ಸೈನ್ಸಸ್, ಸಂ-೭, ಪು. ೯.

೭. ದಿ ಸ್ಟೋನ್ ಏಜ್ ಇನ್ ಇಂಡಿಯಾ, ಪು. ೧೧.

೮. ವಿರೂಪಾಕ್ಷ ಪೂಜಾರಹಳ್ಳಿ, ಬೇಟೆ ಮತ್ತು ಬೇಡರು, ಪು. ೨೬.

೯. ಸಮಗ್ರ ಭಾರತ ದರ್ಶನ, ಪು. ೧೨.

೧೦. ಮೇತ್ರಿ ಕೆ.ಎಂ., ಬುಡಕಟ್ಟು ಕುಲಕಸುಬುಗಳು, ಪು. ೦೮.

೧೧. ಶರ್ಮ ಆರ್.ಎಸ್., ಪ್ರಾಚೀನ ಭಾರತ, ಪು. ೩೨.

೧೨. ಅದೇ: ಪು. ೪೯(ಕುಮ್ರಿ ಬೇಸಾಯ ಅಂದರೆ ಅಡವಿಯಲ್ಲಿ ಒಂದು ಜಾಗ ಆಯ್ದು ಅಲ್ಲಿನ ಮರಗಿಡ ಪೊದೆಗಳಿಗೆಲ್ಲ ಬೆಂಕಿಯಿಕ್ಕಿ ಸುಟ್ಟು, ಬಿದ್ದ ಬೂದಿಯಲ್ಲಿ ಧಾನ್ಯ ಬೆಳೆಯುವ ಪದ್ಧತಿ).

೧೩. ಕೊಸಾಂಬಿ ಡಿ.ಡಿ., ವೇಣುಗೋಪಾಲ್, ಟಿ.ಎಸ್. ಶೈಲಜಾ(ಅನು), ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆ: ಚಾರಿತ್ರಿಕ ರೂಪುರೇಷೆ, ಪು. ೭೧.

೧೪. ಅದೇ, ಪು. ೭೫('ಹಿಡ' ಎಂದರೆ ಪ್ರಾಯಕ್ಕೆ ಬಂದ ಹೋರಿ ಮತ್ತು ಟಗರುಗಳ ಬೀಜ ಕಸಿ ಮಾಡುವುದು ಅಥವಾ ವೀರ್ಯ ಕುಂದಿಸುವುದು ಎಂದರ್ಥ).

೧೫. ಚಂದ್ರಕಾಂತ ಬಿಜ್ಜರಗಿ, ಕುರುಬರ ಹೆಜ್ಜೆಗಳು(ಎಚ್.ಜೆ. ಲಕ್ಕಪ್ಪಗೌಡ ಅವರು ಬರೆದ ಮುನ್ನುಡಿಯಿಂದ), ಪು. ೯.

೧೬. ಪೂರ್ವೋಕ್ತ, ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆ ಚಾರಿತ್ರಿಕ ರೂಪುರೇಷೆ, ಪು. ೨೬.

೧೭. ಅದೇ, ಪು. ೨೨.

೧೮. ಪೂರ್ವೋಕ್ತ, ಬುಡಕಟ್ಟು ಕುಲಕಸುಬುಗಳು, ಪು. ೧೦.

೧೯. ಶಂಕರನಾರಾಯಣ ತೀ.ನಂ., ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಪು. ೨೨.

೨೦. ಗುಂಡಕರ್ಜಗಿ(ಸಂ), ಯಲ್ಲನಗೌಡ ಫ. ಅತ್ತಿಕೊಳ, ಹಾಲುಮತದ ಚರಿತ್ರೆ, ಪು. ೩.

೨೧. ಶಿವಾನಂದ ಗುಬ್ಬಣ್ಣವರ, ಕರ್ನಾಟಕದ ಕುರುಬರು, ಪು. ೧೨.

೨೨. ಪೂರ್ವೋಕ್ತ, ಆಫ್ರಿಕದ ಧರ್ಮ ಮತ್ತು ಸಂಸ್ಕೃತಿ ಒಂದು ಅವಲೋಕನ, ಪು. ೫೮–೫೯.

೨೩. ಮಲ್ಲೆಪುರಂ ಜಿ. ವೆಂಕಟೇಶ(ಸಂ), ಶಂಬಾ ಕೃತಿ ಸಂಪುಟ, ಕರ್ನಾಟ ಸಂಸ್ಕೃತಿ–೩, ಪು. ೨೫೧.

೨೪. ಅದೇ, ಪು. ೨೫೨.

೨೫. ಮೇತ್ರಿ ಕೆ.ಎಂ., ಹಾಲಕೆನೆ(ಕುರುಬ ಜನಾಂಗದ ಮೂಲ), ಪು. ೪.

೨೬. ಮಮೋರಿಯ ಸಿ.ಬಿ., ಪು. ೧೯೯–೨೦೮.

೨೭. ರವಿ ಬಿ.ಕೆ.(ಅನು), ಭಾರತದ ಕುರುಬರು, ರಾಜಪರಂಪರೆಯ ಬುಡಕಟ್ಟು, ಪು. ೩೪.

೨೮. ಪೂರ್ವೋಕ್ತ, ಹಾಲಕೆನೆ(ಕುರುಬ ಜನಾಂಗದ ಮೂಲ), ಪು. ೪.

# ಅಧ್ಯಾಯ ಮೂರು

# ಕರ್ನಾಟಕ–ಆಂಧ್ರಪ್ರದೇಶದ ಗಡಿನಾಡ ಕುರುಬ ಸಮುದಾಯ: ಭೌತಿಕ ಅಧ್ಯಯನ

೩.೧. ಸಾಮಾಜಿಕ ಸಂಬಂಧಗಳು

- ೩.೧.೧. ಬೆಡಗುಗಳು
- ೩.೧.೨. ಬಂಧುತ್ವ
- ೩.೧.೩. ಜೀವನಾವರ್ತನಾ ಆಚರಣೆಗಳು
- ೩.೧.೪. ನ್ಯಾಯ ಪದ್ಧತಿ

೩.೨. ಆರ್ಥಿಕ ಸ್ಥಿತಿಗತಿ

- ೩.೨.೧. ಕುರಿ ಸಾಕಾಣಿಕೆ
- ೩.೨.೨. ಕಂಬಳಿ ನೇಯ್ಗೆ
- ೩.೨.೩. ಕೃಷಿ

೩.೩. ರಾಜಕೀಯ ಸಂಘಟನೆ

೩.೪. ಶೈಕ್ಷಣಿಕ ಸ್ಥಿತಿಗತಿ

# ಅಧ್ಯಾಯ ಮೂರು

# ಕರ್ನಾಟಕ–ಆಂಧ್ರಪ್ರದೇಶದ ಗಡಿನಾಡ ಕುರುಬ ಸಮುದಾಯ: ಭೌತಿಕ ಅಧ್ಯಯನ

ಗಡಿನಾಡು ಎನ್ನುವುದು ಒಂದು ವಿಶಿಷ್ಟ ವಲಯ. ಭೌಗೋಳಿಕವಾಗಿ ಒಂದು ನಿರ್ದಿಷ್ಟ ಪ್ರದೇಶದ ಕಟ್ಟಕಡೆಯ ಸ್ಥಳಗಳನ್ನು ಗಡಿನಾಡೆಂದು ಗುರುತಿಸಲಾಗಿದೆ. ದೇಶಗಳ ಮಧ್ಯೆ, ರಾಜ್ಯಗಳ ಮಧ್ಯೆ ಗಡಿಗಳಿವೆ. ಗಡಿಯ ಕುರಿತು ಸಾಕಷ್ಟು ಗೊಂದಲಗಳು, ವಾದ–ವಿವಾದಗಳು ನಡೆದಿವೆ; ನಡೆಯುತ್ತಲಿವೆ. ನಮ್ಮ ಭಾರತವು 'ಜಂಬೂದ್ವೀಪ' ಎಂದು ಕರೆಯಿಸಿಕೊಳ್ಳುತ್ತಿದ್ದು, ಪೂರ್ವ–ಪಶ್ಚಿಮ ಮತ್ತು ದಕ್ಷಿಣದಲ್ಲಿ ಸಮುದ್ರಗಳನ್ನು, ಉತ್ತರದಲ್ಲಿ ಚೀನಾ, ನೇಪಾಳ, ಟಿಬೇಟ್ ದೇಶಗಳು, ವಾಯುವ್ಯದಲ್ಲಿ ಪಾಕಿಸ್ತಾನ, ಅಫಘಾನಿಸ್ತಾನ ದೇಶಗಳು, ಈಶಾನ್ಯದಲ್ಲಿ ಬರ್ಮಾ, ಬಾಂಗ್ಲಾದೇಶ, ಬೂತಾನ್‌ಗಳೊಂದಿಗೆ ಗಡಿ ಹಂಚಿಕೊಡಿದೆ. ಅದರಂತೆಯೇ ಕರ್ನಾಟಕದ ಭೌಗೋಳಿಕ ವ್ಯಾಪ್ತಿಯು ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿದೆ. ಕವಿರಾಜಮಾರ್ಗಕಾರ ಹೇಳಿದ ಕಾವೇರಿಯಿಂದ ಗೋದಾವರಿಯವರೆಗಿನ ಕನ್ನಡನಾಡು ಇಂದು ಭೌಗೋಳಿಕವಾಗಿ ಉಳಿದಿಲ್ಲ. ಆದರೆ ಅದರ ಅಸ್ತಿತ್ವವನ್ನು ಕರ್ನಾಟಕದಿಂದ ಹೊರಗೆ ಉಳಿದಿರುವ ಸ್ಥಳಗಳಲ್ಲಿನ ಶಾಸನಗಳು, ಅಲ್ಲಿನ ಜನರ ಮಾತೃಭಾಷಾ ಬಳಕೆಯಲ್ಲಿ ನೋಡಬಹುದು. ಸ್ವಾತಂತ್ರ್ಯ ನಂತರ ೧೯೫೬ರಲ್ಲಿ ಭಾಷಾವಾರು ದೃಷ್ಟಿಯಿಂದ ಭಾರತವನ್ನು ರಾಜ್ಯಗಳಾಗಿ ವಿಂಗಡಿಸಲಾಯಿತು. ಹೀಗೆ ಹಂಚಿಕೆಯಾದ ಕರ್ನಾಟಕದೊಂದಿಗೆ ತಮಿಳುನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರ, ಗೋವಾ, ಕೇರಳ ರಾಜ್ಯಗಳು ಗಡಿ ಹೊಂದಿರುವ ಮೇರೆಗಳು. ಹಂಚಿಕೆಯಾದ ಸಂದರ್ಭದಲ್ಲಿ ನಮ್ಮ ರಾಜ್ಯದ ಅನೇಕ ಪ್ರಾಂತ್ಯಗಳು ಬೇರೆ ರಾಜ್ಯಗಳಿಗೆ ಸೇರಿವೆ. ಉದಾಹರಣೆಗೆ ಕೇರಳಕ್ಕೆ ಕಾಸರಗೋಡು, ತಮಿಳುನಾಡಿಗೆ ಹೊಸೂರು, ಧರ್ಮಪುರಿ ಜಿಲ್ಲೆಯ ಕೆಲ ಭಾಗಗಳು, ಮಹಾರಾಷ್ಟ್ರಕ್ಕೆ ಕೊಲ್ಲಾಪುರ, ಸೊಲ್ಲಾಪುರ ಜಿಲ್ಲೆಯಲ್ಲಿನ ಕೆಲ ಪ್ರದೇಶಗಳು, ಆಂಧ್ರಪ್ರದೇಶ, ಮಡಕಸಿರಾ, ಹಿಂದೂಪುರಂ, ಕಲ್ಯಾಣದುರ್ಗಂ, ರಾಯದುರ್ಗಂ,

ಗುಂತಕಲ್ಲು, ಆದೋನಿಯಂತಹ ಪ್ರದೇಶಗಳು ಕರ್ನಾಟಕದಿಂದ ಹೊರಗುಳಿದವು. ಕರ್ನಾಟಕವು ೫೨ ತಾಲೂಕುಗಳನ್ನು ಗಡಿ ತಾಲೂಕುಗಳೆಂದು ಗುರುತಿಸಿದೆ. ಅವುಗಳಲ್ಲಿನ ಆಂಧ್ರಪ್ರದೇಶ, ತೆಲಂಗಾಣದ ಗಡಿಗೆ ೧೫ ತಾಲೂಕುಗಳು ಗಡಿಗಂಟಿಕೊಂಡಿವೆ.

**೩.೧. ಸಾಮಾಜಿಕ ಸಂಬಂಧಗಳು**

ಪ್ರಸ್ತುತ ಅಧ್ಯಯನವು ಕರ್ನಾಟಕಾಂಧ್ರ ಗಡಿನಾಡಿನಲ್ಲಿ ನೆಲೆಸಿರುವ ಕುರುಬ ಸಮುದಾಯ ಮತ್ತು ಅದರ ಸಂಸ್ಕೃತಿಯನ್ನು ಕುರಿತದ್ದು. ಅದರಲ್ಲಿಯೂ ತುಂಗಭದ್ರ ಮತ್ತು ವೇದಾವತಿ ನದಿಗಳ ನಡುವಿನ ಪ್ರದೇಶಗಳಲ್ಲಿನ ಸಮುದಾಯದ ಚಹರೆಗಳನ್ನು ಕರ್ನಾಟಕದ ಇತರೆಡೆಯಲ್ಲಿನ ಸಮುದಾಯದ ಸಾಂಸ್ಕೃತಿಕ ಸಂಗತಿಗಳೊಂದಿಗೆ ತುಲನಾತ್ಮಕವಾಗಿ ನೋಡುವುದಾಗಿದೆ. ಹಾಗೆಯೇ ಇತರ ಸಮುದಾಯಗಳೊಂದಿಗೆ ಈ ಸಂಸ್ಕೃತಿಯನ್ನು ಅದರ ವೈಶಿಷ್ಟ್ಯವನ್ನು ಕಟ್ಟಿಕೊಡುವುದಾಗಿದೆ. ಆ ಮುಖೇನ ಇಲ್ಲಿ ನೆಲೆನಿಂತ ಸಮುದಾಯದ ಸಾಮಾಜಿಕ, ಆರ್ಥಿಕ, ಧಾರ್ಮಿಕ ನಂಬುಗೆ, ಆಚರಣೆಗಳು, ರಾಜಕೀಯ, ಶೈಕ್ಷಣಿಕ, ಕಲೆ–ಸಾಹಿತ್ಯ, ಜನಪದದಂಥ ಸಾಂಸ್ಕೃತಿಕ ಸಂಗತಿಗಳನ್ನು ಗುರುತಿಸಿ ವಿಶ್ಲೇಷಣೆಗೊಳಪಡಿಸುದಾಗಿದೆ. ಈ ಪ್ರದೇಶದಲ್ಲಿ ಕುರುಬರಂತೆಯೇ ಗೊಲ್ಲ, ಬೇಡ, ಲಿಂಗಾಯತ, ರೆಡ್ಡಿ, ಕಮ್ಮಾರ, ಕುಂಬಾರ, ಮಾದಿಗರಂಥ ಸಾಕಷ್ಟು ಜನಸಮುದಾಯಗಳು ನೆಲೆಸಿವೆ. ಇದು ಬಯಲುಸೀಮೆ(ತೆಲುಗಿನಲ್ಲಿ ರಾಯಲ ಸೀಮ ಎನ್ನುವರು)ಯಾದ್ದರಿಂದ ಮಳೆಯನ್ನೇ ಆಶ್ರಯಿಸಿ ಪಶುಪಾಲನೆ ಮತ್ತು ಕೃಷಿಯನ್ನು ಅದರಲ್ಲಿಯೂ ಬೆದ್ದಲುಭೂಮಿಯನ್ನೇ ಆಶ್ರಯಿಸಿ ಉತ್ತು–ಬಿತ್ತು ಬೇಸಾಯ ಮಾಡಿ ಬದುಕಬೇಕಾದ ಅನಿವಾರ್ಯತೆಯಿದೆ. ಈ ಪ್ರದೇಶ ಗುಡ್ಡ ಗಾಡು, ಕುರುಚಲು ಅರಣ್ಯ, ಸಮತಟ್ಟಲ್ಲದ ಭೂಮಿಯನ್ನು ಹೊಂದಿದ್ದು ಕೃಷಿಯೊಂದನ್ನೇ ಅವಲಂಬಿಸಿ ಬದುಕು ಸಾಗಿಸುವುದು ಅಸಾಧ್ಯವಾದುದು. ಹಾಗಾಗಿಯೇ ಇಲ್ಲಿನ ಕುರುಬ, ಗೊಲ್ಲ ಮತ್ತು ಬೇಡ ಸಮುದಾಯಗಳಿಗೆ ಕೃಷಿಯ ಜೊತೆಗೆ ಪಶುಪಾಲನೆಯು ಮುಖ್ಯ ಕಸುಬಾಗಿದೆ. ಅದರಲ್ಲಿಯೂ ಕುರಿ ಸಾಕಾಣಿಕೆಯು ಪ್ರಧಾನ ವೃತ್ತಿಯಾಗಿದೆ. ಹಾಗಾಗಿ ಇಲ್ಲಿನ ಸಮುದಾಯಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪಶುಪಾಲಕ ಸಮುದಾಯಗಳವರಿದ್ದಾರೆ. ಇಂಥ ಪಶುಪಾಲಕ ಸಮುದಾಯ ಗಳಲ್ಲಿ ಒಂದಾದ ಕುರುಬ ಸಮುದಾಯದ ಸಾಮಾಜಿಕ ಸಂಬಂಧಗಳು, ಆರ್ಥಿಕ ಸ್ಥಿತಿಗತಿ, ರಾಜಕೀಯ ಸಂಘಟನೆ, ಶೈಕ್ಷಣಿಕ ಸ್ಥಿತಿಗತಿ ಎಂಬ ಅಂಶಗಳನ್ನು ಕುರಿತಾಗಿ ಕ್ಷೇತ್ರಕಾರ್ಯ ಮುಖೇನ ಸಂಗ್ರಹಿಸಿ ತಂದ ಮಾಹಿತಿ ಮತ್ತು ಪೂರಕ ಆಕರ ಸಾಮಗ್ರಿಗಳನ್ನು ಬಳಸಿಕೊಂಡು ಚರ್ಚೆಗೊಳಪಡಿಸಲಾಗಿದೆ.

ಮಾನವ ಸಂಘಜೀವಿ, ಸಮಾಜಜೀವಿ. ಅವನು ಒಂಟಿಯಾಗಿ ಜೀವಿಸಲಾರ. ವ್ಯಕ್ತಿ ವ್ಯಕ್ತಿಗಳ ನಡುವಿನ ಒಡನಾಟ ಅವಶ್ಯವಾಗಿದ್ದು, ಅವನ ಬೇಡಿಕೆಗಳು ಸಮೂಹದಲ್ಲಿ ಬದುಕಲು ಪ್ರೇರೇಪಿಸುತ್ತವೆ. ಈ ಸಮೂಹಗಳಲ್ಲಿ ಸಾಮಾಜಿಕ ಕ್ರಿಯೆ, ಅಂತರ್‌ಕ್ರಿಯೆಗಳಿಂದ ಸಮಾಜ ರಚನೆಯಾಗಿರುತ್ತದೆ. ಹಾಗಾಗಿ ಮಾನವನು ತನ್ನದೆ ಆದಂತಹ ಸಾಮುದಾಯಿಕ ಭಾವನೆಗಳಿಗೆ ಸ್ಪಂದಿಸುವ ಜನಸಮೂಹಗಳ

ಚೌಕಟ್ಟಿನಲ್ಲಿ ಸುಖ-ಸಂತೋಷದಿಂದ ಬದುಕುತ್ತಿದ್ದಾನೆ. ಈ ಸಾಮೂಹಿಕ ಭಾವನೆಗಳು ಕಾಲದಿಂದ ಕಾಲಕ್ಕೆ ತಲೆಮಾರಿನಿಂದ ತಲೆಮಾರಿಗೆ ಸಾಗಿಸಿಕೊಂಡು ಬಂದಂತಹ, ಆಚರಣೆ ಸಂಪ್ರದಾಯಗಳು ವಿಶಿಷ್ಟ ಉದ್ದೇಶವನ್ನು ಹೊಂದಿದ್ದು, ಅವು ಸಾಮೂಹಿಕ ಜೀವನಕ್ಕೆ ಪ್ರೇರೇಪಿಸುವ ರೂಢಿ ಅಥವಾ ಪದ್ಧತಿಗಳು ಎನ್ನಬಹುದು. ಪ್ರತಿಯೊಂದು ಸಮುದಾಯ ತಾನು ಬಾಳುವ ಪರಿಸರ, ಆಯ್ದುಕೊಂಡ ಉದ್ಯೋಗ, ಒಡನಾಡಿ ಜನರೊಂದಿಗೆ ವ್ಯವಹರಿಸುವ ರೀತಿಗಳಿಗೆ ಅನುಗುಣವಾಗಿ ಆಹಾರ ಪದ್ಧತಿ, ಉಡುಗೆ-ತೊಡುಗೆ, ಆಚಾರ-ವಿಚಾರ, ನಂಬಿಕೆ-ಸಂಪ್ರದಾಯಗಳನ್ನು ಬೆಳೆಸಿಕೊಂಡು ಬಂದಿರುತ್ತದೆ. ತನ್ನ ನಂಬುಗೆಗಳಿಗೆ ಅನುಸಾರವಾಗಿ ಸಾಮಾಜಿಕ, ಧಾರ್ಮಿಕ, ವಿಧಾನಗಳನ್ನು ಆಚರಣೆಗೆ ತಂದಿರುತ್ತದೆ. ಈ ಹಿನ್ನೆಲೆಯಲ್ಲಿಯೇ ಸಮುದಾಯಗಳ ಸಂಸ್ಕೃತಿ ರೂಪುಗೊಂಡಿರುತ್ತದೆ. ಅದರಂತೆಯೇ ಪ್ರತಿಯೊಂದು ಸಮುದಾಯವು ತಮ್ಮ ಮೂಲ ಸಂಸ್ಕೃತಿಯ ಚಹರೆಗಳನ್ನು ಸಾಧ್ಯವಾದಷ್ಟು ಯಥಾವತ್ತಾಗಿ ಕಾಪಾಡಿಕೊಂಡು ಬಂದಿರುತ್ತದೆ. ಈ ಆಚರಣಾ ವಿಧಾನಗಳೇ ಸಮುದಾಯವನ್ನು ಒಂದು ಹೆಸರಿನಿಂದ ಗುರುತಿಸಲು ಸಹಕಾರಿಯಾಗುವುದು. "ಕಾಲಾನುಕ್ರಮವಾಗಿ ಇವುಗಳ ಬಾಹ್ಯ ಸ್ವರೂಪದಲ್ಲಿ ಬದಲಾವಣೆಯಾದರೂ ಮೂಲತತ್ವ ಸತ್ವ ಹಾಗೆಯೇ ಉಳಿದು ಬಂದಿರಲು ಕಾರಣವಾಗಿದ್ದು ಹಲವಾರು ಸಾಮಾಜಿಕ, ಧಾರ್ಮಿಕ ಸಂಪ್ರದಾಯಗಳು ಇಂತಹವೇ ಆಗಿವೆ."[೧] ಪ್ರತಿಯೊಂದು ಸಮುದಾಯವು ನೆಲಮೂಲ ಸಂಸ್ಕೃತಿಯಿಂದ ತಮ್ಮ ಚಹರೆಗಳನ್ನು ಗುರುತಿಸಿಕೊಳ್ಳುವಂತೆ ಕುರುಬ ಸಮುದಾಯವು ನೆಲಮೂಲದಿಂದಲೇ ಗುರುತಿಸಿಕೊಳ್ಳುವ ಈ ನಂಬುಗೆಗೆ ಹೊರತಾಗಿಲ್ಲ. ಪ್ರಾಚೀನ ಕಾಲದಿಂದಲೂ ಪಶುಪಾಲನೆ ಅದರಲ್ಲಿಯೂ ಕುರಿಸಾಕಾಣಿಕೆ, ಕಂಬಳಿ ನೇಯ್ಗೆ ಹಾಗೂ ಕೃಷಿಯನ್ನು ಪ್ರಧಾನ ವೃತ್ತಿಯಾಗಿಸಿಕೊಂಡು ಬಂದಿರುವ ಈ ಸಮುದಾಯ ತನ್ನದೇ ಆದ ಆಚರಣೆ, ನಂಬಿಕೆ, ಸಂಪ್ರದಾಯಗಳನ್ನು ಹೊಂದಿದೆ. ತನ್ನ ಮೂಲ ಸಂಸ್ಕೃತಿಯ ಸೊಗಡನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದು, ಆಚರಣೆ, ಸಂಸ್ಕಾರಗಳಲ್ಲಿ ಅಂತರಾಳದ ಜೀವಂತ ಮಿಡಿತವನ್ನು ಈಗಲೂ ಕಾಣಬಹುದಾಗಿದೆ.

ಕುರುಬ ಸಮುದಾಯವು ದೇಶದ ಉದ್ದಗಲಕ್ಕೂ ವ್ಯಾಪಿಸಿರುವ ಒಂದು ಪ್ರಾಚೀನ ಸಮುದಾಯ. ಕಾವೇರಿಯಿಂದ ಗಂಗಾನದಿಯವರೆಗೆ, ನೀಲಗಿರಿಯಿಂದ ರಾಜಮಹಲದವರೆಗೆ ವ್ಯಾಪಿಸಿರುವ ಈ ಕುರುಬರು ದ್ರಾವಿಡರು. ಇವರು ಆರ್ಯಪೂರ್ವ ಜನಾಂಗ ಎಂಬುದಾಗಿ ವಿದ್ವಾಂಸರು ತೀರ್ಮಾನಿಸಿದ್ದಾರೆ. "ದ್ರಾವಿಡರು ಕೂಡ ಭಾರತಕ್ಕೆ ಬೇರೆ ಕಡೆಯಿಂದ ಬಂದವರು ಎಂಬ ಅಭಿಪ್ರಾಯವಿದೆ. ಏನಿಲ್ಲವೆಂದರೂ ಆರೇಳು ಸಾವಿರ ವರ್ಷಗಳ ಸುದೀರ್ಘ ಇತಿಹಾಸವುಳ್ಳ ಈ ಜನಾಂಗ ಭಾರತದ ಹತ್ತಾರು ಕಡೆ ಹಂಚಿ ಹೋಗಿದೆ"[೨] ಎಂಬುದಕ್ಕೆ ಹಲವಾರು ನಿದರ್ಶನಗಳು ದೊರೆಯುತ್ತವೆ. ಪೂರ್ವದಲ್ಲಿ ಒಂದೇ ಬಳ್ಳಿ ಅಥವಾ ಬಳಿಯಂತಿದ್ದ ಸಮುದಾಯ ಬೆಳೆದಂತೆಲ್ಲ

ವಿವಿದೆಡೆ ಹಂಚಿಹೋಗಿ ಪ್ರಾದೇಶಿಕವಾಗಿ ಬೇರೆ ಬೇರೆ ಹೆಸರುಗಳಿಂದ ಗುರುತಿಸಿಕೊಳ್ಳುತ್ತಿದೆ. ಉದಾಹರಣೆಗೆ ಮಹಾರಾಷ್ಟ್ರದಲ್ಲಿ ಧನಗರರು ಎಂದು, ತಮಿಳುನಾಡಿನಲ್ಲಿ ಅಂದರ್, ಪುಡುವರ್, ಇಡೈಯರ್, ಕುರುಬರ್, ಕೆಳವರ್ ಎಂದೂ, ಆಂಧ್ರಪ್ರದೇಶದಲ್ಲಿ ಗೊಲ್ಲವಾಡು, ಯಾದವುಲು, ಕುರುಪು, ಕುರುಮ ಅಥವಾ ಕುರುಮವಾರು ಎಂಬುದಾಗಿ ಕರ್ನಾಟಕದಲ್ಲಿ ಹಾಲುಮತ, ಕುರುಬ, ಗೊಂಡಕುರುಬ, ಬೆಟ್ಟ ಕುರುಬ, ಜೇನುಕುರುಬ, ಒಡೆಯರು, ಕಾಡುಕುರುಬ ಎಂಬಿತ್ಯಾದಿ ಹೆಸರುಗಳಿಂದ ಕರೆಯುವರು. ಅದರಲ್ಲಿಯೂ ಕವಲುಗಳಾಗಿ ಇಂದು ಸಮುದಾಯವನ್ನು ಬೆಡಗುಗಳ ಮುಖೇನ ನೋಡಬೇಕಾಗಿದೆ.

**೩.೧.೧.ಬೆಡಗುಗಳು:** ಸಾಮಾನ್ಯವಾಗಿ ಬೆಡಗು ಎಂಬುದಕ್ಕೆ ಕುಲ, ಬಳಿ, ಗೋತ್ರ ಎಂಬ ಪದಗಳನ್ನು ಪರ್ಯಾಯವಾಗಿ ಬಳಸಲಾಗುತ್ತದೆ. ಮೊದಲಿಗೆ "ಕುರುಬರಲ್ಲಿ ನಲವತ್ತು ಗೋತ್ರಗಳಿದ್ದವು. ನಲ್ವತ್ತು ಗೋತ್ರಗಳಾದ ನಂತರ ಇವರ ಜನಸಮುದಾಯವು ಆಶ್ಚರ್ಯಕರ ರೀತಿಯಲ್ಲಿ ಬೆಳೆಯತೊಡಗಿತು. ಹೀಗಾಗಿ ಈ ಗೋತ್ರದವರಾರೂ ಆ ಗೋತ್ರದವರಾರು ಎಂಬುದನ್ನು ಹೇಳುವುದು ಕಷ್ಟವಾಯಿತು. ಒಂದೇ ವಂಶದಲ್ಲಿ ಒಬ್ಬರನ್ನೊಬ್ಬರು ಗುರುತಿಸಲಿಕ್ಕಾಗಲಿಲ್ಲ. ಆದ್ದರಿಂದ ಹೊಸ ಗೋತ್ರಗಳನ್ನು ಸೃಷ್ಟಿಸುವ ವಿಚಾರಗಳು ನಡೆದವು. ಯಾವುದಾದರೂ ಒಂದು ಗೋತ್ರದಲ್ಲಿ ಆಯಾಯ ಕಾಲಕ್ಕೆ ಪ್ರತಿಷ್ಠಿತ ಹಾಗೂ ಪ್ರಬಲವಾದ ವ್ಯಕ್ತಿಗಳು ಹುಟ್ಟಿದ್ದರು. ಇಂಥವರು ತಮ್ಮ ಪ್ರಾಚೀನ ವಂಶದ ಹೆಸರನ್ನು ಹಿಂದುಳಿಸಿ, ಇದೀಗ ಬೆಳಕಿಗೆ ಬಂದವರ ಹೆಸರುಗಳನ್ನು ಹೇಳುತ್ತಾ ಬಂದರು. ಉಳಿದವರು ತಮ್ಮ ಪ್ರಾಚೀನ ಗೋತ್ರಗಳನ್ನು ಹೇಳಿಕೊಳ್ಳುತ್ತಾ ಮುಂದುವರಿದರು. ಇವರೊಂದಿಗೆ ನವೀನ ವಂಶಗಳೂ ಮುಂದುವರಿದವು. ಜನಗಣದಲ್ಲಿ ಒಂದು ತರದ ಗೊಂದಲವುಂಟಾಗ ಹತ್ತಿತ್ತು. ಈ ಎಲ್ಲ ನೆಲೆಗಟ್ಟಿನ ಮೇಲೆ ವಂಶಗಳಿಗೆ ಗೋತ್ರಗಳೆಂದು ಕರೆಯದೆ ಬೆಡಗುಗಳೆಂದು ಕರೆದರು."[೩] ಇಲ್ಲಿ ಉಲ್ಲೇಖಿಸಿರುವಂತೆ ಒಂದೇ ಬಾರಿಗೆ ಸಮುದಾಯ ಬೆಳೆಯದಿದ್ದರೂ ಅದು ಸಾವಿರಾರು ವರ್ಷಗಳಿಂದ ಪರಿವರ್ತನಾಶೀಲವಾಗಿರುವುದು. ಗೋತ್ರ ಎಂಬ ಶಬ್ದವನ್ನು ನೋಡುವುದಾದರೆ ಗೋ ಹಾಗೂ ತ್ರ ಎಂಬೆರಡು ಪೂರಕ ಪದಗಳಿವೆ. 'ಗೋ' ಎಂದರೆ 'ಹಸು'(ಆಕಳು) 'ತ್ರ' ಎಂದರೆ 'ಪಾಲಕ' ಅಥವಾ ರಕ್ಷಕ ಎಂದರ್ಥ. ಹಲಾಯುಧ ಕೋಶದಲ್ಲಿ ಗೋತ್ರ ಶಬ್ದಕ್ಕೆ ಗವತೆ ಶಬ್ದಾಯತಿ ಪೂರ್ವ ಪುರುಷಾನ್ ಯತ ಗೋತ್ರಂ ಎಂಬ ವಿಶ್ಲೇಷಿತ ಅರ್ಥವನ್ನು ಕೊಡಲಾಗಿದೆ. ಅಂದರೆ ಪೂರ್ವ ಪುರುಷರ ಇಲ್ಲವೆ ಪ್ರಾಚೀನ ಪುರುಷರ ಹೆಸರನ್ನು ಸೂಚಿಸುವುದೇ ಗೋತ್ರವೆಂದು ಹೇಳಲಾಗಿದೆ.

ಕುರುಬ ಸಮುದಾಯದಲ್ಲಿ ಕುಲಗೋತ್ರಗಳು ಮುಖ್ಯವಾಗಿದ್ದು, ನೆಲಮೂಲ ಸಂಸ್ಕೃತಿಯನ್ನು ಬಿಂಬಿಸುವಲ್ಲಿ ಮತ್ತು ವಿವಾಹ ಸಂಬಂಧವನ್ನು ಏರ್ಪಡಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. "ಕುಲ, ಬಳಿ ಅಥವಾ ಬೆಡಗು ಎಂಬುದು ವಂಶಾನುಕ್ರಮ ಬಂಧುಗಳ, ಸಂಬಂಧಗಳ ಆಧಾರದ

ಮೇಲೆ ರಚಿತವಾಗಿರುತ್ತದೆ. ಸಮುದಾಯದ ಸದಸ್ಯರೆಲ್ಲರೂ ಪೂರ್ವಜರ ವಂಶಾವಳಿಯ ಜೊತೆಗೆ ಸಂಬಂಧವಿದೆ ಎಂದು ನಂಬುತ್ತಾರೆ. ಇಲ್ಲಿ ಕುಲವನ್ನು ತಮ್ಮ ಕುಲಮೂಲ ವ್ಯಕ್ತಿ, ಪ್ರಾಣಿ, ಪಕ್ಷಿ, ಬಳ್ಳಿ, ಮರಗಳಿಗೆ ಸಂಬಂಧಿಸಿದಂತೆ ರಚಿಸಿಕೊಂಡಿರುತ್ತಾರೆ. ಸಾಮಾನ್ಯವಾಗಿ ಕುಲಬಳಿ ಅಥವಾ ಬೆಡಗು ಒಬ್ಬ ನಿರ್ದಿಷ್ಟ ಪೂರ್ವಜನಿಂದ ಉದ್ಭವಿಸಿದ ಸಂಬಂಧಿಕರ ಒಂದು ಸಮೂಹವಾಗಿದೆ."[೪] ಈ ನಂಬುಗೆಗೆ ಕುರುಬ ಸಮುದಾಯವು ಹೊರತಾಗಿಲ್ಲ.

**ಕರ್ನಾಟಕದಲ್ಲಿರುವ ಕುರುಬ ಸಮುದಾಯದ ಬೆಡಗುಗಳು:** ಅಗರಣೇರು, ಅಗ್ಗಣೆ, ಅಟ್ಟೀಲ, ಅಡಸಲ, ಅಡ್ಲನ, ಅಣ್ಣೆ, ಅತ್ತಿ, ಅದ್ದನ, ಅರ್ಧನ, ಅಮಗೊಂಡೆ, ಅಮೋಘ, ಅರಸು, ಅರಳಿ, ಅರಳು, ಅರಳೆಲಿ, ಅರಿಷಿಣ, ಅಲಿಗೆ, ಅವರೆ, ಅವ್ವಲಗೊಂಡ್ಲ, ಅಸಲಿ, ಅಸಲು, ಅಳೆಣ್ಣವರ, ಅಂಕಣ, ಅಂಡೆ, ಅಂದರ, ಅಂದಣ, ಅಂಬಾತಿಲಿ, ಆಡಿನ, ಆಡೆ, ಆನೆ, ಆನೆನ್ನವರ, ಆನೆಗುಂದಿ ಗಡಿಯಂಕ, ಆಯ, ಆರೆ, ಆವಲೇರು, ಆವಿನ, ಆವಾಲವರ, ಆಸಲು, ಆಸ್ಪಂಡೆ, ಇರುವು, ಇರುಳು, ಉಂಗರ, ಉಂಕಿ, ಉಡಿ, ಉಂಡಾಡು, ಉತ್ತಲು, ಉತ್ತೇನ, ಉದ್ದ, ಉದೇಲ, ಉಣ್ಣೆ ಎಣ್ಣೆ, ಉಪ್ಪಿನ, ಉಳಿಕಾರ, ಉಳ್ಳೊಳ್ಳೇರ, ಎಕ್ಕೇಲಿ, ಎಕ್ಕೆಲ, ಎಣ್ಣೆ, ಎತ್ತ, ಎಮ್ಮೆ(ಎಮ್ಮೆಣ್ಣನವರ), ಎಳ್ಳ, ಎಳಿಗಲ್ಲ, ಐದುವರಹವಸಾಲೆ, ಐಗಳೋರ, ಒಣಕೆ, ಬಯ್ಯಳ(ಬಯ್ಯಾಳ), ಓತಿ, ಓದಲು, ಓಸೇಲ, ಓತನ್(ಹೋತನ್), ಔಡಲ, ಕಂಚಲ, ಕಂಚಿನ, ಕಂಚೆಲಿ, ಕಂಪಾಲ, ಕಂಬ, ಕಂಬಳಿ, ಕಾಂಪಿಲ್ಯ, ಕುಂಕುಮ, ಕುಂದಣ, ಕುಂಬಳ, ಕೆಂಗಲ್ಲ, ಕೆಂಗಾರ ಕೆಂಗಾಲ, ಕೆಂಗುರಿ, ಕೆಂಚಲು, ಕೆಂಡ(ಕೆಂಡದವರು), ಕೆಂದೋಳಿ, ಕೊಂಡೇರ, ಕೆಂಡಿಕರ್, ಕಗ್ಗಲ್ಲ, ಕಗ್ಗಾಲ, ಕಗ್ಗೋಲ, ಕಡಗ, ಕಡಬಿ, ಕಡ್ಲಿ, ಕಡ್ಲೆಲಿ, ಕಣೆದ, ಕತಪಾಲ, ಕತಲ, ಕತ್ರಿ, ಕನಕಯ್ಯ, ಕಪಲೆ, ಕಬಳಿ(ಕಬುಳಿ), ಕಬ್ಬಳ್ಳಿ, ಕರಿಮಾವಿನ, ಕರಿಯಾಪಿ, ಕರಿಯಪ್ಪನ, ಕರಿಹುಲಿ, ಕರೋಲಿ, ಕರೂಲ, ಕರೆಲ್ಲವರ, ಕವಡ, ಕಸ್ತೂರಿ, ಕೃಷ್ಣ, ಕಾಗಲ್, ಕಾಮಲೇರು, ಕಾಮನ, ಕವಡ, ಕುಣಿವ, ಕುರಿ, ಕುರೇಲ, ಕುಶಲ, ಕೋಟಾ, ಕೊಡ್ಲಿ, ಕೊಡ್ಲಿಲಿ, ಕೊಪ್ಪಿನ, ಕೊಳ್ಳಿ, ಕೋಕಿಲ, ಕೋಕಿಣ್ಣ, ಕೋಟೆ, ಕೋಟೆ, ಕೋರಿ, ಕೋರೆಲ್ಲರು,. ಕೋಸಲ, ಕೌಲ, ಕೌಶಲ, ಖಂಡೆಕರ್, ಖಂಡೇಲ, ಗಂಗೇಲ, ಗಂಡೇಲ, ಗೊಂಗಡಿ, ಗಡಿವಾಡಕ ಬನ್ನೆ, ಗಡ್ಡೆ, ಗಣಕ, ಗರಣಿ, ಗರಿಕೆ(ಕರಿಕೆ), ಹಸ್ತೇನ, ಗಳೇದ, ಗಾಳಿ, ಗೀಜಗ, ಗುಮ್ಮಿ, ಗುಮ್ಮ, ಗುಲೇಲವರ, ಗೂಳೆತ್ತಿನವರ, ಗುಳೇಲ, ಗೋಡೇಲ, ಗೋದೇಲ(ಗೋದಲ), ಗೊಬ್ಬರ, ಗೋಸ್, ಗೋಸಲೇರು(ಗೋಶಾಲೇರು), ಗೋಸಾಲಿ, ಗೌಡ, ಗೌಡ್ಲ, ಗೌಡ್ಲೇಲಿ, ಘಂಟೇಲ, ಘೋಸಲ, ಚಂದು, ಚಂದನ, ಚಂದೋಸಿ, ಚಂಚೇಲಿ, ಚಕ್ರ, ಬಟ್ಟ, ಚನಗೇಲ, ಚವಡೆ, ಚವಲಿ, ಚಿಟಾವಿ, ಚಿಟು, ಚಿಲ್ಲಾ, ಚೂರಿ, ಚೇಳು, ಜಂಗಿನ, ಜಂಡೆ, ಜಕ್ಕಲಿ, ಜಗ್ಗಲಿ, ಜಗ್ಗಲ, ಜಡಿಮಳಿ, ಜಡೇಲ, ಜನಿಗೆಲವರ, ಜನ್ನಿ, ಜನ್ನೆಲ್ಲ, ಜಲಕುಪ್ಪಿ, ಜಾಡ, ಜಾಡಿ, ಜಾಲ, ಜಿನಗೆ, ಜಿವಾಳ(ಜೀವಳ)

ಜೇರಿಗಿ, ಜೋಗೆಲ್ಲ, ಜೋತಿ, ಜೋತೆ, ಟಕ್ಕೇಲ, ಡಾಣೇಲಿ, ಡೋಣಿ(ಡೋಣೆ), ತಗರಿನ, ತಟವಲ, ತಡವಲ, ತಡವಲ, ತಳ್ಳಿ, ತಳೂಲ, ತಿಪ್ಪಾಲವರ, ತುಂಚಿ, ತುಪ್ಪದ, ತುರಾಯಿ, ತುರಾಯಿ, ತುರುಗಾರ, ತುರುಬೆಲೆ, ತುರುಬಿನ, ತುರುವಿನ, ತೆಕ್ಕೇನ, ತೇಜೆಲ್ಲ, ತೆರವಾಲ, ತೆವರೆಲ್ಲ, ತೊಟ್ಟಿಲ, ತೋಪಿನ, ತೋವಿನ, ದಂಡೆ, ದಂಡಲ, ದಂದೂರ, ದುಂಡೆ, ದಣಿ(ದನಿ), ದರ್ಶನ, ದಸಕ, ದಳವಡಿ, ಧನಗೊಂಡ, ದಾಡೆ, ದಾಣೆ, ದಾಣೆಲಿ, ದಾಯ, ದಾರೆ, ದಾಸ, ದಾಸರಿ, ದುಡ್ಡಿನ, ದುಡ್ಡಲ್, ಸೆಟಕುಲ, ದೇದಲ್(ದೇವಲ್), ದೇವದಾರು, ದೊಣ್ಣೆ, ನಗರ, ನಗರಿ, ನಗಾರ, ನಡವಟ್ಟಲ, ನಡವಟ್ಟಿ, ನಡಗೊಟ್ಟಿ, ನವಿಲು, ನಸೇಲ, ನಳಿ, ನಳೇನ, ನಾಗರ, ನಾಳಿ, ನಾಗ, ನಾಗೋಲಿ, ನಾಯಿ, ನುಗ್ಗಲಿ, ನೆಗ್ಗಲಿ, ನೆಲ್ಲ, ನೆಂಣಬ, ನೆಲ್ಲಿ, ಪಟ್ನಿ, ಪತ್ರೇ ಪತ್ರೀ, ಪೃಥುಕ, ಪ್ರಬಲ, ಪ್ರಭಾವ, ಪ್ರಭಾವಂತ, ಪಾವಿನ, ಪಾಂಡು, ಪುಂಡನವರ, ಪೆಂಟೇಲ, ಬಂಡಿ, ಬಂಡೆ, ಬಂಡಗರ, ಬಂಡಾಲು, ಬಂಡಾರಿ, ಬಂಡಾರ(ಬಂಡಾರದವರ), ಬಫೇಲ, ಬಡವಿನ, ಬಣತೆ, ಬನ್ನಿ, ಬನ್ನೇಲಿ, ಬಲ, ಬಲ್ಲಾಳ, ಬಲಗೊಂಡ, ಬಸರಿ, ಬಸಳಿ(ಬಸಳ್ಳಿ), ಬಸವಾ(ಬಸವಾ), ಬಸರಾಲ, ಬಸರೆಲ, ಬಸಲೆಲ್ಲೇರು, ಬಸ್ಲೇನ, ಬಳಿಗಾರ, ಬಳ್ಳಾರಿ, ಬಳ್ಳೇರಿ, ಬಳೆಗರು, ಬಳ್ಳೊಳ್ಳಿ, ಬಾಗನ್, ಬಾಚಲ, ಬಾಣ, ಬಾಣಗೇರಿ, ಬಾರತ್ಲ, ಬಾಲ, ಬಾಸರಿ, ಬಾಸಲು, ಬಾಸರಾ, ಬಾಸಲು, ಬಾಸಿಂಗ, ಬಾಸೇಲ, ಬಾಳಿ(ಬಾಳೆ), ಬ್ಯಾಲ(ಚೀಲ), ಬಿಜ್ಜಣ, ಬಿಜ್ಜನಾಗಿ, ಬಿಮ, ಬಿಲ್ಲಾರ, ಬಿಲ್ಲಾಳ, ಬಿಲ್ಲ, ಬಿಲ, ಬಿಳಿಕುರಿ, ಬುಗಡಿ, ಬುಜ್ಜಣಗಿ, ಬುಡಲಿ, ಬುಲ್ಲೆ, ಬುಸಾಲಿ, ಬೆಟ್ಟ, ಬೆಣಚಿ, ಬೆಣ್ಣೆ, ಬೆನಕ, ಬೆಲ, ಬೆಲ್ಲ, ಬೆಲದತ್ತ, ಬೇವಿನ, ಬೆಳಗುರಗಿ, ಬೆಳ್ಳಿ, ಬೋಳಿ, ಬೋಳೆಲ್ಲೆವರ, ಭಗಡ, ಭಂಡಾರ, ಭೂತನ, ಭೋಚೆ, ಭೋಜ್, ಭೋಸ, ಭೋಸಲ, ಮಂಗನ, ಮಗ್ಗದ, ಮಜ್ಜಿಗಿ, ಮಜ್ಜನ(ಮಜ್ಜಣ), ಮಜರಿ(ಮುಜರಿ), ಮನ್ನೆ(ಮನ್ನೆಯ), ಮಂದಾರ, ಮದ್ದ, ಮಲ್ಲಿಗಿ, ಮಲ್ಲೆ, ಮಲ್ಲೇರು, ಮಲ್ಲೆಲ್ಲೇರು, ಮಹಬಲ, ಮಳಲನವರ, ಮಳದ, ಮಳ್ಳ, ಮಾಗುಂಡ್ಲ, ಮಾಡಗಲ್ಲ, ಮಾಡಮಲ್ಲೇನ, ಮಾಣಿಕ್ಯ, ಮಾನ, ಮಾಮನಿ, ಮಾವಿನ, ಮಾಸಲ, ಮಾಳಗಿ(ಮಾಳಗೆ), ಮಾಂಗಲ್ಯ, ಮ್ಯಾಗಡ್ಡಿ, ಮಿನಿಗಲ, ಮಿಂಚಿನ, ಮಿಳ್ಳೇನ, ಮೀನುಗಲಾರ, ಮೀಸಲ, ಮೀಸಿ, ಮುತ್ತಿನ, ಮುತ್ತಲೆಲಿ, ಮುರುವು, ಮೃತಿ, ಮೂರು ಹಿಂಡಿನ, ಮೆಣಸಿನ, ಮೈಲನ್, ಮೊಲ, ಮೋಟಿ, ಯಡೂಲ, ಯೋತೆ(ಯತೆ), ಯಮ, ಯರಮಲೆ, ಯಳಗಲ, ಯರೂಲ, ರಾಣೆ, ರಾಣೆ, ರಾಜಕಮಲ, ರಾಯ, ಲಾಳಿ, ಲಿಂಗ, ವಡಕಲ, ವದೇಲ, ವಡಗೇಲ, ವಿಭಾಗ, ಶಂಕಿ, ಶಂಖ, ಶಚ್ಚಲ, ಶನಗೇಲ, ಶೃಣಿ, ಶೆಟ್ಟಿ, ಶೇಜೆಲ್ಲೇರು, ಶಿವ, ಶಿಲ್ಪಲೋರು, ಸಕಲೆ, ಸಕ್ರಲ, ಸಗರ, ಸಗಲ, ಸಟ್ಟೆಲು, ಸೆಡ್ಡೆಲು(ಸೆಡ್ಡಿ), ಸೆಟ್ಟೆಲಾರ, ಸಣಗಾರ, ಸಣ್ಣಕ್ಕಿ, ಸಣ್ಣಕಂಬಳಿ, ಪತ್ತೇನ, ಸದರನ್, ಸರವಿ, ಸಂಗಮ, ಸಂಗೇನ, ಸಿಂಗೆ, ಸಂಡ್ಲಕ್, ಸಂಪಗಾನ, ಸಂಪಿಗೆ, ಸಾಕೆಲು, ಸಾವಂತ, ಸಾಮಂತ, ಸಾರಣ್ಣಿ(ಸಾರಣಿ), ಸಾಲಿ, ಸಾಲ, ಸಾಸರ, ಸಾಸಲು, ಸಾಗರ, ಸಾವಿತ್ರಿ, ಸಿಖಂಡಿ, ಸಿಗತೀರು, ಸಿದ್ದನ, ಸಿಂಗ್ಲ, ಸಿಂಪಲ, ಸಿಂಗಣ್ಣವರ, ಸುಗ್ಗಲ,

ಸುಲಪನ್, ಸುರ್ಮಾ, ಸೂಜಿ, ಸೂರ್ಯ, ಸೆಡ್ಡೇಲ, ಸೇಜೇನ್, ಸೇನ, ಸೇವಂತಗಿ, ಸೇವಿಗೆ, ಸೊಪ್ಪಿನ, ಸೊಂಟಿಲ, ಸೌಥೆ, ಹಟ್ಟಿ, ಹಳ್ಳಿಕಾರ, ಹಡಸೇನ, ಹತ್ತಿ, ಹತ್ತೇನ, ಹರದ, ಹರ್ಷ, ಹರಲೇರು, ಹರಳೆಲಿ, ಹರಿಯಾಲ, ಹಳ್ಳಿ, ಹಂಡೆ, ಹಂಡಗುರಿ, ಹಂಡೇವಜೀರ, ಹಂಡಗಿಡದ, ಹಂದರ ಹಂದರ, ಹಾಲ, ಹಾಲಕಂಕಣ, ಹಾಲೆಲ್ಲೇರು, ಹಾವೆಲ್ಲೇರು, ಹಾವಿನ, ಹುಗ್ಗಿ, ಹುಣಸಿ, ಹುಣಶಾಳ, ಹುಣಚೆಲಿ, ಹುಟ್ಟಿನ, ಹುತ್ತಿನ, ಹುಡೆ(ಹೂಡೆ), ಹುಂಡರ, ಹುಂಡೇಲ, ಹುರಳಿ, ಹುರಗೆಜ್ಜಿ, ಹುಲೆಣ್ಣವರ, ಹುಲ್ಲೇನ, ಹೆಬ್ಬುಲಿ, ಹೊನ್ನಬನ್ನೆನವರ, ಹೊನ್ನಬನ್ನಯ್ಯ, ಹೊನ್ನಬನ್ನಲಿ, ಹೊನ್ನುಂಗುರ, ಹೊನ್ನಮನ್ನೇರು, ಹೊನ್ನಬಸರೇಲಿ, ಹೊಂಬಿಸಿಲ, ಹೂಬಿಸಿಲ, ಹೋರಿ, ಹೊನ್ನಗೌಡ್ಲಾರ, ಹೊನ್ನಮೇಲುಪ್ಪರಿ, ಹೊನ್ನಬಂಡಾರ, ಹೊನ್ನಹಾಲಿನವರ, ಹೊನ್ನಭೂತಲ, ಹೊನ್ನಬಂಡೆ, ಹೊನ್ನಬಂಡೆನವರ, ಹೊನ್ನೆಲಿ, ಹೊನ್ನನಡವಟ್ಟಲ, ಬಿರದಹುಂಡೆನವರ, ಕಂಡೆಲ್ಲವರ, ಹೊನ್ನಹೆಬ್ಲೋರ(ಹೊನ್ನ ಹೆಬ್ಬುಲಿಯವರ), ಹೊನ್ನಸ್ವಾರನವರ.

ಹೀಗೆ ಕರ್ನಾಟಕದಲ್ಲಿನ ಕುರುಬ ಸಮುದಾಯದ ಬೆಡುಗುಗಳನ್ನು ಗುರುತಿಸಲಾಗಿದೆ."[3] ಅದರಂತೆಯೇ ಆಂಧ್ರಪ್ರದೇಶದಲ್ಲಿರುವ ಬೆಡಗು ಮತ್ತು ಗೋತ್ರಗಳು ಈ ರೀತಿಯಲ್ಲಿವೆ.

| **ಬೆಡಗುಗಳು** | **ಗೋತ್ರಗಳು** |
|---|---|
| ಅಗಡವಾರು | ಅಕ್ಷಯ |
| ಅಂಕಾಲವಾರು | ಅರಿಸೆ |
| ಅಂಕಾಲವಾರು | ಅನ್ನಗಿರಿ(ಅರಸಲು) |
| ಅಂಡೆಯವರು | ಮೇಡಿಕಾಯಲ |
| ಅಡಲಿಗೊಂಡಾಲ | ಬುಲ್ಲೇ |
| ಅಲ್ಲೇಯವರು | ರಾಜಗಿರಿ |
| ಅಟ್ಟೇಲಾರು | ಅರಿಟಾಕುಲ |
| ಅಲಸಿನವರು | ಕಟ್ಟಿಚೈನ |
| ಅಪಕ್ಕನವಾರು | ಜಿಲ್ಲಾಲ |
| ಅಡ್ಡಲವಾರು | ಅಡಸಲ |
| ಅನ್ನಗಿರಿವಾರು | ಅಂದಿಗೆಲ |
| ಅನಸಾಲವಾರು | ಎರ್ರಗನ್ನೇರು |
| ಆಗೋಲವಾರು | ಮಲ್ಲೇಪೂಲ(ಮಲ್ಲಿಗೆಹೂವು) |
| ಆಮಿದಾಲವಾರು | ವೆಂಡಿ(ಬೆಳ್ಳಿ) |

| | |
|---|---|
| ಆರೇಟ್ಟಿ | ಮೇಪಲ |
| ಆಕುಲೇಟಿವಾರು | ರಾಲ್ವಕು |
| ಆಲಪಾಟಿವಾರು | ಜ್ಯೋತಿ |
| ಆವುಲವಾರು(ಗೋವಿನವರು) | ಭರಿಣಾಲ |
| ಆಸುಗೊಂಡವಾರು | ನಡಿಗಡಾರ |
| ಆದೇವಾರು | ಗಂಗಿರೇಣಿ |
| ಆದೋನಿವಾರು | ಚಾಮಂತಿ |
| ಉಲ್ಲಿಕಂಟಿವಾರು | ಶಂಕಿನೀ |
| ಎಗ್ಗಾಡವಾರು | ಜನ್ನೇಲ |
| ಎಗ್ಗಾಡಿವಾರು | ಜನ್ನೀಲ |
| ಎಮ್ಮಿಲೋರು | ಎಂಪಿಲಿ |
| ಎಲ್ಲೂರುವಾರು | ಮುತ್ಯಾಲ |
| ಎಲ್ದುರ್ತಿವಾರು | ಶ್ರೀಗಂಧಂ |
| ಎಡಮಿಲೋರು | ಸೀನರ್ಲ |
| ಏರುಮುಲವಾರು | ಅರಿ |
| ಏಯೇವಾರು | ರಾಜನಾಲ |
| ಕಿಸಾನವಾರು | ಎಂಪಿಲಿ |
| ಕಿಲ್ಲೀವಾರು | ಕಾನಗಲ |
| ಕಲಗೊಂತು | ಬಂಗಾರು |
| ಕಮ್ಮಿಟಿವಾರು | ಕಲ್ಯಾಣ |
| ಕಂಡಗಾನಿವಾರು | ಬಂಗಾರು |
| ಕರಿಕೊಲ್ಲುವಾರು | ತುಮ್ಮಿಆಕುಲ |
| ಕಲ್ಲಮಡಿವಾರು | ಕಲ್ಯಾಣ |
| ಕಲ್ಲೇವಾರು | ಕೆಂಚಲ |
| ಕಲ್ಲೇವಾರು | ಮಲ್ಲೇಪೂಲು |
| ಕಪಾಡಂವಾರು | ಗೋಸಲ |
| ಕಲ್ಲೂರುವಾರು | ಮಲ್ಯಾಲು |

| | |
|---|---|
| ಕಟ್ಬೆಲವಾರು | ಆವುಲ |
| ಕಮ್ಮಲಂಪಾಟಿವಾರು | ಕೋಟಗಿರಿ |
| ಕಪ್ಪಲವಾರು | ಬಾನಾಲ |
| ಕತ್ತೇವಾರು | ಗುಡೇ |
| ಕಟಿಕವಾರಿದಿ | ಉದ್ದುಲು |
| ಕಟ್ಟಿಬೋಯಿನವಾರು | ಬರ್ನಾಲ |
| ಕಮ್ಮೇಲಿವಾರು | ಶೇಷ |
| ಕುಂಟಾಲವಾರು | ಮಂಕಿನೀ |
| ಕುಕ್ಕಾವಾರು | ಆವಲ |
| ಕುಕ್ಕವಾರು | ಆವುಲ |
| ಕುಸಿಕಂಟಿವಾರು | ಮೇಪುಲ |
| ಕುರಾಕುಲವಾರು | ಜಮ್ಮಿಚೆಟ್ಟು |
| ಕುಡಮಲವಾರು | ಬೆಲ್ಲಪಚ್ಚೊ |
| ಕೂರುಸವಾರು | ಅಕ್ಷಿಂತಲು |
| ಕೆಂಚಿಲೋರು | ಜಾಲಿಪೂಲು |
| ಕೊನಿಗಿಲವಾರು | ಚಾಮಂತಿ |
| ಕೊಂಗಿನಿವಾರು | ಕಾಶಿ |
| ಕೊಂಗಿಸವಾರು | ಕಾಶಿ |
| ಕೊಂಕೋಲುವಾರು | ಅಕ್ಷಿಂತಲು |
| ಕೊರಿವಿವಾಂಡ್ಯೆವಾರು | ಸೂರ್ಯ |
| ಕೊರಿನೇವಾರು | ಸೂಕಿ |
| ಕೋಲಾರಿವಾರು | ಬಂಗಾರು |
| ಕೊತ್ತಪಲ್ಲಿವಾರು | ತುಂಪೆರಾಲ |
| ಕೊದಮುಲೋರು | ಕೆನ್ನಮೂಸ |
| ಕೋತಿರಾಳ್ಳವಾರು | ವಡಿಯಾಲ |
| ಕೋಕಿವಾರು | ಮಾಲಗೊಂಡ |
| ಕಾಲೇಟಿವಾರು | ಶ್ಯಾಮಲ |
| ಕಾಮುಗೊಂಡ | ಶಿರಿಮಾಲ |

| | |
|---|---|
| ಕಾಪುಕಂಟಿವಾರು | ತುಮ್ಮಿದಲ |
| ಕೊಳ್ಳಪಾಟಿವಾರು | ಶಿಕಂಡಿ |
| ಕೋಟಿಮೀರಬೋಲ್ಲು | ನೀಲೇಘು |
| ಕೋಟಿವಾರು | ಕಾಶಿ |
| ಕಾಟಬೋಯಿನವಾರು | ಸಂಕೀಲ |
| ಕೋಸಂಗಿವಾರು | ಸೊಂಬಿಲ್ಲ |
| ಕೀಲಾರಿವಾರು | ಸಾವಲ |
| ಗಿರವವಾರು | ಅನಗೊಂತ |
| ಗೊನ್ನಿಗೊಂಡವಾರು | ವುನಿಸೆರ್ಲ |
| ಗೊಂಗಟಿವಾರು | ಕೊಂಚಲ |
| ಗೋಸೆವಾರು | ಬಂಡಲ |
| ಗೊಟ್ಟಂವಾರು | ತುಮ್ಮೆಪೂವುಲ |
| ಗೌನಿವಾರು | ಬಂಗಾರು |
| ಗೋನಿಗೊಡ್ಲವಾರು | ವನಚರ್ಲ |
| ಗೋತಿಮಿವಾರು | ಚಿಕ್ಕಂಟಿ |
| ಗೋತಿಮಿವಾರು | ಪಚ್ಚಲ |
| ಗೋತಿಮೆಲ್ಲವಾರು | ಜಲ್ಲೇಲ |
| ಗೋತಿವಾರು | ಬಂಡಲ |
| ಗೋಸಾಲವಾರು | ಉದ್ದುಲ |
| ಗಾದೇವಾಂಡ್ಲವಾರು | ಅರಸಲ |
| ಗೊಲ್ಲಮವಾರು | ತೆಲ್ಲಮಂಗ |
| ಗಂಜೀವಾರು | ಪಚ್ಚಲ |
| ಗಂಡಿಕೋಟವಾರು | ಎನುಗುಲ |
| ಗೂಕೂರುವಾರು | ರಾಗಕುಲ |
| ಗೂಡೇವಾರು | ನೀಲಗಿರಿ |
| ಗುಗ್ಗಿರೋಳ್ಳು | ಜಂಜ್ಯಾಲ |
| ಗುಗ್ಗಾನಿವಾರು | ಕಲ್ಲೇ |

| | |
|---|---|
| ಗುಂಗ್ಗಿಲ್ಲವಾರು | ಜಂಜಾಲ |
| ಗುಟಾಲೋರು | ಕೊರ್‍ರ್ರಲ |
| ಗುಂತಾವಾರು | ಏನುಗುಲ |
| ಗುಂಜರೋಲ್ಲರು | ಎಂಪಿಲಿ |
| ಗುಡೆವಾರಿದಿ | ಮುದ್ರಲ |
| ಗುಡ್ಡಾಕುಲವಾರು | ಮನೀಲ |
| ಗವ್ವಲವಾರು | ಸೆನಿಗಾಲ |
| ಗಡ್ಡಮುವಾರು | ಪಾಲಕು |
| ಗಡ್ಡ ಮುವಾರು | ಪಾಲಾರು |
| ಗದ್ವಾಲವಾರು | ಕಾಶಿ |
| ಗಟಾಲೋಲ್ಲರು | ಕೊರ್‍ರ್ರಲ |
| ಚಿಕ್ಕೊಲವಾರು | ಸಾರುವ |
| ಚಿಕ್ಕಂಟಿವಾರು | ಎದ್ದುಲ |
| ಗೆಸ್ತೀವಾರು | ಬೂದಿಲ |
| ಚಿಕ್ಕನೆಂಟೋಲ್ಲರು | ಉದ್ದುಲ |
| ಚಿಟ್ರವಾರಿದಿ | ಎಂಪಿಲಿ |
| ಚೀಟಿಗಾನಿವಾರು | ಏನುಗುಲ |
| ಚಾಕೊತ್ತಿವಾರು | ಸುದ್ದುಲ |
| ಚಾಮಾರುವಾರು | ಮುಲಕ್ಕಾಯ |
| ಚಾಮಂತಿವಾರು | ನೀಲಿಕಿಲೀಲ |
| ಚೆಲಿಮಿಲೋಲ್ಲರು | ಕಾಶಿ |
| ಚೆನ್ನಗಿರಿವಾರು | ನೀತಿ |
| ಚನ್ನಕ್ಕವಾರು | ರಾಜಗಿರಿ |
| ಜುರ್ರಾವರು | ಜನ್ನೀಲ |
| ಜುಟ್ಲೊಲ್ಲಾರು | ಜಲ್ಲಲು |
| ಜಂಪಾಲ | ಕಾನಗಲ |
| ಜರೇವಾಳು | ನೇಸಲ |
| ಜಡೇವಾರು | ಎಂಪಿರಿ |

| | |
|---|---|
| ಜಡೇವಾರು | ಜನ್ನೇಲ |
| ಜಾರಡ್ಲವಾರು | ಮುಲ್ಲಾಲು |
| ಜಟೇವಾರು | ಮುಲಕ್ಕಾಯ |
| ಡೊಕ್ಕಾವರು | ಜುಮ್ಮಾಕು |
| ತಿರಿಮಿನಿವಾರು | ಜಂಜಾಲ |
| ತೀರುಗುಡ್ಡಾರು | ಸಾಲ |
| ತೊಟ್ಟಿಕೂರವಾರು | ತೊಟ್ಲಿ |
| ತಾಲ್ಲವಾರು | ತೆಲ್ಲತುಮ್ಮ |
| ತೋಟಕೂರವಾರು | ವನ್ನೆಂಗಿಲ |
| ತಗಿರಿ ಜೋಗಿವಾರು | ನವನಂದಲ |
| ತಗಾದಿ ವಾರು | ದಾಸಲ |
| ತಗುರುವಾರು | ನವನಂದಲ |
| ತಲುಗೂಡುವಾರು | ಮಲ್ಲೇಲ |
| ತುಪ್ಪಟವಾರು | ನೀರೆಲ್ಲ |
| ತುಡಿಮಿಲವಾರು | ಸಂಪಿಗ |
| ತಪ್ಪಿಟಿವಾರು | ವೀರೆಲ್ಲಿ |
| ತನಗೊಂಡವಾರು | ಕಾಶಿ |
| ದಿಗ್ಗೇವಾರು | ರಾಜಗಿರಿ |
| ದಂತಾನಿವಾರು | ಪೆನುಗಂಟಿ |
| ದಂಡುವಾರು | ಮುಸುಗುನೋರು |
| ದಯ್ಯಾಳವಾರು | ಬೆಲ್ಲಾಲ |
| ದೂಪಾಟಿವಾರು | ಮಾಸ |
| ದುಗ್ಗಾಲವಾರು | ಕಲ್ಲೀ |
| ದುಗ್ಗನಿವಾರು | ಕಲ್ಲೇ |
| ದುಂಸ್ನಪಾಟಿವಾರು | ಸಾಕಿ |
| ದೇವಗೊಂಡವಾರು | ಕನ್ನೀಲ |
| ದೇವಗಾನಿವಾರು | ದೇಮರ್ಲ |

| | |
|---|---|
| ದೇವುರ್ಲವಾರು | ಕಾಶಿ |
| ದಡಗಟ್ಟುವಾರು | ನಶಾಲ |
| ದಾನೇವಾರು | ಬೂಚಕ್ರ |
| ದಾಸರಿವಾರು | ದಾಮರ್ಲ |
| ನಗರಿವಾರು | ಮಾಯೇಲ |
| ನಂದಿಪಾಟಿವಾರು | ಚಾಮಂತಿ |
| ನಲ್ಲ ಗುಂಡ್ಲವಾರು | ಸೀಕಾಲ |
| ನುಂಡ್ಲು ಮರುಗು | ಗೋರಂಟ್ಲ |
| ನೀಲಿವಾರು | ಮುಷ್ಯಾಲು |
| ನೀಲ್ಲಪಾಲವಾರು | ಶಾಗೊಂಡ |
| ಪಾನಿಮಿವಾರು | ಸಾನಲ್ಲ |
| ಪಾಲಗೊಂಡವಾರು | ಪಸುವಲ |
| ಪಾಂಡುವಾಳ್ಳು | ಮಲ್ಲಾಲು |
| ಪಾಲಗೊಂಡವಾರು | ರೇಲಾಲು |
| ಪಾಕಪಾಟಿವಾರು | ರಸೂಲ |
| ಪಾಮೆಲ್ಲವಾರು | ರಾಲ್ವಕು |
| ಪಿಚ್ಚಕುಂಟ್ಲವಾರು | ಗಂಟಲ |
| ಪಿಕ್ಕಿಲವಾರು | ಅಕ್ಕಿಂತಲು |
| ಪಿಲ್ಲಿವಾರು | ರುದ್ರಾಕ್ಷಿ |
| ಪತ್ತಿಗಾನಿವಾರು | ಜಿಲ್ಲೇಲ |
| ಪತ್ತಿಕೊಂಡವಾರು | ಸನ್ನಗಿಲ್ಲಿ |
| ಪುಲಕಂಟಿವಾರು | ಜಾಲುರ್ಲ |
| ಪುಲವಾರವಾರು | ಯರಮಂಚಿ |
| ಪೆನುಕುಂಟ | ಬಾಸಗೊಂಡ |
| ಪೂಸಪಾಟವಾರು | ರಾಶುಲ |
| ಪೂಜಾಲಾರು | ಮೂಲ |
| ಪಬ್ಬಾಲವಾರು | ಲಿಂಗಾಲ |

| | |
|---|---|
| ಪಶ್ವಲ್ಲವಾರು | ರಾಲಾಕು |
| ಪಸವೀಲವಾರು | ಪೆನುಗಂಟಿ |
| ಪರ್ವತಕಾರು | ರಾಜನಾಲ |
| ಪರ್ವತಮು ಲೊಲ್ಲರು | ಶೇಷ |
| ಪಬ್ಬರೊಲ್ಲವಾರು | ಮುಲ್ಲಾಲು |
| ಪಟ್ನಮುವಾರು | ಮಿರಿಯಾಲು |
| ಪೆನಿಕಲಪಾಟಿವಾರು | ಸಾಲಾಲ |
| ಪೆದ್ದಾಪುರಂವಾರು | ಬಂಗಾರು |
| ಪೆನ್ನಕಲಪಾಟಿವಾರು | ಜಂಜಾರಿ |
| ಪೆನಕಪಾಟಿವಾರು | ಗುಂಜುಲ |
| ಪೆನಿಕಲಪಾಟಿವಾರು | ಜಿಂಜಾಲ |
| ಪೇಕಿಂಟಿವಾರು | ರಾಜಗಿರಿ |
| ಪಂಗೊಲ್ಲದಿ | ಸತ್ರ |
| ಬೆನಿಕೀವಾರು | ಉದ್ದುಲ |
| ಬೇಗೂರುವಾರು | ನಾಗಾಲ |
| ಬೆಂಚಾಲವಾರು | ಜ್ಯೋತಿ |
| ಬೆನಿಕೀವಾರು | ಮೃದ್ದುಲು |
| ಟೆಲ್ಲಮುವಾರು | ಕಡ್ಲದರ್ಲ |
| ಬೈರಾಪುರಂವಾರು | ವುಂಡಿವುಂಗಡ್ಡ |
| ಬೆಲ್ಲೆವಾರು | ಚೆಂಚೆಲ |
| ಬೆನಕಂಟಿವಾರು | ಸೂರ್ಯ |
| ಬೆಂಟಿವಾರು | ಮಿರ್ಯಾಲ |
| ಬೋರಿಗಿವಾರು | ಸನ್ನಮಲ್ಲಿ |
| ಬೋತಿವಾರು | ಜಿಲ್ಲೇರು |
| ಬೊರ್ರವಾರು | ಜನ್ನಿಲ |
| ಬೋಡಾಲೊಲ್ಲರು | ನೀಲಶೆಟ್ಟಿ |
| ಬಾಗೂರುವಾರು | ಚೆಟ್ಪಾಲ |
| ಬಾಗೂರುವಾರು | ಕಾಶಿಗಟ್ಟ(ಕಾನಗಲ) |

| | |
|---|---|
| ಬಾಸಗುಂಡಹಾರವಿ | ಜಂಜಾವುಲ |
| ಬಾಡಿವಾರು | ವೂಡಗಲ |
| ಬಾನಗಾನಿವಾರು | ಏನುಗಲ |
| ಬಾನಪವಾರು | ಫಲಗೋರ್ಲ |
| ಬಾಲಗೊಂಡ | ಮಾಡಲ |
| ಬೆಲ್ಲವಾರು | ಚೆಂಚಲ |
| ಬೆಲ್ಲಾಲವಾರು | ರಾಲಾಕು |
| ಬೇಲುಗೂರುವಾರು | ನಾಗಾಲ |
| ಬೊಗ್ಗಿವಿವಾರು | ಸೂಲ |
| ಬೊಂತಬೆಲ್ಲದು | ಕಲ್ಯಾಣ |
| ಬೊಂಟಿವಾರು | ಮಿರ್‍ಯಾಲ |
| ಬೊಜ್ಜಿ ಪೋಯಿನವಾರ | ನಾವಿವಾಲ |
| ಬೊಬ್ಬಿಲಿವಾರು | ಉದ್ದುಲ |
| ಭಂಗಿವಾರು | ಕಿರಿಕಾಲ |
| ಬೀರಂವಾರು | ಕಟ್ವಸೈನು |
| ಬೀರವಾರು | ರಾಜನಾಲ |
| ಬಜ್ಜಿನವಾರು | ಪಚ್ಚೊಲ |
| ಬಂಗಾರುವಾರು | ಅಕ್ಷಿಂತಲು |
| ಭಂಡಾರುವಾರು | ಟೆಂಕಿನೀ |
| ಬಚ್ಚೋಲವಾರು | ನೀಲಗಿರಿ |
| ಬರ್ರೆವಾರು | ಆವುಲ(ಹಸುವಿನ) |
| ಬನ್ನಿಲವಾರ | ವೆಂಡಿ(ಬೆಳ್ಳಿ) |
| ಬುಗಿಡಿವಾರು | ಕೊರ್ರಲ |
| ಬುಲಗೊಂಡವಾರು | ಆಸೆಲ |
| ಬುಲ್ಲೇವಾರು | ಅಕ್ಷಿಂತಲು |
| ಬುಡಗವಾರು | ಮಲ್ಲೆಪೂಲು |
| ಬನ್ನಾಲವಾರು | ಚಿಲಕರ |
| ಬನ್ನೇಲವಾರು | ವಜ್ರಾಲ |

| | |
|---|---|
| ಬರ್ಣಾಲವಾರು | ಭರಣಿ |
| ಬರಾವಾರು | ಏನುಗುಲ |
| ಬನ್ನಗಿರಿವಾರು | ನೂಲು |
| ಬನ್ನಲವಾರು | ಪಚ್ಚೊಲಿ |
| ಬನ್ನೂರುವಾರು | ಮಗಿಲಿ |
| ಬಡುಗೂರುವಾರು | ಸೊಂಟಿ |
| ಮುನಿಗೊಂಡ್ಲವಾರು | ಬಂಗಾರು ತೀಗಲ |
| ಮೇಣಿವಾರು | ರಾಲ್ವಕು |
| ಮುನಿಗಾನಿವಾರು | ಬನ್ನೀಲ |
| ಮೇಕಲವಾರು | ಸಂಪೆಂಗ |
| ಮೇನಕಲವಾರ | ದುನಾಲು |
| ಮುರ್ರಿವಾರು | ಸಂಪೆಂಗ |
| ಮೆದ್ರೆವಾರು | ಯಲ್ಲಮಂದಲ |
| ಮೆಬ್ಬಲೊಲ್ಲಡಿವಾರು | ನೀಲಿಲಾಂಗ |
| ಮೆಪೆರ್ಲವಾರು | ನಾಗಮಲ್ಲಿ |
| ಮೆಂಬಾಡಿವಾರು | ಬಂಗಾರೀ |
| ಮೇಲಿಗಾನಿವಾರು | ಜಿಲ್ಲೇರು |
| ಪೆರುಗುವಾರು | ಕಾನಗಲ |
| ಮೆಮ್ಮವಾರು | ಅರಸಲ |
| ಮುಂತಲವಾರು | ಶಂಖ |
| ಮುಕ್ಕಲೋಲ್ಲರು | ಸಾರಲ |
| ಮುಷ್ಯಾಲವಾರು | ಮಲ್ಲೆಪೂವಲ(ಕಾಶ್ಯ) |
| ಮಾಲಗೊಂಡ್ಲ | ಬಂಗಾರು |
| ಮಾಮಿಲ್ಲವಾರು | ಗವ್ವಲ |
| ಮಾಗುಲ್ಲೊಲ್ಲರು | ಮಚೊಲ |
| ಮಾಸಗೊಂತವಾರು | ತ್ರಲ್ಲಿವಿವಾಸೀ |
| ಮಾರಾಶಿವಾರು | ಪಾಲಕುಲ |
| ಮಾರಂವಾರು | ಬಿಲ್ವಪತ್ರಿ |

| | |
|---|---|
| ಮಾತಂಗಿವಾರು | ಸೋಮಲ |
| ಮಾಡಂಟ್ಲುವಾರು | ಚಿಂದಲ |
| ಮಾಮೆಳ್ಳು | ಗವಲ |
| ಮಜ್ಜಿಗಿವಾರು | ನವನಾಲ |
| ಮಲಗಾನಿವಾರು | ತೆಲ್ಲತುಮ್ಮ |
| ಮಂಕಿನೋಲ್ಲಲು | ನಶಿಯಾಲ |
| ಮಜ್ಜಿಗವಾರು | ಬೆಲಗೊಂಡ |
| ಮದ್ದಿಕೆರವಾರು | ಕೊಟ್ಟೇರು |
| ಮದ್ದಿಕೇರಿವಾರ | ಕಾಲೇಲ |
| ಮಕ್ಕಾಲೋಲ್ಲು | ವಜ್ರಾಲು |
| ಮರ್ರೆವಾರು | ಕಮ್ಮೀಲ |
| ಮಲ್ಲೆಲವಾರು | ಮಲ್ಲೆ |
| ಮದ್ದಾಲವಾರು | ಎಂಪಿಲಿ |
| ಮಮ್ಮೇವಾರು | ಅರಸಲ |
| ಮೇದಗಿರಿವಾರು | ಶಿವನಂದ |
| ಮುಕ್ರಿವಾರು | ಕಮ್ಮೀಲ |
| ಮುರ್ಸುವಾರು | ಅಕ್ಷಿಂತಲು |
| ಮುರಮುವಾರು | ಗಾಜುಲ |
| ಮೊಪೆರ್ಲವಾರು | ನಾಗಮಲ್ಲಿ |
| ಮೆಗ್ಗಾಡಿವಾರು | ಜನ್ನೆಲ |
| ಮೆಚ್ಚೆಲ್ಲವಾರು | ನೀಲಮೇಘ |
| ಮೆಲ್ಲರುವಾರು | ಶ್ರೀಗಂಧಮು |
| ಮಿಸುಕುಲವಾರು | ಸೋಮಲ |
| ಮಿಡಿತಲವಾರು | ಎಂಪಿಲ |
| ಯೇಯೇವಾರು | ಬುಡಿಗಲ |
| ಯಂಬಾಡಿವಾರು | ಬಂಗಾರು |
| ಯರ್ರಮಂಟಿವಾರು | ಸೂಮಲ |
| ಯರ್ರಮಂಚಿವಾರು | ಕುಂಚಲ |

| | |
|---|---|
| ಯರ್ರಮಡೊಲ್ಲರು | ತುಮ್ಮೆದಲ |
| ಯರ್ರಮಡೊಲ್ಲವಾರು | ತುಮ್ಮೆದಲ |
| ಯಲಮಂಡಲವಾರು | ಸೂರೇ |
| ಯಲಮಲ | ಸೂರೆ |
| ಯರಾಶಿವಾರವಾರು | ಪಾಲಾಕುಲ |
| ಯರಗೊರ್ಲವಾರು | ವೇಪಾಕುಲ |
| ರಾಯಲವಾರು | ಮಿಟುಕಲ |
| ರಾಯಕೂರಬೋಲ್ಲು | ಅಶೆಲ |
| ರೋಕಂಟಟಿವಾರು | ಪಾಲಾಕುಲ |
| ರೂಕೊಂಡವಾರು | ಸೊಮ್ಮುಲ |
| ರುದ್ರಂಟಿವಾರು | ಕೋಶರ್ಲ |
| ರಬ್ಬಗುಂಡವಾರು | ನವನಂದಲ |
| ರೆಡ್ಡಿಬೋಯಿನವಾರು | ಕೊಮ್ಮರ ಮಲ್ಲೆಲು |
| ರೆಡ್ಡಿ ಬೋಯಿನವಾರು | ಮಲ್ಲೆಪೂವುಲ |
| ರೇಕಾರುವಾರು | ನಾರಶಿಲ |
| ರೇಕುಂಡ್ಲವಾರು | ಪಸುಪುಲ |
| ರೇಪಲ್ಲೆವಾರು | ದಾಸ |
| ಲಂಗಾಪುರಂವಾರು | ಬಂಗಾರು |
| ಲಾಡೆಮುವಾರು | ಮೇಡಿಕಾಯಲ |
| ವನಚರ್ಲವಾರು | ಮೇಡಲ |
| ವುದ್ವಾಲವಾರು | ಸೈನೀಲ |
| ವುನ್ನಂಗರಮುವಾರು | ಇಟಿಕೆಲ |
| ವನ್ನೀಲೋಲ್ಲು | ವಜ್ರಾಲ |
| ವರ್ರಮಂಟ್ಲವಾರು | ಪಾಸೀ |
| ವುಪ್ಪರವಾರು | ಬೆಡಿಪೋತುಲ |
| ವುರಿಕಂಟಿವಾರು | ಸೂರ್ಯಮಲ್ಲಿ |
| ವತ್ತಿಗಾನಿವಾರು | ಜಿಲ್ಲಾಲು |
| ವುನಿಸೇವಾರು | ಕುದ್ರಲ |

ವುನಿಶರವಾರು
ವಿಲ್ಲೇವಾರ
ಶಿವಗಾನಿವಾರು
ಶಿವರಾತ್ರಿವಾರು
ಶೀಲ್ಲವಾರು
ಶೆಟ್ಟಾಲೋಲ್ಲರು
ಶಂಖಲೋರು
ಸೆವಿಗೀಲೋಲ್ಲರು
ಸೊಂಕಟವಾರು
ಸಾತಿಬಂಡಿವಾರು
ಸೊಜ್ಜನವಾರು
ಸಾಕಿಂಟಿವಾರು
ಸೊಂಪಾಟಿವಾರು
ಸೋಶೀವಾರು
ಸೋಲಪಾಟಿವಾರು
ಸೋದಾಲೊಲ್ಲು
ಸೋಮಕುಂಟವಾರು
ಸೀಲಮುವಾರು
ಸುಜಲವಾರು
ಸೂರೇವಾರು
ಸುಂಕರ್ರವಾರು
ಸುಂಕರವಾರು
ಸುಕ್ಕೆಲೂರುವಾರು
ಸುಬ್ಬರೊಲ್ಲರು
ಸುಬ್ಬರೋಲ್ಲರು
ಸಮಕುಂಟಿವಾರು
ವಾಡಿಸೆರ್ಲವಾರು
ಹರ್ರಮಡೊಲ್ಲರು

ಕರ್ರಲ
ಕಾನಗಲ
ಏನುಗುಲ
ಬೆಲ್ಲಾಲ
ಅಗ್ಗಿರಾಲ
ಜಿನೆರ್ಲ
ಸುನಾಲ
ಸಾಕೂರಿ
ಕಂಕನಾಲ
ಎಲೀಲ
ನಾಮೊಲ
ದೂಲ
ಕನಗಲ
ಚಾಂಕಂಟಿ
ಕೊಂಡಲ
ಜಿನ್ನೆಲ
ಶೇಷಗಿರಿ
ರಸಬಂಡ
ನೀಲಗಿರಿ
ಸರೇಂದ್ರ
ಶಿವಸೇನ
ನನ್ನೇಲ
ಮಲ್ಯಾಲು
ರಾಜಗಿರಿ
ಮಲ್ಲ್ಯಾಲ
ವೇಪಲ
ಬಸನಾಲ
ತುಮ್ಮಿದಲ

ಈ ಮೇಲಿನ "ಬೆಡಗು ಮತ್ತು ಗೋತ್ರಗಳನ್ನು ಅನಂತಪುರಂ ಜಿಲ್ಲೆಯ ರಾಪ್ತಾಡು ಮಂಡಲಂ ಗಂಗಲಕುಂಟ ಗ್ರಾಮದಲ್ಲಿರುವ ತಗರಜೋಗಿ ಲಾಲಿ ಬೀರಪ್ಪನ ಮಕ್ಕಳಾದ ರಾಮಣ್ಣ ಆತನ ಏಳು ಜನ ಅಣ್ಣ ತಮ್ಮಂದಿರಿಂದ ಶೇಖರಿಸಿದವು."[೬]

ಹೀಗೆ ಕ್ಷೇತ್ರಕಾರ್ಯದಲ್ಲಿ ಕೇಳಿ ತಿಳಿದ ಮತ್ತು ಈ ಮೊದಲು ವಿದ್ವಾಂಸರು ಗುರುತಿಸಿದ ಬೆಡಗುಗಳನ್ನು ಗಮನಿಸಿದರೇ ಅವು ಸಾಕಷ್ಟಾಗುತ್ತವೆ. ಈ ಅಧ್ಯಯನದ ಗಡಿ ಪರಿಸರ ವ್ಯಾಪ್ತಿಯಲ್ಲಿ ೨೦೦ಕ್ಕೂ ಅಧಿಕವಾಗಿ ದೊರೆಯುತ್ತವೆ. ಅತೀ ಹೆಚ್ಚು ಒಕ್ಕಲಿನ ಅಣ್ಣ-ತಮ್ಮಂದಿರನ್ನು ಹೊಂದಿರುವ ಬೆಡಗುಗಳು ಈ ಕೆಳಗಿನಂತಿವೆ.

ಅರಿಷಿಣ ಕುರುಬರು, ಅಳ್ಳೇನು ಕರುಬರು, ಎಕ್ಕೆಲಾರು, ಐಗಳೇರು, ಕಂಚಿನ ಕುರುಬರು, ಕಂತೆಲಾರು, ಕಡ್ಲೆ ಕುರುಬರು, ಕೋರೆವ ಕುರುಬರು, ಗ್ವಾಡೇನು ಕುರುಬರು, ಗೋಸೆಲಾರು, ಗೌಡನ ಕುರುಬರು, ಗುಂಡ್ಲಾರು, ಬಾಗನ ಕುರುಬರು, ಬಾಗಲ ಕುರುಬರು, ಕ್ವಾಟೆ ಕುರುಬರು ರಾಯಲ ಕುರುಬರು, ಸುಲುಪನ್ ಕುರುಬರು, ಮಜ್ಜಿಗೆ ಕುರುಬರು, ಅದರಲ್ಲಿ ನೀರು ಮಜ್ಜಿಗೆ-ಗಟ್ಟಿ ಮಜ್ಜಿಗೆ ಎಂಬ ಎರಡು ಪಂಗಡಗಳು, ಬಿಜ್ಜನ ಕುರುಬರು, ಬಿಲ್ಲನ ಕುರುಬರು, ಬ್ಯಾಲನ ಕುರುಬರು, ಮಾಸಲು ಕುರುಬರು, ದಾಣಿ ಕುರುಬರು, ಬೆಳ್ಳನ ಕುರುಬರು. ಮೊಂಡು ಕುರುಬರು, ಬಂಡಾರದವರು, ರಾಯಲ ಕುರುಬರು ತುರುಬಿನ ಕುರುಬರು, ಪಾಲನ ಕುರುಬರು, ಬಲ್ಲೇನ ಕುರುಬರು, ಬನ್ನೆಲಾರು, ಮೂರು ಉಣ್ಣೆಯವರು, ಬೆಲ್ಲದವರು, ಬೆಳ್ಳಿಯವರು, ಹುಲ್ಲೇನ ಕುರುಬರು, ಹೆಬ್ಬಿಲಿ ಕುರುಬರು, ಹಾಲು ಕುರುಬರು, ಶಾವಂತ್ಲರು, ಹೊನ್ನುಂಗುರದವರು, ಸತ್ಯನ ಕುರುಬರು, ಸುಲುಪುನ್ ಕುರುಬರು ಮುಂತಾದವುಗಳನ್ನು ಹೆಸರಿಸಬಹುದು.

**೩.೧.೨. ಬಂಧುತ್ವ :** ಜಗತ್ತಿನ ಎಲ್ಲ ಸಮಾಜಗಳಲ್ಲಿಯೂ ಜನ ಬೇರೆ ಬೇರೆ ರೀತಿಯ ಸಂಬಂಧಗಳಿಂದ ಬೆಸೆದುಕೊಂಡಿರುವುದು ಸಾಮಾನ್ಯ. ಅದರಲ್ಲಿಯೂ ಪ್ರಮುಖವಾದುದು ರಕ್ತಸಂಬಂಧ. ಸರಳ ಸಾಮರಸ್ಯ ಜೀವನ ನಡೆಸುವುದಕ್ಕೆ ಇದು ಹೆಚ್ಚು ಪ್ರಾಶಸ್ತ್ಯ ನೀಡುತ್ತದೆ. ಮಾನವನ ಸಂತಾನೋತ್ಪತ್ತಿ ಪ್ರವೃತ್ತಿ ಎರಡು ಬಗೆಯ ಬಂಧುತ್ವಕ್ಕೆ ಅವಕಾಶ ಮಾಡಿಕೊಡುತ್ತದೆ. ೧. ಪತಿ-ಪತ್ನಿಯರ ವೈವಾಹಿಕ ಸಂಬಂಧ ೨. ತಂದೆ-ಮಕ್ಕಳ ರಕ್ತ ಸಂಬಂಧ. ಮೊದಲನೆಯ ಸಂಬಂಧ ಸಮಾಜದ ಅಥವಾ ಕಾನೂನಿನ ಅಂಗೀಕಾರ ಪಡೆದು ಅಸ್ತಿತ್ವ ತಾಳಿದರೆ, ಎರಡನೆಯ ಸಂಬಂಧಕ್ಕೆ ರಕ್ತ ಸಂಬಂಧವೇ ಪ್ರಮುಖವಾದುದು. ಪತಿ-ಪತ್ನಿಯ ಕಡೆಯಿಂದ ಹುಟ್ಟಿಕೊಳ್ಳುವ ಬಂಧಗಳೆಲ್ಲ ವೈವಾಹಿಕ ಹಿನ್ನೆಲೆಯಲ್ಲಿ ಬಂದಂತಹ ಸಂಬಂಧಗಳು. ಹೀಗೆ ವೈವಾಹಿಕ ಬಾಂಧವ್ಯದಿಂದ ಬೆಸೆಯಲ್ಪಡುವ ಜನ ವಾಸ್ತವವಾಗಿ ರಕ್ತಸಂಬಂಧಿಗಳಾಗುವುದಿಲ್ಲ. ಇನ್ನೂ ಎರಡನೆಯದು ತಂದೆ-ಮಕ್ಕಳ ಸಂಬಂಧ. ಇದು ಪ್ರಾಥಮಿಕವಾದುದು, ನಿಜವಾದ ರಕ್ತಸಂಬಂಧದಲ್ಲಿ ಉತ್ಪನ್ನವಾದುದು.

ತಂದೆತಾಯಿಗಳು ಮಕ್ಕಳ ಜನನಕ್ಕೆ ಕಾರಣರಾಗುತ್ತಾರೆ. ಪರಸ್ಪರ ಅವಲಂಬನೆ, ನೆರವು ಇವುಗಳು ಈ ಬಗೆಯ ಬಾಂಧವ್ಯದ ಮೇಲೆ ಪ್ರಭಾವ ಬೀರುತ್ತವೆ. ಬೇರೆ ಬೇರೆ ರೀತಿಯ ಸಂಬಂಧಗಳನ್ನು ಗುರುತಿಸಿಕೊಳ್ಳಲು ಅವು ಅವಕಾಶ ಮಾಡಿಕೊಡುತ್ತವೆ. ತಾತ>ಮಗ>ಮೊಮ್ಮಗ>ಮರಿಮೊಮ್ಮಗ ಹೀಗೆ ಸಂಬಂಧದ ದೊಡ್ಡ ಕೊಂಡಿಯೇ ಏರ್ಪಡುತ್ತದೆ. ಈ ದೃಷ್ಟಿಯಿಂದ ಬಂಧುತ್ವ ಮಾನವ ವರ್ಗೀಕರಣದ ಒಂದು ಪ್ರಮುಖ ಅಂಗವಾಗಿ ನಿಲ್ಲುತ್ತದೆ.

ಮಾನವ ಜೀವನದ ಯಶಸ್ವಿಗೆ ಬಂಧುತ್ವ ಮತ್ತು ವಿವಾಹ ಕಲ್ಪನೆ ಅಗತ್ಯ. ಇವು ನಾಲ್ಕು ಮೂಲಭೂತ ತತ್ವಗಳಿಗೆ ಬದ್ಧವಾಗಿರುತ್ತವೆ.

೧. ಸ್ತ್ರೀಯರು ಮಕ್ಕಳನ್ನು ಹಡೆಯುವುದು.

೨. ಪುರುಷರು ಸ್ತ್ರೀಯರಿಗೆ ಗರ್ಭದಾನ ಮಾಡುವುದು.

೩. ಸ್ತ್ರೀ-ಪುರುಷರು ಮಕ್ಕಳ ಮೇಲೆ ನಿಯಂತ್ರಣ ಸಾಧಿಸುವುದು.

೪. ನಿಕಟ ಸಂಬಂಧಿಗಳ ನಡುವೆ ಲೈಂಗಿಕ ಸಂಬಂಧ ನಿಷಿದ್ಧವಾಗಿರುವುದು.

ಕುರುಬರಲ್ಲಿ ಹಿಂದೆ ಅವಿಭಕ್ತ ಕುಟುಂಬಗಳೇ ಜಾಸ್ತಿಯಿದ್ದವು. ಒಂದೇ ಸೂರಿನಲ್ಲಿ ಮೂರು ಅಥವಾ ನಾಲ್ಕು ತಲೆಮಾರಿನ ಜನರು ವಾಸಿಸುತ್ತಿದ್ದರು. ಇಂದಿಗೂ ಗಡಿ ಪರಿಸರದಲ್ಲಿ ಅನೇಕ ಕಡೆ ಅವಿಭಕ್ತ ಕುಟುಂಬಗಳಿವೆ. ಸಾಮಾನ್ಯವಾಗಿ ಇವರು ಕುರಿಸಾಕಾಣಿಕೆ, ಕಂಬಳಿ ನೇಯ್ಗೆ ಮತ್ತು ಕೃಷಿಯನ್ನು ತಮ್ಮ ಕುಲ ಕಸುಬುಗಳನ್ನಾಗಿ ಮಾಡಿಕೊಂಡಿರುವುದರಿಂದ ಇವುಗಳನ್ನು ಮುಂದುವರಿಸಲು ಹೆಚ್ಚಿನ ಜನರ ಅವಶ್ಯಕತೆ ಇರುವುದರಿಂದ ಅವಿಭಕ್ತ ಕುಟುಂಬ ಪದ್ಧತಿ ಇಂದಿಗೂ ಉಳಿದುಕೊಂಡು ಬಂದಿದೆ. ಜೊತೆಗೆ ಇವರಿಗೆ ಸಂಬಂಧಗಳಲ್ಲಿ ನಂಬಿಕೆ ಮತ್ತು ಭಾವನಾತ್ಮಕ ಗೌರವವಿರುವುದರಿಂದ ಇವರು ಒಟ್ಟಿಗೆ ಬದುಕಲು ಇಷ್ಟಪಡುತ್ತಾರೆ. ಇತ್ತೀಚೆಗೆ ವಿದ್ಯಾವಂತರು, ನೌಕರಿಯಲ್ಲಿರುವವರು ನಗರಗಳಿಗೆ ವಲಸೆ ಹೋಗುವುದರಿಂದ ಹಾಗೂ ಇಂದಿನ ಯುವ ಪೀಳಿಗೆ ಕಷ್ಟಕರ ಜೀವನಕ್ಕೆ ಒಗ್ಗಿಕೊಳ್ಳದೆ ನಗರಗಳತ್ತ ಮುಖಮಾಡಿರುವುದರಿಂದ ಅನಿವಾರ್ಯವಾಗಿ ವಿಭಕ್ತ ಕುಟುಂಬಗಳು ನಿರ್ಮಾಣವಾಗುತ್ತಿವೆ. ಇಂತಹ ಕುಟುಂಬಗಳಲ್ಲಿ ಗಂಡ ಹೆಂಡತಿ ವಿವಾಹವಾಗದ ಮಕ್ಕಳಿರುತ್ತಾರೆ. ಅಂದರೇ ಒಂದು ಪೀಳಿಗೆಯ ಜನರಿರುತ್ತಾರೆ. ಇತ್ತೀಚಿನ ದಿನಗಳಲ್ಲಿ ಆಧುನೀಕರಣ, ಜಾಗತೀಕರಣ, ನಗರೀಕರಣ, ಸಾಂಪ್ರದಾಯಿಕ ಕುಲಕಸುಬುಗಳ ನಾಶ, ಪಾಶ್ಚಾತ್ಯ ಶಿಕ್ಷಣ, ಮಾಧ್ಯಮಗಳು ಗ್ರಾಮೀಣ ಪ್ರದೇಶಕ್ಕೆ ಲಗ್ಗೆ ಇಟ್ಟಿದ್ದು ಇಂದು ವಿಭಕ್ತ ಕುಟುಂಬಗಳು, ಆಧುನಿಕ ಕುಟುಂಬಗಳು ಹೆಚ್ಚಾಗಲು ಕಾರಣವಾಗಿವೆ.

ಕುರುಬರು ತಮ್ಮ ಬಂಧು-ಬಳಗದವರನ್ನು ರಕ್ತ ಸಂಬಂಧಿಕರು ಮತ್ತು ನೆಂಟರೆಂದು(ಬೀಗರು) ಎರಡು ವಿಧವಾಗಿ ವಿಂಗಡಿಸಿಕೊಳ್ಳುತ್ತಾರೆ. ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಪಡೆಯುವ ಎಲ್ಲಾ

ಪುರುಷರನ್ನು ಅಣ್ಣತಮ್ಮಂದಿರು ಅಥವಾ ದಾಯಾದಿಗಳೆಂದು, ಇತರರನ್ನು ಬೀಗರೆಂದೂ ಕರೆಯಲಾಗುತ್ತದೆ. ಕುಲ ಹಾಗೂ ವಂಶದವರೆಲ್ಲಾ ದಾಯಾದಿಗಳು ಸಮೀಪ ಅಂದರೆ ಒಂದೇ ವಠಾರಗಳಲ್ಲಿ ವಾಸಿಸುತ್ತ, ಮನೆ, ಜಮೀನು ಹಂಚಿಕೊಳ್ಳುವುದಲ್ಲದೆ ಹಬ್ಬ-ಹರಿದಿನ, ಮದುವೆ, ಮರಣ, ಮುಂತಾದ ಕ್ರಿಯಾವಿಧಿಗಳಲ್ಲಿ ಸಾಮೂಹಿಕವಾಗಿ ಪಾಲ್ಗೊಳ್ಳುತ್ತಾರೆ. ಹಾಗೆಯೇ ಅವರು ನೆರೆಹೊರೆಯವರಾಗಿ ವಾಸಿಸುತ್ತಿರುವುದರಿಂದ ಕಷ್ಟಗಳು ಬಂದಾಗ ಬಂಧು ಬಾಂಧವರ ನೆರವಿಗೆ ಧಾವಿಸುತ್ತಾರೆ.

ಧರ್ಮಾಚರಣೆಯ ವಿಷಯವಾಗಿ ಹೇಳುವುದಾದರೆ ದಾಯಾದಿಗಳು ಒಂದೇ ಕುಲ ಹಾಗೂ ವಂಶಕ್ಕೆ ಸೇರಿರುವುದರಿಂದ ಗುಡಿಕಟ್ಟು ದೇವರುಗಳನ್ನು ಹಾಗೂ ಜಾತ್ರೆ-ಹಬ್ಬಗಳನ್ನು ಒಟ್ಟಿಗೆ ಸೇರಿ ಆಚರಿಸುತ್ತಾರೆ. ಇಂತಹ ಜಾತ್ರೆ, ಹಬ್ಬ ಮತ್ತು ಮದುವೆಗಳಲ್ಲಿ ಇವರ ಸಂಬಂಧ ಅಂದರೆ ಬಂಧುತ್ವದ ಸಂಬಂಧ ಮಹತ್ವದ ಪಾತ್ರ ವಹಿಸುತ್ತದೆ. ಅಂದರೆ ಒಂದು ಊರಿನಲ್ಲಿ ಒಂದು ವಂಶ ಅಥವಾ ಕುಲಬೆಡಗಿಗೆ ಸಂಬಂಧಿಸಿದ ವ್ಯಕ್ತಿಗಳಿದ್ದರೆ ಅವರ ಕುಲಕ್ಕೆ ಸೇರಿದವರು ಯಾವುದೇ ಪ್ರದೇಶದಲ್ಲಿದ್ದರೂ ಸೋದರ-ಸೋದರಿಯರೇ ಆಗುತ್ತಾರೆ. ಮತ್ತೆ ಕುಲ ಬೆಡಗುಗಳೇ ಚದುರಿ ಹೋಗಿ ಬೇರೆ ಹೆಸರಿನಿಂದ ಇಂದು ಗುರುತಿಸಿಕೊಂಡರೂ ಅವರು ಸೋದರರಂತೆ ನಡೆದು ಕೊಳ್ಳುವುದಿದೆ. ಅಂತಹ ಕೆಲವನ್ನು ನೋಡುವುದಾದರೇ,

೧. ಅಳ್ಳೇನ ಕುರುಬರು
೨. ಗೌಡ ಕುರುಬರು
೩. ಹಾಲು ಕುರುಬರು
೪. ಮಜ್ಜಿಗೆ ಕುರುಬರು(ನೀರು ಮಜ್ಜಿಗೆ, ಗಟ್ಟಿ ಮಜ್ಜಿಗೆ)
೫. ಬಾಗನ ಕುರುಬರು

೧. ರಾಯಲ ಕುರುಬರು
೨. ಸುಲುಪನ್ ಕುರುಬರು

೧. ಹಾಲಿನವರು
೨. ಗೋಸ್ಲಾರು
೩. ಶಾವಂತ್ಲರು

೧. ಹೆಬ್ಬುಲಿ ಕುರುಬರು
೨. ಹುಲ್ಲೇನ ಕುರುಬರು
೩. ಬಿಜ್ಜನ ಕುರುಬರು

೧. ಬ್ಯಾಲದವರು

೨. ಬೆಳ್ಳಿಯವರು

೩. ಬೆಲ್ಲದವರು

೪. ಮೂರು ಉಣ್ಣೆಯವರು

ಈ ಮೇಲೆ ಹೆಸರಿಸಿದ ಬೆಡಗುಗಳು ಮೂಲದಲ್ಲಿ ಒಂದೇ ಆಗಿದ್ದು, ಕಾಲಾಂತರದಲ್ಲಿ ಬದಲಾಗಿವೆ. ಅದರಿಂದಾಗಿ ಇಂದಿಗೂ ಇವರು ಅಣ್ಣ-ತಮ್ಮಂದಿರೆಂದೇ ಹೇಳಿಕೊಳ್ಳುತ್ತಾರೆ. ಪರಸ್ಪರ ಇವರಲ್ಲಿ ಕೊಡು-ಕೊಳೆಯ ಸಂಬಂಧಗಳನ್ನು ಬೆಳೆಸುವುದಿಲ್ಲ. ತಲತಲಾಂತರದಿಂದಲೂ ಈ ಬಂಧುತ್ವದ ನಿಯಮಗಳನ್ನು ಕಾಪಾಡಿಕೊಂಡು ಬರುತ್ತಲಿದ್ದಾರೆ. ವಿವಾಹ ಸಂಬಂಧಗಳನ್ನು ಬೆಳೆಸುವಾಗ ಈ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಎಷ್ಟೇ ವಿದ್ಯಾವಂತರಿರಲಿ, ನೌಕರರಿರಲಿ, ನಗರವಾಸಿಗಳಿರಲಿ ಈ ಬಂಧುತ್ವವನ್ನು ಪಾಲಿಸಲೇಬೇಕು. ಗೊತ್ತಿದ್ದೊ ಗೊತ್ತಿಲ್ಲದೆಯೋ ಅಥವಾ ಪ್ರೇಮಿಸಿ ಮದುವೆಯಾಗಿ ಈ ನಿಯಮಗಳನ್ನು ಮೀರಿದರೇ ಅವರನ್ನು ಅಣ್ಣ-ತಮ್ಮಂದಿರ ಗುಡಿಕಟ್ಟಿನಿಂದ ಬಹಿಷ್ಕರಿಸಲಾಗುತ್ತದೆ. ಅದಕ್ಕೆ ಸಂಬಂಧಿಸಿದಂತೆ ಒಂದು ಉದಾಹರಣೆ ನೋಡುವುದಾದರೇ ಸುಲುಪನ್ ಕುರುಬರ ಗಂಡಿನೊಂದಿಗೆ ಬಾಗನ ಕುರುಬರ ಹೆಣ್ಣಿನ ಮದುವೆ ಸಾಗಿತ್ತು. ಹಿರಿಯರಿಗೆ ತಿಳಿದಾಗ ಆಕೆ ತಂಗಿಯ ವರಸೆಯಾಗಬೇಕು ಮದುವೆ ಮಾಡಿಕೊಳ್ಳಬಾರದೆಂದು ಹೇಳಿದರು. ಆದರೂ ಅವರ ಮಾತು ಲೆಕ್ಕಿಸದೇ ಮದುವೆ ಮಾಡಲಾಯಿತು. ನಂತರ ವಧು-ವರರು ಮನೆದೈವಕ್ಕೆಂದು ಕಾಮಸಮುದ್ರಕ್ಕೆ ಬಂದಾಗ ಅವರನ್ನು ಒಳಗೆ ಬಿಡಿಸಿಕೊಳ್ಳದೇ ಕುಲಾಚಾರಗಳನ್ನು ಮೀರಿದ್ದರಿಂದ ಒಕ್ಕಲಿನಿಂದಲೇ ಬಹಿಷ್ಕಾರ ಹಾಕಲಾಯಿತು. ಈ ಬಂಧುತ್ವದ ನಿಯಮಗಳು ಬೇರೆಯವರಿಗೆ ಆಶ್ಚರ್ಯಕರವಾಗಿ ಕಂಡರೂ ಸತ್ಯವಾಗಿವೆ. ಬದಲಾಗುತ್ತಿರುವ ಈ ದಿನಗಳಲ್ಲಿಯೂ ಉಳಿದು ಬಂದಿರುವ ನಿಷಿದ್ಧಗಳು ಬುಡಕಟ್ಟು ಸಂಸ್ಕೃತಿಯ ಮೂಲ ಚಹರೆಗಳನ್ನು ನೆನಪಿಸುತ್ತವೆ.

**೩.೧.೩.ಜೀವನಾವರ್ತನ ಆಚರಣೆಗಳು :** ಭಾರತೀಯ ಸಮಾಜ ಪಾಶ್ಚಿಮಾತ್ಯ ಸಮಾಝುಗಳ ವರ್ಗ ವ್ಯವಸ್ಥೆಯಂತಿರದೆ ವರ್ಣವ್ಯವಸ್ಥೆಯಿಂದ ಮುಂದುವರೆದು ಗುಪ್ತರ ಕಾಲಕ್ಕೆ ವೃತ್ತಿಯಾಧಾರಿತ ಜಾತಿಗಳಾಗಿ ಕಟ್ಟುನಿಟ್ಟಾಗಿ ಬೆಳೆದುಬಂದಿತು. ಇದು ಭಾರತೀಯ ಸಮಾಜದಲ್ಲಿನ ಶ್ರೇಣೀಕರಣ, ಶಿಷ್ಟ-ಪರಿಶಿಷ್ಟ ಎಂಬುವುಗಳನ್ನು ಬಿಂಬಿಸುತ್ತದೆ. ಇಂಥ ಜಾತಿ ವ್ಯವಸ್ಥೆಯ ಭಾರತೀಯ ಸಮಾಜ ತನ್ನೊಳಗಿನ ಸಾಂಸ್ಕೃತಿಕ ವಿಶೇಷಗಳಿಂದಾಗಿ ವಿಶಿಷ್ಟವೆನಿಸಿದೆ. ಸಮುದಾಯ ಯಾವುದೇ ಇರಲಿ ತನ್ನೊಳಗಿನ ಸದಸ್ಯನಿಗೆ ಹುಟ್ಟಿನಿಂದ ಸಾಯುವವರೆಗೆ ವಿವಿಧ ಹಂತಗಳಲ್ಲಿ ಕ್ರಿಯಾವಿಧಿಗಳ ಮುಖೇನ ಸಾಮಾಜಿಕ ಸ್ಥಾನಮಾನ ನೀಡುತ್ತದೆ. ಅವೇ ಜೀವನಾವರ್ತನ ಆಚರಣೆಗಳು. ಸಮಾಜದಲ್ಲಿ ಒಬ್ಬ ಸದಸ್ಯ ಒಂದು ಕಣವಿದ್ದಂತೆ. ಆಕಣಕ್ಕೆ ಒಂದು ಜೀವನವಿರುತ್ತದೆ. ಹುಟ್ಟುನಿಂದ ಅಂತ್ಯದವರೆಗೂ

ಪರಂಪರಾಗತವಾಗಿ ಈ ಆಚರಣೆಗಳು ನೆರಳಿನ ರೂಪದಲ್ಲಿ ಜೊತೆಗಿರುತ್ತವೆ. ಇವು ಲಿಂಗ, ಸಮುದಾಯ, ಧರ್ಮಾಧಾರಿತವಾಗಿ ಸ್ವರೂಪದಲ್ಲಿ ಕೆಲವು ಬದಲಾವಣೆಗಳಿದ್ದರೂ ಎಲ್ಲರಲ್ಲೂ ಸಾಮಾನ್ಯವಾಗಿ ಕಂಡುಬರುತ್ತವೆ.

ಮಾಣವ ಇತರೆ ಪ್ರಾಣಿಗಳಿಗಿಂತ ಭಿನ್ನವಾಗಿದ್ದು, ಪ್ರತೀ ಸಮುದಾಯಗಳಲ್ಲಿಯೂ ಮಡಿ–ಮೈಲಿಗೆಯು ಮಾನವನ ಜೀವನಾವರ್ತಕ ಆಚರಣೆಗಳೊಂದಿಗೆ ಬೆಸೆದುಕೊಂಡಿವೆ. ಮಡಿ–ಮೈಲಿಗೆ ಮೇಲ್ನೋಟಕ್ಕೆ ಒಂದೇ ಎನಿಸಿದರೂ ಮಾಣವನ ಸಂತೋಷದ ಸಂದರ್ಭಗಳಾದ ಹುಟ್ಟು, ಋತುಮತಿ, ಸೂತಕಗಳನ್ನು ಮೈಲಿಗೆಯೆಂದು, ಮರಣವನ್ನು ದುಃಖದ ಹಿನ್ನೆಲೆಯಲ್ಲಿ ಮಡಿಯೆಂದು ಕರೆಯಲಾಗಿದೆ. ಪ್ರಸ್ತುತ ಕುರುಬ ಸಮುದಾಯದಲ್ಲಿ ಜನನ, ನಾಮಕರಣ, ಋತುಮತಿ, ಮದುವೆ, ಮರಣದಂತಹ ಆಚರಣೆಗಳು ಇತರೆ ಸಮುದಾಯಗಳಿಗಿಂತ ಹೇಗೆ ಭಿನ್ನವಾಗಿವೆ, ಜೊತೆಗೆ ಅವುಗಳ ಸಾಂಸ್ಕೃತಿಕ ಅನನ್ಯತೆಯನ್ನು ಈ ಕೆಳಗೆ ಅವುಗಳನ್ನು ವಿವರಿಸುವ ಮೂಲಕ ಚರ್ಚೆಗೆ ಒಳಪಡಿಸಲಾಗಿದೆ.

**ಜನನ:** ಭಾರತೀಯರಲ್ಲಿ ಹೆಣ್ಣೊಬ್ಬಳ ಬದುಕು ಸಾರ್ಥಕತೆಯನ್ನು ಪಡೆಯುವುದು ಮಗುವಿಗೆ ಜನ್ಮ ನೀಡುವ ಮೂಲಕ ಎಂಬ ನಂಬುಗೆ ಪ್ರಾಚೀನವಾದುದು. ಸ್ತ್ರೀಯು ತನ್ನ ಜೀವವನ್ನೇ ಮುಡಿಪಾಗಿಟ್ಟು ಕರುಳ ಕುಡಿಗೆ ಜನ್ಮ ನೀಡಿ ಅದರ ಪಾಲನೆ–ಪೋಷಣೆಯನ್ನು ಮಾಡುವಳು. ಹಾಗಾಗಿಯೇ ಭಾರತಿಯರು ಸ್ತ್ರೀಯನ್ನು ಭೂದೇವಿ, ಸೃಷ್ಟಿಕರ್ತೆಯೆಂದು ಕರೆಯುವುದು. ಭಾರತದಲ್ಲಿ ಸಾಕಷ್ಟು ಸಮುದಾಯಗಳಲ್ಲಿಯೂ ಹೆಣ್ಣಿನ ಪ್ರಥಮ ಹೆರಿಗೆ ತಾಯಿಯ(ತವರು) ಮನೆಯಲ್ಲಿಯೇ ನಡೆಯಬೇಕೆಂಬ ನಿಯಮ ರೂಢಿಯಿದೆ. ಅದರಂತೆಯೇ ಕುರುಬ ಸಮುದಾಯದಲ್ಲಿಯೂ ಸಹ ಮೊದಲ ಹೆರಿಗೆ ತವರುಮನೆಯಲ್ಲಿಯೇ ಆಗಬೇಕೆಂಬ ಪದ್ಧತಿಯಿದೆ. ಗರ್ಭಿಣಿಯಾದ ಸ್ತ್ರೀಯನ್ನು ೫ ಅಥವಾ ೭ನೆಯ ತಿಂಗಳಲ್ಲಿ ತವರಿಗೆ ಕರೆದುಕೊಂಡು ಬರುವ ಪದ್ಧತಿ ಅನಾದಿಕಾಲದಿಂದಲೂ ನಡೆದು ಬರುತ್ತಲಿದೆ. ಅಲ್ಲಿ ಬಯಸಿದ ಬಯಕೆಗಳನ್ನು ತೀರಿಸಿಕೊಳ್ಳುವ, ಉತ್ತಮ ಪೌಷ್ಟಿಕ ಆಹಾರ ಸೇವಿಸುತ್ತ ಸಂತೋಷದಿಂದ ಸಮಯ ಕಳೆಯುತ್ತಾಳೆ. ಗರ್ಭಿಣಿಯಾದ ಸ್ತ್ರೀಯು ಕನಸಿನಲ್ಲಿ ಪೋತುರಾಜು ಅಥವಾ ಪೋತಪ್ಪ ಕಾಣಿಸಿಕೊಂಡಾಗ ಗಂಡುಮಗು 'ಪೋತುರಾಜ'ನನ್ನಾಗಿ ಹುಟ್ಟಿದರೆ ಧೀಕ್ಷೆ ಕೊಡಿಸುವ ಪದ್ಧತಿ ಗುಂಡಿಗೇನಪಲ್ಲಿಯ ಸುತ್ತಮುತ್ತಲ ಹಳ್ಳಿಗಳಲ್ಲಿದೆ.

ನವಮಾಸಗಳು ತುಂಬಿ ಪ್ರಸವ ವೇದನೆಗಳು ಕಾಣಿಸಿದಾಗ ಊರಲ್ಲಿನ ಸೂಲಗಿತ್ತಿಯು ಬಂದು ಹೆರಿಗೆ ಮಾಡಿಸುವಳು. ಹೆರಿಗೆ ಸುಲಭವಾಗಲು ಸೂಲಗಿತ್ತಿಯೊಂದಿಗೆ ಕೆಲ ಅನುಭವಸ್ಥ ಮಹಿಳೆಯರು ಜೊತೆಯಲ್ಲಿರುತ್ತಾರೆ. ಹೆರಿಗೆಗಾಗಿಯೇ ಮನೆಯ ಒಂದೆಡೆ ಕಂಬಳಿಯನ್ನು ಕಟ್ಟಿ, ಪ್ರತ್ಯೇಕ ಜಾಗವನ್ನು ನಿರ್ಮಿಸಿರುತ್ತಾರೆ. ಮಗು ಹುಟ್ಟಿದ ತಕ್ಷಣ ಬಿಸಿನೀರಿನಿಂದ ಸ್ನಾನ ಮಾಡಿಸಿ ಹೊಕ್ಕಳ ಬಳ್ಳಿಯನ್ನು ಕತ್ತರಿಸಿ, ಅರಿಷಿಣ ಪುಡಿಯನ್ನು ಹಚ್ಚುವರು. ನಂತರ ಮಗುವಿನ ಮೈಗೆಲ್ಲ ಎಣ್ಣೆಯನ್ನು ಹಚ್ಚಿ, ಕೈ–

ಕಾಲು ಮುಖ ಮೈಯನ್ನೆಲ್ಲ ತಿದ್ದುವರು ಎಂದು ಸೂಲಗಿತ್ತಿ ಲಕ್ಷ್ಮಮ್ಮ ಹೇಳುವರು. ಹೆಣ್ಣು ಮಗು ಜನಿಸಿದರೆ ತಾಯಿಯ ಮಾಸಿನಿಂದ ಮಗುವಿನ ಮುಖ–ಮೈಯಿ, ಕೈ–ಕಾಲುಗಳನ್ನೆಲ್ಲ ತಿಕ್ಕುವರು. ಇದರಿಂದ ಮಗು ಬೆಳೆದಂತೆ ಕೈ–ಕಾಲು, ಮುಖದಲ್ಲಿ ರೋಮಗಳು ಬರುವುದಿಲ್ಲ ಎಂದು ಹೇಳುವರು. ಗಂಡುಮಗುವಾದರೆ ಗಂಗಾಳ ಒಡೆದು ಸಂತೋಷ ವ್ಯಕ್ತಪಡಿಸುತ್ತಿದ್ದರು. ಇಂದು ಆ ಪದ್ಧತಿಯು ಕಡಿಮೆಯಾಗಿದೆ. ಕೆಲವೆಡೆ ಹುಟ್ಟಿದ ಮಗುವಿಗೆ ಬಿಸಿನೀರ ಸ್ನಾನ ಮಾಡಿಸಿ ಬೇವಿನ ಸೊಪ್ಪನ್ನು ಹಚ್ಚುವರು. ಗಂಡುಮಗುವಾದರೆ ಗಂಗಾಳ ಬಡಿ ಎಂಬ ಮಾತು ಜನಜನಿತವಿದೆ. ಇದು ಸಂತೋಷವನ್ನು ಸೂಚಿಸುವಂತದ್ದು. ಕುರುಬ ಜನಾಂಗದಲ್ಲಿ ಗಂಗಾಳ ಅಥವಾ ತಣಿಗೆಯಿಂದ ಮಗುವಿಗೆ ನೀರು ಚಿಮುಕಿಸುವುದು, ಸೂಜಿಯಿಂದ ಹೊಕ್ಕಳಿನ ಹತ್ತಿರ ಬರೆ ಹಾಕುವಂತಹ ಪದ್ಧತಿಗಳಿವೆ. ಇವು ಅನಾಗರೀಕ ಪದ್ಧತಿಗಳಲ್ಲ. ಪ್ರಾಚೀನ ಪಾರಂಪರಿಕ ಜ್ಞಾನಶಾಖೆಗಳು. ತಾಯಿಯ ಗರ್ಭದಲ್ಲಿ ಸುರಕ್ಷಿತವಾಗಿದ್ದ ಮಗು ಭೂಮಿಗೆ ಬಂದಾಗ ಪರತಂತ್ರ ಜೀವನಕ್ಕೆ ಅಣಿಯಾಗಬೇಕು. ಮೊದಲ ಬಾರಿಗೆ ಹೊಸ ಗಾಳಿಯನ್ನು ತೆಗೆದುಕೊಂಡು ಉಸಿರಾಡಬೇಕು. ಅದಕ್ಕಾಗಿ ಹುಟ್ಟಿದ ಕೂಡಲೆ ಮಗುವನ್ನು ಆಸ್ಪತ್ರೆಯಲ್ಲಿ ತಲೆಕೆಳಗಾಗಿ ಮಾಡುತ್ತಾರೆ. ಕೆಲವೊಮ್ಮೆ ಮಗು ಆಳದಿದ್ದರೆ ನೀರು ಬಡಿಯುವುದು, ಚಿಮುಕಿಸುವುದು ಮಾಡುವರು. ತಣಿಗೆ ಅಥವಾ ಗಂಗಾಳ ಬಡಿಯುವುದು ಸಹ ಇದೇ ರೀತಿಯ ಪ್ರಯತ್ನವಾಗಿದೆ. ಶಬ್ದಕ್ಕೆ ಮಗು ಗಾಬರಿಯಾಗಿ ಅತ್ತಾಗ ಉಸಿರಾಟ ಮತ್ತು ರಕ್ತ ಪರಿಚಲನೆ ತೀವ್ರವಾಗುತ್ತದೆ. ಹೆರಿಗೆ ಮಾಡಿಸಿದ ನಂತರ ಸೂಲಗಿತ್ತಿಗೆ ತಮ್ಮ ಮನೆಯಲ್ಲಿ ಸ್ನಾನ ಮಾಡಿಸಿ, ತಮ್ಮದೊಂದು ಸೀರೆಯನ್ನು ಕಟ್ಟಿಕೊಳ್ಳಲು ಕೊಡುವರು. ಹೆರಿಗೆ ಮಾಡಿಸಿದ ಆಕೆಯ ಬಟ್ಟೆಗಳನ್ನು ತೊಳೆದುಕೊಡುವರು. ಇದು ಅಂದು ಪ್ರತಿ ಹಳ್ಳಿಯಲ್ಲಿದ್ದ ಪ್ರಾಥಮಿಕ ಸಂಬಂಧಗಳನ್ನು ಸೂಚಿಸುತ್ತದೆ. ಇಂದು ಬದುಕು ಯಾಂತ್ರಿಕವಾಗುತ್ತ ಅಂತಹ ಸಂಬಂಧಗಳು ಇಲ್ಲವಾಗುತ್ತಿವೆ.

ಹೆರಿಗೆ ಆದ ದಿನದಿಂದ ಐದು ದಿನಗಳವರೆಗೆ ಮೈಲಿಗೆಯ ದಿನಗಳೆಂದು ಪರಿಗಣಿಸಲಾಗುತ್ತದೆ. ಪ್ರಸ್ತುತವಾಗಿ ಆಸ್ಪತ್ರೆಗಳಲ್ಲಿಯೇ ಹೆಚ್ಚಾಗಿ ಹೆರಿಗೆ ಮಾಡಿಸುವುದರಿಂದ ಮಡಿ ಮೈಲಿಗೆಯೆಲ್ಲ ಕಡಿಮೆಯಾಗಿದೆ. ಹಿಂದೆ ಎಷ್ಟು ಮಕ್ಕಳಾದರೂ ಮನೆಯಲ್ಲಿಯೇ ಹೆರಿಗೆ ಮಾಡಿಸುವಂತಹ ಸೂಲಗಿತ್ತಿಯರು ಇದ್ದರು. ಹತ್ತಾರು ಮಕ್ಕಳನ್ನು ಯಾವುದೇ ತೊಂದರೆಯಿಲ್ಲದೆ ಹಡೆದವರಿದ್ದಾರೆ. ಾದರೆ ಇಂದಿನ ಬಹುತೇಕ ಹೆರಿಗೆಗಳು ಆಸ್ಪತ್ರೆಗಳಲ್ಲಿಯೇ ಆಗುತ್ತಿವೆ. ಅದರಲ್ಲಿಯೂ ಸಿಜರಿನ್ ಹೆರಿಗೆಗಳು ಹೆಚ್ಚಾಗಿವೆ. ಕೆಲ ಖಾಸಗಿ ಆಸ್ಪತ್ರೆಗಳು ಹಣದ ಆಸೆಗಾಗಿ ನಾರ್ಮಲ್ ಹೆರಿಗೆಯನ್ನು ಸಿಜರಿನ್ ಮಾಡುವುದು ಕಂಡುಬರುತ್ತದೆಯಾದರೂ ಇಂದು ಗರ್ಭಿಣಿಯಾದ ಸ್ತ್ರೀಯು ಯಾವುದೇ ಕೆಲಸಗಳನ್ನು ಮಾಡದಿರುವುದು, ಬಳಸುವ ಆಹಾರ ಮತ್ತು ಜೀವನ ಕ್ರಮ ಇದಕ್ಕೆ ವಾಸ್ತವ

ಕಾರಣವಾಗಿದೆ. ಮನೆಯಲ್ಲಿ ಮತ್ತು ಆಸ್ಪತ್ರೆಯಲ್ಲಿ ಹೆರಿಗೆಯಾದರೂ ಮನೆಗೆ ಮರಳಿದ ನಂತರ ನಡೆಸುವ ಕಟ್ಟುಪಾಡುಗಳು ಇಂದಿಗೂ ಜೀವಂತವಾಗಿವೆ. ಐದು ದಿನಗಳವರೆಗೆ ದುಷ್ಟಶಕ್ತಿಗಳು ಕೂಸು ಮತ್ತು ಬಾಣಂತಿಯ ಬಳಿ ಸುಳಿಯಬಾರದೆಂದು ಹಳೆಯ ಪಾದರಕ್ಷೆ ಕಸಬರಿಕೆಗಳನ್ನು ಮನೆಯ ಬಾಗಿಲಲ್ಲಿ ಇಟ್ಟಿರುತ್ತಾರೆ. ಹಾಗೆಯೇ ಬಾಗಿಲ ಮುಂದೆ ಗೋಣಿಚೀಲವನ್ನು ಹಾಸಿ, ತಣ್ಣಗಿರುವಂತೆ ಅದಕ್ಕೆ ಪದೇ ಪದೇ ನೀರು ಹಾಕುತ್ತಿರುತ್ತಾರೆ. ಏಕೆಂದರೆ ಮನೆಯ ಸದಸ್ಯರು ಹೊಲ ಅಡವಿಗೆ ಹೋಗಿ, ಮನೆಯಲ್ಲಿರುವ ಮಕ್ಕಳು ಆಟವಾಡಿ ಮರಳಿ ಮನೆಗೆ ಬಂದವರು ಕೈ-ಕಾಲು ತೊಳೆಯಲು ಮರೆತು ಒಳಗೆ ಬಂದರೆ ಅವರ ಕಾಲಿನಲ್ಲಿರುವ ಸೂಕ್ಷ್ಮಾಣು ಜೀವಿಗಳು ಆ ಹಸಿಯಾಗಿರುವ ಗೋಣಿಚೀಲಕ್ಕೆ ಅಂಟಿಕೊಳ್ಳುತ್ತವೆ ಎಂಬ ದೃಷ್ಟಿಯಿಂದ. ಅದರಿಂದ ಬಾಣಂತಿ ಮಗುವಿಗೆ ಯಾವುದೇ ರೋಗ-ರುಜಿನಗಳು ಬಾರದಿರಲಿ ಎಂಬ ಕಾರಣಕ್ಕೆ ಮೈಲಿಗೆಯ ಐದು ದಿನಗಳು ಮುಗಿದ ಮೇಲೆ ಮನೆಯನ್ನು ಸಗಣಿಯಿಂದ ಸಾರಿಸಿ, ಗೋಡೆಗಳಿಗೆ ಸುಣ್ಣಬಣ್ಣ ಬಳಿದು ಶುಚಿಗೊಳಿಸಲಾಗುತ್ತದೆ. ಕೆಲವಡೆ ನೆಲವನ್ನು ಮಾತ್ರ ಸಾರಿಸುವರು. ಇನ್ನೂ ಕೆಲವೆಡೆ ಮಗು ಹುಟ್ಟಿದ ಮೂರನೆಯ ದಿನವೇ ಈರಲು ಮಾಡುತ್ತಾರೆ. ಇದಕ್ಕೆ ಹೊಲೆಮನೆ ಎಂದು ಕರೆಯುತ್ತಾರೆ. ಅಂದರೆ ಗೋಮೂತ್ರ(ಗೋಗಂಜು) ಮತ್ತು ಸಗಣಿಯಿಂದ ಸಾರಿಸಿ ಶುದ್ಧಿ ಮಾಡುವುದು. ಹಾಗೆಯೇ ಹುಟ್ಟಿದ ಮಗುವನ್ನು ಮೂರು ದಿನಗಳವರೆಗೆ ಮೊರದಲ್ಲಿ ಹಾಕಿ ಮಲಗಿಸುವುದು. ಮಕ್ಕಳಿಲ್ಲದ ದಂಪತಿಗಳಿಗೆ ಬಹುಕಾಲದ ನಂತರ ಮಗುವಾದರೇ ಅಥವಾ ಹುಟ್ಟಿದ ಮಕ್ಕಳೆಲ್ಲ ಉಳಿಯದೇ ಹೋದರೆ ಆಗ ಹುಟ್ಟುವ ಮಗುವು ಆರೋಗ್ಯವಾಗಿರಲು ಸೋದರ ಮಾವನಿಂದ ಮೂಗನ್ನು ಚುಚ್ಚಿಸುವರು, ಇಲ್ಲವೆ ಕತ್ತೆಯ ಹಾಲನ್ನು ಕುಡಿಸುವರು. ಇಂತಹ ಕಾರ್ಯಗಳನ್ನು ಮಾಡುವುದರ ಹಿಂದೆ ಮಗುವಿಗೆ ಯಾವುದೇ ತೊಂದರೆ ತಾಪತ್ರಯಗಳು ಬರದೇ ಆರೋಗ್ಯವಾಗಿ ಬೆಳೆಯುತ್ತದೆ ಎಂಬ ಉದ್ದೇಶ ಅಡಗಿದೆ. ಸೋದರಮಾವ ಸೋದರತ್ತೆಯರು ಮೊದಲ ಬಾರಿ ಮಗುವನ್ನು ದಕ್ಷಿಣೆ(ಹಣ, ಒಡವೆ)ಗಳನ್ನು ಕೊಟ್ಟು ನೋಡುವ ಪರಿಪಾಠವಿದೆ.

ಬಾಣಂತಿಯು ಒಂದುವರೆ ತಿಂಗಳವರೆಗೂ ಪಥ್ಯ ಆಹಾರವನ್ನು ಸೇವಿಸಬೇಕು. ಮನೆಯಿಂದ ಹೊರ ಹೋಗಿ ಬಂದರೆ ಮನೆಯ ಹೊರಗೋಡೆಗೆ ಸ್ವಲ್ಪ ಮೊಲೆಹಾಲನ್ನು ಹಿಂಡಿ ಒಳಗೆ ಬರಬೇಕು. ಮಗುವಿಗೆ ದಿನಾಲು ಬಿಸಿನೀರ ಸ್ನಾನ ಮತ್ತು ಎಣ್ಣೆಯನ್ನು ಹಚ್ಚಿ ಕೈ ಕಾಲು, ತಲೆ-ಮೂಗು, ಬಾಯಿ ಮೈಯನ್ನು ತಿಕ್ಕುವರು. ಇದರಿಂದ ಮುಂದೆ ಬೆಳೆಯುವ ಮಗು ಆರೋಗ್ಯಪೂರ್ಣ ವಾಗಿ ಬೆಳೆಯುತ್ತದೆ. ಅಂದರೆ ದುಂಡಾಗಿ ಲಕ್ಷಣವಾಗಿರುತ್ತದೆ ಎಂಬುದಕ್ಕಾಗಿ. ಶೀತವಾದರೆ ಮನೆಯಲ್ಲಿ ಕಂಬಳಿ ತಯಾರಿಸಲು ಇಟ್ಟಿರುವ ಉಣ್ಣೆಯ ಮಧ್ಯೆ ಮಲಗಿಸಿದರೆ ನೆಗಡಿ(ಶೀತ) ಹೋಗುತ್ತದೆ ಎಂದು ನಂಬಿಕೆಯಿದೆ. ಏಕೆಂದರೆ ಕುರಿ ಉಣ್ಣೆಯು ಬೆಚ್ಚಗಿದ್ದು, ಅದು ಮಳೆಯಿಂದ ಮನುಷ್ಯನ

ರಕ್ಷಿಸುವ ಸಾಧನ. ಕಂಬಳಿಯನ್ನು ಹೊದ್ದು ಮಲಗಿದರೆ ಮಳೆ ಬಂದು ನೆನೆದಂತೆಲ್ಲ ಬೆಚ್ಚಗಾಗುತ್ತದೆ. ಚಿಕ್ಕ ಮಗುವಿನ ನೆತ್ತಿಯು ಮೆದುವಾಗಿರುವುದರಿಂದ ನೆತ್ತಿ ಆರದಂತೆ ಎಣ್ಣೆ ಹಚ್ಚುತ್ತಿರುತ್ತಾರೆ.

ಹೀಗೆ ಚಿಕ್ಕಪುಟ್ಟ ಸಮಸ್ಯೆಗಳಿಗೆ ಮನೆಮದ್ದು ನೀಡುತ್ತಾ ತಾಯಿ–ಮಗುವನ್ನು ಆರೈಕೆ ಮಾಡುವರು. ಇಂದಿನ ಆಧುನಿಕ ಯುಗದಲ್ಲಿಯೂ ಕೆಲವು ಜಡ್ಡುಗಳಿಗೆ ಮನೆಮದ್ದು ಬಳಸುವುದು ಈ ಭಾಗದಲ್ಲಿ ಹೆಚ್ಚಾಗಿದೆ.

**ನಾಮಕರಣ:** ಮಗು ಹುಟ್ಟಿದ ದಿನ, ಗಳಿಗೆ, ನಕ್ಷತ್ರ ಇತ್ಯಾದಿಗಳನ್ನು ಕೇಳಿ ಹನ್ನೊಂದು ಇಲ್ಲವೆ ಹದಿಮೂರನೆಯ ದಿನಕ್ಕೇ ತೊಟ್ಟಿಲಲ್ಲಿ ಹಾಕಿ ಹೆಸರಿಡುವ ಪದ್ಧತಿಯಿತ್ತು. ಪ್ರಸ್ತುತ ಹೆಚ್ಚಾಗಿ ಮೂರು ಅಥವಾ ಐದು ತಿಂಗಳಲ್ಲಿ ಹೆಸರಿಡುವ ರೂಢಿಯಿದೆ. ತೀರ ಚಿಕ್ಕದಾಗಿರುವ ಮಗುವಿಗೆ ಜನರು ಬರುವುದರಿಂದ ಸೋಂಕುಗಳು ಬೇಗ ಹರಡುತ್ತವೆ. ಮೂರು ಅಥವಾ ಐದು ತಿಂಗಳಿಗೆ ಮಗು ಸ್ವಲ್ಪ ಬೆಳೆದಿರುತ್ತದೆ. ಜೊತೆಗೆ ದೈಹಿಕ ರಚನೆಯಲ್ಲಿ ಪ್ರತಿರೋಧಕ ಶಕ್ತಿಯು ಬೆಳೆದಿರುತ್ತದೆ. ಹಾಗಾಗಿ ಈ ಅವಧಿಯಲ್ಲಿ ನಾಮಕರಣ ಶಾಸ್ತ್ರವನ್ನು ಮಾಡಲಾಗುತ್ತದೆ ಎಂಬುದು ಶಿಕ್ಷಕರಾದ ಚನ್ನಪ್ಪನವರ ಅಭಿಪ್ರಾಯ. ಈ ಕಾರ್ಯಕ್ಕೆ ಊರಲ್ಲಿನ ಕುಲಬಾಂಧವರು, ಬೇರೆ ಕಡೆಯಿರುವ ಸಂಬಂಧಿಕರನ್ನು ಕರೆಯುವರು. ಮೊದಲ ಮಗುವಿನ ನಾಮಕರಣವನ್ನು ತವರುಮನೆಯಲ್ಲಿಯೇ ಮಾಡುವರು. ಬಂದವರು ತಾಯಿ–ಮಗುವಿಗೆ ಆಯಾರ(ಬಾಗಿನ)ವನ್ನು ತೆಗೆದುಕೊಂಡು ಬಂದಿರುತ್ತಾರೆ. ಮಗುವಿಗೆ ಮಂಗಳಸ್ನಾನ ಮಾಡಿಸಿ, ಹೊಸ ಬಟ್ಟೆಯನ್ನು ತೊಡಿಸಿ ತೆಂಗಿನಕಾಯಿ ಒಡೆದು ಪೂಜೆ ಮಾಡಿ, ಅಲಂಕರಿಸಿದ ತೊಟ್ಟಿಲಿಗೆ ಹಾಕುವರು. ಮಗುವಿನಂತೆ ತಾಯಿಗೂ ಸ್ನಾನ ಮಾಡಿಸಿ, ಶುಭ್ರವಾದ ಹೊಸ ಸೀರೆ ಕುಪ್ಪಸ ತೊಡಿಸಿ ತೊಟ್ಟಿಲ ಹತ್ತಿರ ಕೂರಿಸುವರು. ಆಕೆಯ ಮುಂದೆ ಸ್ವಲ್ಪ ಧಾನ್ಯ ತುಂಬಿದ ತಂಬಿಗೆ ಮತ್ತು ಕಡಬತ ಕಲ್ಲನ್ನು ಇಟ್ಟು ಪೂಜೆ ಮಾಡಿ ಪಂಚಾರತಿಯನ್ನು ಹಚ್ಚಿ ಇಟ್ಟಿರುತ್ತಾರೆ. ಕೆಲವೆಡೆ ನಾಮಕರಣ ಮಾಡಬೇಕಾದ ಮಗುವನ್ನು ಎತ್ತಿಕೊಂಡು ಹೋಗಿ ಮನೆದೇವರಿಗೆ ಪೂಜೆ ಸಲ್ಲಿಸಿ ಬಂದ ನಂತರ ಇಲ್ಲಿನ ಆಚರಣೆಗಳನ್ನು ಮಾಡುವರು. ಈ ಕಾರ್ಯ ನಡೆಯುವಾಗ ಅಲ್ಲಿ ನೆರೆದಿರುವ ಮುತ್ತೈದೆಯರು ಜೋಗುಳ ಪದಗಳನ್ನು ಹಾಡುತ್ತಿರುತ್ತಾರೆ. ಶಾಸ್ತ್ರಕ್ಕೆ ಬೇಕಾದ ಗುಗ್ಗರಿಯನ್ನು ಹುರುಳಿಕಾಳು, ಅವರೆಕಾಯಿ ಬೆರೆಸಿ ಮಾಡಿದರೆ, ಮತ್ತೆ ಕೆಲವಡೆಗಳಲ್ಲಿ ಗೋಧಿ, ಕಡಲಿ ಬೆರೆಸಿ ತಯಾರಿಸುವರು. ಈ ಭಾಗದಲ್ಲಿ ಹೆಚ್ಚಾಗಿ ಹುರುಳಿಕಾಳು, ಅವರೆ ಕಾಳುಗಳನ್ನು ಮಿಶ್ರಣ ಮಾಡಿ ಬೇಯಿಸಿದ ಗುಗ್ಗರಿಯೊಂದಿಗೆ ಕೊಬ್ಬರಿ, ಕಡ್ಲೆ, ಸಕ್ಕರೆಯನ್ನು ಸೇರಿಸಿ ಒಂದು ಬಿಳಿಬಟ್ಟೆಯಲ್ಲಿ ಕಟ್ಟಿರುವರು. ಆ ಗುಗ್ಗರಿಯ ಗಂಟನ್ನು ಸೋದರತ್ತೆ, ಸೋದರತ್ತೆ ಇಲ್ಲದ ಸಮಯದಲ್ಲಿ ಸೋದರ ಮಾವ, ಕೈಯಲ್ಲಿ ಮುಟ್ಟದೆ ಬಾಯಲ್ಲಿ ಕಚ್ಚಿ ಕಟ್ಟಿದ ಗಂಟನ್ನು ಬಿಚ್ಚಿಕೊಂಡು ಮಗುವಿಗೆ ಇಡುವ ಹೆಸರನ್ನು ಮಗುವಿನ ಕಿವಿಯಲ್ಲಿ ಹೇಳಿ ತೊಟ್ಟಿಲನ್ನು ಸುತ್ತು ಹಾಕಿ ಅಲ್ಲಿಂದ ಮನೆಯ

ಬಾಗಿಲವರೆಗೆ ಆ ಹೆಸರು ಕೂಗುತ್ತ ಹೋಗಿ ಬರುವರು. ಈ ರೀತಿ ಮೂರು ಬಾರಿ ಮಾಡಲಾಗುತ್ತದೆ. ಅವರೊಂದಿಗೆ ಇಬ್ಬರು ಮೂವರು ಗುಗ್ಗರಿ ಗಂಟುಗಳೊಂದಿಗೆ ಜೊತೆಯಲ್ಲಿರುತ್ತಾರೆ. ಹೀಗೆ ಮಗುವಿನ ಹೆಸರು ಹೇಳುತ್ತಾ ಸುತ್ತುವ ಸಮಯದಲ್ಲಿ ನೆರೆದ ಬಂಧುಬಾಂಧವರು ಅದರಲ್ಲಿಯೂ ಗುಗ್ಗರಿ ಹೊತ್ತವರಿಗೆ ಬೀಗ(ನೆಂಟ)ರಾದವರು ಅವರ ಬೆನ್ನಿಗೆ ಪಟ ಪಟ ಎಂದು ಕೈಯಿ, ಪೊರಕೆ, ಚಿಕ್ಕಕೋಲು(ಮುದ್ದೆಕೋಲು)ಗಳಿಂದ ಹೊಡೆಯುವರು. ಈ ಶಾಸ್ತ್ರವಾದ ನಂತರ ಸೋದರತ್ತೆ ತೊಟ್ಟಿಲಿಂದ ಮಗುವನ್ನು ಎತ್ತಿ ತಾಯಿಯ ಮಡಿಲಿಗೆ ಹಾಕುವಳು. ಈ ಗುಗ್ಗರಿಯನ್ನು 'ಹೇಲು ಗುಗ್ಗರಿ' ಎಂದು ಕರೆಯುವರು. ಗುಗ್ಗರಿ ಹೊತ್ತ ಸೋದರತ್ತೆ ಸೋದರ ಮಾವ ಗುಗ್ಗರಿ ತಿಂದ ನಂತರ ಬಂದವರಿಗೆಲ್ಲ ಹಂಚುವರು.

ಕುರುಬರು ತಮ್ಮ ಮಕ್ಕಳಿಗೆ ಇಡುವ ಹೆಸರುಗಳು ತಮ್ಮ ಕುಲದೈವಗಳಿಗೆ ಸಂಬಂಧಿಸಿದವೇ ಆಗಿರುತ್ತವೆ. ಗಂಡು ಮಗುವಾದರೇ, ಬೀರಪ್ಪ, ಹೊಸೂರಪ್ಪ, ಕೆಂಚಲಿಂಗಪ್ಪ, ಸೋಮಪ್ಪ, ಕರಿಯಣ್ಣ, ಗೋಸ್ವಾಳಪ್ಪ, ಈರಾಳಪ್ಪ, ವಸಕೇರಪ್ಪ, ಮೈಲಾರಪ್ಪ ರೇವಣಸಿದ್ದಪ್ಪ, ಮಲ್ಲಯ್ಯ, ಪಾತಪ್ಪ, ಕಾಡುಸಿದ್ದಪ್ಪ ಎಂಬಿತ್ಯಾದಿಯಾಗಿ, ಹೆಣ್ಣುಮಗುವಾದರೆ ಮಾಯವ್ವ, ಸಿದ್ಧವ್ವ, ಲಕ್ಕವ್ವ, ಹೊಸೂರಮ್ಮ, ಕೆಂಚಮ್ಮ, ಕರಿಯಮ್ಮ, ಮಲ್ಲಮ್ಮ, ದ್ಯಾವಮ್ಮ, ಯಲ್ಲಮ್ಮ, ಮುಂತಾದ ಹೆಸರುಗಳನ್ನು ಇಡುವರು. ಇತ್ತೀಚೆ ಪ್ರಪಂಚೀಕರಣದ ಪ್ರಭಾವಕ್ಕೆ ಒಳಪಟ್ಟು, ಇವರೂ ತಮ್ಮ ಪರಂಪರೆಯ ಹೆಸರುಗಳಿಗೆ ಬದಲಾಗಿ ಆಧುನಿಕ ಹೆಸರುಗಳನ್ನು ಇಡುವುದನ್ನು ಕಾಣಬಹುದು. ಈ ಬದಲಾವಣೆಯ ಗಾಳಿ ಕುರುಬ ಸಮುದಾಯವನ್ನು ಒಳಗೊಂಡಂತೆ. ಇತರ ಹಿಂದುಳಿದ ಎಲ್ಲ ಸಮುದಾಯಗಳ ಮೇಲೆ ಬೀಸಿದೆ. ಉದಾ: ಗಂಡು ಮಗುವಾದರೆ, ದಿಲೀಪ್, ವಿಶಾಲ್, ಅಜಯ್, ರಾಮ್‌ಚರಣ್, ಅಕ್ಷಯ್, ರವಿತೇಜ, ಪವನ್ ಇತ್ಯಾದಿ. ಹೆಣ್ಣುಮಗುವಿಗೆ ಪುಷ್ಪ, ಸುನೀತಾ, ಸುಷ್ಮ, ದೀಪಿಕ, ದಿವ್ಯ, ಕಾವ್ಯ, ರಮ್ಯ, ರಕ್ಷಿತ ಐಶ್ವರ್ಯ, ಹರಿಣಿ ಮುಂತಾಗಿ ಸಿನಿಮಾ ನಟರ, ಮೇಲ್ವರ್ಗಗಳ ಹೆಸರುಗಳನ್ನು ಇಂದು ಹೆಚ್ಚಾಗಿ ಇಡುವುದನ್ನು ಕಾಣಬಹುದು. ಒಂದು ಕುಟುಂಬದಲ್ಲಿ ಮೂರು ತಲೆಮಾರುಗಳಿಗೆ ಸಂಬಂಧಿಸಿದ ಹೆಸರುಗಳನ್ನು ಗಮನಿಸಿದರೇ ಗೊತ್ತಾಗುತ್ತದೆ. ಮಲ್ಲಯ್ಯ>ಮಲ್ಲಿಕಾರ್ಜುನ>ಮಹೇಶ್ ಎಂಬುದಾಗಿ. ಈ ರೀತಿಯ ಹೆಸರುಗಳನ್ನು ಇಡುತ್ತಾರಾದರೂ ಹೆಸರಿಡುವ ಸಮಯದಲ್ಲಿ ಮೊದಲಿಗೆ ತಮ್ಮ ಕುಲದೈವ ಅಥವಾ ಮನೆದೇವರ ಹೆಸರನ್ನೆ ಕರೆಯುವರು. ಉದಾಹರಣೆಗೆ ಕಾಮಸಮುದ್ರ ಕರಿಯಣ್ಣನ ಒಕ್ಕಲಿನವರು ತಮ್ಮ ಮಗನಿಗೆ ಮೊದಲು ಕರಿಯಣ್ಣ ಅಥವಾ ಕರಿಯಮ್ಮ ಎಂದು ಕರೆದು ನಂತರ ಆಧುನಿಕ ಹೆಸರನ್ನು ಕರೆಯುವರು. ಬಚ್ಚಲು ಕಲ್ಲಪ್ಪನ ಒಕ್ಕಲು ಮೊದಲು ಕಲ್ಲಪ್ಪ ಅಥವಾ ಕಲ್ಲಮ್ಮ ಎಂದು ಕರೆದು ನಂತರ ಬೇರೆ ಹೆಸರು ಕರೆದುಕೊಳ್ಳುತ್ತಾರೆ. ಈ ಪದ್ಧತಿಯು ಇಂದಿಗೂ ಚಾಲ್ತಿಯಲ್ಲಿದೆ. ಜೊತೆಗೆ ತಿಪ್ಪೇಸ್ವಾಮಿ, ಮಂಜುನಾಥ, ವಿರೂಪಾಕ್ಷ, ವೆಂಕಟೇಶ, ಶ್ರೀನಿವಾಸ,

ಕುಮಾರಸ್ವಾಮಿ, ವಿಶ್ವನಾಥ ಎಂಬಿತ್ಯಾದಿ ಪ್ರಮುಖ ದೈವಗಳ ಹೆಸರುಗಳನ್ನು ಇಡುವುದು ಕಂಡುಬರುತ್ತದೆ.

**ಋತುಮತಿ:** ಪ್ರಕೃತಿ ಸಹಜವಾಗಿ ಹೆಣ್ಣುಮಗಳೊಬ್ಬಳು ವಯಸ್ಸಿಗೆ ಬಂದಾಗ ಮೈನೆರೆಯುವುದು ಒಂದು ಸ್ವಾಭಾವಿಕ ಕ್ರಿಯೆ. ಸಾಮಾನ್ಯವಾಗಿ ಹೆಣ್ಣುಮಕ್ಕಳು ೧೨ರಿಂದ ೧೮ ವರ್ಷದೊಳಗೆ ರಜಸ್ವತಿಯಾಗುವರು. ಅಂದಿನಿಂದ ಹೆಣ್ಣಿನ ಋತುಚಕ್ರ ಆರಂಭವಾಗುತ್ತದೆ. ಇದಕ್ಕೆ ಋತುಮತಿಯಾದಳು, ದೊಡ್ಡವಳಾದಳು, ಪುಷ್ಪವತಿಯಾದಳು, ಮೈನೆರೆದಳು, ಮದು ಮಗಳಾದಳು, ರಜಸ್ವತಿಯಾದಳು, ಕನ್ಯೆ ಸೂತಕವಾಯಿತು ಎಂಬುದಾಗಿ ಪ್ರಾದೇಶಿಕವಾಗಿ ಕರೆಯುವರು. ಹೆಣ್ಣು ಮೊದಲ ಸಲ ಮುಟ್ಟಾದಾಗ ನಡೆಸುವ ಈ ಆಚರಣೆಯು ಲೌಕಿಕ ಪ್ರಪಂಚಕ್ಕೆ ಪರಿಚಯಿಸುವುದಾಗಿದೆ. ಕುರುಬರಲ್ಲಿ ಹಿಂದೆ ಈ ಅವಧಿಯನ್ನು ಹದಿನಾರು ದಿನಗಳು ಮೈಲಿಗೆ ಎಂದು ಆಚರಿಸುತ್ತಿದ್ದರು. ಈಗ ಐದು, ಏಳು, ಒಂಬತ್ತು ದಿನಗಳವರೆಗೆ ಮಾತ್ರ ಮೈಲಿಗೆಯನ್ನು ಆಚರಿಸುವರು. ಹೆಣ್ಣುಮಗಳು ಮೈನೆರೆದರೆ ಮೊದಲು ಶಾಸ್ತ್ರ ಕೇಳಿ ಬರಲಾಗುತ್ತದೆ. ಅದರಲ್ಲಿ ಯಾರ ನಾಮಬಲ ಬರುತ್ತದೆಯೋ ಅವರಿಂದ ನೀರು ಹಾಕಿಸಿ ಸ್ನಾನ ಮಾಡಿಸುತ್ತಾರೆ. ಅದರಲ್ಲಿಯೂ ತಾಯಿಯನ್ನು ಹೊರತುಪಡಿಸಿ ಸೋದರತ್ತೆ, ಚಿಕ್ಕಮ್ಮ, ಅಕ್ಕಂದಿರಿಂದ ಅರಿಷಿಣ ಹಚ್ಚಿ ಸ್ನಾನ ಮಾಡಿಸುವರು. ಏಕೆಂದರೆ ಈ ಸಮಯದಲ್ಲಿ ರಜಸ್ವಲೆಯಾದ ಹೆಣ್ಣು ದೈಹಿಕವಾಗಿ ಆಗುವ ಏರುಪೇರು ಸೂಕ್ಷ್ಮತೆಗಳನ್ನು ತಿಳಿಸಲು ಇದರಿಂದ ಸಾಧ್ಯವಾಗುತ್ತದೆ. ಅಂದರೆ ತಾಯಿಯ ಹತ್ತಿರ ಹೇಳಿಕೊಳ್ಳದ ಸಮಸ್ಯೆಗಳನ್ನು ಆಕೆ ಅತ್ತೆ, ಚಿಕ್ಕಮ್ಮರ ಮುಂದೆ ಮುಕ್ತವಾಗಿ ಹೇಳಿಕೊಳ್ಳುತ್ತಾಳೆ. ಹಾಗಾಗಿ ಅವರಿಂದ ನೀರು ಹಾಕಿಸುವ ಪರಿಪಾಠ ಬೆಳೆದುಬಂದಿದೆ ಎಂದು ಹೇಳುವರು.

ಋತುಮತಿಯಾದ ಹೆಣ್ಣಿನ ಬಟ್ಟೆಗಳನ್ನು ಮಡಿವಾಳರಿಗೆ ಕೊಡುವ ಪದ್ಧತಿಯಿತ್ತು, ಅಂದು ಮಡಿವಾಳರು ಅನೇಕ ಕಾರ್ಯಗಳನ್ನು ಮಾಡುತ್ತಿದ್ದರು. ಚಿಕ್ಕ ವಯಸ್ಸಿಗೆ ಮದುವೆ ಮಾಡುತ್ತಿದ್ದರಿಂದ, ಅನಂತರದಲ್ಲಿ ಮೈನೆರೆದ ಹೆಣ್ಣನ್ನು ಕೂರಿಸುವ ಶಾಸ್ತ್ರ ಮಾಡುತ್ತಿದ್ದರು. ಅಂದರೆ ಗಂಡ ಹೆಂಡತಿಯನ್ನು ಕೂಡಿಸುತ್ತಿದ್ದರು. ಹಾಗಾಗಿ ವಧು-ವರರ ಬಟ್ಟೆಗಳನ್ನು ಸಂಬಂಧಿಸಿದ ಮಡಿವಾಳರಿಗೆ ಕೊಡುತ್ತಿದ್ದರು. ಆ ಬಟ್ಟೆಗಳ ಜೊತೆಗೆ ಬೆಳ್ಳಿ, ಆಭರಣ, ಹಸು, ಕುರಿಗಳನ್ನು ನೀಡುತ್ತಿದ್ದರು. ಪ್ರಸ್ತುತ ಈ ಪದ್ಧತಿ ಅಲ್ಲಲ್ಲಿ ಮಾತ್ರವಿದ್ದು, ಉಳಿದೆಡೆ ಕಡಿಮೆಯಾಗಿದೆ. ಕಾಡುಕುರುಬರಲ್ಲಿ ಹೆಣ್ಣು ಮೈನೆರೆದರೆ ಗುಡ್ಲು ಕಟ್ಟುವ ಆಚರಣೆಯನ್ನು ಮಾಡುತ್ತಾರೆ. ಸೋದರಮಾವನು ಇವಳಿಗಾಗಿ ಒಂದು ಪ್ರತ್ಯೇಕ ಗುಡ್ಲನ್ನು ನಿರ್ಮಿಸುತ್ತಾನೆ. ಇದರಲ್ಲಿ ಏಳು ಇಲ್ಲವೆ ಒಂಬತ್ತು ದಿನಗಳವರೆಗೆ ಅವಳು ವಾಸಿಸುವಂತೆ ಮಾಡಲಾಗುತ್ತದೆ. ಸೂತಕದ ಕೊನೆಯ ದಿನ ಗಂಗೆ ಪೂಜೆ ಮಾಡಿ ಒಳಗೆ ಕರೆದುಕೊಳ್ಳುವರು. ಮ್ಯಾಸಬೇಡ, ಕಾಡುಗೊಲ್ಲರಂಥ ಬುಡಕಟ್ಟುಗಳಲ್ಲಿ ಸೋದರಮಾವನು ಹೊಂಗೆ ಇಲ್ಲವೆ ಜೇವಿನ

ಸೊಪ್ಪನ್ನು ತಂದು ಸೂತಕದ ದಿನಗಳ ಕಳೆಯಲು ಗುಡಿಸಲು ನಿರ್ಮಿಸುವುದು ಕಂಡುಬರುತ್ತದೆ. ಕುರುಬ ಸಮುದಾಯವು ಪಶುಪಾಲಕ ಸಮುದಾಯವಾಗಿದ್ದರೂ, ಗ್ರಾಮ ಜೀವನಕ್ಕೆ ಈ ಬುಡಕಟ್ಟುಗಳಿಗಿಂತ ಮೊದಲೇ ಪ್ರವೇಶ ಪಡೆದಿರುವುದರಿಂದ ಮೈನೆರೆದ ಹೆಣ್ಣನ್ನು ಮನೆಯ ಹೊರಗೆ ಐದು ದಿನಗಳಿಗೆ ಕಡಿಮೆಯಿಲ್ಲದಂತೆ ಕೂರಿಸುವರು. ಆದರೂ ಹಸಿರು ಗುಡ್ಲು ಹಾಕುವ ಪದ್ಧತಿಯಿಲ್ಲ. ಮನೆ ಹೊರಗೆ ಕೂಡಿಸುವ ಹೆಣ್ಣಿಗೆ ಊರಲ್ಲಿನ ಬಂಧು–ಬಾಂಧವರು ದಿನಾಲು ಸಿಹಿ ಅಡುಗೆಗಳನ್ನು ಮಾಡಿ ಒಸಗೆ ಹಾಕುವರು. ಮನೆಯವರು ಕೊಬ್ಬರಿ,ಬೆಲ್ಲ, ತುಪ್ಪ ಉತ್ಪತ್ತಿಯಂಥ ಕೊಬ್ಬಿನಾಂಶ ಹೆಚ್ಚಾಗಿರುವ ಆಹಾರವನ್ನು ಕೊಡುವರು. ಇದರಿಂದ ರಕ್ತಸ್ರಾವವಾಗಿ ನಿಶ್ಯಕ್ತಳಾದ ಹುಡುಗಿಗೆ ಪೌಷ್ಟಿಕತೆಯು ಒದಗುತ್ತದೆ. ಅರಿಷಿಣ ಹಚ್ಚಿ, ಬಿಸಿನೀರಿನಿಂದ ಸ್ನಾನ ಮಾಡಿಸುವರು.

ಮೈಲಿಗೆ ಮುಗಿದ ಕೊನೆಯ ದಿನ ಮನೆಯನ್ನು ಸಗಣಿಯಿಂದ ಸಾರಿಸಿ, ಸುಣ್ಣ–ಬಣ್ಣವನ್ನು ಬಳಿದು ಶುದ್ಧೀಕರಿಸುವರು. ಅಂದು ಬಂಧು–ಬಾಂಧವರೆಲ್ಲ ಬಂದು ಸೇರಿ ಈ ಕಾರ್ಯಕ್ರಮ ಮಾಡುವರು. ಸೋದರತ್ತೆಯು ಹೆಣ್ಣಿನ ತಲೆಗೆ ಎಣ್ಣೆ, ಮೈಗೆಲ್ಲ ಅರಿಷಿಣ ಹಚ್ಚಿ ಬಿಸಿನೀರಿನಿಂದ ಸ್ನಾನ ಮಾಡಿಸುವರು. ನಂತರ ಮೈನೆರೆದವಳ ತಾಯಿಯ ತವರಿನಿಂದ ತಂದ ಹೊಸಸೀರೆ, ಕುಪ್ಪಸವನ್ನು ಹಾಗೂ ಬಂಗಾರದ ಒಡವೆಗಳನ್ನು ತೊಡಿಸಿ ವಿಶೇಷವಾಗಿ ಅಲಂಕರಿಸುವರು. ಇದಕ್ಕೆ 'ಒಸಗೆ' ತರುವುದು ಎನ್ನುತ್ತಾರೆ. ಅಂದರೆ ದೊಡ್ಡವಳಾದ ಸ್ತ್ರೀಗೆ ಹೊಸ ಸೀರೆ, ಕುಪ್ಪಸಗಳನ್ನು ಸೋದರ ಮಾವಂದಿರೆ ತರಬೇಕು. ಏಕೆಂದರೆ ಹಿಂದೆ ಮದುವೆಗಳು ಹತ್ತಿರ ಸಂಬಂಧಗಳಲ್ಲಿಯೇ ನಡೆಯುತ್ತಿದ್ದವು. ಅಕ್ಕ–ತಂಗಿಯ ಮಗಳನ್ನು ಅವರ ಸೋದರನು ತನ್ನ ಮಗನಿಗೆ ತಂದುಕೊಳ್ಳುವುದಿತ್ತು. ಅದಕ್ಕೆ ಬಳ್ಳಿ ನೀಡಿದವರು ಫಲ ಪಡೆಯಲು ಅರ್ಹರು ಎನ್ನುವುದು. ಹೀಗಾಗಿ ಈ ಒಸಗೆ ಅವರೇ ತರಬೇಕೆಂಬ ರೂಢಿಯು ಬೆಳೆದು ಬಂದಿರಬಹುದು. ಬ್ಯಾಂಡ್ ಭಜಂತ್ರಿ ಊದಿಸುತ್ತ ಅಥವಾ ತಮಟೆಗಳನ್ನು ಬಾರಿಸುತ್ತ ಮೈನೆರೆದವಳನ್ನು ಮುತ್ತೈದೆಯರೆಲ್ಲ ಮೆರವಣಿಗೆಯ ಮೂಲಕ ಹತ್ತಿರದಲ್ಲಿರುವ ಗಂಗೆ (ಬಾವಿ, ಕೆರೆ, ಇತ್ತೀಚಿಗೆ ಬೋರ್‌ವೆಲ್)ಗೆ ಕರೆದುಕೊಂಡು ಹೋಗಿ ಅಲ್ಲಿ ಗಂಗಾ ಪೂಜೆಯನ್ನು ಮಾಡಿಸುವರು. ಅಲ್ಲಿಂದ ದೇವರ ಗುಡಿಗೆ ಕರೆದೊಯ್ದು, ದೀಪವನ್ನು ಹಚ್ಚಿ, ಕಾಯಿ ಒಡೆಸಿ ಪೂಜೆ ಮಾಡಿಸುವರು. ಅಲ್ಲಿಂದ ಮನೆಗೆ ಬಂದ ಮೇಲೆ ಕೂರಿಸುವ ಶಾಸ್ತ್ರ. ಅಂದರೆ ಕಂಬಳಿ ಅಥವಾ ಕುರ್ಚಿಯ ಮೇಲೆ ಕೂರಿಸುವರು. ಬಂದವರೆಲ್ಲ ಅಕ್ಷತೆಯ ಸಾಸೆಯನ್ನು ಇಟ್ಟು ಉಡುಗೊರೆ(ಆಯೇರಿ) ಗಳನ್ನು ನೀಡುವರು. ಮುತ್ತೈದೆಯರು ಸೋಬಾನ ಪದಗಳನ್ನು ಹಾಡುತ್ತಿರುತ್ತಾರೆ. ಈ ಆಚರಣೆಗಳೆಲ್ಲ ಮುಗಿದ ನಂತರ ಬಂದವರಿಗೆಲ್ಲ ಸಿಹಿ ಅಡುಗೆಯನ್ನು ಬಡಿಸಲಾಗುತ್ತದೆ. ಕೆಲ ಒಕ್ಕಲಿನವರು ಮೈನೆರೆದಾಗ ಮಾಡುವ ಶಾಸ್ತ್ರಗಳನ್ನು ಮದುವೆಯ ಸಮಯದಲ್ಲಿ ಮಾಡುವರು. ಮೈನೆರೆದಾಗ ಯಾವುದೇ ಆಚರಣೆಗಳನ್ನು ಮಾಡದೇ ಸ್ನಾನ ಮಾಡಿಸಿ ಮನೆಯೊಳಕ್ಕೆ ಕರೆದು ಕೊಂಡಿರುತ್ತಾರೆ.

ಹೆಣ್ಣು ಮೈನೆರೆದಾಗ ಮಾಡುವ ಈ ಆಚರಣೆಗಳನ್ನು ಸೂಕ್ಷ್ಮವಾಗಿ ಗ್ರಹಿಸಿದರೆ ತಲೆಗೆ ಎಣ್ಣೆಯನ್ನು ಹಚ್ಚಿ, ಮೈಗೆ ಅರಿಷಿಣ ತಿಕ್ಕಿ ಸ್ನಾನ ಮಾಡಿಸುವ, ಮಡಿ ಬಟ್ಟೆ ಉಡಿಸುವ, ಹೊರಮನೆಯಲ್ಲಿ ಕುಳ್ಳಿರಿಸುವ ಕಾರ್ಯಗಳು ಆಕೆಯ ಬದುಕಿನ ಬದಲಾವಣೆಯ ಘಟ್ಟವನ್ನು ಸೂಚಿಸುತ್ತವೆ. ಜೊತೆಗೆ ಮೈನೆರೆಯುವುದಕ್ಕೆ ಮೊದಲಿದ್ದ ಜೀವನ ಕ್ರಮ ಸಂಪೂರ್ಣವಾಗಿ ಬದಲಾಗುತ್ತದೆ ಎಂಬ ಅರಿವು ಮೂಡಿಸುವ ಜೊತೆಗೆ ಮುಂದಿನ ಬದುಕಿಗೆ ಒಗ್ಗಿಕೊಳ್ಳಲು ಸಹಾಯಕವಾಗುತ್ತವೆ.

**ಮದುವೆ:** ಮಾನವ ಸಮಾಜದ ಕೆಲವು ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಕುಟುಂಬ ಮತ್ತು ವಿವಾಹ ಎಂಬ ಸಂಸ್ಥೆಗಳು ಅನಿವಾರ್ಯ. ಪ್ರಾಪ್ತ ವಯಸ್ಕರಾದ ಸ್ತ್ರೀ ಪುರುಷರಿಗೆ ಏರ್ಪಡಿಸುವ ಧಾರ್ಮಿಕ ಮತ್ತು ಸಾಮಾಜಿಕ ಸಂಬಂಧವೇ ವಿವಾಹ. ಮಾನವನ ಲೈಂಗಿಕ ಸ್ವಚ್ಛಂದತೆಯನ್ನು ನಿವಾರಿಸಿ, ಆತನ ಲೈಂಗಿಕ ಬಯಕೆಯ ಪೂರೈಕೆಗೆ ಕ್ರಮಬದ್ಧವಾದ ವ್ಯವಸ್ಥೆಯೊಂದನ್ನು ನಿರ್ಮಿಸಲೋಸುಗ ವಿವಾಹ ಕ್ರಮವು ಹುಟ್ಟಿಕೊಂಡಿದೆ. ಇದರಿಂದ ಕುಟುಂಬ ಜೀವನ ಪ್ರಾರಂಭವಾಗಿ ಗೃಹಕೃತ್ಯ, ಲೈಂಗಿಕಕ್ರಿಯೆ, ಸಂತಾನಾಭಿವೃದ್ಧಿ ಹಾಗೂ ಮಕ್ಕಳ ಪಾಲನೆ ಪೋಷಣೆಯು ನಡೆದುಕೊಂಡು ಬರಲು ಸಾಧ್ಯವಾಗಿದೆ. ಭಾರತೀಯರಲ್ಲಿ ಮದುವೆ ಎನ್ನುವುದು ಸ್ವರ್ಗದಲ್ಲಿ ನಿಶ್ಚಿಯಿಸಿದ್ದು ಎಂಬ ನಂಬುಗೆಯಿದೆ. ಹಾಗಾಗಿ ಕೇವಲ ಲೈಂಗಿಕ ಕ್ರಿಯೆಯ ಮೂಲಕ ಮಕ್ಕಳನ್ನು ಪಡೆಯುವುದು ಮಾತ್ರವೇ ಇದರ ಉದ್ದೇಶವಾಗಿಲ್ಲ. ಅದರ ಜೊತೆಗೆ ಮನುಷ್ಯನ ಜೀವನ ಕ್ರಮವನ್ನು ರೂಪಿಸುವುದಾಗಿದೆ.

ಬುಡಕಟ್ಟು ಸಮುದಾಯಗಳಲ್ಲಿ ಮದುವೆ ಅಥವಾ ವಿವಾಹವು ಒಂದು ಪ್ರಮುಖ ಸಂಸ್ಥೆಯಾಗಿದ್ದು, ತನ್ನ ವಿಶಿಷ್ಟ ಆಚರಣಾ ಪದ್ಧತಿಗಳಿಂದಾಗಿ ಅನನ್ಯತೆಯನ್ನು ಪಡೆದುಕೊಂಡಿದೆ. ಬುಡಕಟ್ಟುಗಳ ವಿವಾಹ ಕ್ರಮವು ಇತರ ಸಮುದಾಯಗಳಿಗಿಂತ ಭಿನ್ನವಾಗಿರುತ್ತದೆ. ಈ ಮಾತು ಪಶುಪಾಲಕ ಸಮುದಾಯವಾದ ಕುರುಬರಿಗೂ ಅನ್ವಯಿಸುತ್ತದೆ. ಮೂಲತಃ ಪರಂಪರೆ ಪ್ರಿಯರಾದ ಕುರುಬರು ಪ್ರಕೃತಿ ಸಾಮಿಪ್ಯದಲ್ಲಿ ಜೀವನವನ್ನು ರೂಢಿಸಿಕೊಂಡು ಬಂದವರಾದ್ದರಿಂದ ಇವರ ಮದುವೆಗಳು ತೀರಾ ಸಂಪ್ರದಾಯಬದ್ಧವಾಗಿವೆ. ಈಗಲೂ ಕೂಡ ಹೆಚ್ಚಿನ ಕುರುಬರು ತೆರ ವ್ಯವಸ್ಥಿತ ಮದುವೆ, ಬಾಲ್ಯ ವಿವಾಹದಂತಹ ಪದ್ಧತಿಗಳನ್ನು ಅನುಸರಿಸಿಕೊಂಡು ಬಂದಿದ್ದಾರೆ. ಆದರೆ ಇತ್ತೀಚಿಗೆ ಪ್ರಪಂಚೀಕರಣದ ಪ್ರಭಾವದಿಂದ ತೆರ ಕೊಡುವುದು ಕಡಿಮೆಯಾಗಿದೆ, ಆದರೂ ಬಾಲ್ಯವಿವಾಹದಂತಹ ಅನಿಷ್ಟ ಪದ್ಧತಿಗಳು ಗ್ರಾಮೀಣ ಪ್ರದೇಶದ ಕುರುಬರಲ್ಲಿ ಈಗಲೂ ಮುಂದುವರಿದಿವೆ. ಪ್ರಸ್ತುತ ದಿನಮಾನದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿಯೂ ಜನ ಜಾಗೃತರಾಗಿದ್ದು, ಪ್ರಾಪ್ತ ವಯಸ್ಕರಾದ ಮೇಲೆಯೇ ಮದುವೆ ಮಾಡುವುದು ಕಂಡುಬರುತ್ತದೆ. ಅದರಲ್ಲಿಯೂ ಈ ಅಧ್ಯಯನಕ್ಕೆ ಆಯ್ದುಕೊಂಡ ಪ್ರದೇಶಗಳಲ್ಲಿ ಕುರಿ ಸಾಕಾಣಿಕೆ ಮತ್ತು ಕಂಬಳಿ ನೇಯ್ಗೆಯಂತಹ ಕಷ್ಟಕರ ಜೀವನ ವೃತ್ತಿಗಳನ್ನು ಮಾಡುತ್ತ ಬದುಕುವುದರಿಂದ ಚಿಕ್ಕ ವಯಸ್ಸಿಗೆ ಮದುವೆ ಮಾಡುವುದಿಲ್ಲ. ಏಕೆಂದರೆ 'ಮದುವೆ

ನಂತರ ಹೆಣ್ಣು ಗಂಡನ ಮನೆಗೆ ಬಂದು ಅಲ್ಲಿನ ಸದಸ್ಯರಿಗೆ, ಕುರಿಸಾಕಾಣಿಕೆ ಮಾಡುವ ಕುಟುಂಬವಾದರೆ ಅವರೊಂದಿಗೆ ಸಾಕು ನಾಯಿಗಳಿಗೂ ಸೇರಿಸಿ ಅಡುಗೆ ಮಾಡಬೇಕಾಗುತ್ತದೆ. ಕಂಬಳಿ ನೇಯ್ಗೆ ಕುಟುಂಬವಾದರೆ ಹಂಜಿ ಹೊಡೆಯುವುದು, ನೂಲುವುದು, ಸೆರೆ ಕಾಯಿಸುವಂತಹ ಕಷ್ಟಕರ ಕೆಲಸಗಳನ್ನು ಮಾಡಬೇಕಾಗುತ್ತದೆ. ಇಲ್ಲವಾದರೆ ತವರು ಮನೆಯಲ್ಲಿ ಏನು ಕಲಿಸಿದರು ಎಂಬ ಮೂದಲಿಕೆಯ ಮಾತುಗಳನ್ನು ಕೇಳಬೇಕಾಗುತ್ತದೆ. ಜೊತೆಗೆ ಹೆಣ್ಣುಮಕ್ಕಳನ್ನು ಓದಿಸಬೇಕು ಎಂಬ ಅರಿವು ಸಮುದಾಯದಲ್ಲಿ ಮೂಡಿರುವುದು ಬಾಲ್ಯವಿವಾಹಗಳು ಕಡಿಮೆಯಾಗಲು ಕಾರಣವಾಗಿದೆ ಎಂದು ಕಾಮಸಮುದ್ರದ ಹಿರಿಯರಾದ ಕೆ.ಹನುಮಂತಪ್ಪ ಅವರು ಹೇಳುವರು. ಹಾಗಾಗಿ ದೈಹಿಕವಾಗಿ ಬೆಳೆದ ನಂತರವೇ ಮದುವೆ ಮಾಡುವುದನ್ನು ಕಾಣಬಹುದಾಗಿದೆ.

ಕುರುಬರಲ್ಲಿ ವಿವಾಹದ ಕ್ರಿಯಾವಿಧಿಗಳು ಗಂಡಿನ ಮನೆಯಿಂದಲೆ ಆರಂಭವಾಗುತ್ತವೆ. ವರನ ತಂದೆ–ತಾಯಿಗಳು ತಮ್ಮ ಮನೆಮಗಳೊಂದಿಗೆ ಗುರು–ಹಿರಿಯರನ್ನು ಕರೆದುಕೊಂಡು ಮೊದಲೇ ನಿಗದಿ ಪಡಿಸಿದ ಮನೆಗೆ ಹೆಣ್ಣು ನೋಡಲು ಹೋಗುವರು. ಹೆಣ್ಣಿನ ಕಡೆಯವರು ಬಂದವರನ್ನು ಸ್ವಾಗತಿಸುವರು. ವರನ ಕಡೆಯವರು ಅರಿಷಿಣ, ಕುಂಕುಮ, ಹೂವು–ಹಣ್ಣು, ಐದುಗೊನೆ ಬಾಳೆಹಣ್ಣು, ಕಣ ಸೀರೆಯನ್ನು ಸೇರಿಸಿ ಐದು ತಟ್ಟೆ ತುಂಬಿ ತಂದಿರುತ್ತಾರೆ. ಅಲಂಕರಿಸಿಕೊಂಡ ಹೆಣ್ಣು ನೆರೆದ ಹಿರಿಯರಿಗೆ ನಮಸ್ಕರಿಸಿ, ಮಣೆಯ ಮೇಲೆ ಕುಳಿತುಕೊಳ್ಳುವಳು. ವರನ ಕಡೆಯ ಒಡೆಯರು ಅಥವಾ ಗೌಡ, ಯಜಮಾನ, ಹಿರಿಯರು ಹೆಣ್ಣಿನ ಹಸ್ತರೇಖೆಯನ್ನು ನೋಡಿ, ಧ್ವನಿ ಪರೀಕ್ಷಿಸಿ ಉಡಿಯನ್ನು ತುಂಬಲು ಹೇಳುವರು. ಗಂಡಿನ ಕಡೆಯ ಮುತ್ತೈದೆಯು ಅವಳ ಹಣೆಗೆ ಕುಂಕುಮವನ್ನು ಹಚ್ಚಿ, ತಲೆಗೆ ಹೂವನ್ನು ಮುಡಿಸಿ ಎಲೆ, ಅಡಿಕೆ, ಬಾಳೆಹಣ್ಣು, ಸಕ್ಕರೆ ಮುಂತಾದ ಮಂಗಳ ಪದಾರ್ಥಗಳನ್ನು ಉಡಿಯಲ್ಲಿ ತುಂಬುತ್ತಾಳೆ. ಉಡಿಯನ್ನು ಗಟ್ಟಿಯಾಗಿ ಹಿಡಿದುಕೊಂಡು ದೇವರ ಕೋಣೆಗೆ ಹೋಗಿ ಅವನ್ನು ದೇವರ ಮುಂದಿಟ್ಟು, ನಮಸ್ಕರಿಸಿ ಹಿರಿಯರಿಗೆ ಮತ್ತೊಮ್ಮೆ ನಮಸ್ಕರಿಸುವಳು. ಆಗ ಹಿರಿಯರು(ಗೌಡ, ಯಜಮಾನ) ಗಂಡಿನ ಕಡೆಯವರಿಂದ ಹೆಣ್ಣಿನವರಿಗೆ, ಹೆಣ್ಣಿನವರಿಂದ ಗಂಡಿನವರಿಗೆ ವೀಳ್ಯವನ್ನು ಕೊಡಿಸುವರು. 'ನಿಮ್ಮ ಮನೆಯ ಹೆಣ್ಣು ಕೊಟ್ಟು ನಮ್ಮ ಮನೆಯ ಉದ್ಧಾರ ಮಾಡಿ ಎಂದು ಗಂಡಿನವರು ಕೇಳುವರು. ಹೆಣ್ಣಿನವರು ಒಪ್ಪುವರು. ಅಲ್ಲಿಗೆ ನೋಡುವ ಶಾಸ್ತ್ರ ಮುಗಿಯುತ್ತದೆ. ಮುಂದೆ ಪರಸ್ಪರ ಒಪ್ಪಿಗೆಯಾದರೆ ಹೆಣ್ಣಿನ ಕಡೆಯವರು ವರನ ಮನೆ ನೋಡಲು ಬರುತ್ತಾರೆ. ಅಲ್ಲಿ ಮತ್ತೆ ವೀಳ್ಯ ವಿನಿಮಯ ಮಾಡುವರು. ಅಲ್ಲಿಗೆ ನೋಡುವ ಶಾಸ್ತ್ರವಾಗಿ ಗಟ್ಟಿಮಾತು ಮಾಡಿಕೊಳ್ಳುವರು. ಇದಕ್ಕೆ ಒಪ್ಪಮಾತು, ಗಟ್ಟಿಮಾತು, ವೀಳ್ಯಸಾಕ್ಷಿ ಎಂದೂ ಕರೆಯುವರು. ಮದುವೆ ದಿನಾಂಕವನ್ನು ಗೊತ್ತುಪಡಿಸಲು ಜ್ಯೋತಿಷಿಯ ಹತ್ತಿರ ಹೋಗಿ ಗಂಡು ಹೆಣ್ಣಿನ ಜಾತಕಗಳನ್ನು ತೋರಿಸುವರು. ದಿನಾಂಕ ನಿಗದಿ ಮಾಡಿಕೊಂಡು, ಹೆಸರು ಸರಿ ಬರದಿದ್ದರೆ

ನಾಮ ಬದಲಿಸಿ ಮದುವೆಯ ಆಹ್ವಾನ ಪತ್ರಿಕೆಯನ್ನು ಬರೆಯಿಸಿಕೊಂಡು ಬರುವರು. ಮುಹೂರ್ತ ಇಡಿಸಲು ಮಾತ್ರ ಬ್ರಾಹ್ಮಣರ ಹತ್ತಿರ ಹೋಗುವವರಾದರೂ, ಮದುವೆಯನ್ನು ಒಡೆಯರ ಕೈಯಿಂದಲೇ ಮಾಡಿಸುವರು.

ಶುಭಮುಹೂರ್ತ ನಿಶ್ಚಯಿಸಿ ಆಹ್ವಾನ ಪತ್ರಿಕೆಗಳನ್ನು ಮುದ್ರಿಸಿ ಬಂಧು-ಬಾಂಧವರು, ಸ್ನೇಹಿತರು, ಹಿತೈಷಿಗಳಿಗೆ ಹಂಚುವರು. ಸಾಮಾನ್ಯವಾಗಿ ಕುರುಬರ ಮದುವೆಗಳು ಗಂಡಿನ ಮನೆಯಲ್ಲಿ ನಡೆಯುವುದು ವಾಡಿಕೆ. ಆದರೆ ಈ ಭಾಗದಲ್ಲಿ ಹೆಚ್ಚಾಗಿ ಮದುವೆಗಳು ಹೆಣ್ಣಿನ ಮನೆಯಲ್ಲಿ ನಡೆಯುತ್ತವೆ. ಇತ್ತೀಚೆಗೆ ಛತ್ರ, ಕಲ್ಯಾಣ ಮಂಟಪಗಳಲ್ಲಿಯೂ ನಡೆಯುವವು. ಮದುವೆ ಹಳ್ಳಿಯಲ್ಲಾದರೆ ಅಡುಗೆಗೆ ಬೇಕಾದ ಸೌದೆಯನ್ನು ಹಳ್ಳಿಯಲ್ಲಿನ ಸಂಬಂಧಿಕರು ಎತ್ತು-ಗಾಡಿಗಳೊಂದಿಗೆ ಅಡವಿಗೆ ಹೋಗಿ ಕಟ್ಟಿಗೆಯನ್ನು ತಂದು ಕತ್ತರಿಸಿ ಒಣಗಿಸಿಟ್ಟುಕೊಳ್ಳುವರು. ಮದುವೆ ಮನೆಯನ್ನು ಸುಣ್ಣ ಬಣ್ಣ ಬಳಿದು ತಳಿರು-ತೋರಣಗಳನ್ನು ಕಟ್ಟಿ ಶೃಂಗರಿಸಲಾಗುತ್ತದೆ. ಮದುವೆಯ ಮುಂದಿನ ದಿನ ಕುಲದೇವರ ಊಟ ನಡೆಯುತ್ತದೆ. ಅಂದರೆ ವರನು ತನ್ನ ಮನೆದೇವರಿಗೆ ಹೋಗಿ ಪೂಜೆ ಸಲ್ಲಿಸಿ, ಅಲ್ಲಿಯೆ ಸ್ನಾನಮಾಡಿ ಸಿದ್ಧವಾಗಿ ಬರಬೇಕು. ಅಲ್ಲಿಂದ ಬಂದ ನಂತರ ಎಲ್ಲ ಬಂಧು-ಬಾಂಧವರು, ಊರವರನ್ನು ಕರೆದು ಊಟಕ್ಕೆ ಹಾಕುವರು. ಇದಕ್ಕೆ ದೇವರ ಊಟ ಎನ್ನುವರು. ಹಿಂದಿನ ಕಾಲದಲ್ಲಿ ಮದುವೆಗಳು ಐದು ದಿನಗಳ ಕಾಲ ನಡೆಯುತ್ತಿದ್ದವೆಂದು ಹಿರಿಯರು ಹೇಳುವರು. ಕೆಲವು ಕಡೆಗಳಲ್ಲಿ ಮೂರರಿಂದ ಒಂಬತ್ತು ದಿನಗಳವರೆಗೆ ನಡೆದಿರುವ ಬಗ್ಗೆಯೂ ಹೇಳುತ್ತಾರೆ. ದೇವರ ಊಟ, ಪ್ರಸ್ಥದೂಟ, ಅರಿಷಿಣ ಚಪ್ಪರ ಧಾರೆ, ಮರುವಲಿ, ಮಸಿಯೂಟ, ಕೇರೂಟ ಎಂಬುದಾಗಿ ಕುಲಸ್ಥರಿಗೆ ಹಾಕಿದ ಊಟಗಳ ಬಗ್ಗೆ ಉಲ್ಲೇಖಗಳು ಸಿಗುತ್ತವೆ. ಪ್ರಸ್ತುತ ಆಧುನಿಕತೆ, ಪ್ರಪಂಚೀಕರಣಗಳು ಮನುಷ್ಯ ಸಂಬಂಧಗಳನ್ನು ಯಾಂತ್ರಿಕ ಮಾಡಿರುವುದರಿಂದ ಇಂದು ಒಂದು ದಿನಕ್ಕೆ ಸೀಮಿತವಾಗಿದೆ.

ಮದುವೆಯ ಹಿಂದಿನ ದಿನವೇ ಗಂಡಿನ ಮನೆಯವರು ವರನ ಸೋದರಮಾವ ಅಥವಾ ಸೋದರಿಯ ಗಂಡನನ್ನು ಹೆಣ್ಣನ್ನು ಅವರ ಕಡೆಯವರನ್ನು ಕರೆದುಕೊಂಡು ಬರಲು ಕಳುಹಿಸುವರು. ಹೆಣ್ಣಿನ ಮನೆಯಲ್ಲಿ ಮದುವೆಯಾದ ಹಿಂದಿನ ದಿನವೇ ವರ ತನ್ನ ಮನೆಯಲ್ಲಿ ದೇವರ ಊಟ ಮುಗಿಸಿಕೊಂಡು ತನ್ನ ಬಂಧು-ಬಾಂಧವರೊಂದಿಗೆ ದಿಬ್ಬಣ ತೆಗೆದುಕೊಂಡು ಹೆಣ್ಣಿನ ಊರಿಗೆ ಬರುವರು. ಕೆಲವು ಕಡೆ ಮದುಮಗ ಮದುವೆಯ ಮುಂದಿನ ದಿನ ವಾಲಗದೊಂದಿಗೆ ಮೆರವಣಿಗೆ ಮೂಲಕ ತನ್ನಿಷ್ಟದಂತೆ ಸಮುದಾಯದ ಮೂರು ಅಥವಾ ಐದು ಮನೆಗಳಿಗೆ ಹೋಗಿ ದೀಪಕ್ಕೆ ಎಣ್ಣೆ ಹಾಕಿ ಹಚ್ಚಿ ಬರುತ್ತಾನೆ. ಹೀಗೆ ದೀಪ ಹಚ್ಚಿ ಬಂದರೆ ಆ ಮನೆಗಳವರು ಯಾವುದೇ ಅನ್ಯಕಾರ್ಯಗಳಿದ್ದರೂ ಮದುವೆ ಮನೆಯಲ್ಲಿಯೇ ಇದ್ದು, ಶಾಸ್ತ್ರಗಳೆಲ್ಲ ಮುಗಿದ ನಂತರ ಮನೆಗೆ

ತೆರಳಬೇಕು ಎಂಬ ಪ್ರತೀತಿಯಿದೆ. ಈ ಆಚರಣೆಯು ಕುರುಬ ಸಮುದಾಯ ಕಡಿಮೆಯಿರುವ ಊರುಗಳಲ್ಲಿ ನಡೆಯುತ್ತದೆ. ಕಮಲಾಪುರ, ಕೊಂಡನಾಯಕನಹಳ್ಳಿ, ಮಲಪನಗುಡಿಗಳಲ್ಲಿ ಈ ಪದ್ಧತಿಯಿದೆ ಎಂದು ತಾಯಪ್ಪ ಅವರು ಹೇಳುವರು. ಏಕೆಂದರೆ ಮದುವೆಯ ಕೆಲಸಗಳು ಹೆಚ್ಚಾಗಿರುತ್ತವೆ. ಜನಸಂಖ್ಯೆ ಕಡಿಮೆಯಿರುವ ಹಳ್ಳಿಗಳಲ್ಲಿ ಇವನ್ನು ಹಂಚಿಕೊಂಡು ನಿಭಾಯಿಸಲು ಸುಲಭವಾಗುತ್ತದೆ ಎಂಬ ಉದ್ದೇಶದಿಂದ ಇದು ಕಾರ್ಯರೂಪಕ್ಕೆ ಬಂದಿದೆ. ಹೆಣ್ಣಿನ ಕಡೆಯವರು ಮಲೆನೀರು ಶಾಸ್ತ್ರವಾದ ನಂತರ ಬಿಡದಿ ಮನೆಗೆ ಕರೆದೊಯ್ದು ಕಂಬಳಿ ಹಾಸಿ ಗಂಡನ್ನು ಕೂರಿಸುವರು. ಮದುವೆ ಗಂಡು ಮದುವೆ ಚಪ್ಪರಕ್ಕೆ ಹೋಗುವ ಮೊದಲು ದೇವಸ್ಥಾನ ಇಲ್ಲವೆ ಸಂಬಂಧಿಕರ ಮನೆಯ ಕೋಣೆಯಲ್ಲಿ ತಂಗಿರುತ್ತಾನೆ. ಅದಕ್ಕೆ ಬಿಡದಿ ಮನೆ ಎಂದು ಕರೆಯುವರು. ಇಲ್ಲಿ ಬಿಡದಿ ಕೂಡುವ ಶಾಸ್ತ್ರ ಮಾಡಿ ನೇರವಾಗಿ ಮದುವೆ ಮಂಟಪಕ್ಕೆ ಕರೆದೊಯ್ಯುವರು. ವೀಳ್ಯಶಾಸ್ತ್ರ ಮಲೆನೀರುಶಾಸ್ತ್ರ ಆದ ಮೇಲೆ ವಧುವರರು ಹೊಸ ಬಟ್ಟೆ ಧರಿಸಿ ಹಸೆ ಏರಿ ಕುಳಿತುಕೊಳ್ಳುವರು. ಕರಿಯ ಕಂಬಳಿ ಹಾಸಿ ಕಳಸ, ಅಚ್ಚುಮಣೆ ಮುಂದಿಟ್ಟು, ಹಾಸಕ್ಕಿ ಹಾಕಿ ವರನನ್ನು ಕೂರಿಸಿ, ಹಣೆಗೆ ವಿಭೂತಿ, ಕೆನ್ನೆಗೆ ದೃಷ್ಟಿಬೊಟ್ಟು ಇಟ್ಟು ತಲೆಗೆ ಬಾಸಿಂಗವನ್ನು ಕಟ್ಟುವರು. ಹೆಣ್ಣಿಗೂ ಹಾಗೆಯೇ ಸಿಂಗಾರ ಮಾಡಿರುತ್ತಾರೆ. ನಂತರ ಕೊರಳಿಗೆ ಹೂವಿನ ಹಾರ ಹಾಕಿ ಆರತಿ ಮಾಡಲಾಗುತ್ತದೆ. ಗಂಡನ್ನು ಬಿಡದಿಗೆ ಕರೆದೊಯ್ಯುವ ಮುಂಚೆ ಸೀರೆ, ರವಿಕೆ, ಒಡವೆ, ಅಕ್ಕಿ, ಬೆಲ್ಲ, ಬೆಲ್ಲದ ಹಾಲಿನ ಹೊಸ ಕುಂಭ, ಹೆಣ್ಣಿನ ಬಾಸಿಂಗ ಗೂಡಿನಲ್ಲಿಟ್ಟು ಒಂದು ಬಟ್ಟೆ ಹೊದಿಸಿ ಕಳಸ ವಾದ್ಯಗಳೊಂದಿಗೆ ನಿಗದಿಪಡಿಸಿದ ಮನೆಗೆ ಕರೆದೊಯ್ಯುವರು ಗಂಡು ಬರುತ್ತಿದ್ದಂತೆ ಮನೆಯವರು ನಡುಮನೆಯಲ್ಲಿಯೇ ಕಂಬಳಿಯನ್ನು ಹಾಸಿ ಕೂಡಿಸಿ ಬಾಸಿಂಗ ತೆಗೆದಿಡುತ್ತಾರೆ. ಬಳಗದ ಗೌಡರು, ಯಜಮಾನರು, ಬುದ್ಧಿವಂತರು ಬಂದು ಬೆಲ್ಲದ ಹಾಲು ತಿದ್ದುವರು. ನಂತರ ಧಾರೆ ಶಾಸ್ತ್ರಕ್ಕಾಗಿ ತಂದ ಒಡವೆ ವಸ್ತ್ರಗಳನ್ನು ಹೆಣ್ಣಿಗೆ ತಲುಪಿಸಲಾಗುತ್ತದೆ. ಇದಕ್ಕೆ ಬಿಡದಿ ಕೊಡುವುದು ಎನ್ನುವರು.

ವೀಳ್ಯವನ್ನು ಕೊಟ್ಟು ತೆಗೆದುಕೊಳ್ಳುವುದಾದ ನಂತರ ಧಾರೆ ಮೂಹೂರ್ತಕ್ಕೆ ಸಮಯ ಹತ್ತಿರವಾಗುತ್ತದೆ. ಮದುವೆ ಹಂದರದಲ್ಲಿ ಎರಡು ಉದ್ದವಾದ ಹಲಗೆಗಳು ಇಲ್ಲವೇ ಸ್ಟಾವಿಗೆ ಮಣಿಗಳನ್ನು ಹಾಕಿರುತ್ತಾರೆ. ಅದರ ಸುತ್ತಲೂ ಚಚ್ಚೌಕಾರವಾಗಿ ತುಂಬಿದ ನಾಲ್ಕು ತಂಬಿಗೆಗಳು ಮುಂದಿನ ಭಾಗದ ನಡುವೆ ಒಂದು ಕಳಸ ತಂಬಿಗೆಯನ್ನು ಇಟ್ಟಿರುತ್ತಾರೆ. ನಾಲ್ಕು ಮೂಲೆಯಲ್ಲಿನ ತಂಬಿಗೆಗಳನ್ನು ನಾಲ್ವರು ಗಂಡುಮಕ್ಕಳು, ಕಳಸ ತಂಬಿಗೆಯನ್ನು ಮುತ್ತೈದೆ ಹೆಣ್ಣುಮಗಳು ಹಿಡಿದು ಕೊಂಡಿರುತ್ತಾರೆ. ಅನಂತರ ಸುರಗಿಯ ಚಾಜವನ್ನು ಮಾಡುವ ಮುತ್ತೈದೆಯು ನೂಲಿನ ಉಂಡೆಯನ್ನು ತಂಬಿಗೆಯಲ್ಲಿ ಹಾಕಿಕೊಂಡು, ಐದೂ ಕಳಸಗಳನ್ನು ಬಳಸಿ ಐದು ಸುತ್ತು ನೂಲನ್ನು ಸುತ್ತುವಳು. ವಧು-ವರರ ಕೈಗೆ ಕೊಟ್ಟ ಅಡಿಕೆ-ವೀಳ್ಯದೆಲೆಯನ್ನು ಸುರಗಿಯ ನೂಲಿನ ಹತ್ತಿರದಲ್ಲಿಟ್ಟು,

ನಮಸ್ಕರಿಸಿ ಬಲಗಾಲನ್ನು ಒಳಗಿಟ್ಟು ಮಣೆಯ ಮೇಲೆ ಕುಳಿತುಕೊಳ್ಳುವರು. ಹಿಂದೆ ಹೆಣ್ಣನ್ನು ಕದ್ದೊಯ್ದು ಮದುವೆಯಾಗುವುದು ಸಾಮಾನ್ಯವಾಗಿತ್ತು. ಹಾಗಾಗಿ ಅಂದು ಹೆಣ್ಣನ್ನು ರಕ್ಷಿಸಿಕೊಳ್ಳಲು ಮದುವೆಯ ಸಮಯದಲ್ಲಿ ಬೇಲಿಯನ್ನು ನಿರ್ಮಿಸುತ್ತಿದ್ದರು ಮತ್ತು ವರನ ಕೈಯಲ್ಲಿ ಖಡ್ಗವಿರುತ್ತಿತ್ತು ಹೆಣ್ಣನ್ನು ಕದಿಯಲು ಬಂದವರೊಂದಿಗೆ ಹೋರಾಡಿ ರಕ್ಷಿಸಿಕೊಳ್ಳಬೇಕಾಗಿತ್ತು. ಅದರ ಪಳಿಯುಳಿಕೆ ಇಂದು ಆಚರಣೆಯಾಗಿ ಮಾತ್ರ ಚಾಲ್ತಿಯಲ್ಲಿದೆ ಎಂದು ಗೋವಿಂದವಾಡದ ಪಂಪಾಪತಿ ಒಡೆಯರು ಅಭಿಪ್ರಾಯಪಡುವರು. ಅಂದು ಪರ ಊರಿನ ಅಥವಾ ಬೇರೆ ಬುಡಕಟ್ಟಿನ ಹೆಣ್ಣನ್ನು ಕದ್ದು ತಂದವನನ್ನು ವೀರನಂತೆ ಕಾಣುತ್ತಿದ್ದರು. ಅದರಂತೆಯೇ ರಕ್ಷಿಸಿದವನು ವೀರನಾಗುತ್ತಿದ್ದನು. ಈ ಕ್ರಿಯೆಗಳು ಎಲ್ಲರಲ್ಲೂ ನಡೆಯುತ್ತಿದ್ದವೆಂಬುದಕ್ಕೆ ಇತಿಹಾಸದಲ್ಲಿ ಸಾಕಷ್ಟು ಉಲ್ಲೇಖಗಳು ದೊರೆಯುತ್ತವೆ.

ಮದುವೆಯ ಮೊದಲಿನ ಶಾಸ್ತ್ರಗಳೆಲ್ಲ ಮುಗಿದ ಮೇಲೆ ದೇವರ ಜಗುಲಿಯಲ್ಲಿ ಹಾಸಿದ ಜೋಡು ಎಳೆಯ "ಕರಿಕಂಬಳಿ"[೧೪]ಯಲ್ಲಿ ಕುಳಿತ ಕುರುಬರ ಕುಲಸ್ವಾಮಿಯಾದ ಒಡೆಯರು ಇಲ್ಲವೇ ಅವರಿಂದ ನಾಮಾಂಕಿತವಾದ ಗೌಡ, ಯಜಮಾನ, ಬುದ್ಧಿವಂತರು ಹಸೆಯನ್ನು ಹಾಸಿ ಕೊಬ್ಬರಿ ಬಟ್ಟಲಲ್ಲಿ ಇಟ್ಟಿರುವ ತಾಳಿಯನ್ನು ಪೂಜಿಸಿ, ಅಭಿಷೇಕ ಮಾಡಿ, ತೆಂಗಿನಕಾಯಿ ಒಡೆದು ಊದಿನಕಡ್ಡಿ ಬೆಳಗಿ ಗುರು-ಹಿರಿಯರೆಲ್ಲ ಮುಟ್ಟಿ ನಮಸ್ಕರಿಸಿದ ಮೇಲೆ ತಾಳಿಯನ್ನು ಕಟ್ಟಿಸುವರು. ಈ ಸಂದರ್ಭದಲ್ಲಿ ಗುರು ಒಡೆಯರು ವಧು-ವರರನ್ನು ಹರಸುವ ಮಂತ್ರ ಹೀಗಿದೆ:

**ಗಂಡಿಗೆ(ವರ)**

ಗಿರಿಶೆಟ್ಟಿ ಗಿರಿರಾಮ
ಸರಿಗೆ ರೇವಕ್ಕ
ಮಗಳು ಬರುತಾಳೆಂದು
ಕಂಚಿ ಕಾಳಂಗಿ
ಕುಡಿ ನೀರಗಂಡಿ

**ಹೆಣ್ಣಿಗೆ(ವಧು)**

ಪುಣ್ಯವಂತರ ಮಗಳೇ
ಭಾಗ್ಯವಂತರ ಮಗಳೇ
ಬಸವಣ್ಣ ಬರುತಾನೆ
ತೆಗೆ ನಿನ್ನ ಮುಸುಕ

**ವಧು-ವರರಿಬ್ಬರಿಗೂ**

"ಕಲಿಕಲಿಯಾಗಿ ಕರ‍್ಯಜ್ಜನಾಗಿ

ಭೀಮಣ್ಣನಾಗಿ ಭಿಲ್ಲರಾಜ್ಯವನಾಳಿ
ಗುರುರೇವಣಸಿದ್ಧಕಟ್ಟಿದ ಸೇಸೆ ಸ್ಥಿರವಾಗಿರಲಿ
ಸರೂರು ಶಾಂತಮುತ್ತಯ್ಯ ಕಟ್ಟಿದ ಕಲ್ಯಾಣ ಸ್ಥಿರವಾಗಿರಲಿ
ಸೋಬಾತಿ ಸೋಬಾನ ಸೋಬತಿ ಸೋಬಾನ"[೭]

ಈ ಮಂತ್ರವು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯಲ್ಲಿ ಮೇಲಿನ ಸಾಲುಗಳು ಇದ್ದಂತೆ ಹೇಳುವರಾದರೂ ಕೊನೆಯಲ್ಲಿ

ಸರೂರು ಶಾಂತಮುತ್ತಯ್ಯ ಕಟ್ಟಿದ(ನ) ಕಲ್ಯಾಣ(ಂ) ಜಯ ಜಯ!
ಸೀರ್ಪಿಕೊಟ್ಟಾಲು ರೇವಣಸಿದ್ಧ(ಡು) ಕಟ್ಟಿದ(ನ) ಕಲ್ಯಾಣ(ಮ) ಜಯಾ ಜಯಾ![೮]

ಎಂದು ಆಯಾ ಪ್ರದೇಶಗಳಲ್ಲಿನ ರೇವಣಸಿದ್ದನ ನೆಲೆಯ ಸೇರಿಸುವುದು ಕಂಡುಬರುತ್ತದೆ. ಮತ್ತೆ ಕೆಲವೆಡೆ

ಸರೂರ ಶಾಂತಮುತ್ತಯ್ಯ ಕಟ್ಟಿದ ಕಲ್ಯಾಣ ಜಯ ಜಯ
ದೊಡ್ಡೇರಿ ರೇವಣಸಿದ್ದ ಕಟ್ಟಿದ ಕಲ್ಯಾಣ ಜಯ ಜಯ
ಗುಂಡಿ ಪವಾಡದಯ್ಯ ಕಟ್ಟಿದ ಕಲ್ಯಾಣ ಜಯ ಜಯ"[೯]

ಹೀಗೆ ಹರಸುವಾಗ ರೇವಣಸಿದ್ಧನೊಂದಿಗೆ ಗುಂಡಿ ಪವಾಡದಯ್ಯನನ್ನು ನೆನೆದಿರುವುದು ಇನ್ನೂ ಯಾವುದಾದರೂ ಗುರುಪರಂಪರೆಯಿದೆಯೇ ಎಂಬಿತ್ಯಾದಿಯಾಗಿ ಆಲೋಚಿಸುವಂತೆ ಮಾಡುತ್ತದೆ. ಕ್ಷೇತ್ರಕಾರ್ಯ ಕೈಗೊಂಡ ಸ್ಥಳಗಳೆಲ್ಲ ಇದರ ಕುರಿತು ಕೇಳಿದರೂ ಸಮರ್ಪಕ ಉತ್ತರ ದೊರೆಯಲೇ ಇಲ್ಲ. ನಾಯಕನಹಟ್ಟಿಯಲ್ಲಿ ಮಾತ್ರ ಈತ ಸಂದು ಸಂದ್ವಾರದವನು ಎಂದುದಾಗಿ ಹೇಳುವರು. ಸೂಕ್ಷ್ಮವಾಗಿ ಗ್ರಹಿಸಿದರೆ ಈತ ಬೆಡಗೊಂದರ ಮೂಲಪುರುಷನಿರಬಹುದು ಎಂದು ಹೇಳಬಹುದಾಗಿದೆ.

ಮದುವೆಯಾದ ನಂತರ ಗುರುಗಳಿಗೆ ಕಾಣಿಕೆಯನ್ನು ನೀಡಿ, ಅವರ ಆಶೀರ್ವಾದ ಪಡೆಯುವರು. ಬಂದವರು ನೂತನ ದಂಪತಿಗಳಿಗೆ ಅಕ್ಷತೆ ಹಾಕಿ ಹಾರೈಸುವರು. ಸಿಹಿ ಅಡುಗೆಯ ಊಟವಿರುತ್ತದೆ. ಎಲ್ಲರೂ ಊಟ ಮಾಡಿ ತೆರಳುವರು. ಮಧುಮಗಳು ವರನೊಂದಿಗೆ ಬಂದಾಗ ಮನೆ ತುಂಬಿಸಿ ಕೊಳ್ಳುವ ಕಾರ್ಯಕ್ರಮ ನಡೆಯುತ್ತದೆ. ದೇವಾಲಯದಲ್ಲಿ ಉಳಿದುಕೊಂಡ ನವದಂಪತಿಗಳನ್ನು ಕರೆದೊಯ್ಯಲು ಗಂಡಿನ ಮನೆಯವರು ಕಳಸ ಕನ್ನಡಿಗಳೊಂದಿಗೆ ವಾದ್ಯ ಸಮೇತ ಬರುವರು. ದೇವರ ಸಾನಿಧ್ಯದಲ್ಲಿ ದಂಪತಿಗಳನ್ನು ಕೂಡ್ರಿಸಿ ಹೊಸ ಹಾರ ಹಾಕಿ, ಮೆರವಣಿಗೆ ಮಾಡುತ್ತ ಮನೆಗೆ ಕರೆದೊಯ್ಯುತ್ತಾರೆ. ಮನೆಯ ಎದುರು ನಿಲ್ಲಿಸಿ, ಹೆಣ್ಣನ್ನು ಮಾತ್ರ ಕರೆದೊಯ್ದು ಬಾಗಿಲು ಪೂಜಿಸಿದಾದ ನಂತರ ಬಾಗಿಲ ಮೇಲೆ ಬಲಗಾಲನ್ನಿರಿಸಿ ಹೆಬ್ಬೆರಳು ಹಾಗೂ ಪಕ್ಕದ ಬೆರಳ

ನಡುವೆ ಘಂಟ ಮೊಹರಿನ ಮೊಳೆಯನ್ನು ಪೂಜಿಸಿ ಬಾಗಿಲಿಗೆ ಹೊಡೆಯುವರು. ನಂತರ ವಧುವರರಿಗೆ ಆರತಿ ಎತ್ತಿ ದೃಷ್ಟಿ ತೆಗೆಯುತ್ತಾರೆ. ಹೊಸ್ತಿಲ ಮೇಲಿಟ್ಟು ಅಕ್ಕಿ ಬೆಲ್ಲದ ಸೇರನ್ನು ಬಲಗಾಲಿನಿಂದ ಒದೆಯಿಸಿ ಮನೆ ತುಂಬಿಸಿಕೊಳ್ಳುವರು. ಕೆಲವೆಡೆ ಮನೆ ತುಂಬಿಸಿಕೊಳ್ಳುವ ಮುಂಚೆ ವರನ ಹೆಗಲಿಗೆ ಬಾರುಕೋಲು, ಕೈಗೆ ನೇಗಿಲ ಕುಡ(ಕುಳ) ಕೊಟ್ಟು ವಧುವಿಗೆ ಅಕ್ಕಡಿ ಸಡ್ಡುಗಳನ್ನು ಹೊರಿಸುವರು. ವರ ಮನೆಯ ಪಕ್ಕದಲ್ಲಿನ ಜಾಗದಲ್ಲಿ ಹೊಲದಲ್ಲಿ ಉಳುಮೆ ಮಾಡುವ ರೀತಿಯಲ್ಲಿ ಸಾಲುಗಳನ್ನು ಮಾಡುತ್ತ ಸಾಗುತ್ತಾನೆ. ವಧು ಆತನ ಹಿಂದೆ ಜೋಳ, ರಾಗಿ, ಹುರುಳಿಯಂಥ ಧಾನ್ಯಗಳನ್ನು ಬಿತ್ತನೆ ಮಾಡುತ್ತಾಳೆ. ಅವು ಎಷ್ಟು ಹುಲುಸಾಗಿ ಬೆಳೆಯುತ್ತವೆಯೋ ಅಷ್ಟು ಅನೋನ್ಯವಾಗಿರುತ್ತದೆ ಅವರ ಸಂಸಾರ ಎಂಬ ನಂಬುಗೆ. ಈ ಆಚರಣೆಯು ಕುರುಬ ಸಮುದಾಯವು ಪಶುಪಾಲನೆ ಕಾಲಘಟ್ಟದಿಂದ ನಿಧಾನವಾಗಿ ಕೃಷಿಯತ್ತ ಸಾಗಿ ಬಂದಿರುವುದನ್ನು ತಿಳಿಸುತ್ತದೆ:

**ಸೀಮಂತ:** ಮದುವೆ ನಂತರ ವಧು ಗಂಡನ ಮನೆಯಲ್ಲಿದ್ದು, ಹಬ್ಬಹರಿದಿನಗಳಂಥ ವಿಶೇಷ ಸಂದರ್ಭಗಳಲ್ಲಿ ಮಾತ್ರ ತವರಿಗೆ ಹೋಗಿ ಬರುತ್ತಾಳೆ. ಮೊದಲ ಬಾರಿಗೆ ಮುಟ್ಟು ನಿಂತಾಗ ಅಂದು ಗರ್ಭಿಣಿಯಾದಾಗ ಗಂಡನ ಮನೆಯವರು ಆಕೆಯ ತವರಿಗೆ ಸುದ್ದಿ ಮುಟ್ಟಿಸುವರು. ಇದು ಹೆಣ್ಣಿಗೆ ಮೊದಲಬಾರಿಗೆ ತಾಯಿಯಾಗುವ ಬಯಕೆಯ ಕಾಲ. ಕುರುಬರಲ್ಲಿ ಮೊದಲ ಸಲ ಗರ್ಭಿಣಿಯಾದ ಸ್ತ್ರೀಗೆ ಏಳು ಅಥವಾ ಒಂಬತ್ತು ತಿಂಗಳಲ್ಲಿ ಒಂದು ಶುಭದಿನದಂದು ಸೀಮಂತವನ್ನು ಆಚರಿಸುವರು. ಕೆಲವೆಡೆ ಐದು ತಿಂಗಳಲ್ಲಿಯೇ ಸೀಮಂತ ಮಾಡಿ ತವರಿಗೆ ಕರೆದುಕೊಂಡು ಹೋಗುವುದಿದೆ. ಸೀಮಂತ ಕಾರ್ಯಕ್ಕೆ ನಿಗದಿ ಪಡಿಸಿದ ಹಿಂದಿನ ದಿನವೇ ಗರ್ಭಿಣಿಯ ತಂದೆ-ತಾಯಿಗಳು, ಬಂಧು-ಬಾಂಧವರೊಂದಿಗೆ ಗಂಡಿನ ಮನೆಗೆ ಬರುತ್ತಾರೆ. ಜೊತೆಗೆ ಸೀಮಂತಕ್ಕೆ ಬೇಕಾದ ಅಡುಗೆ ಪದಾರ್ಥಗಳು, ಮಗಳಿಗೆ ಸೀರೆ, ಬಳೆ ಆಯೇರಾಗಳು ಅಳಿಯನಿಗೆ ಹೊಸಬಟ್ಟೆಗಳನ್ನು ತಂದಿರುತ್ತಾರೆ. ಬಂದ ದಿನ ರಾತ್ರಿಯೇ ಬಯಕೆಯ ಬುತ್ತಿಯನ್ನು ಎಲ್ಲರಿಗೂ ಬಡಿಸುವರು. ಇದಕ್ಕೆ 'ಬುತ್ತಿ ಬೀರುವುದು' ಎಂದು ಕರೆಯುವರು. ಮರುದಿನ ನಾನಾ ತರಹದ ಭಕ್ಷ್ಯ ಭೋಜನವನ್ನು ಮಾಡಿ ಬಂಧು-ಬಳಗವನ್ನು ಕರೆದು ಊಟಕ್ಕೆ ಹಾಕುವರು. ಸಮುದಾಯದವರಲ್ಲದೆ ಇತರರು ಬಂದು ಈ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವರು. ಸಾಯಂಕಾಲ ಸೀಮಂತ ಕಾರ್ಯ ಮಾಡುತ್ತಾರೆ. ಗರ್ಭಿಣಿಯೊಂದಿಗೆ ಆಕೆಯ ಗಂಡನನ್ನು ಕರಿಕಂಬಳಿ ಮೇಲೆ ಕೂರಿಸಿ, ಅಕ್ಕಿಯ ಹಸೆ ಹೊಯ್ದು ತವರಿಂದ ತಂದ ಸೀರೆ-ಕುಪ್ಪಸವನ್ನು ತೊಡಿಸುವರು. ಗಂಡಸಿಗೂ ಹೊಸಬಟ್ಟೆಯನ್ನು ತೊಡಿಸಿ ಆರತಿಯನ್ನು ಬೆಳಗುವರು. ನಂತರ ಹೆಣ್ಣನ್ನು ಕೂರಿಸಿ ಸಾಸೆ ಇಟ್ಟು ಸೀಮಂತ ಕಾರಣದ ಹಾಡುಗಳನ್ನು ಹಾಡುವರು. ಮುಗಿದ ನಂತರ ಬಂಧು-ಬಾಂಧವರು ಆಕೆಗೆ ಆಯೇರಾ ಮಾಡುವರು. ನಂತರ ದೇವಾಲಯಕ್ಕೆ ಹೋಗಿ ದೀಪ ಹಚ್ಚಿ, ಕರ್ಪೂರ ಬೆಳಗಿ ಪೂಜೆ ಸಲ್ಲಿಸಿ ಬರುತ್ತಾರೆ. ಮೂರನೆಯ ದಿನ ತವರು ಮನೆಗೆ ಕಳುಹಿಸಲಾಗುತ್ತದೆ.

**ಮರಣ:** ಜೀವನ ಚಕ್ರದಲ್ಲಿ ಮರಣ ಕೊನೆಯ ಹಂತ. ಜನನ ಬದುಕಿನ ಆರಂಭವಾದರೆ, ಮರಣ ಅದರ ಅಂತ್ಯ. ಮರಣದ ಸಂದರ್ಭದಲ್ಲಿ ಕುರುಬರು ಆಚರಿಸುವ ವಿಧಿಗಳು ವಿಶಿಷ್ಟ ಬಗೆಯವುಗಳಾಗಿವೆ. ಮರಣ ಸಂಭವಿಸಿದಾಗ ಕುಲಸ್ಥರೆಲ್ಲ ಸೇರಿ ಬಿಸಿನೀರಿನಿಂದ ಹೆಣದ ಮೈಯನ್ನು ತೊಳೆದು ಹೊಸಬಟ್ಟೆಯನ್ನು ಗೂಟಕ್ಕೆ ಬಡಿಯುವರು. ಅನಂತರ ಬಂಧು-ಬಳಗಕ್ಕೆಲ್ಲ ಸಾವು ಸುದ್ಧಿಯನ್ನು ಹೇಳಿ ಕಳುಹಿಸುವರು. ಕೆಲವೆಡೆ ಮಾದಿಗ ಸಮುದಾಯದವರನ್ನು ಕಳುಹಿಸುವರು. ಎಲ್ಲರೂ ಬಂದ ಮೇಲೆ ಇಮಾನ(ಸಿದಿಗಿ)ವನ್ನು ಸಿದ್ಧಗೊಳಿಸಿ ಶವವನ್ನು ಅದರಲ್ಲಿ ಕುಳ್ಳಿರಿಸಿ ಸ್ಮಶಾನಕ್ಕೆ ಹೊತ್ತುಕೊಂಡು ಹೋಗುತ್ತಾರೆ. ಕೆಲವೆಡೆಗಳಲ್ಲಿ ಕಳ್ಳಿಗಿಡದ ಕೊಂಬೆಗಳಿಂದ ಸಿದಿಗೆಯನ್ನು ಸಿದ್ಧಗೊಳಿಸಿ, ಶವವನ್ನು ಮಲಗಿಸಿ ಹೊತ್ತೊಯ್ಯುವರು. ಸ್ಮಶಾನದಲ್ಲಿ ಆ ಕುಲಕ್ಕೆ ಆಯಗಾರನಾಗಿದ್ದ ಮಾದಿಗ ಸಮುದಾಯದ ವ್ಯಕ್ತಿಯು ಗುಂಡಿ ತೆಗೆಯಲು ಅಳತೆ ಮಾಡಿಕೊಡುತ್ತಾನೆ. ಅಂದರೆ ಹಿಂದೆ ಒಂದೊಂದು ಕುಲಕ್ಕೂ ಚಪ್ಪಲಿ(ಮೆಟ್ಟು) ತಯಾರಿಸಿಕೊಡಲು ಒಂದು ಕುಟುಂಬವನ್ನು ನೇಮಿಸಿಕೊಳ್ಳುತ್ತಿದ್ದರು. ಎಲ್ಲರಿಗೂ ಚಪ್ಪಲಿ ತಯಾರಿಸಿಕೊಡುವುದರಿಂದ ಮಾದಿಗರಾತನಿಗೆ ಇವರ ಅಳತೆ ಗೊತ್ತಿರುತ್ತಿತ್ತು. ಹಾಗಾಗಿ ಇಷ್ಟು ಉದ್ದ-ಅಗಲ ತೊಡಬೇಕೆಂದು ಆತ ಹೇಳುತ್ತಿದ್ದ. ಇಂದು ಈ ಆಚರಣೆಯು ಅಲ್ಲಲ್ಲಿ ಮಾತ್ರ ಕಂಡುಬರುತ್ತದೆ. ಹೀಗೆ ತೋಡಿದ ಗುಂಡಿ(ಕುಣಿ)ಯಲ್ಲಿ ದಕ್ಷಿಣ ದಿಕ್ಕಿಗೆ ತಲೆ ಮಾಡಿ ಶವವನ್ನು ಮಲಗಿಸುವರು. “ಕೆಲವೆಡೆ ಉತ್ತರಾಭಿಮುಖವಾಗಿ ಪೂರ್ವಾಭಿಮುಖ ವಾಗಿ ಇರುವ ಗೂಡಿನಲ್ಲಿ ಮಲಗಿಸುವರು.”[೧೦]

ಬಂದವರೆಲ್ಲ ಬಿಲ್ವಪತ್ರಿ ಅಥವಾ ಬನ್ನಿಯ ಪತ್ರಿಯನ್ನು ಸಮಾಧಿಯ ಕುಣಿಯಲ್ಲಿ ಹಾಕಿ ಮೂರು ಹಿಡಿ ಮಣ್ಣು ಹಾಕುವರು. ನಂತರ ಸಲಿಕೆಯಿಂದ ಮಣ್ಣೆಳೆದು ಕುಣಿ ಮುಚ್ಚುವರು. ಮದುವೆಯಾಗದವರು ಸತ್ತರೆ ಅವರಿಗೆ ಸಿದಗಿ ಕಟ್ಟುವುದಿಲ್ಲ. ಅಪಘಾತ, ಆತ್ಮಹತ್ಯೆ, ಗರ್ಭಿಣಿ ಇದ್ದವರು ಸತ್ತರೆ ಸುಡುವರು. ಸಮಾಧಿಯ ಮೇಲೆ ಒಂದು ಕಲ್ಲನ್ನು ಇಟ್ಟು, ಅದಕ್ಕೆ ಕುಂಕುಮ ಹಚ್ಚಿ, ಊದಿನಕಡ್ಡಿ ಬೆಳಗಿ, ಕಾಯಿ ಒಡೆಯುವರು. ಆ ಸತ್ತ ವ್ಯಕ್ತಿಗೆ ‘ತಲೆಗೊರವಿ’ ಇಟ್ಟವನು ಸಮಾಧಿಯನ್ನು ಹಿಂತಿರುಗಿ ನೋಡದೇ ಎಲ್ಲರಿಗಿಂತಲೂ ಮುಂಚೆಯೇ ಮನೆ ಸೇರಿಕೊಳ್ಳಬೇಕು. ವಿಧಿಗಳನ್ನೆಲ್ಲ ಮುಗಿಸಿ ಬಂದು ಸತ್ತವನ ಮನೆಯಲ್ಲಿ ಹಚ್ಚಿಟ್ಟ ದೀಪವನ್ನು ನೋಡಿ ಬರುವಾಗ ಒಬ್ಬರು ಯಾಕೆ ಬಂದಿದ್ದೀರಿ ಎಂದು ಕೇಳುವನು. ಕಷ್ಟ(ದುಃಖ)ಕ್ಕೆ ಬಂದಿದ್ದೀವಿ ಸುಖಕ್ಕೊ ಹೋಗುತ್ತೀವಿ ಎಂದು ಹೇಳಿ ಹೋಗುವರು. ದೀಪ ನೋಡುವುದು ಸತ್ತ ವ್ಯಕ್ತಿಯು ಜ್ಯೋತಿಯಾಗಿ ಬಂದಿರುವರೆಂಬ ನಂಬುಗೆಯಿಂದ. ಮಣ್ಣು ಕೊಡಲು ಹೋದವರು ಸ್ನಾನ ಮಾಡದೇ ಮನೆಗೆ ಬರುವಂತಿಲ್ಲ. ಹಾಗಾಗಿ ಊರ ಕೆರೆ, ಬಾವಿಗಳ ಹತ್ತಿರ ಇಲ್ಲವೆ ಮನೆಯ ಹೊರಗೆ ಸ್ನಾನ ಮಾಡಿ ಬೇರೆ ಬಟ್ಟೆಗಳನ್ನು ಧರಿಸಿ ಬರಬೇಕು. ಪರ ಊರಿನಿಂದ ಬಂದವರು ಹಾಕಿಕೊಳ್ಳಲು ಬೇರೆ ಬಟ್ಟೆಗಳು ಇರುವುದಿಲ್ಲವಾದ್ದರಿಂದ ಸ್ನಾನ ಮಾಡಿ ಬನಿಯನ್, ಚಡ್ಡಿಗಳನ್ನು ತಿರುಗಿಸಿ ಹಾಕಿಕೊಳ್ಳುವರು.

ಮನೆಗೆ ಹೋಗಿ ಬಟ್ಟೆ ಬದಲಿಸುತ್ತಾರೆ. ಅಂತ್ಯಕ್ರಿಯೆ ಮುಗಿದ ನಂತರ ಮನೆಯನ್ನು ಸಾರಿಸಿ, ಎಲ್ಲರೂ ಸ್ನಾನಮಾಡಿ ಮಡಿಬಟ್ಟೆ ತೊಟ್ಟು ಗುರುಸ್ವಾಮಿಯನ್ನು ಮನೆಗೆ ಆಮಂತ್ರಿಸಿ, ಪೂಜಿಸಿ ಪಾದೋದಕವನ್ನು ಮನೆಯ ತುಂಬ ಸಿಂಪಡಿಸುವ ಮೂಲಕ ಮೈಲಿಗೆ ಕಳೆಯುತ್ತಾರೆ.

ಮೂರು ದಿನಗಳ ನಂತರ ಮೃತನ ಆತ್ಮಶಾಂತಿಗಾಗಿ ಕಾಗೆ ಪಿಂಡ(ಅನ್ನ)ವನ್ನು ಮಾಡಿಕೊಂಡು ಸಮಾಧಿ ಗುಡ್ಡೆಯ ಹತ್ತಿರ ಪೂಜಿಸಿಡುವರು. ಆ ಕೂಳನ್ನು ಕಾಗೆಗಳು ಬಂದು ತಿಂದು ಹೋಗುವವರೆಗೂ ಕಾಯಬೇಕು. ಅದನ್ನೇ ಕಾಗೆಪಿಂಡ ಎಂದು ಹೇಳುವರು. ಅಂದು ರಾತ್ರಿ ಸತ್ತ ವ್ಯಕ್ತಿಯನ್ನು ದೈವಕ್ಕೆ ಸೇರಿಸಿಕೊಳ್ಳುವ ವಿಧಿಯು ನಡೆಯುತ್ತದೆ. ಕುಲಸ್ಥರು ಅಂದರೆ ಒಕ್ಕಲಿನ ಅಣ್ಣ–ತಮ್ಮಂದಿರು ಸೇರಿ ಕುರಿ, ಟಗರು, ಹೋತ, ಕೋಳಿ ಹೀಗೆ ಅವರ ಶಕ್ತ್ಯಾನುಸಾರವಾಗಿ ಕಡಿದು ಆ ಎಡೆಯನ್ನು ಪೂಜೆಯಾಗಿ ಸತ್ತ ವ್ಯಕ್ತಿಯೊಂದಿಗೆ ಪೂರ್ವಿಕರಿಗೂ ಸಲ್ಲಿಸಿದಾದ ನಂತರ ಕುಲಸ್ಥರೆಲ್ಲ ಸೇರಿ ಊಟ ಮಾಡುವರು. ಇದಕ್ಕೆ ಕುಲಕ್ಕೆ ಸೇರಿಸಿಕೊಳ್ಳುವುದು ಎಂದು ಕರೆಯುವರು. ಈ ಊಟವನ್ನು ಅಣ್ಣ–ತಮ್ಮಂದಿರನ್ನು ಹೊರತುಪಡಿಸಿ ಬೇರೆ ಯಾರು ಸೇವಿಸುವಂತಿಲ್ಲ. ಮುಂದಿನ ಹಿರಿಯರ ಹಬ್ಬದಲ್ಲಿ ಮೃತನ ಸ್ಮರಣಾರ್ಥ ಹೊಸಬಟ್ಟೆಗಳು, ಆತನಿಗೆ ಪ್ರಿಯವಾದ ವಸ್ತುಗಳನ್ನು ತಂದಿಟ್ಟು ಪೂಜಿಸುವರು. ಮೂರು ದಿನದ ಶಾಸ್ತ್ರವಾದ ಮೇಲೆ ಹದಿಮೂರು ಅಥವಾ ಹದಿನಾರನೆಯ ದಿನಕ್ಕೆ ದೊಡ್ಡ ತಿಥಿಯನ್ನು ಮಾಡುವರು. ಅದರಲ್ಲಿ ಒಕ್ಕಲಿನ ಅಣ್ಣ–ತಮ್ಮಂದಿರು, ನೆಂಟರಿಷ್ಟರು ಸೇರುವರು. ಈ ಕಾರ್ಯವಿಧಿಗೆ ಒಡೆಯರ ಹಾಜರಾತಿ ಕಡ್ಡಾಯ. ಏಕೆಂದರೆ ಕುರುಬ ಕುಲಕ್ಕೆ ಗುರುಗಳಾದ ಇವರು ಸತ್ತ ವ್ಯಕ್ತಿಯನ್ನು ಅವನ ಪಿತೃಗಳ ಹತ್ತಿರ ಕಳುಹಿಸುವರೆಂಬ ನಂಬುಗೆಯಿದೆ. ಹಾಗಾಗಿ ಅವರು ಬಂದು ಪೂಜೆ ಸಲ್ಲಿಸುವುದು ಮುಖ್ಯವಾಗಿರುತ್ತದೆ. ಕೆಲವೆಡೆ ಸತ್ತಾಗ ಮಣ್ಣು ಮಾಡುವಾಗಲೂ ಒಡೆಯರು ಕಡ್ಡಾಯವಾಗಿ ಬರುವುದಿದೆ. ಮೂರು ದಿನದ ತಿಥಿಯನ್ನು ಕೆಲವರು ಸಿಹಿ ಅಡುಗೆಯನ್ನು ಮಾಡಿ ಪೂಜಿಸುವುದು ಇದೆಯಾದರೂ ಮಾಂಸಾಹಾರವೇ ಹೆಚ್ಚಿನದಾಗಿ ಮಾಡುವುದಿದೆ.

ಮೊಳಕಾಲ್ಮೂರು ತಾಲೂಕು ಅಶೋಕ ಸಿದ್ದಾಪುರದ ಕುಟುಂಬ ಕುರುಬರ ಮರಣದ ವಿಧಿಯು ತುಂಬ ಭಿನ್ನವಾಗಿದೆ. ಈ ವಿಧಿಯು ಆಧುನಿಕ ಜಗತ್ತಿಗೂ ವಿಸ್ಮಯ ಮೂಡಿಸುವಂತಿದೆ. ಅದರ ಹಿನ್ನೆಲೆಯನ್ನು ಹೇಳುವ ನೈಜ ಘಟನೆಯೊಂದು ಹೀಗಿದೆ: ಹಿಂದೆ ಕುರುಬ ಸಮುದಾಯದ ಕಾಡುಸಿದ್ದಪ್ಪ ಆತನ ಪತ್ನಿಯಿದ್ದರು. ಅವರದು ಅನೋನ್ಯ ದಾಂಪತ್ಯ. ಕಾಲ ಸರಿದಂತೆ ಕಾಡುಸಿದ್ದಪ್ಪನ ಪತ್ನಿ ಸತ್ತುಹೋದಳು. ಶವವನ್ನು ಸ್ಮಶಾನಕ್ಕೆ ಒಯ್ದು ಮಣ್ಣು ಮಾಡಿ ಬಂದರು. ಮರುದಿನ ಮುಂಜಾನೆ ಆ ಶವ ಮನೆಯ ಹತ್ತಿರ ಬಂದು ಬಿದ್ದಿತ್ತು. ಇವರು ಮತ್ತೆ ತೆಗೆದುಕೊಂಡು ಹೋಗಿ ಮಣ್ಣು ಮಾಡಿ ಬಂದರು. ಮತ್ತೆ ಎದ್ದು ಬಂತು. ಹೀಗೆ ಪದೇ ಪದೇ ಮಣ್ಣು ಮಾಡಿದರೂ ಆ ಶವ ಎದ್ದು ಬರುವುದನ್ನು ನೋಡಿದ ಕಾಡುಸಿದ್ದಪ್ಪ ಮಕ್ಕಳಿಗೆ ಆಕೆ ನಮ್ಮನ್ನು ಬಿಟ್ಟು ಇರಲಾರಳು

ಎಂದು ಹೇಳಿ ಮನೆಯ ಹತ್ತಿರವೇ ಸಮಾಧಿ ಮಾಡಿರೆಂದು ಹೇಳಿದನು. ಹಾಗೆಯೇ ಮುಂದೆ ನಾನು ಸತ್ತಾಗಲೂ ಆ ಸಮಾಧಿಯಲ್ಲಿಯೇ ಮಣ್ಣು ಮಾಡಿರೆಂದು ಹೇಳಿದ್ದನು. ಅದರಂತೆಯೇ ಮಾಡಲಾಯಿತು. ಅಂದಿನಿಂದ ಕಾಡಸಿದ್ದಪ್ಪನ ಮುಂದಿನ ಒಕ್ಕಲಿನವರು ಯಾರೇ ಸತ್ತರೂ ಅಲ್ಲಿರುವ ಒಂದೇ ಸಮಾಧಿಯಲ್ಲಿಯೇ ಮಣ್ಣು ಮಾಡುವುದು ನಡೆದುಕೊಂಡು ಬಂದಿದೆ. ಆ ಸಮಾಧಿಯಲ್ಲಿ ಬಿರುಕು ಕಾಣಿಸಿಕೊಂಡರೆ ಸಂಬಂಧಿಸಿದ ಒಕ್ಕಲಿನ ಯಾರಾದರೂ ಸಾಯುತ್ತಾರೆ ಎಂಬ ನಂಬುಗೆಯಿದೆ. ಅದು ಇಂದಿಗೂ ನಡೆಯುತ್ತದೆ ಎಂದು ಹೇಳುವರು. ಊರಲ್ಲಿದ್ದಾಗ ಸತ್ತ ಒಕ್ಕಲಿನವರನ್ನು ಮಾತ್ರ ಇಲ್ಲಿ ಸಮಾಧಿ ಮಾಡಲಾಗುತ್ತದೆ. ಎಲ್ಲಿಯಾದರೂ ಹೋಗಿದ್ದಾಗ ಸತ್ತವರನ್ನು, ಅಪಘಾತ, ಆತ್ಮಹತ್ಯೆ ಮಾಡಿಕೊಂಡವರನ್ನು ಈ ಸಮಾಧಿಯಲ್ಲಿ ಹೂಳುವುದಿಲ್ಲ. ಎರಡು–ಮೂರು ಹೆಣಗಳನ್ನು ಒಂದೇ ಸಮಾಧಿಯಲ್ಲಿ ಹೂತಾಗಲೂ ಮಣ್ಣು ಹೆಚ್ಚುವುದಿಲ್ಲ ಎಂದು ಹೇಳುವರು. ಮಣ್ಣು ಉಳಿಯಬಾರದೆಂದು ನೀರಾಕಿ ಕಲೆಸಿ ಸಮಾಧಿ ಮಾಡುತ್ತೇವೆ. ಹಾಗಾಗಿ ಮಣ್ಣು ಉಳಿಯುವುದಿಲ್ಲ ಎಂಬುದಾಗಿಯೂ ಹೇಳುತ್ತಾರೆ. ಒಮ್ಮೆ ಬೇರೆ ಕಡೆ ಸತ್ತ ವ್ಯಕ್ತಿಯನ್ನು ಒಕ್ಕಲಿನ ಹಿರಿಯರ ಮಾತು ಕೇಳದೆ ಇಲ್ಲಿಯೇ ಮಣ್ಣು ಮಾಡಿದರು. ಅವರ ವಂಶವಿಂದು ಅಳಿದುಹೋಗುತ್ತಿದೆ. ಹಾಗಾಗಿ ನಮ್ಮ ಪರಂಪರಾ ವಿಧಾನವನ್ನು ಮುರಿಯಲು ಯಾರು ಮುಂದೆ ಬರುವುದಿಲ್ಲ. ಅದರಿಂದ ಈ ವಿಧಾನಗಳನ್ನು ಇಂದಿಗೂ ಚಾಚುತಪ್ಪದೇ ಪಾಲಿಸಿಕೊಂಡು ಬರಲು ಸಾಧ್ಯವಾಗಿದೆ ಎಂದು ಹನುಮಂತಪ್ಪ ಅವರು ಹೇಳುವರು. ಈ ನಂಬಿಕೆಯು ಆಧುನಿಕ ಯುಗದಲ್ಲೂ ವಿಸ್ಮಯವನ್ನುಂಟು ಮಾಡಿದ್ದು, ಈ ಕಾರಣಕ್ಕಾಗಿಯೇ ಅಶೋಕ ಸಿದ್ದಾಪುರ ಇಂದು ಕಾಡು ಸಿದ್ದಾಪುರ ಎಂಬುದಾಗಿಯೂ ಕರೆಯಿಸಿಕೊಳ್ಳುತ್ತಿದೆ. ಈ ಗ್ರಾಮವನ್ನು ಹೊರತುಪಡಿಸಿದರೆ ಕುರುಬರ ಮರಣ ಸಮಯದಲ್ಲಿನ ವಿಧಿಗಳು ಕೆಲ ವ್ಯತ್ಯಾಸಗಳೊಂದಿಗೆ ಮೇಲೆ ವಿವರಿಸಿದ ರೀತಿಯಲ್ಲಿಯೇ ನಡೆಯುತ್ತದೆ.

**೩.೧.೪. ನ್ಯಾಯ ಪದ್ಧತಿ:** ಮಾನವ ಈ ಭೂಮಿಯ ಮೇಲೆ ಹುಟ್ಟಿದಂದಿನಿಂದ ಒಂದಿಲ್ಲೊಂದು ರೀತಿಯಲ್ಲಿ ನ್ಯಾಯ ತೀರ್ಮಾನಗಳು ನಡೆಯುತ್ತ ಬಂದಿವೆ; ಬರುತ್ತಲಿವೆ. "ನ್ಯಾಯ ಪಡೆಯುವ ವಿಧಾನಗಳು ದೇಶದಿಂದ ದೇಶಕ್ಕೆ, ಸ್ಥಳದಿಂದ ಸ್ಥಳಕ್ಕೆ ಬುಡಕಟ್ಟಿನಿಂದ ಬುಡಕಟ್ಟಿಗೆ ಬೇರೆಯಾಗಿರುತ್ತದೆ."[೧೧] ಭಿನ್ನ ಪರಿಸರ, ಆಚಾರ–ವಿಚಾರ, ಜೀವನ ವಿಧಾನಗಳಂತಹ ಅಂಶಗಳು ಇದಕ್ಕೆ ಕಾರಣಗಳು. ಪ್ರತಿ ಸಮುದಾಯಗಳು ಒಂದಿಲ್ಲೊಂದು ರೀತಿಯ ನ್ಯಾಯ ಪಂಚಾಯ್ತಿಗಳಂತಹ ಒಳಾಡಳಿತ ವ್ಯವಸ್ಥೆಯನ್ನು ಹೊಂದಿರುತ್ತವೆ. ಹಿಂದಿನಿಂದಲೂ ಪಾರಂಪರಿಕವಾಗಿ ಬಂದ ಈ ನ್ಯಾಯ ಪಂಚಾಯ್ತಿ ಅಥವಾ ಕುಲ ಪಂಚಾಯ್ತಿ ಗಳನ್ನು ಸ್ವಾತಂತ್ರ್ಯಾನಂತರವೂ ಕೆಲ ಸಮುದಾಯಗಳು ಉಳಿಸಿಕೊಂಡುಬಂದಿವೆ. ಅಂಥ ಬುಡಕಟ್ಟುಗಳಲ್ಲಿ ಕುರುಬ ಸಮುದಾಯವೂ ಒಂದು. ತನ್ನದೆ ಆದ ಮತ್ತು ವ್ಯವಸ್ಥಿತ ಸಾಂಪ್ರದಾಯಿಕ ಆಡಳಿತ ಕ್ರಮವನ್ನು ಹೊಂದಿದೆ. ಇದು ಆಧುನಿಕ ಪ್ರಜಾಪ್ರಭುತ್ವದ ರಾಜಕೀಯ ನ್ಯಾಯಾಂಗದಂತಿರದೇ ಸರಳ ಸಂಘಟಿತ ಕಥನವನ್ನು ಒಳಗೊಂಡಿದೆ.

ಕುರುಬ ಸಮುದಾಯವು ತಮ್ಮ ನಡುವಣ ನಡೆದ ಯಾವುದೇ ರೀತಿಯ ಜಗಳ, ವ್ಯಾಜ್ಯಗಳನ್ನು ಬಗೆಹರಿಸಿಕೊಳ್ಳುವ ಪಂಚಾಯಿತಿಗಳನ್ನು ಕಟ್ಟೆಮನೆ ಮತ್ತೆ ಗುರುಮನೆಗಳೆಂದು ಕರೆಯುವರು. ಕಟ್ಟೆಮನೆಗಳಲ್ಲಿನ ನ್ಯಾಯ ತೀರ್ಮಾನಗಳು ತಮ್ಮ ಕುಲದೈವಗಳ ಹತ್ತಿರ ನಡೆಯುತ್ತವೆ. ಕೆಲವು ಕಡೆ ಪ್ರತ್ಯೇಕವಾಗಿ ಕಟ್ಟೆಮನೆಗಳನ್ನು ಕಟ್ಟಿದ್ದಾರೆ. ಈ ನ್ಯಾಯ ಪಂಚಾಯತಿಗಳನ್ನು ಗೌಡ, ಯಜಮಾನ, ಪೂಜಾರಿ, ಕೋಲ್ಕಾರರು ಸೇರಿ ಮಾಡುತ್ತಾರೆ. ಈ ಪಂಚಾಯತಿ ಮುಖ್ಯಸ್ಥರು ಸ್ಥಾನಗಳು ತಲೆಮಾರಿನಿಂದ ತಲೆಮಾರಿಗೆ ವಂಶಪಾರಂಪರ್ಯವಾಗಿ ಬರುತ್ತವೆ. ಕೆಲವು ವೇಳೆ ವಂಶಪಾರಂಪರ್ಯ ವಾಗಿರದೇ ಬೇರೆಯವರನ್ನು ನೇಮಿಸಿರುವ ನಿದರ್ಶನಗಳು ಕ್ಷೇತ್ರಕಾರ್ಯದಲ್ಲಿ ಕಂಡುಬರುತ್ತಿರುವುದೇ ಹೆಚ್ಚು. ಕಟ್ಟೆಮನೆಯಲ್ಲಿ ತೀರ್ಮಾನವಾಗದ ಗುರುಮನೆಯೆಂದರೇ ರೇವಣಸಿದ್ಧ ಮಠಗಳು. ಪ್ರತೀ ಮಠಕ್ಕೆ ಸಂಬಂಧಿಸಿದ ಹಳ್ಳಿಗಳ ವ್ಯಾಜ್ಯಗಳನ್ನು ಆಯಾ ಮಠಗಳೇ ನ್ಯಾಯ ತೀರ್ಮಾನ ಮಾಡುತ್ತವೆ. ಇದರ ಕುರಿತು ರೇವಣಸಿದ್ಧ ಗುರುಪರಂಪರೆಯಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ಹಾಗಾಗಿ ಪ್ರಸ್ತುತ ಈ ಬರೆಹದಲ್ಲಿ ಕಟ್ಟೆಮನೆಗಳಲ್ಲಿನ ನ್ಯಾಯ ತೀರ್ಮಾನಗಳನ್ನು ವಿವರಣೆಗೆ ಒಳಪಡಿಸಲಾಗಿದೆ. ಗುರುಮನೆಯಲ್ಲಿ ಪಂಚಾಯ್ತಿ ಮಾಡುವ ಮುಖ್ಯಸ್ಥ ಒಡೆಯನಾಗಿರುತ್ತಾನೆ. ಅಂದರೆ ರೇವಣಸಿದ್ಧ ಮಠದ ಪೂಜಾರಿ ಆತನೊಂದಿಗೆ ವ್ಯಾಜ್ಯ ಬಗೆಹರಿಸಿಕೊಳ್ಳಲು ಫಿರ್ಯಾದುದಾರರನ್ನು ಕರೆದುಕೊಂಡು ಗೌಡ, ಯಜಮಾನ, ಪೂಜಾರಿ, ಕೋಲ್ಕಾರರು ಬಂದಿರುತ್ತಾರೆ.

ಕುರುಬರಲ್ಲಿ ಒಂದೊಂದು ಬೆಡಗಿಗೂ ಪ್ರತ್ಯೇಕವಾಗಿ ಒಂದೊಂದು ಕಟ್ಟೆಮನೆ ಇತ್ತೆಂದು, ಇತ್ತೀಚೆಗೆ ಕಡಿಮೆಯಾಗಿವೆಯೆಂದು ಹಿರಿಯರು ಹೇಳುವರು. ಇವುಗಳ ಮುಖ್ಯ ಉದ್ದೇಶ ಪರಂಪರಾಗತವಾಗಿ ಮುಂದುವರಿದುಕೊಂಡು ಬಂದಿರುವ ಸಮುದಾಯದ ಬದುಕಿನ ರೂಢಿ-ಸಂಪ್ರದಾಯ, ಆಚರಣೆ, ನಂಬಿಕೆಗಳಂಥ ಸಾಮಾಜಿಕ ಧಾರ್ಮಿಕ ಪರಂಪರೆಯನ್ನು ಮುರಿದವರಿಗೆ ಶಿಕ್ಷೆ ವಿಧಿಸುವುದು. ಆ ಮೂಲಕ ಸಮುದಾಯದ ಮೂಲ ಆಶಯಗಳಿಗೆ ಧಕ್ಕೆ ಬರದಂತೆ ನೋಡಿಕೊಳ್ಳುವ ಗುರುತರವಾದ ಕಾರ್ಯ ನಿರ್ವಹಿಸುತ್ತವೆ. ಕರ್ನಾಟಕದಾದ್ಯಂತ ಗಮನಿಸಿದಾಗ ನ್ಯಾಯ ಪಂಚಾಯ್ತಿ ಕೇಂದ್ರಗಳಾಗಿ ಗುರುಮನೆಗಳು ಕಂಡುಬರುತ್ತವೆ. ಈ ಭಾಗದಲ್ಲಿ ಮಾತ್ರ ಕಟ್ಟೆಮನೆಗಳು ಕೆಳ ನ್ಯಾಯಾಲಯಗಳಂತೆ ಕಾರ್ಯ ನಿರ್ವಹಿಸುತ್ತವೆ. ಇಲ್ಲಿ ಇತ್ಯರ್ಥವಾಗದ ವ್ಯಾಜ್ಯಗಳನ್ನು ಮಾತ್ರ ಉನ್ನತ ನ್ಯಾಯಾಲಯವಾದ ಗುರುಮನೆಗೆ ಕೊಂಡೊಯ್ಯುತ್ತವೆ. ಕುರುಬರಲ್ಲಿ ನ್ಯಾಯ ಪಂಚಾಯ್ತಿ ಕಟ್ಟೆಮನೆಗಳು ಹೆಚ್ಚಾಗಿ 'ಚಳ್ಳಕೆರೆ-ಕಲ್ಯಾಣದುರ್ಗಂ'ದಿಂದ ರಾಂಪುರ-ಡಿ. ಓರೇಹಾಳದವರೆಗೆ ಮಾತ್ರ ಕ್ಷೇತ್ರಕಾರ್ಯ ಮಾಡುವ ಸಂದರ್ಭದಲ್ಲಿ ಕಂಡುಬಂದಿವೆ. ಈ ಪ್ರದೇಶಗಳಲ್ಲಿ ಮ್ಯಾಸಬೇಡ ಮತ್ತು ಕಾಡುಗೊಲ್ಲರಂಥ ಪಶುಪಾಲಕ ಸಮುದಾಯಗಳು ಹೆಚ್ಚಾಗಿವೆ. ಅವರಲ್ಲಿ ಒಂದಿನಿಂದಲೂ ನ್ಯಾಯ ತೀರ್ಮಾನದ ಕಟ್ಟೆಮನೆಗಳಿವೆ. ಈ ವಿಧಾನವನ್ನು ಸೋದರ ಪಶುಪಾಲಕ ಕುರುಬ ಸಮುದಾಯದವರು ಅನುಸರಿಸಿಕೊಂಡಿರಬೇಕು. ಏಕೆಂದರೆ ಉಳಿದೆಡೆ ಕಟ್ಟೆಮನೆ ಪಂಚಾಯ್ತಿ

ಕೇಂದ್ರಗಳೆಂದರೇ ಗುರುಮನೆಗಳೇ ಆಗಿವೆ. ಈ ಭಾಗದಲ್ಲಿ ಕಂಡುಬರುವ ಕಟ್ಟೆಮನೆಗಳಿರುವ ಗ್ರಾಮ ಮತ್ತು ಮಂಡಲ/ತಾಲೂಕುಗಳನ್ನು ಕ್ರಮವಾಗಿ ಈ ಕೆಳಗಿನ ಪಟ್ಟಿಯಲ್ಲಿ ಕೊಡಲಾಗಿದೆ.

೧. ಓಬುಳಾಪುರ(ಸಿರಿವಾಳ) – ಚಳ್ಳಕೆರೆ ತಾಲೂಕು

೨. ಪಗಡಲ ಬಂಡೆ – ಚಳ್ಳಕೆರೆ ತಾಲೂಕು

೩. ಜಾಲಿಹಟ್ಟಿ – ಪಾವಗಡ ತಾಲೂಕು

೪. ಸಾವಣಗೆರೆ – ಹಿರಿಯೂರು ತಾಲೂಕು

೫. ತಿಮ್ಮಲಾಪುರ – ಮೊಳಕಾಲ್ಮೂರು ತಾಲೂಕು

೬. ಚಿಲುಮೇನಹಳ್ಳಿ – ಬ್ರಹ್ಮಸಮುದ್ರಂ ಮಂಡಲ

೭. ನಾಗಿರೆಡ್ಡಿಪಲ್ಲಿ – ಬ್ರಹ್ಮ ಸಮುದ್ರಂ ಮಂಡಲಂ

೮. ಎರಡುಕೆರೆ(ರೆಂಡುಚೆರ್ಲು) – ಬ್ರಹ್ಮ ಸಮುದ್ರಂ ಮಂಡಲಂ

೯. ಬಸಾಪುರಂ – ಕುಂದುರ್ಪಿ ಮಂಡಲಂ

೧೦. ದುರ್ದಕುಂಟ – ಕಲ್ಯಾಣದುರ್ಗಂ ಮಂಡಲಂ

೧೧. ಕೋಡಿಪಲ್ಲಿ – ಶೆಟ್ಟೂರು ಮಂಡಲಂ.

೧೨. ರಾಕೆಟ್ಲ – ಉರುವ ಕೊಂಡ ಮಂಡಲಂ

೧೩. ಡಿ. ಕೊಂಡಾಪುರಂ – ರಾಯದುರ್ಗಂ ಮಂಡಲಂ

೧೪. ರೇಖಲಕುಂಟ – ರಾಯದುರ್ಗಂ ಮಂಡಲಂ

೧೫. ನಾಗಲಪುರಂ – ಡಿ. ಹಿರೇಹಾಳ ಮಂಡಲಂ.

೧೬. ಹಿರ್ದಾಳ್ – ಡಿ. ಹಿರೇಹಾಳ ಮಂಡಲಂ

೧೭. ಡಿ. ಹಿರೇಹಾಳ – ಡಿ. ಹಿರೇಹಾಳ ಮಂಡಲಂ

೧೮. ಕಂಬದೂರು – ಕಂಬದೂರು ಮಂಡಲಂ

ಮೇಲೆ ಹೆಸರಿಸಿರುವುದು ಪ್ರಮುಖ ಕಟ್ಟೆಮನೆಗಳನ್ನು ಮಾತ್ರ. ಇವುಗಳಲ್ಲಿ ಕೆಲವು ಒಂದೊಂದೇ ಬೆಡಗಿಗೆ ಸಂಬಂಧಿಸಿವೆ. ಉದಾಹರಣೆಗೆ ಚಿಲುಮೆನಹಳ್ಳಿ ಮಲ್ಲೆಲ್ಲಾರು ಕುಲದವರಿಗೂ, ಓಬಳಾಪುರ(ಸಿರಿವಾಳ)ದಲ್ಲಿ ಅಳ್ಳೇನ ಕುರುಬರ ಮತ್ತು ಹಾಲು ಕುರುಬರಿಗೆ ಸಂಬಂಧಿಸಿದ ಎರಡು ಕಟ್ಟೆಮನೆಗಳಿವೆ. ಪ್ರತಿ ಕಟ್ಟೆಮನೆಗೆ ಸೇರಿದವರು ಎಲ್ಲಿಯೇ ವಾಸಿಸುತ್ತಿದ್ದರೂ ನ್ಯಾಯ ತೀರ್ಮಾನಕ್ಕೆ ಅದೇ ಕಟ್ಟೆಮನೆಗೆ ಬರಬೇಕು. ಇಲ್ಲಿ ಇತ್ಯರ್ಥವಾಗದ ವ್ಯಾಜ್ಯಗಳು ಸಂಬಂಧಿಸಿದ ಗುರುಮನೆಗೆ ವರ್ಗಾಯಿಸಲ್ಪಡುತ್ತವೆ. ಕರ್ನಾಟಕದಾದ್ಯಂತ ಅಮೋಘಸಿದ್ಧ, ಸಿದ್ಧರಾಮ, ರೇವಣಸಿದ್ದ ಮಠದ ಗುರುಮನೆಗಳು ನ್ಯಾಯಪಂಚಾಯ್ತಿ ಕೇಂದ್ರಗಳಾಗಿವೆ. ಅಧ್ಯಯನಕ್ಕೆ ಒಳಪಟ್ಟ ಈ ಪರಿಸರದಲ್ಲಿ

ರೇವಣಸಿದ್ಧ ಮಠಗಳು ಮಾತ್ರವೇ ಕಾಣಸಿಗುತ್ತವೆ. ಹಾಗಾಗಿ ಇವನ್ನು ಗುರುಮನೆಗಳೆಂದು ಕರೆಯಲಾಗಿದೆ.

ಒಂದೊಂದು ಗುರುಮನೆಗೆ ೩೦–೩೫ ಹಳ್ಳಿಗಳು ಒಳಪಡುತ್ತವೆ. ಸಂಬಂಧಿಸಿದ ಹಳ್ಳಿಗಳಲ್ಲಿ ಇತ್ಯರ್ಥವಾಗದ ವ್ಯಾಜ್ಯಗಳನ್ನು ಗುರುಮನೆಯಲ್ಲಿ ಒಡೆಯರು ತೀರ್ಮಾನಗಳನ್ನು ನೀಡುವರು. ಇತ್ಯರ್ಥವಾಗದ ವ್ಯಾಜ್ಯಗಳನ್ನು ಬಗೆಹರಿಸಲು ಸರವೂರ ಒಡೆಯರನ್ನು ಕರೆಯಿಸಿದ ನಿದರ್ಶನಗಳಿವೆ ಎಂದು ವೇಪಲಪರ್ತಿಯ ಸಿದ್ಧಲಿಂಗಯ್ಯಸ್ವಾಮಿ ಒಡೆಯರು ಹೇಳುವರು. ಇಂದು ಅಂತಹ ವ್ಯಾಜ್ಯಗಳನ್ನು ಇಲ್ಲಿಯೇ ಬಗೆಹಸಿರಿಕೊಳ್ಳುವುದಿದೆ.

ಗುರುಮನೆಗಳನ್ನು ಹೆಸರಿಸುವುದಾದರೆ,

೧. ಹರ್ತಿಕೋಟೆ – ಹಿರಿಯೂರು ತಾಲೂಕು
೨. ಹಿರಿಯೂರು – ಹಿರಿಯೂರು ತಾಲೂಕು ಕೇಂದ್ರ
೩. ದೊಡ್ಡೇರಿ – ಚಳ್ಳಕೆರೆ ತಾಲೂಕು
೪. ಕಡದರಹಳ್ಳಿ(ರಂಗವ್ವನಹಳ್ಳಿ) – ಚಳ್ಳಕೆರೆ ತಾಲೂಕು
೫. ವಿಠಲಾಪುರ – ಸಂಡೂರು ತಾಲೂಕು
೬. ದೇವಲಾಪುರ – ಹೊಸಪೇಟೆ ತಾಲೂಕು
೭. ಬಳ್ಳಾರಿ – ಬಳ್ಳಾರಿ
೮. ಸಿಂದ್ವಾಳ – ಬಳ್ಳಾರಿ ತಾಲೂಕು
೯. ಗೋಸ್ವಾಳ – ಸಿರುಗುಪ್ಪ ತಾಲೂಕು
೧೦. ತೆಕ್ಕಲಕೋಟೆ – ಸಿರುಗುಪ್ಪ ತಾಲೂಕು
೧೧. ಸೀರ್ಪಿಕೊಟ್ಟಾಲು – ಬೆಳಗುಪ್ಪ ಮಂಡಲ, ಅನಂತಪುರಂ ಜಿಲ್ಲೆ.
೧೨. ಲಕ್ಷ್ಮಂಪಲ್ಲಿ – ಕುಂದುರ್ಪಿ ಮಂಡಲಂ
೧೩. ಕುಂದುರ್ಪಿ – ಕುಂದುರ್ಪಿ ಮಂಡಲಂ
೧೪. ಕರ್ತನಪರ್ತಿ – ಕಲ್ಯಾಣದುರ್ಗಂ ಮಂಡಲಂ
೧೫. ವೇಪಲಪರ್ತಿ – ಬ್ರಹ್ಮ ಸಮುದ್ರಂ ಮಂಡಲಂ
೧೬. ಚಾವಾಲ – ವಜ್ರಕರೂರು ಮಂಡಲಂ
೧೭. ರಾಯದುರ್ಗಂ – ರಾಯದುರ್ಗಂ ಮಂಡಲಂ
೧೮. ಓಬುಳಾಪುರಂ – ಡಿ. ಹಿರೇಹಾಳ ಮಂಡಲಂ.
೧೯. ಗೋವಿಂದವಾಡ – ಬೊಮ್ಮನಹಾಳ ಮಂಡಲಂ.
೨೦. ಚಿಂತಕುಂಟ – ಹಾಲಹರವಿ ಮಂಡಲಂ, ಕರ್ನೂಲು ಜಿಲ್ಲೆ.

ಮೇಲೆ ಹೆಸರಿಸಿರುವ ಗುರುಮನೆಗಳ ಸಾಮಾಜಿಕ, ಧಾರ್ಮಿಕ ಕಾರ್ಯಗಳ ಜೊತೆಗೆ ನ್ಯಾಯ ತೀರ್ಮಾನದ ವಿಷಯಗಳನ್ನು ೪ನೆಯ ಅಧ್ಯಾಯದ ಹಾಲುಮತ ಗುರುಪರಂಪರೆಯಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ಇಲ್ಲಿ ಕಟ್ಟೆಮನೆಗಳ ನ್ಯಾಯ ನಿರ್ಣಯ, ಶಿಕ್ಷೆ ಮತ್ತು ದಂಡ ವಿಧಿಸುವುದರ ಕುರಿತು ತಿಳಿಯುವುದಾದರೆ,

* ಸಮುದಾಯದಲ್ಲಿನ ಎರಡು ಕೋಮಿನವರು ಯಾವುದೇ ಕಾರಣಕ್ಕೆ ಕೆರವು(ಚಪ್ಪಲ) ನಿಂದ ಹೊಡೆದಾಡಿದರೆ ಅವರನ್ನು ನ್ಯಾಯ ಪಂಚಾಯ್ತಿಗೆ ಸೇರಿಸಿ ದಂಡ ವಿಧಿಸಿ, ಶುದ್ಧಿ ಮಾಡಿಕೊಂಡು ಬರಲು ಗುರುಮನೆಗೆ ಕಳುಹಿಸುವರು.
* ಒಂದೇ ಬೆಡಗು ಅಥವಾ ಸೋದರ ಬೆಡಗುಗಳಲ್ಲಿ ಅಣ್ಣ-ತಂಗಿಯ ವರಸೆಯಾಗುವವರು ಗೊತ್ತಿದ್ದೊ, ಗೊತ್ತಿಲ್ಲದೆಯೋ, ಪ್ರೀತಿಸಿಯೋ ವಿವಾಹವಾದರೆ ಅಂತವರನ್ನು ಗುಡಿಕಟ್ಟಿನಿಂದ ಹೊರಹಾಕಲಾಗುತ್ತದೆ. ಇತ್ತೀಚೆಗೆ ಶುದ್ಧೀಕರಿಸಿ ಕುಲಕ್ಕೆ ಸೇರಿಸಿಕೊಳ್ಳುವ ಕಾರ್ಯಗಳು ನಡೆಯುತ್ತಿವೆಯಾದರೂ ಆ ಸಂಖ್ಯೆ ಕಡಿಮೆಯೆಂದೆ ಹೇಳಬೇಕು.
* ಪ್ರೀತಿಸಿ ಅಂತರ್ ಜಾತೀಯ, ಅಂತರ್ ಧರ್ಮೀಯ ವಿವಾಹಗಳಾದರೆ ಅವರನ್ನು ಸಮುದಾಯದಿಂದ ಹೊರಹಾಕುವ ಮತ್ತು ಸೇರಿಸಿಕೊಳ್ಳುವ ಕೆಲಸವನ್ನು ಈ ನ್ಯಾಯ ಪಂಚಾಯತಿಗಳು ಮಾಡುತ್ತಿವೆ. ಆ ಮುಖೇನ ಪ್ರಪಂಚೀಕರಣ ಮತ್ತು ಆಧುನಿಕತೆಯನ್ನು ನಿಧಾನವಾಗಿಯಾದರೂ ಒಪ್ಪಿಕೊಳ್ಳುತ್ತಿರುವುದು ಕಂಡುಬರುತ್ತದೆ.
* ಪುರುಷ ಮೊದಲ ಹೆಂಡತಿ ಇರುವಾಗ ಇನ್ನೊಬ್ಬ ಮಹಿಳೆಯನ್ನು ಮದುವೆಯಾಗುವಂತಿಲ್ಲ. ಒಂದುವೇಳೆ ಮೊದಲ ಹೆಂಡತಿಯಿದ್ದು, ಎರಡನೆಯ ಮದುವೆಯಾಗಲು ಸಿದ್ಧತೆ ನಡೆಸಿದ್ದರೆ ಅದು ಕುಲಸ್ಥರಿಗೆ ಗೊತ್ತಾಗುತ್ತದೆ. ಹೇಗೆಂದರೆ ಮದುವೆಯಾಗುವವ ತಮ್ಮ ಕುಲದೇವರ ಹತ್ತಿರದಲ್ಲಿ ಪೂಜೆ ಮಾಡಿಸಿಕೊಂಡು ವರನಾಗಿ ಸಿದ್ಧನಾಗಬೇಕಿದೆ. ಅಲ್ಲಿ ರಿಜಿಸ್ಟರ್ ಪುಸ್ತಕದಲ್ಲಿ ಆತನ ಪೂರ್ಣವಿಳಾಸ ಮತ್ತು ವಧುವಿನ ವಿಳಾಸವನ್ನು ಬರೆದಿಡಲಾಗಿರುತ್ತದೆ. ಹಾಗಾಗಿ ಮತ್ತೊಂದು ಮದುವೆಯಾಗುವಾಗ ಕಟ್ಟೆಮನೆಗೆ ತಿಳಿಯುತ್ತದೆಯಾದ್ದರಿಂದ ಮತ್ತೊಂದು ಮದುವೆಗೆ ಅವಕಾಶ ನೀಡುವುದಿಲ್ಲ. ಒಂದು ವೇಳೆ ಗೊತ್ತಾಗದಂತೆ ಮದುವೆಯಾದರೂ ದಂಡ ವಿಧಿಸಿ ಮೊದಲ ಹೆಂಡತಿಗೆ ಜೀವನಾಂಶ ಕೊಡಿಸುತ್ತಾರೆ. ಇಬ್ಬರು ಪತ್ನಿಯರು ಹೊಂದಿಕೊಂಡು ಹೋಗುತ್ತೇವೆಂದು ಹೇಳಿದರೂ ಕಟ್ಟೆಮನೆಗೆ ದಂಡ ಕೊಡಬೇಕಾಗುತ್ತದೆ.
* ಕಳ್ಳತನ, ಹಾದರಗಳಂತಹ ವಿಷಯಗಳು ಪೊಲೀಸ್ ಸ್ಟೇಷನ್, ಕೋರ್ಟ್, ಕಛೇರಿಗೆ ಹೋಗಿ ಬಂದವರಿಗೆ ಪಂಚಾಯ್ತಿಗೆ ಸೇರಿಸಿ, ದಂಡವನ್ನು ವಿಧಿಸಲಾಗುತ್ತದೆ. ಅದು ಕೃತ್ಯಕ್ಕೆ ಅನುಗುಣ ವಾಗಿದ್ದು, ಹಣ, ವಸ್ತುವಿನ ರೂಪದಲ್ಲಿರುತ್ತದೆ. ಅಂತವರನ್ನು ಶುದ್ಧೀಕರಿಸುವ ಮುಖೇನವಾಗಿ ಕುಲಕ್ಕೆ ಸೇರಿಸಿಕೊಳ್ಳಲಾಗುತ್ತದೆ.

ಮುಂತಾದ ಅಂಶಗಳನ್ನು ಗುರುತಿಸಬಹುದು. ಕುರುಬರ ಈ ಕುಲಪಂಚಾಯ್ತಿ ಪದ್ಧತಿಯು ಬಹು ಹಿಂದಿನಿಂದ ನಡೆದುಕೊಂಡು ಬಂದಿದೆ; ಬರುತ್ತಲಿದೆ. ಇದು ಪಾರಂಪರಿಕ ರೀತಿ–ರಿವಾಜು ನಂಬುಗೆ ಆಚರಣೆಗಳನ್ನು ಉಳಿಸಿಕೊಂಡು ಬರುವುದಕ್ಕಾಗಿ ಪೂರ್ವಿಕರು ಹಾಕಿಕೊಟ್ಟ ಕಟ್ಟಳೆಗಳು. ಪ್ರಪಂಚೀಕರಣದ ಈ ದಿನಮಾನಗಳಲ್ಲಿ ಬಿಗಿಯಾದ ಕಟ್ಟಳೆಗಳಲ್ಲಿ ಸಾಕಷ್ಟು ಬದಲಾವಣೆಗಳನ್ನು ಮಾಡಿಕೊಂಡು ಮುಂದುವರಿಸುತ್ತಿರುವುದು ಸಮುದಾಯದ ನ್ಯಾಯ ತೀರ್ಮಾನದ ಅನನ್ಯತೆಯನ್ನು ಬಿಂಬಿಸುತ್ತದೆ.

### ೩.೨. ಆರ್ಥಿಕ ಸ್ಥಿತಿಗತಿ

ಸಾವಿರಾರು ವರ್ಷಗಳ ಮನುಜಕುಲದ ಇತಿಹಾಸವಿರುವ ಭಾರತದಲ್ಲಿ ಅನೇಕ ಸಮುದಾಯಗಳು ಇಂದಿಗೂ ತಮ್ಮ ಪರಂಪರಾಗತ ಜೀವನ ಪದ್ಧತಿಯಲ್ಲಿಯೇ ಮುಂದುವರಿಯುತ್ತಿವೆ. ಆದರೆ ಕಳೆದ ಒಂದೆರಡು ಶತಮಾನಗಳಲ್ಲಿ ಆದ ರಾಜಕೀಯ ಮತ್ತು ಆರ್ಥಿಕ ಬದಲಾವಣೆಗಳು ದಲಿತ, ಹಿಂದುಳಿದ ಸಮುದಾಯಗಳ ಬದುಕಿನ ಮೇಲೆ ಅಪಾರವಾದ ಪರಿಣಾಮವನ್ನು ಬೀರಿವೆ. ವಸಾಹತು ಸಂದರ್ಭದಲ್ಲಿ ಹೇಗೆ ಅರಣ್ಯಗಳು ವಾಣಿಜ್ಯ ಉದ್ದೇಶಗಳಿಗಾಗಿ ಬದಲಾದವು ಮತ್ತು ಅಂತಹ ಆರ್ಥಿಕ ಬದಲಾವಣೆಗಳಿಂದ ಕಾಡನ್ನೇ ಅವಲಂಬಿಸಿ ಬದುಕುತ್ತಿದ್ದ ಸಮುದಾಯಗಳ ಮೇಲೆ ಆದ ಪರಿಣಾಮಗಳೇನು? ಕೈಗಾರಿಕೀಕರಣ, ಪ್ರಪಂಚೀಕರಣಗಳು ಸಮುದಾಯಗಳನ್ನು ಹೇಗೆ ಆರ್ಥಿಕ ಹಿನ್ನೆಡೆಗೆ ನೂಕಿವೆ ಎಂಬಿತ್ಯಾದಿ ಪ್ರಶ್ನೆಗಳನ್ನು ಹಾಕಿಕೊಳ್ಳುವ ಮುಖೇನ ಕರ್ನಾಟಕ ಆಂಧ್ರಪ್ರದೇಶದ ಗಡಿನಾಡಿನಲ್ಲಿ ನೆಲೆಸಿರುವ ಕುರುಬ ಸಮುದಾಯದ ಆರ್ಥಿಕ ಸ್ಥಿತಿಗತಿಯನ್ನು ಕ್ಷೇತ್ರ ಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿ, ಪೂರಕ ಆಕರಗಳನ್ನು ಬಳಸಿಕೊಂಡು ಸೋದಾಹರಣವಾಗಿ ಚರ್ಚಿಸಲಾಗಿದೆ.

ಗಡಿನಾಡು ಎಂಬುದು ಯಾವತ್ತಿಗೂ ಅವಜ್ಞೆಗೆ ಒಳಗಾದ ಪ್ರದೇಶ. ಪ್ರತೀ ರಾಜ್ಯವು ಗಡಿನಾಡಿನ ಕುರಿತು ದಿವ್ಯ ನಿರ್ಲಕ್ಷ್ಯವನ್ನು ವಹಿಸುತ್ತವೆ. ಪ್ರಸ್ತುತ ಅಧ್ಯಯನದ ಕಾರ್ಯಕ್ಷೇತ್ರವಾದ ವೇದಾವತಿ–ತುಂಗಭದ್ರ ನದಿಯ ಮಧ್ಯದಲ್ಲಿರುವ ಗಡಿನಾಡು ಈ ಮಾತಿಗೆ ಹೊರತಲ್ಲ. ಕುರುಚಲು ಕಾಡು, ಸಮತಟ್ಟಲ್ಲದ ಭೂಮಿ, ಅತ್ಯಂತ ಕಡಿಮೆ ಮಳೆ ಬೀಳುವ ಬಯಲುಸೀಮೆ ಪ್ರದೇಶ. ಹಾಗಾಗಿ ಈ ಪರಿಸರದಲ್ಲಿ ವಾಸಿಸುವ ಸಮುದಾಯಗಳು ಮಳೆಯಾಶ್ರಿತ ಕೃಷಿ(ಒಣಬೇಸಾಯ)ಯಿಂದ ಜೀವಿಸುತ್ತಿವೆ. ಇದು ಕುರುಬ ಸಮುದಾಯಕ್ಕೂ ಅನ್ವಯಿಸುತ್ತದೆ.

ಹೆಸರೇ ಸೂಚಿಸುವಂತೆ ಕುರುಬ ಸಮುದಾಯದ ಸಾಂಪ್ರದಾಯಿಕ ಕಸುಬು ಪಶುಪಾಲನೆ. ಅದರಲ್ಲಿಯೂ ಕುರಿಸಾಕಾಣಿಕೆ ಜೊತೆಗೆ ಕಂಬಳಿ ನೇಯ್ಗೆ. ಇತ್ತೀಚೆಗೆ ಕೃಷಿಯತ್ತ ಸಾಗಿ ಬಂದಿದ್ದಾರೆ; ಬರುತ್ತಲಿದ್ದಾರೆ. ಪರಂಪರಾಗತವಾಗಿ ಕುರಿಸಾಕಾಣಿಕೆ, ಕಂಬಳಿ ನೇಯ್ಗೆ ಮಾಡಿಕೊಂಡು

ಬಂದಿರುವುದರಿಂದಲೇ ಇವರಿಗೆ ಕುರುಬರೆಂದು ಹೆಸರಾಗಿದೆ ಎಂಬುದಾಗಿ ಕೆಲ ವಿದ್ವಾಂಸರು ಚರ್ಚಿಸಿದ್ದಾರೆ. ವೇದಗಳ ಕಾಲದಲ್ಲಿ ವ್ಯಕ್ತಿ-ಕುಟುಂಬ-ಸಮುದಾಯದ ಆರ್ಥಿಕತೆಯು ಅವರು ಸಾಕಿ-ಸಲುವುತ್ತಿದ್ದ ಪಶು-ಕುರಿ-ಮೇಕೆಗಳ ಸಂಖ್ಯೆಯ ಮೇಲೆ ನಿರ್ಧಾರಕವಾಗಿತ್ತು. ನಂತರದ ದಿನಗಳಲ್ಲಿ ಭೂಮಿ, ಬೆಳ್ಳಿ, ಬಂಗಾರ, ಧನಸಂಪತ್ತು ಪ್ರಧಾನವಾಯಿತು. ಮುಂದುವರಿದು ಆ ಜಾಗಕ್ಕೆ ಇಂದು ಪಾಲಿಸಿ, ಷೇರು, ವಾಹನಗಳಂಥವು ಬಂದಿವೆ. ಆದರೆ ಇಂದಿಗೂ ಕುರುಬರ ಆರ್ಥಿಕತೆಯ ನಿರ್ಧಾರಕ ಅಂಶ ಕುರಿ-ಮೇಕೆಗಳ ಸಂಖ್ಯೆಯನ್ನೇ ಅವಲಂಬಿಸಿದೆ. ಸಾಮಾನ್ಯವಾಗಿ ಇವರು ೨೫ರಿಂದ ಗರಿಷ್ಠ ೧೦೦೦-೧೫೦೦ರವರೆಗೆ ಕುರಿಗಳನ್ನು ಸಾಕುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಸಾವಿರ ಸಂಖ್ಯೆಯ ಕುರಿ ಸಾಕುವ ಕುಟುಂಬಗಳ ಸಂಖ್ಯೆ ತೀರಾ ಕಡಿಮೆಯಾಗಿದೆ. ಮೇವು-ನೀರಿನ ಕೊರತೆ, ರೋಗ-ರುಜಿನೆಗಳು, ಶ್ರಮಿಕರ(ಆಳುಮಕ್ಕಳ) ಸಮಸ್ಯೆ, ಇಂದಿನ ಯುವಪೀಳಿಗೆ ಪಾರಂಪರಿಕ ವೃತ್ತಿಯನ್ನು ಮಾಡಲು ಹಿಂಜರಿಯುತ್ತಿರುವುದು ಇದಕ್ಕೆ ಕಾರಣಗಳೆಂದು ಹೇಳಬಹುದು.

ಹಾಗಾಗಿಯೇ ಈ ಪರಿಸರದಲ್ಲಿ ಕುರುಬರಿಗಿಂತಲೂ ಹೆಚ್ಚಾಗಿ ಗೊಲ್ಲರು, ಮ್ಯಾಸಬೇಡರಂಥ ಹಿಂದುಳಿದ ಸಮುದಾಯಗಳು ಕುರಿಸಾಕಾಣಿಕೆಯನ್ನು ಹೆಚ್ಚಾಗಿ ಮಾಡುತ್ತಿವೆ. ಮೂಲತಃ ಪಶುಪಾಲಕ (ಗೋಪಾಲಕ)ಸಮುದಾಯಗಳಾದ ಇವು ಕುರಿ ಸಾಕಾಣಿಕೆಯಿಂದ ಲಾಭ ಅಧಿಕವಾಗಿರುವುದನ್ನು ಮನಗಂಡು ಕುರಿಸಾಕಾಣಿಕೆಯತ್ತ ಬಂದಿವೆ ಎನ್ನಬಹುದು. ಆದರೂ ಕುರಿಸಾಕಾಣಿಕೆಯಿಂದ ಬರುವ ಆದಾಯದ ಪ್ರಮಾಣ ಸ್ಥಿರವಾಗಿರದೆ ಹಲವಾರು ಅಂಶಗಳಿಂದ ನಿರ್ಧಾರವಾಗುತ್ತದೆ. ಅಂಥ ಅಂಶಗಳೆಂದರೆ ಕುರಿಗಳಿಗೆ ಬರುವ ರೋಗ-ರುಜಿನಗಳು, ಮೇವು-ನೀರು ದೊರೆಯದಿರುವುದು, ಕುರಿ ಮಾರುಕಟ್ಟೆ ಮೌಲ್ಯ, ಕಂಬಳಿ ವ್ಯಾಪಾರಗಳು ಏಕರೂಪದಲ್ಲಿರದಿರುವುದು, ಅದರ ಶ್ರಮ ಇತ್ಯಾದಿ. ಇಂಥ ಪರಿಸ್ಥಿತಿಯಲ್ಲಿ ಕೌಟುಂಬಿಕ ಖರ್ಚು-ವೆಚ್ಚಗಳನ್ನು ಸರಿದೂಗಿಸಲು ಸಾಕಷ್ಟು ತೊಂದರೆಗಳನ್ನು ಕುರುಬ ಸಮುದಾಯ ಅನುಭವಿಸುತ್ತಿದೆ. ಹಾಗಾಗಿ ಸಾಲ-ಸೋಲ ಮಾಡಿಕೊಂಡು ಬದುಕಬೇಕಾದ ಅನಿವಾರ್ಯತೆಗಳು ನಿರ್ಮಾಣವಾಗುತ್ತಿವೆ. ಒಟ್ಟಿನಲ್ಲಿ ವಾರ್ಷಿಕ ಆದಾಯವು ಸ್ಥಿರವಾಗಿರದೇ ಜೀವನದ ಆಗುಹೋಗುಗಳು ಏರುಪೇರಾಗುತ್ತದೆ. ಹಾಗಾಗಿಯೇ ಆರಂಭದ ಕಾಲಘಟ್ಟದಲ್ಲಿ "ಕುರಿಸಾಕಾಣಿಕೆಯು ಕುಲವೃತ್ತಿಯಾಗಿದ್ದು ಅದಕ್ಕೆ ಪ್ರಾಧಾನ್ಯತೆಯಿತ್ತು. ನಂತರದ ದಿನಗಳಲ್ಲಿ ಅಭಿವೃದ್ಧಿಯನ್ನು ತಂದುಕೊಟ್ಟಿತ್ತಾದರೂ, ಜಾಗತೀಕರಣದ ನಂತರ ಈ ಕುಲಕಸುಬು ತನ್ನ ಮಾನ್ಯತೆಯನ್ನು ಕಳೆದುಕೊಂಡು ಈ ವೃತ್ತಿಯನ್ನು ಅವಲಂಬಿಸಿರುವ ಸಮುದಾಯಕ್ಕೆ ಒಂದು ಶಾಪವಾಗಿ ಮಾರ್ಪಟ್ಟಿದೆ".[೧೨] ಹೀಗೆ ಕುರಿಸಾಕಾಣಿಕೆಯ ಮುಖೇನ ಸಮುದಾಯದ ಲಾಭ ಪಡೆದುಕೊಳ್ಳುವ ವೃತ್ತಿಯಾಗಿದ್ದಾಗ್ಯೂ, ಅದರಲ್ಲಿನ ಸಮಸ್ಯೆಗಳು ಅವರನ್ನು ಆ ವೃತ್ತಿಯಿಂದ ವಿಮುಖರನ್ನಾಗಿಸುತ್ತಿದೆ.

**೩.೨.೧. ಕುರಿಸಾಕಣೆ:** ಕುರುಬ ಸಮುದಾಯದವರು ದೈವಭಕ್ತರು. ಕುರಿ–ಮೇಕೆಗಳನ್ನು ಸಲಹುವುದು ಪವಿತ್ರ ಕೆಲಸವೆಂದು ಭಾವಿಸಿದ್ದಾರೆ. ಏಕೆಂದರೆ ಅವರಿಗೆ ಕುರಿಗಳು ಸಾಕ್ಷಾತ್ ಶಿವ–ಪಾರ್ವತಿಯರಿಂದ ದೊರೆತವೆಂಬ ನಂಬುಗೆ. ಇದನ್ನು ಪುಷ್ಠೀಕರಿಸಲು ಕನ್ನಡ–ತೆಲುಗು ಭಾಷೆಗಳಲ್ಲಿಯೂ ಸಾಕಷ್ಟು ಕಥೆ, ಕಾವ್ಯಗಳ ಜೊತೆಗೆ ಜನಪದ ಸಾಹಿತ್ಯವೂ ಸಮುದಾಯದ ಕುಲಕಸುಬಿನ ಮಾಹಿತಿಗಳನ್ನು ಒದಗಿಸುತ್ತವೆ. ಬೀರಪ್ಪ, ಮಲ್ಲಯ್ಯ, ಮಾಯಕ್ಕ, ಮಹಾಂಕಾಳಿ ಸ್ವತಃ ಕುರಿಕಾಯ್ದು, ಅನಂತರ ದೈವತ್ವಕ್ಕೇರಿದ ಸಾಂಸ್ಕೃತಿಕ ವೀರರು. ಅವರಿಂದ ಪಡೆದ ಕುರಿಗಳು ಪವಿತ್ರವಾದವು ಎಂಬ ಕಾರಣಕ್ಕೆ ಕುರಿಸಾಕಾಣಿಕೆ ಕಂಬಳಿ ನೇಯ್ಗೆಯನ್ನು ಇಂದಿಗೂ ದೈವ ಸಮಾನವೆಂದೇ ಭಾವಿಸಿದ್ದಾರೆ. ಕುರಿ–ಮೇಕೆಗಳಿಗೆ ಯಾವ ರೋಗ–ರುಜಿನ ತಗುಲಬಾರದೆಂದು ಪ್ರತಿವರ್ಷ ಹುಟ್ಟುವ ಮೊದಲ ಗಂಡು ಮರಿಯನ್ನು ದೇವರ ಹೆಸರಿನಲ್ಲಿ ಬಿಡುವ ಪದ್ಧತಿಯಿದೆ. ಹಾಗೆಯೇ ಮೊದಲ ಕೊಯ್ಲಿಗೆ ಬಂದ ಮರಿಗಳ ಉಣ್ಣೆ ಕತ್ತರಿಸಿ ಒಂದೆಡೆ ಸಂಗ್ರಹಿಸಿ, ಒಡೆಯರನ್ನು ಕರೆಯಿಸಿ ಪೂಜೆ ಮಾಡಿ, ರೇವಣಸಿದ್ಧ ಮಠಕ್ಕೆ ಕೊಡುವ ಸಂಪ್ರದಾಯವಿತ್ತು. ಆದರೆ ಈ ಪದ್ಧತಿಯಿಂದು ಕಣ್ಮರೆಯಾಗುತ್ತಿದೆ ಎಂದು ದೊಡ್ಡೇರಿಯ ಪ್ರಕಾಶ ಒಡೆಯರು ಹೇಳುವರು. ಸತ್ತ ಕುರಿಯನ್ನು ಬದುಕಿಸಿ ಕುರುಬರಿಗೆ ಕಲ್ಯಾಣ ಪಟ್ಟಣಕ್ಕೆ ಪ್ರವೇಶ ದೊರಕಿಸಿ, ಸಾಮಾಜಿಕ ಸ್ಥಾನಮಾನ ತಂದುಕೊಟ್ಟಿದ್ದಕ್ಕಾಗಿ. ಕುರುಬ ಸಮುದಾಯದವರು ಕುರಿಸಾಕಾಣಿಕೆ, ಕಂಬಳಿ ನೇಯ್ಗೆಯನ್ನು ಸಾಂಪ್ರದಾಯಿಕ ಕಸುಬಾಗಿಸಿ ಕೊಂಡಿದ್ದಾರೆ. ಜೊತೆಗೆ ಕೃಷಿಯನ್ನು ಗಂಭೀರವಾಗಿ ಪರಿಗಣಿಸುತ್ತಿದ್ದರಾದರೂ, ಹಿಂದೆ ಕೃಷಿ ಕುರಿತು ಆಸ್ಥೆ ಕಡಿಮೆಯಾಗಿತ್ತು. ಏಕೆಂದರೆ ಆ ಕಾಲದಲ್ಲಿ ಭೂಕಂದಾಯ ಕಟ್ಟಲು ಭೂ ಜಮೀನ್ದಾರರು ಇವರಿಂದ ಸಾಲ ಪಡೆಯುತ್ತಿದ್ದರು. ಇಷ್ಟೆಲ್ಲ ಜಮೀನು ಕಟ್ಟಿಕೊಂಡವರು ಪಡುವ ಸಂಕಷ್ಟಗಳನ್ನು ಕಂಡು, ಇತ್ತೀಚಿನವರೆಗೂ ಭೂಮಿ ಖರೀದಿಸಿ ಕೃಷಿ ಮಾಡುವುದರತ್ತ ಗಮನ ಕೇಂದ್ರಿಕರಿಸಲಿಲ್ಲ. ಮೂಲತಃ ಕುರಿ ಕಾಯುತ್ತ ಮೇವು–ನೀರು ಅರಸಿ ಅಲೆಮಾರಿಗಳಾಗಿ ವಾಸಿಸುತ್ತಿದ್ದರಿಂದ ಕೃಷಿಯತ್ತ ಸಾಗಿ ಬಂದುದು ತೀರಾ ಇತ್ತೀಚೆಗೆ. ಕಾಲಾಂತರದಲ್ಲಿ ಒಂದೆಡೆ ನೆಲೆ ನಿಂತ ಅವರ ನೆಲೆಗಳು ಇಂದಿಗೂ ಹಳ್ಳ, ತೊರೆ, ನದಿಗಳಂಥ ಸಮೃದ್ಧ ನೀರು ದೊರೆಯುವ ಪ್ರದೇಶಗಳಾಗಿರುವುದು ಗಮನಿಸಬೇಕಾದ ಅಂಶ.

ಅಧ್ಯಯನದ ಕಾರ್ಯಕ್ಷೇತ್ರವಾದ ತುಂಗಭದ್ರ ಮತ್ತು ವೇದಾವತಿ ನದಿ ಗಡಿಯ ಅಕ್ಕಪಕ್ಕದಲ್ಲಿ ಕುರುಬ ಸಮುದಾಯವನ್ನೂ ಒಳಗೊಂಡಂತೆ ಪಶುಪಾಲಕ ಸಮುದಾಯಗಳು ಹೆಚ್ಚಾಗಿ ನೆಲೆಸಿವೆ. ಕುರುಬ ಸಮುದಾಯ ಹೆಚ್ಚಾಗಿ ನೆಲೆಸಿರುವ ಗ್ರಾಮಗಳನ್ನು ಹೆಸರಿಸುವುದಾದರೆ ಚೌಳೂರು, ಪಿ.ಮಹಾದೇವಪುರ, ಪಡಗಲ ಬಂಡೆ, ಬೈರವನ ತಿಪ್ಪ, ಪೋಲೆಪಲ್ಲಿ, ಗುಂಡಿಗೇನಪಲ್ಲಿ, ಗುಮ್ಮಗಟ್ಟ, ವೇಪಲಪರ್ತಿ, ರಾಯದುರ್ಗಂ, ವಡ್ರವನ್ನೂರು, ಮಾರಂಪಲ್ಲಿ, ಸಿಂದ್ವಾಳ, ತಾಳೂರು, ಬಲ್ಲೂರು,

ಗುಳ್ಯಂ ಮುಂತಾದವು. ಹಿಂದೆ ಈ ನೆಲೆಗಳನ್ನು ಒಳಗೊಂಡಂತೆ ಪಶುಪಾಲನೆಯು ಅಧಿಕವಾಗಿತ್ತು. ಇಂದು ಕಡಿಮೆಯಾಗಿದೆ. ಅದರ ಕುರಿತು ಮುಂದೆ ಚರ್ಚಿಸಲಾಗಿದೆ. ಕುರಿಸಾಕಾಣಿಕೆ ಮತ್ತು ಕಂಬಳಿ ನೇಯ್ಗೆಯನ್ನು ಸಾಂಪ್ರದಾಯಿಕ ವೃತ್ತಿಯಾಗಿಸಿಕೊಂಡು ಜೀವಿಸುತ್ತಿರುವ ಸಮುದಾಯವಿಂದು ಕೃಷಿಯತ್ತಲೂ ಸಾಗಿ ಬಂದಿದೆ. ಕೃಷಿಯೆಂದರೆ ಮಳೆಯಾಶ್ರಿತ ಒಣಬೇಸಾಯ. ಹಾಗಾಗಿ ಪಶುಪಾಲನೆ ಮತ್ತು ಕಂಬಳಿನೇಯ್ಗೆ ಮುಖ್ಯ ಆರ್ಥಿಕ ಮೂಲವಾಗಿದೆ.

ಈ ಪರಿಸರದಲ್ಲಿನ ಕುರಿಸಾಕಾಣಿಕೆಯ ಗ್ರಾಮಗಳನ್ನು ಕೆಳಗಿನಂತೆ ವರ್ಗೀಕರಿಸಬಹುದು.

**ಕರ್ನಾಟಕದ ಗಡಿಯಲ್ಲಿನ ಕುರಿಸಾಕಾಣಿಕೆಯ ಗ್ರಾಮಗಳು**

| ಕ್ರ.ಸಂ. ಗ್ರಾಮದ ಹೆಸರು | ಕುಟುಂಬಗಳ ಸಂಖ್ಯೆ | ಕುರಿಸಾಕಾಣೆ ಮಾಡುವ ಕುಟುಂಬಗಳ ಸಂಖ್ಯೆ | ಶೇಕಡಾವಾರು |
|---|---|---|---|
| ೧. ಓಬುಳಾಪುರ(ಸಿರಿವಾಳ) | ೪೫೦ | ೧೨ | ೨.೬೬% |
| ೨. ಪಾತಪ್ಪನ ಗುಡಿ | ೮೦ | ೦೩ | ೩.೭೫% |
| ೩. ಪಗಡಲ ಬಂಡೆ | ೩೫೦ | ೦೬ | ೧.೭೧% |
| ೪. ಗೋಪನಹಳ್ಳಿ | ೮೨ | ೪೩ | ೫೨.೪೩% |
| ೫. ನೇರ್ಲಗುಂಟೆ | ೧೫೦ | ೬೦ | ೪೦% |
| ೬. ನಾಯಕನಹಟ್ಟಿ | ೧೦೦ | ೨೦ | ೨೦% |
| ೭. ಗೌಟಗೆರೆ | ೯೦ | ೨೦ | ೨೨.೨೨% |
| ೮. ಓಬಯ್ಯನಹಟ್ಟಿ | ೬೫ | ೩೫ | ೫೩.೮೪% |
| ೯. ಹೊನ್ನೂರು | ೭೫ | ೧೮ | ೨೪% |
| ೧೦. ಕೊಂಡ್ಲಹಳ್ಳಿ | ೪೫೦ | ೧೨ | ೨.೬೬% |
| ೧೧. ಕೋನಸಾಗರ | ೪೦೦ | ೦೪ | ೧% |
| ೧೨. ಕಡೆ ಉಡೇವು | ೪೦೫ | ೦೩ | ೦.೭೪% |
| ೧೩. ನಾಗಸಮುದ್ರ | ೧೫೦ | ೧ | ೦.೬೬% |
| ೧೪. ಕರಡಿಹಳ್ಳಿ | ೯೮ | ೮೪ | ೮೫.೭೧% |
| ೧೫. ಕಾಡುಸಿದ್ಧಾಪುರ | ೧೫೦ | ೨೦ | ೧೩.೩೩% |
| ೧೬. ವಿಠಲಾಪುರ | ೫೫೦ | ೧೦೦ | ೧೮.೧೮% |
| ೧೭. ಹಲಕುಂದಿ | ೩೨೦ | -- | |
| ೧೮. ಸಿಂದ್ವಾಳ | ೬೫ | ೦೬ | ೯.೨೩% |
| ೧೯. ಬಲಕುಂದಿ | ೩೦೦ | ೧೫೬ | ೫೨% |
| ೨೦. ಉತ್ತನೂರು | ೧೦೫ | ೧೨ | ೧೧.೪೨% |

**ಆಂಧ್ರಪ್ರದೇಶದ ಗಡಿಯಲ್ಲಿನ ಕುರಿಸಾಕಾಣಿಕೆಯ ಗ್ರಾಮಗಳು**

| ಕ್ರ.ಸಂ. | ಗ್ರಾಮದ ಹೆಸರು | ಕುಟುಂಬಗಳ ಸಂಖ್ಯೆ | ಕುರಿಸಾಕಾಣೆ ಮಾಡುವ ಕುಟುಂಬಗಳ ಸಂಖ್ಯೆ | ಶೇಕಡಾವಾರು |
|---|---|---|---|---|
| ೧. | ಬಸಾಪುರ | ೬೮ | ೧೫ | ೨೨.೦೫% |
| ೨. | ತಿಪ್ಪನಪಲ್ಲಿ | ೫೨ | ೪೮ | ೯೨.೩೦% |
| ೩. | ಕುಂದುರ್ಪಿ | ೧೬೦ | ೩೫ | ೨೧.೮೭% |
| ೪. | ಕನಕೂರು | ೧೧೦ | ೨೦ | ೧೮.೧೮% |
| ೫. | ಕೋನಾಪುರಂ | ೪೧೦ | ೨೫ | ೬.೦೯% |
| ೬. | ಪೊಲೆಪಲ್ಲಿ | ೩೨೦ | ೯೫ | ೨೯.೬೮% |
| ೭. | ವೇಪಲಪರ್ತಿ | ೫೬೦ | ೨೫೦ | ೪೪.೬೪% |
| ೮. | ರಾಯಂಪಲ್ಲಿ | ೭೫ | ೧೭ | ೨೨.೬೬% |
| ೯. | ವಡ್ರಹೊನ್ನೂರು | ೩೩೦ | ೨೨೦ | ೬೬.೬೬% |
| ೧೦. | ಮಾರಂಪಲ್ಲಿ | ೬೫ | ೫೦ | ೭೬.೯೨% |
| ೧೧. | ಮೆಚ್ಚಿರಿ | ೫೨ | ೧೪ | ೨೬.೯೨% |
| ೧೨. | ಸೋಮಲಾಪುರಂ | ೨೦೦ | ೧೧೦ | ೫೫% |
| ೧೩. | ಡಿ.ಹಿರೇಹಾಳ | ೪೮೦ | ೨೩೫ | ೪೮.೯೫% |
| ೧೪. | ಓಬುಳಾಪುರಂ | ೧೪೬ | ೨೫ | ೧೭.೧೨% |
| ೧೫. | ಮುರುಡಿ | ೧೦೫ | ೧೨ | ೧೧.೪೨% |
| ೧೬. | ಗೋವಿಂದವಾಡ | ೨೭೦ | ೫೦ | ೧೮.೫೧% |
| ೧೭. | ಕದರಂಪಲ್ಲಿ | ೧೧೨ | ೬೦ | ೫೩.೫೭% |
| ೧೮. | ಚಿಂತಕುಂಟ | ೧೦೬ | ೨೪ | ೨೨.೬೪% |
| ೧೯. | ರೇಖಲಕುಂಟ | ೧೧೦, | ೫೯ | ೫೩.೬೩% |
| ೨೦. | ಮುದೇನೂರು | ೩೩೦, | ೯೦ | ೨೭.೨೭% |

ಮೇಲಿನ ಕೋಷ್ಟಕಗಳಲ್ಲಿ ಗಡಿ ಪರಿಸರದಲ್ಲಿನ ಕರ್ನಾಟಕದ ೨೦ ಹಳ್ಳಿಗಳು, ಆಂಧ್ರಪ್ರದೇಶದ ೨೦ ಹಳ್ಳಿಗಳನ್ನು ಹೆಸರಿಸಲಾಗಿದೆ. ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ ಜನಸಂಖ್ಯಾ ದೃಷ್ಟಿಯಲ್ಲಿ ಹೆಚ್ಚಾಗಿದ್ದರೂ ಅತೀ ಕಡಿಮೆ ಕುರಿಸಾಕಾಣಿಕೆ ಮಾಡುವ ಗ್ರಾಮಗಳಲ್ಲಿ ನಾಗಸಮುದ್ರ, ಕಡೇಉಡೇವು, ಕೋನಸಾಗರ, ಪಗಡಲಬಂಡೆ, ಓಬುಳಾಪುರ(ಸಿರಿವಾಳ), ಕೊಂಡ್ಲಹಳ್ಳಿಗಳು ಕಂಡುಬರುತ್ತವೆ. ಶೇಕಡಾ ೫೦ಕ್ಕಿಂತ ಕಡಿಮೆ ಕುರಿಸಾಕಾಣಿಕೆ ಮಾಡುವ ಗ್ರಾಮಗಳೇ ಹೆಚ್ಚಾಗಿ

ಎರಡೂ ಕಡೆಯಿವೆ. ಕರಡಿಹಳ್ಳಿ, ತಿಪ್ಪನಪಲ್ಲಿ, ಮಾರಂಪಲ್ಲಿ, ವಡ್ರಹೊಸ್ನೂರು ಗ್ರಾಮಗಳಲ್ಲಿ ಮಾತ್ರ ಅತೀ ಹೆಚ್ಚು ಕುರಿಸಾಕಾಣಿಕೆ ಮಾಡುವ ಕುಟುಂಬಗಳಿವೆ. ಇನ್ನು ೫೦೦-೧,೦೦೦ ಕುರಿಗಳನ್ನು ಹೊಂದಿರುವ ಕುಟುಂಬಗಳು ತೀರಾ ಕಡಿಮೆ. ನಾಯಕನಹಟ್ಟಿಯಲ್ಲಿ ಒಂದು ಕುಟುಂಬ, ವಡ್ರ ಹೊಸ್ನೂರಿನಲ್ಲಿ ಎರಡು ಕುಟುಂಬಗಳು, ಸೋಮಲಾಪುರಂನಲ್ಲಿ ಒಂದು ಕುಟುಂಬ, ಬಲಕುಂದಿಯಲ್ಲಿ ಎರಡು ಕುಟುಂಬಗಳು ಹೀಗೆ ಬೆರಳೆಣಿಕೆಯಷ್ಟು ಮಾತ್ರ ಕಾಣಸಿಗುತ್ತವೆ. ಅವನ್ನು ಹೊರತು ಪಡಿಸಿದರೆ ಎಲ್ಲಾ ಕಡೆಯು ಕನಿಷ್ಠ ೪೦ರಿಂದ ಗರಿಷ್ಟ ೨೦೦ ಸಂಖ್ಯೆಯ ಒಳಗಿನವೇ ಹೆಚ್ಚಾಗಿವೆ.

ಕುರಿಗಳ ವಾಸ್ತವ್ಯಕ್ಕೆ ಕುರಿರೊಪ್ಪ(ದೊಡ್ಡಿ)ಗಳನ್ನು ಸ್ಥಳೀಯವಾಗಿ ದೊರೆಯುವ ಜಾಲಿ, ಕಾರೆಯಂತಹ, ಮುಳ್ಳುಕಂಟಿಗಳಿಂದ ವಿಶಾಲವಾಗಿ ಕಟ್ಟಿರುತ್ತಾರೆ. ಇತ್ತೀಚೆಗೆ ತಂತಿಬೇಲಿಗಳು ದೊರೆಯತ್ತಿದ್ದು, ಅವನ್ನು ಬಳಸಿ ರೊಪ್ಪ ನಿರ್ಮಿಸುವರು. ರೊಪ್ಪದ ಒಳಗೆ ನಾಲ್ಕು ಗೂಟಗಳನ್ನು ಬಳಸಿ ಮಾಡಿದ ಮಂಚದ ಮೇಲೆಯೇ ರಾತ್ರಿ ಕಾವಲು ಕಾಯುವ ಮಲಗುವುದು. ಕಳ್ಳಕಾಕರ ಮತ್ತು ತೋಳಗಳ ಹಾವಳಿಯಿಂದ ಕುರಿಗಳನ್ನು ರಕ್ಷಿಸಲು ನಾಯಿ, ಕತ್ತೆ ಸಾಕಿಕೊಂಡಿರುತ್ತಾರೆ. ಕಡಿಮೆ ಕುರಿಗಳಿದ್ದರೂ ನಾಯಿಗಳನ್ನು ಸಾಕುತ್ತಾರೆ. ಕುರಿಗಳ ಸಂಖ್ಯೆ ಹೆಚ್ಚಾದಾಗ ಕತ್ತೆ ಬಿಡುವ ಸಂಪ್ರದಾಯವಿದೆ. ಐವತ್ತು ಕುರಿಗಳ ಹಿಂಡಿಗೆ ಒಂದು ಜೆಲಿಗೆ(ಸೆಲಿಗೆ) ಕುರಿ, ನೂರಕ್ಕೆ ಎರಡು ಜೆಲಿಗೆ ಎಂದು ಕರೆಯುವರು. ಅಂದರೆ ಕುರಿಗಳ ಹಿಂಡು ಐವತ್ತು, ಹೆಚ್ಚಿದಂತೆಲ್ಲ ಒಂದು ಜೆಲಿಗೆ ಹೆಚ್ಚಿದಂತೆ. ಈ ಪರಿಸರದಲ್ಲಿ ಒಂದು ಜೆಲಿಗೆ ಕುರಿಹಿಂಡು ಹೆಚ್ಚಿದಾಗ ಕತ್ತೆ ಬಿಡುವ ಪದ್ಧತಿಯಿದೆ. ನಾಯಿಯು ಕಳ್ಳಕಾಕರು, ತೋಳಗಳು ಬಂದಾಗ ಬೊಗಳಿ ಎದರಿಸುತ್ತದೆ. ಕತ್ತೆಕಿರುಬ ಬಂದರೆ ಬೊಗಳದೆ ಕುರಿಮಂದೆಯಲ್ಲಿ ಅವಿತುಕೊಳ್ಳುತ್ತದೆ. ಏಕೆಂದರೆ ಕತ್ತೆಕಿರುಬ ಕುರಿ ಮಾಂಸಕ್ಕಿಂತಲೂ, ನಾಯಿ ಮಾಂಸವನ್ನು ಹೆಚ್ಚು ಇಷ್ಟ ಪಡುತ್ತದೆ. ಹಾಗಾಗಿ ರಾತ್ರಿ ಮಂದೆಗೆ ಬಂದ ಕತ್ತೆಕಿರುಬ ಕುರಿಗಿಂತಲೂ ಸಾಕುನಾಯಿಗಳನ್ನು ಎತ್ತಿಕೊಂಡ ಹೋಗುವುದು ಜಾಸ್ತಿ. ಇದರಿಂದ ಕುರಿ ಹಿಂಡಿನಲ್ಲಿ ನಾಯಿಯ ಜೊತೆಗೆ ಕತ್ತೆ ಬಿಡುತ್ತಾರೆ. ಅದು ಕತ್ತೆ ಕಿರುಬಗಳಂಥ ದುಷ್ಟ ಮೃಗಗಳು ಬಂದಾಗ ಕಿರುಚುತ್ತಾ ಕುರಿಗಾರರನ್ನು ಎಚ್ಚರಿಸುತ್ತದೆ. ಮತ್ತೊಂದು ಕತ್ತೆ ಲಕ್ಷ್ಮಿಯ ಸ್ವರೂಪ ಅದರಂತೆಯೇ ಕುರಿಯು ಲಕ್ಷ್ಮಿಯ ಪ್ರತಿರೂಪ ಎಂಬ ನಂಬುಗೆಯಿದೆ ಅದಕ್ಕಾಗಿ ಕುರಿಮಂದೆ ಹೆಚ್ಚಿದಂತೆ ಕತ್ತೆ ಬಿಡುವರು.

ಕತ್ತೆ ಬಿಡುವ ಕಾರ್ಯವನ್ನು ಹಬ್ಬದಂತೆ ಆಚರಿಸುತ್ತಾರೆ. ಅದಕ್ಕಾಗಿ ಹೆಣ್ಣು ಕತ್ತೆಯನ್ನು ಖರೀದಿಸಿ ತಂದು ಶುಭದಿನವನ್ನು ಗೊತ್ತುಪಡಿಸುವರು. ಈ ಕಾರ್ಯಕ್ರಮ ನಡೆಸಲು ಕುರಿಗಾರರು ತಮ್ಮ ಕುಲದೇವರ ಪೂಜಾರಿ, ಗೌಡ, ಯಜಮಾನ, ಕೋಲ್ಕಾರರನ್ನೊಳಗೊಂಡಂತೆ ತಮ್ಮ ಬಂಧು-ಮಿತ್ರರನ್ನು ಆಹ್ವಾನಿಸುವರು. ಕೆಲವೆಡೆ ಒಡೆಯರನ್ನು, ಜಂಗಮರನ್ನು, ಬ್ರಾಹ್ಮಣರನ್ನು ಕರೆಯುವರು. ಪೂಜೆಯ ದಿನ ಕಾರ್ಯಕ್ರಮದ ಕೇಂದ್ರ ಬಿಂದುವಾದ ಕತ್ತೆಯನ್ನು ಶುಭ್ರವಾಗಿ ತೊಳೆದು, ಶ್ರದ್ಧೆಯಿಂದ ಹೊಸಬಟ್ಟೆ, ಜೂಲುಗಳನ್ನು ತೊಡಿಸಲಾಗುತ್ತದೆ. ವಿವಿಧ ವಸ್ತ್ರಾಲಂಕಾರಗಳಿಂದ ಶೃಂಗಾರಗೊಂಡ

ಕತ್ತೆಯನ್ನು ಮೆರವಣಿಗೆ ಮೂಲಕ ಕರೆ ತರಲಾಗುತ್ತದೆ. ಮಂದೆಯ ಸುತ್ತಲೂ ಅಲಂಕೃತವಾದ ಮಂಟಪವನ್ನು ಹಾಕಿರುತ್ತಾರೆ. ಮೊದಲು ಪೂಜಾರಿಯು ಕುಲದೈವ, ಮನೆ ದೈವಗಳಿಗೆ ಪೂಜೆಯನ್ನು ಸಲ್ಲಿಸುತ್ತಾನೆ. ಬಂದವರೆಲ್ಲರೂ ದೈವಗಳಿಗೆ ಪೂಜೆ ಮಾಡುವರು. ಬಳಿಕ ವಿವಾಹದಂತೆ ಜರುಗುವ ಈ ಕಾರ್ಯಕ್ರಮದಲ್ಲಿ ಲಕ್ಷ್ಮಿಯ ಪ್ರತಿರೂಪವಾದ ಕತ್ತೆಗೆ ಅಗ್ರಪೂಜೆ ಸಲ್ಲಿಸಲಾಗುತ್ತದೆ. ಪೂಜಾ ವಿಧಿ-ವಿಧಾನಗಳು ಪೂರ್ಣಗೊಂಡ ಬಳಿಕ ಬಂಧು ಬಳಗವೆಲ್ಲರೂ ಸೇರಿ ಸಿಹಿ ಊಟವನ್ನು ಮಾಡುವರು. ಪ್ರದೇಶದಿಂದ ಪ್ರದೇಶಕ್ಕೆ ಕೆಲ ಭಿನ್ನತೆಗಳಿದ್ದರೂ ಇಂದಿಗೂ ತಪ್ಪದೇ ನಡೆಯುವ ಕಾರ್ಯಕ್ರಮ ಇದಾಗಿದೆ. ಅಲೆಮಾರಿ ಕುರುಬರು ಕುರಿಗಳ ಸಂಖ್ಯೆ ಒಂದು ಸಾವಿರ ದಾಟಿದ ಬಳಿಕ ಈ ಆಚರಣೆಯನ್ನು ಮಾಡುತ್ತಾರೆ. ಕತ್ತೆ ಪೂಜೆಯಿಂದ ದೋಷಗಳು ಪರಿಹಾರವಾಗಿ, ಕಷ್ಟಗಳು ದೂರವಾಗುತ್ತವೆ. ಜೊತೆಗೆ ಕುರಿಮಂದೆಯನ್ನು ಕತ್ತೆಯು ರಕ್ಷಣೆ ಮಾಡುತ್ತದೆಂದು ಸಂಚಾರಿ ಕುರುಬರ ರಾಜ್ಯಾಧ್ಯಕ್ಷ ವಿಠ್ಠಲ ಬನ್ನೆ ಹೇಳುವರು.

ಅಂದರೆ ಲಕ್ಷ್ಮಿಯ ಸ್ವರೂಪವಾದ ಕತ್ತೆಯು ಕುರಿಮಂದೆಯೊಂದಿಗೆ ಸೇರ್ಪಡೆಗೊಂಡು ಸಂಪತ್ತು ದ್ವಿಗುಣವಾಗಲಿ ಎಂಬ ಆಶಯಗಳು ಈ ಆಚರಣೆಯ ಹಿಂದೆ ಇವೆ. ಕುರಿಮಂದೆಯಲ್ಲಿ ಅನ್ಯ ಪ್ರಾಣಿಯನ್ನು ಬಿಡುವ ಈ ಆಚರಣೆ ನಮ್ಮಲ್ಲಿ ಮಾತ್ರವಲ್ಲದೇ ಆಸ್ಟ್ರೇಲಿಯಾದಲ್ಲಿಯೂ ಕಂಡುಬರುತ್ತದೆ. ಅತ್ಯಂತ ವ್ಯವಸ್ಥಿತವಾಗಿ ಕುರಿಸಾಕಾಣಿಕೆ ಮಾಡುವ ಅವರು ಕತ್ತೆಯ ಬದಲಾಗಿ ಬಿಳಿಯ ಹಂದಿಯನ್ನು ಮಂದೆಯಲ್ಲಿ ಬಿಡುವರು. ನಮ್ಮಲ್ಲಿ ಕುರಿಗಳ ಸಂಖ್ಯೆ ೧೫೦೦ ದಾಟಿದ ಬಳಿಕ ಹುಂಜವನ್ನು ಬಿಡುವುದು. ಒಂದು ಸಾವಿರ ದಾಟಿದ ಮೇಲೆ ಹಂದಿಯನ್ನು ಬಿಡುವುದು ಸಂಪ್ರದಾಯವಾಗಿದೆ ಎಂದು ಎಸ್.ಎಫ್. ಜಕಬಾಳ ಅವರು ತಿಳಿಸುವರು. ಗಡಿಭಾಗದಲ್ಲಿ ಮೊದಲು ನಡೆಯುವಷ್ಟು ವೈಭವಯುತವಾಗಿ ಈ ಆಚರಣೆ ನಡೆಯುತ್ತಿಲ್ಲ.

ಕುರಿ ರೊಪ್ಪಗಳನ್ನು ಊರಲ್ಲಿನ ಕೆಲ ಕುರಿಹಿಂಡಿನವರು ಸೇರಿ ಒಂದೆಡೆ ಅಕ್ಕಪಕ್ಕದಲ್ಲಿಯೇ ನಿರ್ಮಿಸಿಕೊಂಡಿರುತ್ತಾರೆ. ಅದರಿಂದ ರಾತ್ರಿ ಜಾವು ಹೊಡೆಯಲು ಅನುಕೂಲವಾಗುತ್ತದೆ. ಅಂದರೆ ರಾತ್ರಿಯಿಂದ ಬೆಳಗಿನ ಜಾವಿನವರೆಗೆ ಪಾಳಿಯ ಪ್ರಕಾರ ಎಚ್ಚರದಿಂದಿದ್ದೂ, ಕುರಿ ಮಂದೆಗಳನ್ನು ಕಳ್ಳಕಾಕರು, ದುಷ್ಟ ಪ್ರಾಣಿಗಳ ಹಾವಳಿಯಿಂದ ಕಾಪಾಡುವುದು. ಉದಾಹರಣೆಗೆ ೧೨ ಜನರಿದ್ದರೆ, ರಾತ್ರಿ ೧೦ ಗಂಟೆಯಿಂದ ೧೨ ಗಂಟೆಯ ವರೆಗೆ ಎರಡು ಗಂಟೆಗಳ ಅವಧಿಗೆ ಮೂರು ಜನ ಎಚ್ಚರವಾಗಿದ್ದು, ಕುರಿಹಿಂಡುಗಳನ್ನು ನೋಡಿಕೊಳ್ಳುವುದು. ಬಳಿಕ ಮೂರು ಜನರನ್ನು ಎಚ್ಚರಿಸಿ ಮೊದಲು ಜಾವು ಕಾದ ವ್ಯಕ್ತಿಗಳು ಮಲಗುವರು. ಹೀಗೆ ಬೆಳಗಿನ ೬ ಗಂಟೆಯವರೆಗೂ ಮುಂದುವರಿಯುತ್ತದೆ. ಈ ಜಾವು ಕಾಯುವುದು ತಮ್ಮ ಸ್ವಂತ ಹಳ್ಳಿಗಳಲ್ಲಿ ನಡೆಯುವುದಕ್ಕಿಂತ ಕಟ್ಟುನಿಟ್ಟಾಗಿ ವಲಸೆ ಹೋದ ಪ್ರದೇಶಗಳಲ್ಲಿ ಚಾಚು ತಪ್ಪದೆ ನಡೆಯುತ್ತದೆ.

ಕುರಿಗಾರರು ಕುರಿಗಳನ್ನು ಮೇಯಿಸಲು ಗೋಮಾಳ, ಹೊಲ-ಗದ್ದೆ, ಬಯಲು, ಬೀಳು ಪ್ರದೇಶಗಳತ್ತ ಹೋಗುತ್ತಾರೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ತುಂಗಭದ್ರ ಮತ್ತು ವೇದಾವತಿ ನದಿಗಳ

ನಡುವಿನ ಗಡಿನಾಡು ಪರಿಸರವು ಅತೀ ಕಡಿಮೆ ಮಳೆ ಬೀಳುವ ಬಯಲು ಸೀಮೆ ಪ್ರದೇಶ. ತೆಲುಗು ಭಾಷೆಯಲ್ಲಿ ಬಯಲು ಸೀಮೆಯನ್ನು ರಾಯಲಸೀಮ ಎಂದು ಕರೆಯುವರು. ಹಾಗಾಗಿ ಈ ಭಾಗದಲ್ಲಿ ಕುರಿಸಾಕಾಣಿಕೆಯು ಅರೆ ಅಲೆಮಾರಿ ವೃತ್ತಿಯಾಗಿದೆ. ಅಂದರೆ ವರ್ಷದ ಆರು ತಿಂಗಳಿಗೂ ಹೆಚ್ಚು ವಲಸೆ ಹೋಗುತ್ತಾರೆ. ಡಿ. ಹಿರೇಹಾಳ, ಗುಂತಕಲ್ಲು, ಗೋವಿಂದವಾಡ, ಮೊಳಕಾಲ್ಮೂರು ತಾಲೂಕಿನ ಉತ್ತರ ಭಾಗದಲ್ಲಿರುವ ಕುರಿಗಾರರು ಬಳ್ಳಾರಿ ಜಿಲ್ಲೆಯ ಸಿರುಗುಪ್ಪ, ಹೊಸಪೇಟೆಗಳತ್ತ ವಲಸೆ ಬರುತ್ತಾರೆ. ಅದರಂತೆಯೇ ರಾಯದುರ್ಗಂ, ಬೆಳಗುಪ್ಪ, ಗುಮ್ಮಗಟ್ಟ, ಬ್ರಹ್ಮಸಮುದ್ರಂ, ಕಲ್ಯಾಣದುರ್ಗಂ ಮಂಡಲಗಳು, ಚಳ್ಳಕೆರೆ ತಾಲೂಕಿನ ಕುರಿಗಾರರು ದಾವಣಗೆರೆ, ಶಿವಮೊಗ್ಗ ಚಿತ್ರದುರ್ಗದ ಹೊಳಲ್ಕೆರೆಗಳತ್ತ ವಲಸೆ ಹೋಗುತ್ತಾರೆ. ಹಾಗಾಗಿ ಈ ವಲಸೆಗೆ ಅವರು 'ಪಡುವು' ಹೋಗುವುದು ಎಂದು ಕರೆಯುತ್ತಾರೆ. ಏಕೆಂದರೆ ಪೂರ್ವದಿಂದ ಅವರ ಪ್ರಯಾಣ ಪಡುವಣ ದಿಕ್ಕಿನತ್ತ ಸಾಗುವುದರಿಂದ ಈ ಹೆಸರನ್ನು ಕರೆಯುವರು.

ವಲಸೆಗಾಗಿ ೧೦–೧೫ ಗುಂಪಿನ ಕುರಿಗಾರರು ಒಂದಾಗಿ ಸೇರಿ ಹೋಗುವರು. ಅಲ್ಲಿಯ ರೈತರನ್ನು ಕೇಳಿಕೊಂಡು ಹೊಲದಲ್ಲಿ ಮಂದೆಯನ್ನು ತರುಬುವರು. ಕುರಿಗಳ ಮಂದೆ ತರುಬಿದ ಸುತ್ತ ೧೦–೧೫ ಕಿ.ಮೀ ವರೆಗೆ ಮೇವು–ನೀರು ಸಿಗುವವರೆಗೂ ಅಲ್ಲಿರುತ್ತಾರೆ. ಮುಂದೆ ತರುಬಿದ ಹೊಲದವರು ದಿನವೊಂದಕ್ಕೆ ಕುರಿಗಳ ಸಂಖ್ಯೆಗೆ ಅನುಗುಣವಾಗಿ ಹಣ ಅಥವಾ ಧಾನ್ಯಗಳನ್ನು ನೀಡುವರು. ಕುರಿಕಾಯುವವರಿಗೆ ಮತ್ತು ಅವರ ನಾಯಿಗಳಿಗೆ ಆಹಾರಕ್ಕೆ ಆಗುತ್ತದೆ. ಮೇವು ಕಡಿಮೆಯಾಗುವ ಸಂಭವ ಬರುವ ವೇಳೆಗಾಗಲೇ ಕುರಿಗಾರರಲ್ಲಿನ ಕೆಲ ಹಿರಿಯರು ಮೇವು–ನೀರು ಸಿಗುವ ಸ್ಥಳಗಳನ್ನು ಗುರುತಿಸಿಕೊಂಡು, ಅಲ್ಲಿನ ರೈತರಿಂದ ಮುಂದೆ ತರುಬುವ ವಿಚಾರವನ್ನು ಮಾತಾಡಿಕೊಂಡು ಬರುತ್ತೇವೆಂದು ಕುರಿಗಾರರಾದ ಬೋಸಯ್ಯ ಅವರು ಹೇಳಿದರು. ದಿನಕ್ಕೆ ಕುರಿಗಳು ತಾನಿರುವ ಜಾಗದಿಂದ ೧೦ ಕಿ.ಮೀ.ಗಿಂತಲೂ ಹೆಚ್ಚು ಪ್ರಯಾಣಿಸಿ ಮೇಯ್ದು ಬರಬಲ್ಲವು. ಕುರಿ ಹೊರಡಿಸುವಾಗ ಒಮ್ಮೆ, ಮಧ್ಯಾಹ್ನ ಒಮ್ಮೆ, ಸಾಯಂಕಾಲ ಒಮ್ಮೆ ಮೂರು ಬಾರಿ ನೀರು ಸಿಗುವಂತೆ ಕುರಿಗಳನ್ನು ಸಲವುತ್ತಾರೆ. ಏಕೆಂದರೆ ಬೇಸಿಗೆಯಲ್ಲಿ ನೀರು ಅಧಿಕವಾಗಿ ಕುಡಿಯುತ್ತವೆ. ಆ ವೇಳೆಯಲ್ಲಿ ಕುರಿಗಳಿಗೆ ಮೇಯಲು ಕೊಯ್ಲಾದ ಬೆಳೆಯ ಕೂಳೆ ಮತ್ತು ಒಣಗಿದ ಬೆಳೆಯ ಎಲೆಗಳು ದೊರೆಯುತ್ತವೆ. ಜಾಲಿಕಾಯಿಯು ಈ ಅವಧಿಯಲ್ಲಿ ದೊರೆಯುವ ಪ್ರೊಟೀನ್‌ಯುಕ್ತ ಆಹಾರವಾಗಿದೆ. ಆಹಾರಕ್ಕಿಂತಲೂ ಮುಖ್ಯವಾಗಿ ಬೇಸಿಗೆಯಲ್ಲಿ ಕುರಿಗಳು ಮೆದು ನೆಲದಲ್ಲಿ ಮೇಯುವುದರಿಂದ ಮುಳ್ಳುಗಳನ್ನು ತುಳಿಯುವುದಿಲ್ಲ. ಮಳೆ ಬಂದ ನಂತರ ಮುಳ್ಳು ತುಳಿದ ಕುರಿಗಳು ಕುಂಟುವುದು ಹೆಚ್ಚಾಗುತ್ತದೆ. ಮೆದುನೆಲದಲ್ಲಿ ಮೇಯ್ದು ಬಂದ ಕುರಿಗಳು ಕುಂಟು ಬೀಳುವುದಿಲ್ಲ ಎಂಬ ಉದ್ದೇಶವೂ ಇದರ ಹಿಂದಿದೆ. ವಲಸೆ ಹೋಗಿ ಬರುವ ಕುರಿಗಳು ವರ್ಷಕ್ಕೆ ಎರಡು ಸೂಲು ಈಯುತ್ತವೆ. ಈದ ಎರಡು ತಿಂಗಳಿಗೆ ಕುರಿ ಮತ್ತೆ ಕಟ್ಟಿ ಬಿಡುತ್ತದೆ. ಆಗಿನ್ನೂ ಮರಿ ಹಾಲು ಕರಿಯುತ್ತಿರುತ್ತದೆ.

ಆ ಅವಧಿಯಲ್ಲಿ ಸರಿಯಾಗಿ ಮೇಯಿಸಿದರೆ ಕುರಿ, ಹೊಟ್ಟೆಯೊಳಗಿನ ಮರಿ ಎರಡೂ ಆರೋಗ್ಯವಾಗಿರುತ್ತವೆ. ಮಾರ್ಲಾಮಿಯಿಂದ ದೀಪಾವಳಿಯವರೆಗೆ ಕುರಿ ಈಯುವ ಮರಿಗಳನ್ನು ಮುಂಗಡೆ(ಮೊದಲ) ಫಲದ ಮರಿಗಳೆಂದು, ಡಿಸೆಂಬರ್‌ನಿಂದ ಫೆಬ್ರುವರಿಯವರೆಗೆ ಹುಟ್ಟಿದ ಮರಿಗಳು ಹಿಂಗಡೆ ಮರಿಗಳು. ಫೆಬ್ರವರಿಯ ನಂತರದ ಮರಿಗಳನ್ನು 'ಬೀಕಲು' ಮರಿಗಳೆಂದು ವಿಂಗಡಿಸುತ್ತಾರೆ. ಮೊದಲ ಫಲದ ಗಂಡು(ಟಗರು) ಮರಿಯನ್ನು ಬೀಜಕ್ಕೆ ಬಿಡಬೇಕು. ಅಂದರೆ ಕುರಿ ಬೆದೆಗೆ ಬಂದಾಗ ಕಟ್ಟಲು ಈ ಅವಧಿಯಲ್ಲಿ ಹುಟ್ಟಿದ ಮರಿಯನ್ನು ಬಿಟ್ಟರೆ ಅದು ಎತ್ತರವಾಗಿ ದಷ್ಟಪುಷ್ಟ ವಾಗಿ ಬೆಳೆಯುತ್ತದೆ. ಅದರಿಂದ ಮುಂದೆ ಉತ್ತಮ ಮರಿಗಳು ಜನಿಸುತ್ತವೆ.

ಕುರಿಗಾರರಿಗೆ ಶಿವರಾತ್ರಿಗೆ ಜನಿಸಿದ ಮರಿಗಳು ಹುಸಿ ಹೋಗುವುದಿಲ್ಲ. ಮಳೆಯಿಲ್ಲದಿರುವುದರಿಂದ ಕುರಿಗಳು ಕೂಳೆಗಳನ್ನು ಮೇಯ್ದು ಬರುತ್ತವೆ. ಹಾಲು ಬತ್ತುವುದಿಲ್ಲ. ಈ ವೇಳೆಯಲ್ಲಿ ಮಳೆ ಬಂದರೆ ಕೊಯ್ಲಾದ ಹೊಲದಲ್ಲಿ ಉಳಿದ ಕೂಳೆ, ಹುಲ್ಲು, ಗೆದ್ದಲು ತಿನ್ನುತ್ತದೆ. ಆಗ ಕುರಿಗಳಿಗೆ ಮೇವು ದೊರೆಯುವುದಿಲ್ಲ. ಈ ಮಳೆಗಳನ್ನು ಕೇಡು ಮಳೆಗಳೆಂದು ಕರೆಯುತ್ತಾರೆ. ಆಗ ಮರಿಗಳಿಗೆ ಹಾಲು ಸಿಗದೇ ಮರಿಗಳೂ ಸೊರಗುತ್ತವೆ. ಮಾರ್ನಾಮಿಗೆ ಈಯುವ ಕುರಿ ಮಳೆಗಾಲಕ್ಕೆ ಸಿಕ್ಕಿ ಹೊಟ್ಟೆಗೆ ಆಹಾರ ಸಿಗದಿರುವುದರಿಂದ ಮರಿಗಳಿಗೆ ಹಾಲು ಕುಡಿಸುವುದಿಲ್ಲ. ಮಳೆಯಿಂದ ಕುರಿಯ ಕೆಚ್ಚಲ ಹಾಲು ಬತ್ತಿ ಹೋಗುತ್ತವೆ. ಹಾಗಾಗಿ ಆ ಸಮಯದಲ್ಲಿನ ಮರಿಗಳು ಹಾಲು ಇಲ್ಲದೇ ಸಾಯುತ್ತವೆ. ಮಳೆಗಾಲದಲ್ಲಿ ಮರಿಗಳು ನೆನೆಯುವುದರಿಂದ ಅನೇಕ ರೋಗಗಳಿಗೆ ತುತ್ತಾಗುತ್ತವೆ.

ಇಷ್ಟೆಲ್ಲಾ ಮುಂಜಾಗ್ರತೆಯನ್ನು ತೆಗೆದುಕೊಂಡು ಕುರಿಸಾಕಾಣಿಕೆ ಮಾಡಿದರೂ ಅವರಿಗೆ ದೊರೆಯುವ ಲಾಭ ಕಡಿಮೆಯೆಂದೇ ಹೇಳಬೇಕು. ಏಕೆಂದರೆ ಮಾರಾಟದಲ್ಲಿ ಮಧ್ಯಸ್ಥ ವ್ಯಾಪಾರಿಗಳು ಕಡಿಮೆ ಬೆಲೆಗೆ ಖರೀದಿಸುವುದು ನಿರಂತರವಾಗಿ ನಡೆಯುತ್ತದೆ.

**ಕುರಿಮರಿಗಳ ಮಾರಾಟ:** ಮಾರುಕಟ್ಟೆ ಎನ್ನುವುದು ಗ್ರಾಹಕರು ಮತ್ತು ಮಾರಾಟಗಾರರು ಭೇಟಿಯಾಗುವ ಸ್ಥಳವಾಗಿದೆ. ಚಳ್ಳಕೆರೆ, ಮೊಳಕಾಲ್ಮೂರು, ಹಿರಿಯೂರು, ಪಾವಗಡ ತಾಲೂಕುಗಳು, ಅನಂತಪುರಂ ಜಿಲ್ಲೆಯ ರಾಯದುರ್ಗಂ, ಬೆಳಗುಪ್ಪ, ಬ್ರಹ್ಮಸಮುದ್ರಂ, ಶೆಟ್ಟೂರು, ಕಲ್ಯಾಣದುರ್ಗಂ ಭಾಗಗಳಲ್ಲಿನ ಕುರಿಗಾರರು ತಮ್ಮ ಮರಿ ಕುರಿಗಳನ್ನು ಮಾರಲು ಚಿತ್ರದುರ್ಗದ ಕುರಿ ಮಾರ್ಕೆಟ್‌ಗೆ ಬರುತ್ತಾರೆ. ಮಧ್ಯ ಕರ್ನಾಟಕದ ಅತೀ ದೊಡ್ಡ ಕುರಿ ಮಾರ್ಕೆಟ್ ಆದ ಇಲ್ಲಿ ಪ್ರತಿ ಸೋಮವಾರ, ಗುರುವಾರ ಕುರಿ ಮಾರಾಟದ ಸಂತೆ ನಡೆಯುತ್ತದೆ. ಕನಿಷ್ಟವೆಂದರೂ ಇಪ್ಪತ್ತು ಸಾವಿರಕ್ಕೂ ಹೆಚ್ಚು ಕುರಿ–ಮರಿ ಮೇಕೆ, ಟಗರುಗಳ ಮಾರಾಟ ನಡೆಯುತ್ತದೆ. ಸೋಮವಾರಕ್ಕಿಂತಲೂ ಗುರುವಾರದ ಮಾರ್ಕೆಟ್ ವಹಿವಾಟು ಹೆಚ್ಚು ನಡೆಯುವುದು. ಆ ದಿನಗಳಂದು ಬೆಂಗಳೂರನ್ನೂ ಒಳಗೊಂಡಂತೆ ಮಹಾರಾಷ್ಟ್ರ, ಕೇರಳ, ಆಂಧ್ರಪ್ರದೇಶಗಳಿಂದ ಖರೀದಿದಾರರು ಬರುತ್ತಾರೆ. ಬಂದವರು ಸ್ಥಳೀಯ ಮಧ್ಯಸ್ಥ ವ್ಯಾಪಾರಿಗಳನ್ನು ಇಟ್ಟುಕೊಂಡು ಕುರಿಗಾರರಿಂದ ಕುರಿ, ಮರಿ, ಟಗರು, ಮೇಕೆಗಳನ್ನು

ಖರೀದಿಸುವರು. ಇವರಲ್ಲದೇ ಟಗರು ಮರಿಗಳನ್ನು ಸಾಕಲು ಸುತ್ತಮುತ್ತಲ ಹಳ್ಳಿಗಳಿಂದ ಬಂದು ಖರೀದಿಸುತ್ತಾರೆ. ಗಂಡು ಮರಿಗಳನ್ನು ಚೆನ್ನಾಗಿ ಹಾಲು ಕುಡಿಸಿ ಮಾರಾಟಕ್ಕೆ ತರುತ್ತಾರೆ. ಮಾರಾಟಕ್ಕಾಗಿಯೇ ಸಾಕುವ ಮರಿಗಳಿಗೆ ತಾಯಿ ಹಾಲಿನ ಜೊತೆಗೆ ಮರಿ ಸತ್ತ ಕುರಿಯ ಹಾಲನ್ನು ಎದುರಾಕಿ ಕುಡಿಸುತ್ತಾರೆ. ಒಂದು ತಿಂಗಳ ನಂತರ ಹಾಲಿನ ಜೊತೆಗೆ ಬೇವಿನ ಸೊಪ್ಪು, ಹಲಸಂದಿ, ಹುರುಳಿ ಗಿಡಗಳನ್ನು ಕಟ್ಟುತ್ತಾರೆ. ಅದನ್ನು ತಿಂದು ಎರಡೇ ತಿಂಗಳಿಗೆ ಟಗರು (ಪಟ್ಲಿ) ಮರಿಗಳು ಮಾರಲು ಕೈಗೆ ಬರುತ್ತವೆ.

ಕುರಿಗಳಿಗಿಂತ ಮರಿಗಳೇ ಹೆಚ್ಚಿನ ಬೆಲೆಗೆ ಮಾರಾಟವಾಗುತ್ತವೆ. ಚಿತ್ರದುರ್ಗದ ಮಾರ್ಕೇಟ್ ಅಲ್ಲದೇ ಚಳ್ಳಕೆರೆ, ಮೊಳಕಾಲ್ಮೂರು, ಕಲ್ಯಾಣದುರ್ಗ, ರಾಯದುರ್ಗಂಗಳಲ್ಲಿ ಸ್ಥಳೀಯವಾಗಿ ಕುರಿ ಮಾರಾಟ ನಡೆಯುತ್ತದೆ. ಅದಲ್ಲದೇ ಡಿ. ಹಿರೇಹಾಳ, ಗೋವಿಂದವಾಡ, ಸಿರುಗುಪ್ಪ, ಬಳ್ಳಾರಿ ಕಡೆಗಳಲ್ಲಿಯು ಸ್ಥಳೀಯವಾಗಿ ಮಾರಾಟ ನಡೆಯುತ್ತದೆ. ಇವುಗಳಲ್ಲದೇ ಕುರಿಗಾರರ ಹತ್ತಿರ ಬಂದು ದಲ್ಲಾಳಿಗಳು ಕುರಿ ಮರಿಗಳನ್ನು ಖರೀದಿಸಿ ಮಾರ್ಕೇಟಿಗೆ ಹೋಗಿ ಮಾರುತ್ತಾರೆ. ಕೆಲ ವೇಳೆಯಲ್ಲಿ ಮಂದೆಯ ಹತ್ತಿರ ಬಂದ ದಲ್ಲಾಳಿ ಮತ್ತು ಕುರಿಗಾರರಿಗೆ ಬೆಲೆ ಸರಿಹೋಗುವುದಿಲ್ಲ. ಅಂಥ ಸಮಯದಲ್ಲಿ ದಲ್ಲಾಳಿ ವ್ಯಾಪಾರಿಗಳಿಗೆ ಕೊಡದೇ ಕುರಿಗಾರರೇ ನೇರವಾಗಿ ಮಾರ್ಕೇಟಿಗೆ ಹೋಗುವರು. ಆ ಸಮಯದಲ್ಲಿ ದಲ್ಲಾಳಿಗಳೆಲ್ಲರೂ ಸೇರಿ ಆ ಕುರಿ-ಮರಿಗಳು ಮಾರಾಟವಾಗದಂತೆ ನೋಡಿಕೊಳ್ಳುತ್ತಾರೆ. ಬೆಳಗ್ಗೆಯಿಂದ ಸಂಜೆಯವರೆಗೂ ಕಾದು ಕಾದು ಸುಸ್ತಾಗಿ ಕೊನೆಗೆ ಕಡಿಮೆ ಬೆಲೆಗೆ ಮಾರಿ ಬರುವಂತೆ ಮಾಡುವರು. ಕುರಿಗಾರರು ಕುರಿ-ಮರಿಗಳ ವ್ಯಾಪಾರ ಮುಗಿಯುವ ವರೆಗೂ ಕಟುಕರ 'ಗೊಡಗು' ಹಾಕಿಸಬಾರದು. ಅಂದರೇ ಒಬ್ಬ ವ್ಯಾಪಾರಿ ತಾನು ಖರೀದಿಸಿದ ಕುರಿ-ಮರಿಗಳ ಬೆನ್ನು, ಕುತ್ತಿಗೆ, ನಡುವು, ಬಾಲದ ಮೇಲೆ ಹೀಗೆ ಅವರವರ ಗುರುತಿಗಾಗಿ ಉಣ್ಣೆಯನ್ನು ಕತ್ತರಿಸುತ್ತಾರೆ. ವ್ಯಾಪಾರ ಮುಗಿಯದೇ ಇರುವ ವೇಳೆಯಲ್ಲಿಯೇ 'ಗೊಡಗು' ಹಾಕಲು ಬರುತ್ತಾರೆ. ಅವು ಮಾರಾಟವಾದ ಮಾಲು ಎಂದು ಬೇರೆ ಯಾರು ಖರೀದಿಸುವುದಿಲ್ಲ. ಹಾಗಾಗಿ ಕುರಿಗಾರರು ಎಚ್ಚರಿಕೆಯಿಂದಿದ್ದು, ಕುರಿ ಮರಿಗಳನ್ನು ಮಾರಿ ಬರಬೇಕಾಗುತ್ತದೆ. ಕುರಿಗಾರರು ತಮ್ಮ ಕುಟುಂಬಗಳಿಂದ ದೂರವಿದ್ದು, ಸುಖ-ಸಂತೋಷಗಳನ್ನು ತ್ಯಜಿಸಿ ಕುರಿ-ಮರಿಗಳನ್ನು ಸಾಕಿ-ಸಲುಹಿ ಮಾರಾಟ ಮಾಡುವಾಗ ಇಷ್ಟೆಲ್ಲಾ ಸಮಸ್ಯೆಗಳು ಎದುರಾಗುತ್ತವೆ.

ಅದರ ಜೊತೆಗೆ ವಲಸೆ ಅಥವಾ ದೇಶಕ್ಕೆ ಹೋದ ಸಮಯದಲ್ಲಿ ತಾವು ತಂಗಬೇಕಿರುವ ಗ್ರಾಮದ ಯಜಮಾನ ಗೌಡ, ರಾಜಕಾರಣಿಯಂಥ ವ್ಯಕ್ತಿಗಳ ಹೊಲದಲ್ಲಿ ಯಾವುದೇ ಭತ್ಯೆಗಳನ್ನು ಪಡೆಯದೇ ಮಂದೆ ತರುಬಬೇಕಾಗುತ್ತದೆ. ಮತ್ತೆ ಕೆಲವೆಡೆಗಳಲ್ಲಿ ಆ ಗ್ರಾಮಗಳಲ್ಲಿ ನಡೆಯುವ ಜಾತ್ರೆ-ಉತ್ಸವಗಳಿಗೆ ಈ ಕುರಿಗಾರರು ಎರಡೋ, ಮೂರೋ ಕರು-ಟಗರುಗಳನ್ನು ಕೊಡಬೇಕಾಗು ತ್ತದೆ. ಒಮ್ಮೊಮ್ಮೆ ಮಂದೆ ತರುಬಿದ ಹೊಲದವನಿಗೂ, ಪಕ್ಕದ ಹೊಲದವನಿಗೂ ವೈಮನಸ್ಸುಗಳಿದ್ದರೆ

ಆ ಸಿಟ್ಟನ್ನು ಕುರಿಗಾರರ ಮೇಲೆ ಹಾಕುವರು. ವಿನಾಕಾರಣ ಬೈಯ್ಯುವುದು. ಹೊಡೆಯುವ ಮೂಲಕ ಸೇಡು ತೀರಿಸಿಕೊಳ್ಳುವುದು ನಡೆಯುತ್ತದೆ. ಫಸಲು ಕೊಯ್ದ ನಂತರ ಕೂಳೆಯನ್ನು ಮೇಯಿಸಲು ಹೋಗಿ ಹೊಡೆಸಿಕೊಂಡ ಕುರಿಗಾರರ ನೋವುಗಳು ಸಾಕಷ್ಟಿವೆ. ದಂಡವಾಗಿ ೧೦ ಕುರಿಗಳವರೆಗೂ ಕಟ್ಟಿಸಿಕೊಂಡು ಕಳುಹಿಸಿದ ಉದಾಹರಣೆಗಳು ಇದೆ. ಇವೆಲ್ಲವುಗಳ ಜೊತೆಗೆ ಅಡವಿಯಲ್ಲಿ ಕುಡಿಯಲು ಶುದ್ಧ ನೀರು ಸಿಗದೇ ಹಗಲು ಎಮ್ಮೆ ಮಲಗಿ ರಾಡಿ ಮಾಡಿದ ನೀರು ಕುಡಿದು ಜೀವಿಸಿದ ಕುರಿಗಾರರಿದ್ದಾರೆ. ಇವು ಕೆಲವು ಮಾತ್ರವೇ. ಹೇಳುತ್ತಾ ಹೋದರೆ ತುಂಬಾ ಇವೆ ಎನ್ನುತ್ತಾರೆ ಕುರಿಗಾರರು. ಆದರೂ ನಾವೇ ಇವುನ್ನ ನಿಮ್ಗೆ ತಿಳಿಸಿದ್ವಿ ಅಂತ ಹೆಸ್ರು ಬರಿ ಬ್ಯಾಡ್ರಿ ಸಾರು. ಮತ್ತ ಮುಂದಿನ ವರ್ಸ ನಾವು ಅಲ್ಲಿಗೆ ಕುರಿ ಮೇಸಾಕೆ ಹೋಗಬೇಕು ಎಂದು ಹೇಳುತ್ತಾರೆ. ಒಟ್ಟಿನಲ್ಲಿ ವಲಸೆ ಹೋಗುವ ಪ್ರತಿ ಕುರಿಗಾರರು ಈ ಸಮಸ್ಯೆಗಳಲ್ಲಿ ಒಂದಿಲ್ಲೊಂದು ಸಮಸ್ಯೆಯನ್ನು ಅನುಭವಿಸಿಕೊಂಡು ಬಂದಿದ್ದಾರೆ; ಬರುತ್ತಲಿದ್ದಾರೆ.

ಕುರಿ ಸಾಕಾಣಿಕೆಯು ಅತೀ ಕಷ್ಟದಾಯಕ ವೃತ್ತಿಯಾಗಿದ್ದರೂ, ಕುರಿಗಾರರು ಅದನ್ನು ಪ್ರೀತಿಸುತ್ತಾ, ಕುರಿ ಮರಿಗಳಲ್ಲಿಯೇ ತಮ್ಮ ಮಕ್ಕಳನ್ನು, ಸಾಕಿದ ನಾಯಿಗಳಲ್ಲಿ ಬಂಧುಗಳನ್ನು ಕಾಣುತ್ತ ಬಂದಿದ್ದಾರೆ: ಬರುತ್ತಲಿದ್ದಾರೆ. ಆದರೆ ಈಚೆಗೆ ಬಂದ ಪ್ರಪಂಚೀಕರಣವು ಪಶುಪಾಲನೆಯಂಥ ವೃತ್ತಿಗಳಿಂದ ಬಲವಂತವಾಗಿ ವಿಮುಖರನ್ನಾಗಿಸುತ್ತಿವೆ. ಅದಕ್ಕೆ ಕಾರಣಗಳು ಅನೇಕ. ಅದರಲ್ಲಿಯೂ ಮುಖ್ಯವಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಿರ್ಲಕ್ಷತೆಯ ಪಾಲು ಅಧಿಕವಾಗಿದೆ. ಅದರಲ್ಲಿ ಬಂಡವಾಳಶಾಹಿಗಳ ದುರಾಲೋಚನೆ, ಕರಾಳತನವು ಸೇರಿದೆ. ಏಕೆಂದರೆ ಹಿಂದಿನಿಂದಲೂ ಪಶುಪಾಲನೆಗಾಗಿಯೇ ಮೀಸಲಾಗಿದ್ದ ಗೋಮಾಳ ಭೂಮಿಗಳನ್ನು ಭೂಕಂದಾಯ ಕಾಯ್ದೆಯ ಅನ್ವಯ ೧೦೦ ಜಾನುವಾರುಗಳಿಗೆ ೩೦ ಎಕರೆ ಭೂಮಿ ಮೀಸಲು ಎಂಬ ಕಾಯ್ದೆ ಇದ್ದರೂ ಅದನ್ನು ಗಾಳಿಗೆ ತೂರಿ ಸರ್ಕಾರಗಳು ಬಂಡವಾಳಶಾಹಿಗಳೊಂದಿಗೆ ಸೇರಿಕೊಂಡು ಕೈಗಾರಿಕೆ, ವಿಮಾನ ನಿಲ್ದಾಣ, ಅಣುಸ್ಥಾವರ, ಪೈಲೆಟ್ ರಹಿತ ಯುದ್ಧ ವಿಮಾನ ತರಬೇತಿ ಕೇಂದ್ರಗಳಂಥ ಅತೀ ಅಪಾಯಕಾರಿ ಉದ್ದಿಮೆಗಳನ್ನು ಸ್ಥಾಪಿಸುವ ಮುಖೇನ ಸ್ಥಳೀಯ ಸಮುದಾಯಗಳು ಭಯದ ಕರಿನೆರಳಿನಲ್ಲಿಯೇ ಬದುಕುವಂತಹ ಪರಿಸ್ಥಿತಿಯನ್ನು ನಿರ್ಮಾಣ ಮಾಡಿವೆ.

ಸಾವಿರಾರು ವರ್ಷಗಳಿಂದ ಪಾರಂಪರಿಕ ವೃತ್ತಿಗಳನ್ನು ಮಾಡಿಕೊಂಡು, ತಮ್ಮವೇ ಆದ ನಂಬುಗೆಗಳಿಂದ ಬದುಕುತ್ತಿರುವ ಸಮುದಾಯಗಳ ಸಾಂಸ್ಕೃತಿಕ ಚಹರೆಗಳನ್ನು ಅಳಿಸಿ ಹಾಕುವ ಹೀನ ಕೃತ್ಯಗಳನ್ನು ಮಾಡಿಕೊಳ್ಳುತ್ತಲೇ ಬಂದಿವೆ; ಬರುತ್ತಲಿವೆ. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆಯ ಭಾಗದಲ್ಲಿ ನೋಡುವುದಾದರೇ ಮೈಸೂರು ಮಹಾರಾಜರ ಗೋವುಗಳು ವರ್ಷದ ಕೆಲ ತಿಂಗಳು ಅಮೃತಮಹಲ್ ಕಾವಲಿನಲ್ಲಿದ್ದು, ಮೇಯ್ದು ಹೋಗುತ್ತಿದ್ದವು. ಇಲ್ಲಿನ ಹುಲ್ಲು ತಿಂದ ದನ, ಕುರಿ,ಮೇಕೆಗಳು ಉತ್ತಮ ಗುಣಮಟ್ಟದ ಹಾಲು ಕೊಡುತ್ತವೆ. ಎತ್ತುಗಳು ದಷ್ಟ–ಪುಷ್ಟವಾಗಿ ಬೆಳೆಯುತ್ತವೆ

ಎಂಬುದನ್ನು ಮನಗಂಡ ಮೈಸೂರು ಮಹಾರಾಜರು ಪಶುಪಾಲನೆ, ಕುರಿಸಾಕಾಣಿಕೆ, ಉರುವಲು ಸಂಗ್ರಹ ಸೇರಿದಂತೆ ಕೃಷಿ ಚಟುವಟಿಕೆಗಳಿಗೆ ನೆರವಾಗುವ ಉದ್ದೇಶದಿಂದ ಚಳ್ಳಕೆರೆ ತಾಲೂಕಿನ ದೊಡ್ಡ ಉಳ್ಳಾರ್ತಿ, ಕುದಾಪುರ ಮತ್ತು ವರವು ಕಾವಲು ಪ್ರದೇಶವನ್ನು ನೀಡಿದ್ದರು. ಯಾವ ಕಾರಣಕ್ಕೂ ಭೂಮಿಯನ್ನು ಪರಭಾರೆ ಮಾಡುವಂತಿರಲಿಲ್ಲ. ಆದರೆ ಸರ್ಕಾರ ಯಾರ ಅನುಮತಿಯೂ ಇಲ್ಲದೇ ಸ್ವಾಯತ್ತ ಸಂಸ್ಥೆಗಳಿಗೆ ೨೦೦೦ ಇಸ್ವಿಯಿಂದಲೂ ಪರಭಾರೆ ಮಾಡಿಕೊಂಡು ಬರುತ್ತಲಿದೆ. ಈ ಹಿಂದೆ ಚಿತ್ರದುರ್ಗ ಜಿಲ್ಲೆಯ ಜಿಲ್ಲಾಧಿಕಾರಿಯಾಗಿ ಕಾರ್ಯನಿರ್ವಹಿಸಿದ ಜಿಲ್ಲಾಧಿಕಾರಿಯೊಬ್ಬರು ಅಮೃತ ಮಹಲ್ ಕಾವಲಿನ ಭೂಮಿಯನ್ನು ವಿವಿಧ ಸಂಸ್ಥೆಗಳಿಗೆ ಕೊಡುವಾಗ ಸುತ್ತಮುತ್ತಲ ಗ್ರಾಮಸ್ಥರ ಅಭಿಪ್ರಾಯ ಕೇಳದೇ ಹಸ್ತಾಂತರಿಸಿದ್ದಾರೆ. ಭೂ ಕಾಯ್ದೆಗಳು ಇದ್ದರೂ ಇಲ್ಲವಾದ ಪರಿಸ್ಥಿತಿ. ಜಿಲ್ಲಾಧಿಕಾರಿಯಾದಿಯಾಗಿ ಜಿಲ್ಲೆಯ ಯಾವ ರಾಜಕಾರಣಿಗಳು ಇದರ ಕುರಿತು ಚಕಾರವೆತ್ತುತ್ತಿಲ್ಲ. ಚುನಾವಣೆ ಸಮಯದಲ್ಲಿ ಮಾತ್ರ 'ಅಮೃತ ಮಹಲ್' ಕಾವಲು ಬಿಡಿಸಿಕೊಡುವುದನ್ನು ಅಜೆಂಡಾವನ್ನಾಗಿಸಿಕೊಳ್ಳುವ ರಾಜಕಾರಣಿಗಳು ನಂತರ ಗೊತ್ತಿಲ್ಲದವರಂತೆ ಇರುತ್ತಾರೆ." ಜನ ಸಾಮಾನ್ಯರ ಕುತ್ತಿಗೆಗೆ ಅಭಿವೃದ್ಧಿಯ ಕುಣಿಕೆಯ ಬಿಗಿಯಲು ಕೇಂದ್ರ ಮತ್ತು ರಾಜ್ಯ ಸರಕಾರಗಳು ಸದಾ ಪೈಪೋಟಿ ನಡೆಸುತ್ತಿರುತ್ತವೆ. ಅಂತಹ ಕುಣಿಕೆ ಬಿಗಿಯುವ ಕೆಲಸವನ್ನು ಮತ್ತೂ ಮುಂದುವರಿಸಿವೆ. ಸಧ್ಯದಲ್ಲಿ ಅಂತಹ ಸಾಲಿನಲ್ಲಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ಅಮೃತ ಮಹಲ್ ಕಾವಲಿನ ವಿನಾಶವು ಒಂದು. ಈ ಕಾವಲನ್ನು ಆಧರಿಸಿ ಸುತ್ತಮುತ್ತಲ ಗ್ರಾಮಸ್ಥರು ಜೀವನ ನಡೆಸುತ್ತಿದ್ದಾರೆ. ಇದು ಅವರ ಬದುಕಿನ ಆಧಾರವಾಗಿಯೂ ಇದೆ. ನೈಸರ್ಗಿಕವಾಗಿಯೂ, ಜೀವ ವೈವಿಧ್ಯದ ಉಳಿವಿನಲ್ಲಿಯೂ ಇದು ಮಹತ್ವ ಪಡೆದಿದೆ. ಇದಾವುದನ್ನೂ ಪರಿಗಣಿಸದ ಸರಕಾರಗಳು ಗುಟ್ಟಾಗಿಯೇ ಈ ಭೂಮಿಯನ್ನು ಶಾಶ್ವತವಾಗಿ ನಾಶಮಾಡುವ ಕುತಂತ್ರ ನಡೆಸುತ್ತಿರುವುದು ದುರಂತದ ಸಂಗತಿ.

"ಅಮೃತ ಮಹಲ್ ಕಾವಲು ಕ್ರಿ.ಶ. ೧೫೭೨ರಿಂದಲೂ ತನ್ನದೇ ಆದ ಐತಿಹಾಸಿಕ ಮಹತ್ವವುಳ್ಳ ಸ್ಥಳ. ಇದನ್ನು ೨೦೦೦ ಇಸ್ವಿ ಆಸುಪಾಸಿನಿಂದಲೇ ಗುಟ್ಟಾಗಿ ವಿವಿಧ ಸಂಸ್ಥೆಗಳಿಗೆ ಮಾರಾಟ ಮಾಡಲಾಗಿದೆ. ಅಂದರೆ ಜನ ಸಾಮಾನ್ಯರ ಬಳಕೆಯ ನೆಲೆಯಾಗಿದ್ದ ಜಾಗವನ್ನು ವಿವಿಧ ಸರಕಾರಿ ಮತ್ತು ಖಾಸಗಿ ಸಂಸ್ಥೆಗಳಿಗೆ ಮಾರುವ ಮೂಲಕ ಜನರ ಹಿಡಿತದಲ್ಲಿ ಮುಕ್ತವಾಗಿದ್ದ ನೈಸರ್ಗಿಕ ಸಂಪತ್ತು ಖಾಸಗಿ ಸಂಪತ್ತಾಗಿ ಬದಲಾಗುತ್ತಿದೆ. ಒಮ್ಮೆ ಬದಲಾದ ಭೂಮಿ ಮತ್ತೆಂದು ಸಾರ್ವಜನಿಕರ ಬಳಕೆಗೆ ದೊರೆಯದಂತಾಗುತ್ತದೆ. ಇದು ಮುಂದಿನ ದಿನಗಳಲ್ಲಿ ಸ್ಥಳೀಯ ಜನರ ಬದುಕಿನ ಮೇಲೆ ಕೆಟ್ಟ ಪರಿಣಾಮವನ್ನು ಬೀರುತ್ತದೆ.

ಈ ಕಾವಲನ್ನು ಕಸಿದುಕೊಂಡು ಅಲ್ಲಿ ಸೈನಿಕ ಕೈಗಾರಿಕೀಕರಣ, ನ್ಯೂಕ್ಲಿಯರ್ ಪ್ಲಾಂಟ್ ಗಳನ್ನು ಸ್ಥಾಪಿಸಲು ಉದ್ದೇಶಿಸಲಾಗಿದೆ. ಈ ಸಂಬಂಧವಾಗಿ ಡಿ.ಆರ್.ಡಿ.ಓ.ಗೆ ೪,೫೦೦ ಎಕರೆಗಳು, ಬಾರ್ಕ

ಯುರೇನಿಯಂ ಘಟಕಕ್ಕೇ ೧,೯೦೦ ಎಕರೆಗಳು, ಐಐಎಸ್‌ಆರ್‌ಸಿ ಸಿಂಕ್ರೋಟನ್‌ಗೆ ೧.೫೦೦ ಎಕರೆಗಳು, ಸಾಗಿಟರ್ ಸೌರ ಉದ್ಯಾನಕ್ಕೆ ೧.೨೫೦ ಎಕರೆಗಳನ್ನು ನೀಡಲಾಗಿದೆ. ಈ ಉಧ್ಯಮಗಳ ಅಕ್ಕಪಕ್ಕದಲ್ಲಿ ನಗರ ನಿರ್ಮಾಣ ಮತ್ತು ಅದರ ಪೂರಕ ಮೂಲ ಸೌಕರ್ಯ ಯೋಜನೆಗಳಿಗೆ ಮತ್ತು ಭಾರತೀಯ ಸೈನ್ಯ ತುಕಡಿಗೆಂದು ೧೦,೦೦೦ ಎಕರೆ ಜಮೀನನ್ನು ಆಕ್ರಮಿಸಿಕೊಳ್ಳಲಾಗಿದೆ. ಯಾರಿಗೂ ಮಾಹಿತಿಯನ್ನು ನೀಡದೇ, ನಿರ್ಮಾಣ ಕಾಮಗಾರಿ ಶುರುಮಾಡಿದ್ದಾರೆ. ಈಗಾಗಲೇ ೫೦ ಕಿ.ಮೀ. ಮತ್ತು ೧೧ ಕಿ.ಮೀ. ಉದ್ದದ ಗೋಡೆಯನ್ನು ಕಟ್ಟಲಾಗಿದೆ.

ಈ ಭಾಗದಲ್ಲಿ ಬೇಡರು, ಗೊಲ್ಲರು, ಕುರುಬರು, ಅರ್ಜುನ ಜೋಗಿಗಳಂಥ ಬುಡಕಟ್ಟು ಸಮುದಾಯಗಳು ನೆಲೆಸಿವೆ. ಇವರು ಕಾವಲನ್ನು ಅವಲಂಬಿಸಿ ಹೈನುಗಾರಿಕೆ, ಕುರಿಸಾಕಾಣಿಕೆ ಮಾಡುತ್ತಿದ್ದಾರೆ. ಸುತ್ತಮುತ್ತಲು ೮೦ ಹಳ್ಳಿಗಳ ಜನರ ಬದುಕು ಅಮೃತ ಮಹಲ್ ಕಾವಲಿನ ಮೇಲೆ ನಿಂತಿದೆ. ಇಲ್ಲಿನ ೨೦ ಸಾವಿರ ಕುಟುಂಬಗಳು ಕಂಬಳಿ ನೇಯ್ಗೆಯನ್ನು ಆರ್ಥಿಕ ಮೂಲವಾಗಿಸಿಕೊಂಡಿವೆ. ಕುದಾಪುರ, ನೇರ್ಲಗುಂಟೆ, ದೊಡ್ಡ ಉಳ್ಳಾರ್ತಿ, ನನ್ನಿವಾಳ, ವರವು, ನೆಲಗೇತನಹಟ್ಟಿ ಒಳಗೊಂಡಂತೆ ಸುತ್ತಮುತ್ತಲ ರೈತರು ತಮ್ಮ ಭೂಮಿಯನ್ನು ಉಳಿಸಿಕೊಳ್ಳಲು ಹೋರಾಡುತ್ತಿದ್ದಾರೆ .

ಈ ಹುಲ್ಲುಗಾವಲಿನಲ್ಲಿ ಪಿಯಾಸಿ, ಸೈಪ್ರಸಿ ಸೇರಿದಂತೆ ೫೦೦ ಜಾತಿಯ ಹುಲ್ಲು ಜಾತಿಗಳಿವೆ ಎಂದು ಸ್ಥಳೀಯರು ಹೇಳುತ್ತಾರೆ. ಮಳೆಯ ಪ್ರಮಾಣ ಕಡಿಮೆಯಿದ್ದರೂ ವಿಶೇಷ ತಳಿ ಮರಗಳು ಬೆಳೆಯುತ್ತವೆ. ಗಿರಿಜನರು, ಕಾಡುಜನರು ಇದರ ಸ್ಪಷ್ಟ ಅರಿವನ್ನು ಹೊಂದಿದ್ದಾರೆ. ಈ ಎಲ್ಲ ಯೋಜನೆಗಳು ಭದ್ರಾ ನದಿಯನ್ನು ಅವಲಂಭಿಸಿವೆ. ಇದರಿಂದ ನೀರಿನ ಅಭಾವ ಉಂಟಾಗುವ ಸಾಧ್ಯತೆಯಿದೆ ಎಂದು ಸ್ಥಳೀಯರು ದೂರುತ್ತಾರೆ. ಅಲ್ಲದೇ ಹಿರೋಶಿಮಾ ನಾಗಸಾಕಿಯಂತಹ ಪರಿಸ್ಥಿತಿಗಳು ಬರುವುದು ಬೇಡವೆಂದು ಆತಂಕ ಇಡೀ ಜಿಲ್ಲೆಯನ್ನು ಆವರಿಸಿದೆ. ಭೂಮಿಯನ್ನು ನಂಬಿ ಬದುಕುತ್ತಿದ್ದ ಜನರು ಭೂಮಿಯ ಜೊತೆಗಿನ ಸಂಬಂಧವನ್ನು ಕಳೆದುಕೊಂಡು ಬೀದಿ ಪಾಲಾಗುವ ಸಾಧ್ಯತೆಗಳೇ ಹೆಚ್ಚು.

ಈ ಕಾಲದಲ್ಲಿ 'ಮೇಕ್ ಇನ್ ಇಂಡಿಯಾ' ನೆಪದಲ್ಲಿ ಎಲ್ಲವನ್ನು ಮುಕ್ತಮಾರುಕಟ್ಟೆಗೆ ತೆರೆದಿಡುವ ಆಳುವ ಸರ್ಕಾರಗಳು ಹೊಸ ಆರ್ಥಿಕ ನೀತಿಗಳು, ಉದಾರೀಕರಣ, ಜಾಗತೀಕರಣ, ಖಾಸಗೀಕರಣದ ಹೆಸರಿನಲ್ಲಿ ಸಾಮಾಜಿಕ ಜವಾಬ್ದಾರಿಯನ್ನು ಮರೆತಿವೆ. ಸಮಾಜದ ಬಹುಸಂಖ್ಯಾತರ ಅಭಿವೃದ್ಧಿಯನ್ನು ಮರೆಮಾಚಿವೆ. ಕೆಲವೇ ಜನರ, ಉುದ್ಯಮಪತಿಗಳ ಲಾಭವನ್ನಷ್ಟೇ ದೇಶದ ಅಭಿವೃದ್ಧಿಯೆಂದು ಹೇಳತೊಡಗಿವೆ. ಅಭಿವೃದ್ಧಿ ಹೆಸರಿನಲ್ಲಿ ಮೋಸ ಮಾಡುತ್ತ ಜನರ ಭೂಮಿಯನ್ನು ಕಸಿದುಕೊಂಡು ಉಳ್ಳವರಿಗೆ, ಶ್ರೀಮಂತರಿಗೆ ಇಲ್ಲವೆ ಸರಕಾರಗಳೇ ವಶಪಡಿಸಿಕೊಂಡು ತನ್ನ ಹಿಡಿತಸಾಧಿಸಿ, ಜನರನ್ನು ಅಸಹಾಯಕರನ್ನಾಗಿಸಿ ಭೂಮಿಯಿಂದ ದೂರ ಮಾಡುವ ಕೆಲಸ ಮಾಡುತ್ತಿವೆ. ಈ ಕೆಲಸವನ್ನು ವಂಚಿತ ಜನರು ಒಗ್ಗಟ್ಟಾಗಿ ವಿರೋದಿಸುತ್ತಿದ್ದಾರೆ.

ಅಮೃತ ಮಹಲ್ ಕಾವಲು ಹೋರಾಟ ಸಮಿತಿ ಮುಂದಾಳತ್ವದಲ್ಲಿ ಅಖಿಲ ಭಾರತ ಕಿಸಾನ್ ಸಭಾ, ಸ್ತ್ರೀ ಶಕ್ತಿ ಸಂಘಟನೆಗಳು ಅಲೆಮಾರಿ ಬುಡಕಟ್ಟು ಸಂಘ, ಕರ್ನಾಟಕ ಬಂಜಾರ ಜನ ಜಾಗೃತಿ ಸಮಿತಿ, ವಾಲ್ಮೀಕಿ ಸಂಘಟನೆಗಳು, ಕುರುಬರ ಸಂಘಟನೆಗಳು ದಲಿತ ಸಂಘಟನೆಗಳು ಈ ಯೋಜನೆಯನ್ನು  ತಡೆಯುವ ನಿಟ್ಟಿನಲ್ಲಿ ಹೋರಾಟ ಮಾಡುತ್ತಿವೆ.

ಹೊರಗಿನ ಹಿತಾಸಕ್ತಿಗಳ ಲಾಭಕ್ಕೆ ಸ್ಥಳೀಯರನ್ನು ಬಲಿಕೊಟ್ಟು ಅಭಿವೃದ್ಧಿ ಸಾಧಿಸುವುದು ಯಾವ ನ್ಯಾಯ. ಹಾಗಾಗಿ ಶತಮಾನಗಳಿಂದ ಈ ಕಾವಲು ಭೂಮಿಯ ಜೊತೆಗೆ ಅನ್ಯೋನ್ಯ ಸಂಬಂಧ ಹೊಂದಿರುವ ಜನರು ಭೂಮಿಯನ್ನು ಉಳಿಸಿಕೊಳ್ಳುವ ಹೋರಾಟವನ್ನು ಮುಂದುವರಿಸಿದ್ದಾರೆ. ನಾಡಿನ ಪ್ರಗತಿಪರರು, ಚಳವಳಿಗಾರರು, ಪರಿಸರವಾದಿಗಳು, ಬುದ್ಧಿಜೀವಿಗಳು, ಚಿಂತಕರು ಮತ್ತು ಸಾಮಾಜಿಕ ಮೌಲ್ಯಗಳಿಗೆ ಬೆಲೆ ಕೊಡುವವರು ಈ  ಹೋರಾಟದೊಂದಿಗೆ ಕೈ ಜೋಡಿಸಿ ಎಂಬ ಮನವಿ ನನ್ನದು, ನಿಮ್ಮ ನಿರೀಕ್ಷೆಯಲ್ಲಿ."[೧೩] ಚಳ್ಳಕೆರೆ ತಾಲೂಕು ಕರ್ನಾಟಕ ರಾಜ್ಯದಲ್ಲಿ ಅತಿ ಕಡಿಮೆ ಮಳೆ ಬೀಳುವ ಪ್ರದೇಶ. ಹಾಗಾಗಿ ಈ ಭಾಗದಲ್ಲಿನ ಸಮುದಾಯಗಳು ಕೃಷಿ ಅಂದರೆ ಒಣಬೇಸಾಯದೊಂದಿಗೆ ಪಶುಪಾಲನೆ, ಕುರಿಸಾಕಾಣಿಕೆಯನ್ನೇ ಬದುಕಿನ ಪಾರಂಪರಿಕ ವೃತ್ತಿಯಾಗಿಸಿಕೊಂಡು ಜೀವಿಸುತ್ತಿವೆ. ಈ ಕಾವಲನ್ನು ಕಳೆದುಕೊಂಡು ಬದುಕು ಅತಂತ್ರವಾಗುತ್ತಿದೆ. ಇತ್ತ ಗಮನ ಹರಿಸಿ ಅದರ ಕುರಿತು ಸರ್ಕಾರಗಳು ಯೋಚಿಸುವಂತೆ ಮಾಡಬೇಕಿದೆ.

ಪ್ರತಿ ಹಳ್ಳಿಗಳಲ್ಲಿಯೂ ೪೦ರಿಂದ ೫೦ಕ್ಕೂ ಹೆಚ್ಚಿನ ಕುಟುಂಬಗಳು ಕನಿಷ್ಠ ೩೦ರಿಂದ ೨೦೦ರವರೆಗೆ ಕುರಿಗಳನ್ನು ಸಾಕಿ ಸಲಹುವ ಮುಖೇನ ಬದುಕುತ್ತಿವೆ. ಅವರ ಆರ್ಥಿಕತೆಯ ಮೂಲ ಅಮೃತ ಮಹಲ್ ಕಾವಲು. ತಮ್ಮ 'ಜೀವನಾಡಿ'ಯಂತೆ ಇರುವ ಕಾವಲನ್ನು ಉಳಿಸಿಕೊಳ್ಳುವ ಸಲುವಾಗಿ ಸಾಕಷ್ಟು ಹೋರಾಟಗಳು ನಡೆದಿವೆ. ನಡೆಯುತ್ತಲೇ ಇವೆ. ಸಾಂಸ್ಕೃತಿಕತೆಯನ್ನು ಉಳಿಸಿಕೊಳ್ಳಲು ಹೋರಾಡುವ ಈ ಹೋರಾಟಗಳಿಗೆ ಸರಕಾರ ಮನ್ನಣೆ ನೀಡದೆ ಇರುವುದು. ನಾವಿಂದು ಬದುಕುತ್ತಿರುವುದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿಯೋ, ಸರ್ವಾಧಿಕಾರಿ ಆಡಳಿತದಲ್ಲಿಯೋ ಎಂಬಂತೆ ಚಿಂತೇಗೀಡು ಮಾಡುತ್ತಿವೆ. ಸತತವಾಗಿ ಬರಗಾಲಕ್ಕೆ ಸಿಕ್ಕಿ ನಲುಗುತ್ತಿರುವ ಇಂತಹ ಸಮಯದಲ್ಲಿ ಪರಿಸರಾತ್ಮಕ ಮತ್ತು ಜೀವನ್ಮುಖಿ ಅಭಿವೃದ್ಧಿ ಯೋಜನೆಗಳನ್ನು ತರುವ ಮೂಲಕ ಜನಸಮುದಾಯಗಳನ್ನು ತಮ್ಮ ಪರಂಪರೆಯೊಂದಿಗೆ ಬದುಕಲು ಬಿಡದೆ, ಒಕ್ಕಲೆಬ್ಬಿಸುವ ಹುನ್ನಾರ ಮಾಡುತ್ತಿವೆ.

ಗೋಮಾಳ, ಕಾಯ್ದಿರಿಸಿರುವ ಅರಣ್ಯ ಪ್ರದೇಶಗಳನ್ನು ಸರಕಾರಗಳು ಇಂದು ಕೈಗಾರಿಕೀಕರಣಗಳಿಗೆ ಬಳಸುವುದು ಹೆಚ್ಚಾಗಿದೆ. ಚಳ್ಳಕೆರೆ ತಾಲೂಕಿನಲ್ಲಿನ ಅಮೃತ ಮಹಲಿನ ಸಮಸ್ಯೆ ಒಂದು ರೀತಿಯಾದರೆ, ಬಳ್ಳಾರಿ ಜಿಲ್ಲೆಯಲ್ಲಿ ನೂರಾರು ವರ್ಷಗಳಿಂದ ಕೃಷಿ ಮಾಡಿಕೊಂಡು ಬಂದ ರೈತರ ಬಗರಹುಕುಂ ಸರ್ಕಾರಿ ಸಾಗುವಳಿಯ ಸಾವಿರಾರು ಎಕರೆ ಭೂಮಿಯನ್ನು ವಶಕ್ಕೆ ಪಡೆಯುವ ಉದ್ದೇಶದೊಂದಿಗೆ ೧೯೬೧ರ ಭೂ ಸುಧಾರಣಾ ಕಾಯ್ದೆಗೆ ತರಾತುರಿಯಲ್ಲಿ ತಿದ್ದುಪಡಿ ತರುವ ಮೂಲಕ ಒಕ್ಕಲೆಬ್ಬಿಸುತ್ತಿದ್ದಾರೆ.

ಆ ನೆಪದಲ್ಲಿ ರೈತರನ್ನು ನಿರಂತರ ಕಾಯಾಚರಣೆ ಹೆಸರಲ್ಲಿ ಕಿರುಕುಳ ನೀಡುತ್ತ ಭೂಮಿಯನ್ನು ಕಬಳಿಸಲಾಗಿದೆ. ಆ ಭೂಮಿಯನ್ನು ಬೃಹತ್ ಬಂಡವಾಳ ಹೂಡಿಕೆದಾರರಿಗೆ ನೀಡುವ ಮುಖೇನ ಸಾಮಾನ್ಯ ಜನರ ಬದುಕಿನ ಮೇಲೆ ಬರೆ ಎಳೆದಿದೆ.

ಅದರಂತೆಯೇ ಗಡಿಯಲ್ಲಿನ ಆಂಧ್ರಪ್ರದೇಶದ ಕಲ್ಯಾಣದುರ್ಗಂ, ರಾಯದುರ್ಗಂ, ಗುಂತಕಲ್ಲು, ಆಲೂರು, ಆದೋನಿಗಳ ಸಮಸ್ಯೆಗಳು ಭಿನ್ನವಾಗಿಲ್ಲ. ಏಕೆಂದರೆ ತೆಲುಗು ರಾಷ್ಟ್ರವು ಇಬ್ಭಾಗವಾದ ಬಳಿಕ ಈ ಪ್ರದೇಶದಲ್ಲಿ ವಾಸಿಸುವ ಜನಸಮುದಾಯಗಳ ಆರ್ಥಿಕ ಸಮಸ್ಯೆಗಳು ಹೆಚ್ಚಾಗಿವೆ. ಡಿ. ಹಿರೇಹಾಳ, ಓಬುಳಾಪುರಂಗಳನ್ನು ಒಳಗೊಂಡಂತೆ ಸಾಕಷ್ಟು ಹಳ್ಳಿಗಳ ರೈತರ ಭೂಮಿಗಳು ಅತೀ ಕಡಿಮೆ ಬೆಲೆಗೆ ಗಣಿ ಮಾಲೀಕರ ಕೈಸೇರಿವೆ. ನೈಸರ್ಗಿಕವಾಗಿದ್ದ ಬೆಟ್ಟ ಗುಡ್ಡಗಳು ನಾಶವಾಗಿ ಮಳೆ ಬರುವುದು ಕಡಿಮೆಯಾಗಿದೆ. ಹಾಗೆಯೇ ರಾಯದುರ್ಗಂ, ವಡ್ರಹೊನ್ನೂರು, ಮಾರಂಪಲ್ಲಿ, ಮುರುಡಿ ಸುತ್ತಮುತ್ತಲಿರುವ ಸುಮಾರು ೧೫ ಸಾವಿರಕ್ಕೂ ಹೆಚ್ಚು ಕಾಯ್ದಿರಿಸಿದ ಅರಣ್ಯ ಪ್ರದೇಶವನ್ನು ಖಾಸಗೀಕರಣಕ್ಕೆ ಒಳಪಡಿಸುವ ಹುನ್ನಾರಗಳು ನಡೆಯುತ್ತಿವೆ ಎಂದು ಸ್ಥಳೀಯರು ಹೇಳುವರು. ಒಟ್ಟಿನಲ್ಲಿ ಪಶು–ಕುರಿಗಳಂತಹ ಪ್ರಾಣಿಗಳು ಮೇಯಲು ನಿಗದಿಪಡಿಸಿದ ಪ್ರದೇಶಗಳು ಇಂದು ಖಾಸಗೀಕರಣಕ್ಕೆ ಒಳಪಟ್ಟು ಪಾರಂಪರಿಕ ವೃತ್ತಿಗಳು ಕಡಿಮೆಯಾಗಲು ಕಾರಣಗಳಾಗಿವೆ.

ಜೊತೆಗೆ ನೈಸರ್ಗಿಕ ಪರಿಸರದ ನಾಶ, ಗೋಮಾಳ, ಮೇವು–ನೀರು ಕೊರತೆ, ಮಳೆ ಇಲ್ಲದೆ ತೀರದ ಬರ, ಕಾಯ್ದಿರಿಸಿದ ಅರಣ್ಯಗಳು ಕಡಿಮೆಯಾಗುತ್ತಿರುವುದು, ಇಂದಿನ ಯುವ ಜನತೆ ಪಾರಂಪರಿಕ ವೃತ್ತಿಗಳನ್ನು ಮಾಡಲು ಹಿಂಜರಿಯುತ್ತಿರುವುದು, ಪಶುಪಾಲನೆ, ಕುರಿಸಾಕಾಣಿಕೆಯಂಥ ಪಾರಂಪರಿಕ ವೃತ್ತಿಗಳ ಹಿನ್ನೆಡೆಗೆ ಕಾರಣವೆನ್ನಬಹುದು.

**೩.೨.೨. ಕಂಬಳಿ ನೇಯ್ಗೆ:** ಮಾನವನ ಜೀವನ ನಿರ್ವಹಣೆಯಲ್ಲಿ ಆಹಾರ ಮತ್ತು ವಸ್ತ್ರಗಳು ಅತ್ಯಗತ್ಯವಾದವು. ಆರಂಭಿಕ ಹಂತದಲ್ಲಿ ಗೆಡ್ಡೆಗೆಣಸು ತಿನ್ನುತ್ತ, ಚಿಕ್ಕಪುಟ್ಟ ಪ್ರಾಣಿಗಳನ್ನು ಬೇಟೆಯಾಡಿ ಜೀವಿಸುತ್ತಿದ್ದರು. ಮಳೆ, ಚಳಿ, ಗಾಳಿಯಿಂದ ರಕ್ಷಣೆ ಪಡೆಯಲು ಮರದ ತೊಗಟೆ, ಪ್ರಾಣಿಗಳ ಚರ್ಮಗಳನ್ನು ಮೈ ಮುಚ್ಚಲು, ಮಲಗಲು ಹೊದೆಯಲು ಬಳಸುತ್ತಿದ್ದರು. ಕಾಲ ಸರಿದಂತೆ ಕ್ರೂರವಲ್ಲದ ಪ್ರಾಣಿಗಳನ್ನು ಪಳಗಿಸಿ ಸಾಕ ತೊಡಗಿದರು. ಕುರಿ, ಮೇಕೆ, ದನ, ನಾಯಿಗಳೇ ಮಾನವರ ಮೊದಲ ಸಂಗಾತಿಗಳಾದವು. ಪಶುಪಾಲನೆಯು ತನ್ನ ಚಹರೆಗಳನ್ನು ಸ್ಪಷ್ಟವಾಗಿ ಮೂಡಿಸುವ ಕಾಲದಿಂದಲೂ ಕುರಿಸಾಕಾಣಿಕೆಯು ಕುರುಬ ಸಮುದಾಯದ ಪಾರಂಪರಿಕ ವೃತ್ತಿಯಾಗಿದೆ. ಅದಕ್ಕೆ ಚರಿತ್ರೆಯಲ್ಲಿ ಸಾಕಷ್ಟು ನಿದರ್ಶನಗಳು ದೊರೆಯುತ್ತವೆ. ಮುಂದುವರಿದಂತೆ ತಿಳುವಳಿಕೆಯು ಬಂದಹಾಗೆ ಕುರಿಯ ಉಣ್ಣೆಯನ್ನು ಕತ್ತರಿಸಿ, ನೇಯ್ದು ವಸ್ತ್ರಗಳನ್ನು ಸಿದ್ಧಪಡಿಸುವುದನ್ನು ಕಲಿತರು. ಅದನ್ನು ಕಂಬಳಿ ಎಂದು ಕರೆದರು. ಅಂದಿನಿಂದ ಕುರಿಸಾಕಾಣಿಕೆಯೊಂದಿಗೆ ಕಂಬಳಿ ನೇಯ್ಗೆಯು ಕುರುಬರ ಪಾರಂಪರಿಕ ವೃತ್ತಿಯಾಯಿತು.

ಮಳೆ, ಚಳಿ, ಗಾಳಿಯಿಂದ ರಕ್ಷಿಸಿ, ಬೆಚ್ಚಗಿರಿಸುವ ಕಂಬಳಿಯು ಮೊದ ಮೊದಲು ಕುರುಬರಿಗೆ ಮಾತ್ರ ಸೀಮಿತವಾಗಿತ್ತು. ಬರಬರುತ್ತ ಇತರೆ ಸಮುದಾಯಗಳು ಬಳಕೆ ಮಾಡಹತ್ತಿದವು. ಅದು ಕುರುಬರಿಂದ ಮಾತ್ರ ದೊರೆಯುತ್ತಿದ್ದರಿಂದ ಅವರಿಗೆ ಯಾವುದಾದರೂ ವಸ್ತುವನ್ನು ಕೊಟ್ಟು ಬದಲಾಗಿ ಕಂಬಳಿ ಪಡೆಯುವ ವಿನಿಮಯ ನಡೆಯುತ್ತಿತ್ತು. ಅದೇ ಬೆಳೆದು ವ್ಯವಹಾರ ರೂಪ ಪಡೆದು ಉದ್ಯಮವಾಯಿತು.

ಪ್ರಸ್ತುತ ಈ ಬರೆಹದಲ್ಲಿ ಕಂಬಳಿ ಉತ್ಪಾದನೆಯ ಸಂಕ್ಷಿಪ್ತ ಪರಿಚಯ ತಿಳಿಯುವುದು ಜೊತೆಗೆ ಕಂಬಳಿ ನೇಯ್ಗೆಯನ್ನೇ ವೃತ್ತಿಯಾಗಿಸಿಕೊಂಡ ಕುರುಬ ಸಮುದಾಯದ ಕಂಬಳಿ ಉತ್ಪಾದನೆ ಮತ್ತು ಮಾರಾಟ ವ್ಯವಸ್ಥೆಯಂಥ ಆರ್ಥಿಕ ಅಂಶಗಳನ್ನು ಸಮಕಾಲೀನ ಸಂದರ್ಭದಲ್ಲಿಟ್ಟು ಮುಖಾಮುಖಿಯಾಗಿಸಲಾಗಿದೆ.

ಕಂಬಳಿ ಎನ್ನುವ ಪದ ಮೂಲತಃ ಸಂಸ್ಕೃತದ ಕಂಬಲ್ ರೂಪದಿಂದ ಬಂದಿದೆ. ಕಂಬಳಿ ಯೆನ್ನುವುದು ಕನ್ನಡಕ್ಕೆ ತದ್ಭವ ರೂಪ. "ಕಂಬಲ್ ಎಂದರೆ ಶಾಲು ಉಣ್ಣೆಯಿಂದ ತಯಾರಾದ ಬಟ್ಟೆ, ಹೊದೆಯುವ ವಸ್ತ್ರ ಎಂಬ ಅರ್ಥ ಸಂಸ್ಕೃತ ನಿಘಂಟುವಿನಲ್ಲಿದೆ. ಅದರಲ್ಲಿಯೇ ಕಂಬಾಲಿಕಾ ಎಂದರೆ ಸಣ್ಣ ಕಂಬಳಿ, ಕಂಬಲಿನ್ ಎಂದರೆ ಕಂಬಳಿಯನ್ನು ಧರಿಸುವವ ಎಂದರ್ಥವಿದೆ."[೧೪] "ಕನ್ನಡ ನಿಘಂಟುವಿನಲ್ಲಿ ಉಣ್ಣೆಯ ಉತ್ತರೀಯ ಶಲ್ಯ ಎಂದಿದೆ."[೧೫] "ಕನ್ನಡ ಜಾನಪದ ಕೋಶದಲ್ಲಿ ಕಂಬಳಿಗೆ ಉಣ್ಣೆಯಿಂದ ನೇಯ್ದ ಹೊದಿಕೆ ಎಂಬ ವಿವರಣೆಯಿದೆ."[೧೬] ತೆಲುಗು ನಿಘಂಟುವಿನಲ್ಲಿ "ಬೊಂತ, ಬಂತ ಗೊಂಗಡಿ, ಗೊಂಗಳಿ ಎಂದು ಕರೆದು ಚಳಿಗೆ ಹೊದಿಸಲು ಹಾಸಿ ಮಲಗಲು ಉಪಯೋಗಕ್ಕೆ ಬರುವ ಕುರಿ ಉಣ್ಣೆಯಿಂದ ತಯಾರಿಸಿದ ದಪ್ಪವಾದ ಹೊದಿಕೆ ಎಂದು ಹೇಳುತ್ತದೆ."[೧೭] ಒಟ್ಟಾರೆ ಕಂಬಳಿ ಎಂದರೆ ಚಳಿ, ಮಳೆ, ಗಾಳಿಗೆ ಮನುಷ್ಯನನ್ನು ಬೆಚ್ಚಗಿರಿಸಲು ಉಪಯುಕ್ತವಾದ ಉಣ್ಣೆಯಿಂದ ತಯಾರಿಸಿದ ಹೊದಿಕೆಯೆಂದೇ ಎಲ್ಲ ನಿಘಂಟುಗಳು ಹೇಳುತ್ತವೆ.

ಪೂರ್ವಕಾಲದಿಂದಲೂ ಮಾನವನ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಕಂಬಳಿಯ ಉಲ್ಲೇಖಗಳು ಭಾರತೀಯ ಬಹುಪಾಲು ಸಾಹಿತ್ಯದಲ್ಲಿ ದೊರೆಯುತ್ತವೆ. ಅವು ಪೌರಾಣಿಕ, ಐತಿಹಾಸಿಕವಾಗಿ ಅಲ್ಲದೇ ಜನಪದೀಯವಾಗಿಯೂ ಇವೆ. ಅವುಗಳಲ್ಲಿ ಪ್ರಸ್ತುತ ಜನಪದ ಅಥವಾ ತೋಂಡಿ ಸಂಪ್ರದಾಯದಲ್ಲಿನ ಕಂಬಳಿಯ ಕುರಿತಾಗಿರುವ ಕೆಲ ಉಲ್ಲೇಖಗಳನ್ನು ಗಮನಿಸೋಣ. ಮೊದಲೇ ಹೇಳಿರುವಂತೆ ಕಂಬಳಿ ನೇಯ್ಗೆಯು ಕುರುಬ ಸಮುದಾಯದ ಪಾರಂಪರಿಕ ವೃತ್ತಿ. ಅಲ್ಲಲ್ಲಿ ಬೇರೆ ಸಮುದಾಯಗಳು ಕಂಬಳಿ ನೇಯ್ಗೆ ಮಾಡುತ್ತಾರೆ ಎಂದರೂ ಅದರ ಸಂಖ್ಯೆ ತೀರಾ ಕಡಿಮೆ. ಕಂಬಳಿಯನ್ನು ಕುರಿತು ಗಾದೆ, ಒಗಟು, ಡೊಳ್ಳಿನ ಹಾಡು, ಹಾಲುಮತ ಕಾವ್ಯ-ಪುರಾಣಗಳಲ್ಲಿ ಸಾಕಷ್ಟು ಪುರಾವೆಗಳಿವೆ. ಉದಾಹರಣೆಗೆ ಕಂಬಳಿ ಹಾಸಿ, ಮಳೆ ತರಿಸುವ ವಿಚಾರವು ಡೊಳ್ಳಿನ ಹಾಡಿನಲ್ಲಿ

ಮಳೆಗಾಗಿ ರೈತ ಮುಗಲ ನೋಡಿದಾಗ
ಮಳೆಯ ಕರೆದಿತೋ ಕಂಬಳಿಯ॥[೧೮]

ಈ ರೀತಿಯಲ್ಲಿ ತಿಳಿಸುತ್ತಾ ಸಾಗುತ್ತದೆ. ಮತ್ತೊಂದು ಹಾಡಿನಲ್ಲಿ

ಆದಿಯಲ್ಲಿ ಇತ್ತ ಕಂಬಳಿ

ಹಾಲುಮತದಾಗ ಹುಟ್ಟುತ್ತ ಕಂಬಳಿ
ಯಾರ ಧರಮಕ ಅರಿವಿಗಿ ಬಂತೊ
ಮರಿಯದಾತ ಕಂಬಳ್ಯೊ ॥[೧೯]

ಕಂಬಳಿ ನೇಯ್ಗೆಯನ್ನು ಆದಿಯಲ್ಲಿ ಪಾರ್ವತಿಯೇ ಸ್ವತಃ ಉಂಡಾಡು ಪದ್ಮಣ್ಣನಿಗೆ ಕಲಿಸಿದಳೆಂಬ ನಂಬುಗೆಯು ಸಾಕಷ್ಟು ಹಾಡುಗಳಲ್ಲಿ ದೊರೆಯುತ್ತದೆ. ಇವುಗಳಲ್ಲದೇ ಜನಪದ ಹಾಲುಮತ ಮಹಾಕಾವ್ಯದಲ್ಲಿ ಪದುಮಗೊಂಡ ನೊಯಿದಾ ಕಂಬಳಿ ಶಿವಲಿಂಗಮ್ಮ ನೂಲ ಮಾಡ್ಯಾಳ, ಸಿದ್ಧಮಂಕ ಚರಿತೆಯಲ್ಲಿ ಗದ್ದುಗೆ ಕಂಬಳಿಯ ಕುರಿತಂತೆ

ಅಚ್ಚರಿಯ ಕಂಬಳಿಗಳ ನೆಯ್ದಾಗ
ಎಚ್ಚಹದಿಂ ಶಿವಗೆಂದು
ಮಚ್ಚಿ ಗದ್ದುಗೆಯಿಕ್ಕಿ ಅರ್ಚಿಸಿ ಪೂಜಿಸಿ
ನಿಶ್ಚಿಂತನೆ ಗತಿಯೆಂದ ॥[೨೦]

ಎಂದು ಶಿವನಿಗೆ ಗದ್ದುಗೆ ಹಾಕಿ ಅರ್ಚಿಸುವ ವಿಧಾನವೊಂದರ ವಿವರಣೆ ಸಿಕ್ಕುತ್ತದೆ. ಅಂದರೆ ಕಂಬಳಿಯ ತಯಾರಿಕೆಯು ಕೇವಲ ಉದ್ಧಿಮೆ ಮಾತ್ರವಲ್ಲದೇ ಪೂಜ್ಯನೀಯ ಕೆಲಸ. ಒಟ್ಟಿನಲ್ಲಿ ಜನಪದ ಜೀವನದಲ್ಲಿ ಹಾಸುಹೊಕ್ಕಾಗಿರುವ ಕಂಬಳಿಯು ಮಾನವನ ರೀತಿ-ನೀತಿ ಸಂಪ್ರದಾಯ ಆಚರಣೆಗಳಲ್ಲಿ ವೈವಿಧ್ಯಮಯವಾದ ಬಳಕೆಯ ವಸ್ತುವಾಗಿದೆ.

೧೯೯೦ರ ದಶಕದ ಆರಂಭದಿಂದ ಜಗತ್ತಿನಾದ್ಯಂತ ಬೀಸತೊಡಗಿದ ಪ್ರಪಂಚೀಕರಣದ ಗಾಳಿ ಹಲವು ಬದಲಾವಣೆಗಳನ್ನು ತಂದಿದೆ; ತರುತ್ತಲಿದೆ. ಕಂಬಳಿಯು ದೇಸೀ ಪರಂಪರೆಯಲ್ಲಿ ಬೆಳೆದು ಬಂದ ಉದ್ದಿಮೆ. ಹಾಗಾಗಿ ತನ್ನ ಮೂಲ ಸೊಗಡನ್ನು ಉಳಿಸಿಕೊಂಡು ಬಂದಿದೆ; ಬರುತ್ತಲಿದೆ. ಇಂದು ಕಂಬಳಿಯ ಜಾಗವನ್ನು ಜರ್ಕಿನ್, ಶಾಲುಗಳು ಕಬಳಿಸಿವೆ. ಇದರಿಂದಾಗಿ ಕಂಬಳಿ ಉದ್ಯಮ ಲಾಭ-ನಷ್ಟಗಳ ಲೆಕ್ಕಾಚಾರಗಳ ನಡುವೆ ಕಳೆದು ಹೋಗುತ್ತಲಿದೆ. ಈ ಉದ್ಯಮವನ್ನು ನಂಬಿಕೊಂಡ ಜನರ ಕೈಯಲ್ಲಿ ಕೆಲಸವಿಲ್ಲದಂತಾಗಿ ಆರ್ಥಿಕ ಬದುಕು ಹೀನಾಯ ಸ್ಥಿತಿಗೆ ಬಂದಿದೆ. ಭಾರತದ ಆರ್ಥಿಕ ಅಭಿವೃದ್ಧಿಯು ಗೃಹ ಕೈಗಾರಿಕೆಗಳಿಂದ ಮಾತ್ರ ಸಾಧ್ಯವೆಂದು ಗಾಂಧೀಜೀ ಹೇಳಿದ ಮಾತು ಇಂದು ಅಕ್ಷರಷಃ ಕಡೆಗಣಿಸಲ್ಪಡುತ್ತಿದೆ. ಏಕೆಂದರೆ ಆಧುನಿಕ ಕೈಗಾರಿಕೆಗಳೆಂಬ

ದೈತ್ಯ ಉದ್ದಿಮೆಗಳು ಗೃಹ ಕೈಗಾರಿಕೆಗಳನ್ನು ನೆಲಕಚ್ಚುವಂತೆ ಮಾಡಿವೆ. ಅದರಿಂದಾಗಿ ಕುಂಬಾರ, ಕಂಬಾರ, ಕಮ್ಮಾರ, ಕುರುಬ, ನೇಕಾರ, ಚಮ್ಮಾರರು ಮಾಡುವಂತಹ ಪಾರಂಪರಿಕ ವೃತ್ತಿಗಳು ಮೂಲೆ ಗುಂಪಿಗೆ ಸರಿಯುತ್ತಲಿವೆ.

ಪ್ರಸ್ತುತ ಕಂಬಳಿ ಉದ್ದಿಮೆಯು ಆಧುನಿಕ ಪರಿಕರಗಳನ್ನು ಪಾರಂಪರಿಕ ವೃತ್ತಿಯೊಂದಿಗೆ ಸಮ್ಮಿಶ್ರ ಮಾಡಿಕೊಂಡು ಕೆಲ ಪ್ರದೇಶಗಳಲ್ಲಿ ಹೊಸ ಪ್ರಯೋಗಗಳನ್ನು ಮಾಡುವ ಮುಖೇನ ಮುನ್ನೆಲೆಗೆ ಬರುತ್ತಿದೆ. ಗ್ರಾಮೀಣ ಪ್ರದೇಶಗಳು ಇಂದಿಗೂ ಮೂಲ ಸೊಗಡನ್ನು ಉಳಿಸಿಕೊಂಡು ಬರುತ್ತಲಿವೆ. ಹಾಗಾಗಿ ಕಂಬಳಿ ಉದ್ದಿಮೆ ಕೆಲವೇ ಪ್ರದೇಶಗಳಲ್ಲಿ ಆದಾಯ ತರುವ ಉದ್ಯೋಗವಾಗಿದ್ದರೆ, ಗ್ರಾಮೀಣ ಪ್ರದೇಶಗಳಲ್ಲಿ ಆದಾಯವಿಲ್ಲದೇ ಪರದಾಡುವ ಪರಿಸ್ಥಿತಿಯನ್ನು ನಿರ್ಮಿಸಿದೆ. ಹಾಗಾಗಿ ಪರ್ಯಾಯ ವೃತ್ತಿಗಳತ್ತ ಸಮುದಾಯ ಸಾಗಿ ಬರುತ್ತಲಿದೆ. ಕಂಬಳಿ ನೇಯ್ಗೆಯ ದೇಸಿ ಚಿಂತನೆ ಮತ್ತು ನಂಬುಗೆಗಳ ಕುರಿತು ಈ ಕೆಳಗೆ ಚರ್ಚಿಸಲಾಗಿದೆ.

**ಕಂಬಳಿ ಉತ್ಪಾದನೆ:** ಕಂಬಳಿ ತಯಾರಿಕೆಗೆ ಬೇಕಾದ ಕಚ್ಚಾ ವಸ್ತುವಾದ ಉಣ್ಣೆ ಸಂಗ್ರಹಣೆಯನ್ನು ನೇರವಾಗಿ ಕುರಿಗಳಿಂದ ಕತ್ತರಿಸಿ ಪಡೆಯಲಾಗುತ್ತದೆ. ಕಂಬಳಿ ತಯಾರಿಸಲು ಆರು ತಿಂಗಳು ಬೆಳೆದ ಉಣ್ಣೆಯನ್ನು ತೆಗೆಯಬೇಕು. ಹಾಗಾಗಿ ವರ್ಷಕ್ಕೆ ಎರಡು ಸಲ ಕುರಿ ಉಣ್ಣೆ ಕತ್ತರಿಸುತ್ತಾರೆ. ಒಮ್ಮೆ ಕಾರಹುಣ್ಣಿಮೆ ಮತ್ತೊಮ್ಮೆ ದೀಪಾವಳಿ ನಂತರ ಈ ಉಣ್ಣೆ ಸಂಗ್ರಹಣೆಯ ಕಾರ್ಯ ನಡೆಯುತ್ತದೆ. ಇಂದು ಉಣ್ಣೆ ಕತ್ತರಿಸುವ ಪರಿಣಿತರ ಸಂಖ್ಯೆ ಕಡಿಮೆಯಾಗಿದೆ. ಇದು ಶ್ರಮದಾಯಕ ಕೆಲಸವಾಗಿರುವುದರಿಂದ ಯುವ ಜನತೆ ಇತ್ತ ಬರದಿರುವುದು ಒಂದು ಕಾರಣವಾಗಿದೆ. ಕುರಿ ಕತ್ತರಿಸುವವ ಒಂದು ಕುರಿ ತುಪ್ಪಳವನ್ನು ಕತ್ತರಿಸಲು ಏಳು ಸಲ ಎದ್ದು ಕೂರಬೇಕು ಕುರಿಯ ಕೆಲವಡೆಯ ಉಣ್ಣೆಯನ್ನು ಎಡಗೈಯಲ್ಲೇ ಕತ್ತರಿಸಬೇಕು. ಕುರಿ ಅಂದ ಕೆಡದಂತೆ ತುಪ್ಪಳ ತೆಗೆಯಬೇಕು. ಅದಕ್ಕೆ "ಪಶುಗಳ ತುಪ್ಪಟ ಅಂದಗೆಡದೆ ತೆಗೆದ ನೂವ ಎಂದು ಹೇಳುವರು."[೨] ಕುರಿ ಉಣ್ಣೆ ಕತ್ತರಿಸುವವರೂ ಇಂದು ಚಳ್ಳಕೆರೆ ತಾಲೂಕಿನ ನೇರ್ಲಗುಂಟೆ, ಗೊರ್ಲಕಟ್ಟೆ, ಬಸಾಪುರ, ಗೌಡಗೆರೆ, ನಾಯಕನಹಟ್ಟಿ, ಚೌಳೂರು, ಓಬಳಾಪುರ(ಸಿರಿವಾಳ), ಓಬಯ್ಯನಹಟ್ಟಿ ಸೇರಿದಂತೆ ಚಿತ್ರದುರ್ಗ ತಾಲೂಕಿನ ಬೊಮ್ಮಕ್ಕನಹಳ್ಳಿ, ತುರುವನೂರು, ಮೊಳಕಾಲ್ಮೂರು ತಾಲೂಕಿನ ಕೊಂಡ್ಲಹಳ್ಳಿ, ಕಡೆ ಉಡೇವು, ಕೂಡ್ಲಿಗಿಯ ಶಿವಪುರ, ತಾಯಕನಹಳ್ಳಿ ಪಾವಗಡ ತಾಲೂಕಿನ ಆರ್.ಡಿ. ರೊಪ್ಪ, ವೈ.ಎನ್. ಹೊಸಕೋಟೆ, ಹಿರಿಯೂರಿನ ಕಣಜನಹಳ್ಳಿಗಳಂತಹ ಕೆಲವೇ ಪ್ರದೇಶಗಳಲ್ಲಿ ಕಾಣಸಿಗುತ್ತಾರೆ. ಹಾಗಾಗಿ ಇಲ್ಲಿಯವರೇ ಅನಂತಪುರಂ ಜಿಲ್ಲೆಯನ್ನು ಒಳಗೊಂಡಂತೆ ಬಳ್ಳಾರಿ, ಸಿರುಗುಪ್ಪ, ರಾಯಚೂರುವರೆಗೂ ಕುರಿ ಉಣ್ಣೆ ಕತ್ತರಿಸಲು ಹೋಗಿ ಬರುತ್ತಾರೆ.

ಕುರಿಗಳ ಉಣ್ಣೆ ಬೆಳೆದಾಗ ಕುರಿಗಾರರು ತುಪ್ಪಳ ಕತ್ತರಿಸಲು ಕರೆಯಲು ಕುರುಬಗೌಡನ ಹತ್ತಿರಕ್ಕೆ ಹೋಗುತ್ತಾರೆ. ಅವರಿಗೆ ವೀಳ್ಯ ಕೊಟ್ಟು ಕರೆಯಲಾಗುತ್ತದೆ. ಕುರಿ ಕತ್ತರಿಸುವ ಎರಡು–ಮೂರು

ದಿನಗಳ ಮುಂಚೆ ಆ ಕುರುಬರಾತನು ಕುರಿಹಿಂಡಿನ ಹತ್ತಿರ ಬಂದು ಕುರಿಗಾರರನ್ನು ಕರೆದುಕೊಂಡು ಕೆರೆ, ಹಳ್ಳ, ನದಿಗಳ ಹತ್ತಿರ ಕುರಿ ತೊಳೆಯಲು ಹೋಗುತ್ತಾರೆ. ನೀರ ಪಕ್ಕದಲ್ಲಿ ಕುರಿಗಳನ್ನೆಲ್ಲ ಗುಂಪಾಗಿ ಸೇರಿಸುವರು. ಮೊದಲು ಕುರುಬಗೌಡನು ಕುರಿಗಳನ್ನು ಪೂಜಿಸಿ, ನೀರಿನ ದಡದಲ್ಲಿ ಮೂರು ಚಿಕ್ಕ ಕಲ್ಲುಗಳನ್ನು ಇಟ್ಟು ಪೂಜಿಸುವನು. ತೆಂಗಿನಕಾಯಿ ಒಡೆದು ಕಾಯಿಯ ಒಂದು ಭಾಗದಲ್ಲಿ ಹೆಣ್ಣು ಮರಿ ಈದ ಕುರಿಯ ಹಾಲನ್ನು ಕರೆದು ನೀರಲ್ಲಿ ಬಿಡುತ್ತಾನೆ. ಹೀಗೆ ಮೂರು ಸಲ ಮಾಡಲಾಗುತ್ತದೆ. ನೀರಲ್ಲಿ ಇಳಿದ ಕುರುಬಗೌಡನು ಹೆಣ್ಣುಮರಿ ಈದ ಕುರಿಯನ್ನು ಮೊದಲು ತೊಳೆಯುತ್ತಾನೆ. ನಂತರದಲ್ಲಿ ಕುರಿಗಾರರು ಸೇರಿಕೊಂಡು ಕುರಿಗಳನ್ನೆಲ್ಲ ತೊಳೆಯುತ್ತಾರೆ. ಚೆನ್ನಾಗಿ ತೊಳೆಯದಿದ್ದರೆ ಕತ್ತರಿಸಿದ ಬಳಿಕ ಬಿಸಿಲು-ಮಳೆಗೆ ಬೆನ್ನ ಮೇಲೆ ಅಟ್ಟೆ ಕೀಳುತ್ತವೆ. ತೊಳೆದ ನಂತರ ಕುರಿಗಳು ನೀರಲ್ಲಿ ಹೋಗಿ ಬಂದ ದಾರಿಯು ಕಾಣದಂತೆ ನೀರನ್ನು ಚೆಲ್ಲುತ್ತಾರೆ. ಏಕೆಂದರೆ ಕುರಿಗಳು ಹೋಗಿ ಬಂದ ಗುರುತುಗಳು ಉಳಿಸಿದರೆ ಕೆಡುಕಾಗುತ್ತದೆ ಎಂಬ ನಂಬುಗೆ ಇಲ್ಲಿ ಬಲವಾಗಿದೆ.

ಇತ್ತೀಚೆಗೆ ಕುರುಬರು ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿಕೊಂಡಿರುವುದರಿಂದ ಕುರಿ ತೊಳೆಯಲು ಬರುವುದಿಲ್ಲ. ಇಂಥ ದಿನ ನೀವೆ ತೊಳಿಯಿರೆಂದು ಕುರಿಗಾರರಿಗೆ ತಿಳಿಸುತ್ತಾರೆ. ಕೆಲವೊಮ್ಮೆ ಬಂದು ಪೂಜೆಯ ಶಾಸ್ತ್ರ ಮಾಡಿ ಮೂರು ಕುರಿಗಳನ್ನು ತೊಳೆದು ಹೋಗುತ್ತಾರೆ. ತೊಳೆದ ಎರಡು-ಮೂರು ದಿನಗಳ ಬಳಿಕ ಉಣ್ಣೆ ಕತ್ತರಿಸಬೇಕು. ಎರಡು ದಿನಗಳಿಗೆ ತೊಳೆದ ಮೈ ಒಣಗಿರುತ್ತದೆ. ಕುರಿ ಉಣ್ಣೆ ಕತ್ತರಿಸಲು ಕುರುಬಗೌಡನು ತನ್ನೊಂದಿಗೆ ಐದಾರು ಜನರನ್ನು ಕರೆತರುತ್ತಾನೆ. ಪರಿಣಿತನೊಬ್ಬ ದಿನಕ್ಕೆ ೨೦ರಿಂದ ೨೫ ಕುರಿಗಳ ತುಪ್ಪಳ ಕತ್ತರಿಸುವನು. ಉಣ್ಣೆಯನ್ನು ಬಣ್ಣಕ್ಕೆ ತಕ್ಕಂತೆ ಬೇರೆ ಬೇರೆ ವಿಂಗಡಿಸಿಕೊಳ್ಳುತ್ತಾರೆ. ಇಲ್ಲಿಯೂ ಮೊದಲು ಹೆಣ್ಣುಮರಿ ಈದ ಕುರಿಯನ್ನೆ ಕತ್ತರಿಸುವುದು ವಾಡಿಕೆ. ದೊಡ್ಡ ಕುರಿಗಳ ಉಣ್ಣೆ ಒಂದೆಡೆ, ಮೊದಲ ಕೊಯ್ಲಿನ ಮರಿಗಳ ಉಣ್ಣೆ ಒಂದೆಡೆ ಸೇರಿಸುವರು. ಕುರಿಗಳ ತುಪ್ಪಳ ತೆಗೆದ ಬಳಿಕ ಮಂದೆಯಲ್ಲಿ ಕೂಡುವರು. ಆಗ ಕುರುಬರಾತನು ಹರಿವಾಣದಲ್ಲಿ ಅನ್ನ, ಹಾಲು-ತುಪ್ಪ, ಕೊಬ್ಬರಿ, ಉತ್ತತ್ತಿ, ಸಕ್ಕರೆ, ಬೇವಿನ ಸೊಪ್ಪಿನೊಂದಿಗೆ ಕುರಿಯ ನಾಲ್ಕೈದು ಹಿಕ್ಕೆಗಳನ್ನು ಅದರಲ್ಲಿ ಹಾಕಿ

"ಒಲಿಗ್ಯಾ ಸಿದ್ಧಲಿಂಗ ಒಲಿಗ್ಯಾ
ಉಂಡಾಡು ಪದ್ಮಣ್ಣ ಒಲಿಗ್ಯಾ
ಬಿಳಿ ಸಾವಿರ, ಕರಿ ಸಾವಿರ
ಬಾರ ಸೊಳಕ ಸಾವಿರ ನೆರೆಮಸ್ಕ ಸಾವಿರ
ಹೂಬಾಲ ಸಾವಿರ ಮಚ್ಚೆ ಸಾವಿರ

ಬಾಲದೇವರದು ಕುಂಟು ಕುರಿ

ಕುಂಟು ಕುರಿ ಎಂಟು ಮರಿ ಈಯ್ಲಿ"[೨೨]

ಎಂದು ಹೇಳುತ್ತ ಕುರಿ ಮಂದೆಯ ಸುತ್ತಲೂ ಮೂರು ಸಾರಿ ಸುತ್ತುತ್ತ, ಕಲಿಸಿಕೊಂಡ ಪದಾರ್ಥಗಳನ್ನು ಕುರಿಗಳ ಮೇಲೆ ಚಿಮುಕಿಸುತ್ತಾ ಬರುತ್ತಾನೆ. ಉಳಿದಿದ್ದನ್ನು ಸಿದ್ಧಲಿಂಗನ ಪ್ರಸಾದವೆಂದು ಸ್ವೀಕರಿಸುವನು. ಕುರಿಯೇ ಸಿದ್ಧಲಿಂಗ ಅವತಾರ ಅಂದರೆ ಶಿವನ ಅವತಾರ ಎಂಬ ನಂಬುಗೆಯೇ ಇದಕ್ಕೆ ಕಾರಣವಾಗಿದೆ.

ಕುರಿಗಳು ಕುರುಬರಿಂದ ಬಳುವಳಿಯಾಗಿ ಬಂದವು ಎಂಬ ನಂಬುಗೆಯಿರುವುದರಿಂದ ಇತರೆ ಯಾವುದೇ ಸಮುದಾಯದವರು(ಈ ಭಾಗದಲ್ಲಿ ಹೆಚ್ಚಾಗಿ ಗೊಲ್ಲರು ಮತ್ತು ಮ್ಯಾಸಬೇಡರು) ಕುರಿ ಸಾಕಿದ್ದರೂ, ವರ್ಷಕ್ಕೆ ಎರಡು ಸಲ ಈ ಪೂಜೆಯನ್ನು ಕುರುಬರಿಂದಲೇ ಮಾಡಿಸುವರು. ಅವರು ಮಂದೆ ಪೂಜೆ ಮಾಡುವುದರಿಂದ ಕುರಿಹಿಂಡು ಹೆಚ್ಚುತ್ತದೆ ಎಂಬುದು ಕುರಿಗಾರರ ಭಾವನೆ. ಈ ಪದ್ಧತಿಯು ಕೆಲವೊಂದು ಭಿನ್ನತೆಗಳೊಂದಿಗೆ ಕುರಿ ಸಾಕಾಣಿಕೆ ಮಾಡುವ ಎಲ್ಲ ಪ್ರದೇಶಗಳಲ್ಲಿಯೂ ಇದೆ. ಉಣ್ಣೆ ಬೆಳೆಯದ ಕೆಂಪುಕುರಿಗಳನ್ನು ಸಾಕುವ ಸಿರುಗುಪ್ಪ, ಆಲೂರುಗಳಂಥ ಪ್ರದೇಶಗಳಲ್ಲಿ ಈ ಆಚರಣೆಯಿಲ್ಲ. ಕುರಿಗಾರರ ನೂರು ಕುರಿಗಳ ಉಣ್ಣೆಯನ್ನು ಕತ್ತರಿಸಿದರೆ, ಇಲ್ಲವೇ ಎರಡು ಸಲ ಉಣ್ಣೆ ಕತ್ತರಿಸಿದಾದ ಬಳಿಕ ಒಂದು ಕಂಬಳಿಯನ್ನು ಕುರಿಗಾರನಿಗೆ ನೀಡುತ್ತಿದ್ದರು. ಪ್ರಸ್ತುತ ಸಂದರ್ಭದಲ್ಲಿ ಕಂಬಳಿ ನೇಯುವ ಜೊತೆಗೆ ಉಣ್ಣೆ ಕತ್ತರಿಸುವವರೂ ಕಡಿಮೆಯಾಗಿರುವುದು ಕುರಿಗಾರರಿಗೆ ಸಮಸ್ಯೆಯಾಗಿದೆ. ಹಾಗಾಗಿ ಉಣ್ಣೆ ಕತ್ತರಿಸಲು ಕುರಿಗಿಷ್ಟೆಂದು ಹಣ ತೆಗೆದುಕೊಳ್ಳುವ ಪರಿಸ್ಥಿತಿ ನಿರ್ಮಾಣವಾಗಿದೆ. ಇಂದು ಉಣ್ಣೆ ಕತ್ತರಿಸುವ ಕಾರ್ಯಕ್ಕೆ ಯುವ ಜನತೆ ಆಸಕ್ತಿ ವಹಿಸದಿರುವ ಕಾರಣಗಳಿಂದ ಉಣ್ಣೆ ಕತ್ತರಿಸುವ ಯಂತ್ರಗಳು ಬಂದಿವೆ. ಯಂತ್ರದಿಂದ ಉಣ್ಣೆ ಕತ್ತರಿಸುತ್ತಿದ್ದರೂ ಕುರಿಗಾರರಿಗೆ ಈ ವಿಧಾನದ ಬಗ್ಗೆ ಸಮಾಧಾನವಿಲ್ಲ. ಹಾಗಾಗಿ ಎಷ್ಟೇ ಕಷ್ಟವಾದರೂ ಉಣ್ಣೆ ಕತ್ತರಿಸಲು ಕುರುಬಗೌಡರನ್ನು ಕರೆತರಲು ಪ್ರಯತ್ನಿಸುತ್ತಾರೆ. ಕೆಲವೆಡೆ ಕುರಿ ಉಣ್ಣೆ ಕತ್ತರಿಸಿ, ಉಣ್ಣೆಯನ್ನು ಕುರಿಗಾರರಿಗೆ ಕೊಟ್ಟು, ಹಣವನ್ನು ತೆಗೆದುಕೊಂಡು ಹೋಗುತ್ತಾರೆ.

ಕತ್ತರಿಸಿ ತಂದ ಉಣ್ಣೆಯನ್ನು ಒಂದೆಡೆ ಸಂಗ್ರಹಿಸುತ್ತಾರೆ. ನಂತರ ಉಣ್ಣೆಯ ಗುಣಮಟ್ಟ ಮತ್ತು ಬಣ್ಣಕ್ಕನುಗುಣವಾಗಿ ಬೇರ್ಪಡಿಸುತ್ತಾರೆ. ಹಿಂದೆ ಕೈಯಿಂದಲೇ ವರ್ಗೀಕರಿಸುತ್ತಿದ್ದರು. ಈಗ ಉಣ್ಣೆಯನ್ನು ಮಿಲ್ಲಿಗೆ ತೆಗೆದುಕೊಂಡು ಹೋಗಿ ಸಂಸ್ಕರಣೆ ಮಾಡಿಸಿಕೊಂಡು ಬರುತ್ತಿದ್ದಾರೆ. ಚಿಕ್ಕ ಮಕ್ಕಳಿಗೆ ಶೀತ, ನೆಗಡಿಯಾದರೆ ಈ ಸಂಸ್ಕರಿಸಿದ ಉಣ್ಣೆಯನ್ನು ಮಗುವಿನ ಸುತ್ತ ಇಟ್ಟು ಮಲಗಿಸಿದರೆ ನೆಗಡಿ ಶೀತ ಮಾಯವಾಗುತ್ತದೆ. ಈ ನಂಬುಗೆಯು ಚಳ್ಳಕೆರೆ ಭಾಗದಲ್ಲಿದೆ. ಅದಕ್ಕೆ ಸಾಕಷ್ಟು ನಿದರ್ಶನಗಳನ್ನು ಹೇಳುವರು. ತುಪ್ಪಳದ ವರ್ಗೀಕರಣದ ನಂತರದಲ್ಲಿ ಉಣ್ಣೆಯನ್ನು ಹಿಂಜಿ ಹಂಜಿ ಮಾಡುವುದು

ಕಂಬಳಿ ತಯಾರಿಕೆಯಲ್ಲಿನ ಮುಖ್ಯ ಕೆಲಸ. ಈ ಕೆಲಸವನ್ನು ಮನೆಯ ಹೆಣ್ಣುಮಕ್ಕಳೇ ಮಾಡುತ್ತಾರೆ. ಹಂಜಿಯಾದ ಮೇಲೆ ಚೆಕ್ ಮಾಡಿಕೊಳ್ಳುವರು. "ಚೆಕ್ ಎಂದರೆ ಸುಮಾರು ನಾಲ್ಕು ಬಟ್ಟು ಅಳತೆಯ ಉಣ್ಣೆಯನ್ನು ಕೈಯಲ್ಲಿ ತೆಗೆದುಕೊಂಡು ನೂಲುವುದಕ್ಕೆ ಅನುಕೂಲವಾಗುವಂತೆ ಸಿದ್ಧಪಡಿಸಿ ಕೊಳ್ಳುವುದು."[೨೩] ಅದನ್ನು ಚರಕದಿಂದ ನೂಲುವುದು, ನಂತರ ಹಾಸು ಹೊಯ್ಯುವುದು, ಉಂಕೆ ನೇಯುವುದು ನಂತರ ಅದಕ್ಕೆ ಆಕಾರ ಕೊಡಲಾಗುತ್ತದೆ.

ಉಣ್ಣೆಯಿಂದ ಕಂಬಳಿ ಸಿದ್ಧವಾಗುವವರೆಗಿನ ಬಗೆಯನ್ನು ಉಣ್ಣೆ ಸಂಗ್ರಹಣೆಯಿಂದ ಮೊದಲ್ಗೊಂಡು ಕಂಬಳಿ ಮಡಿಕೆ ಮಾಡಿಡುವವರೆಗೆ ಅನೇಕ ಹಂತಗಳನ್ನು ಗಮನಿಸಬಹುದು. ಇಷ್ಟೆಲ್ಲ ಕಷ್ಟಪಟ್ಟರೂ ದಿನವೊಂದಕ್ಕೆ ಒಂದೇ ಕಂಬಳಿ ನೇಯಲು ಮಾತ್ರ ಸಾಧ್ಯವಾಗುತ್ತದೆ. ಅದಕ್ಕೆ ಸಿಗುವ ಬೆಲೆ ೪೦೦-೫೦೦ ರೂಪಾಯಿಗಳು ಮಾತ್ರ. ಮನೆ ಮಂದಿಯೆಲ್ಲ ಅದಕ್ಕೆ ಶ್ರಮ ಪಡಬೇಕು. ಅದರ ಬದಲಾಗಿ ನಾಲ್ಕೈದು ಜನರು ಬೇರೆ ಕೆಲಸ ಮಾಡಿದರೆ ದಿನಕ್ಕೆ ಒಬ್ಬರಿಗೆ ೨೦೦ ರೂಪಾಯಿಗಳು ಎಂದರೂ ೮೦೦ರಿಂದ ೧೦೦೦ರೂಪಾಯಿಗಳನ್ನು ದುಡಿಯಬಹುದು. ಇದರಿಂದಾಗಿ ಕಂಬಳಿ ನೇಯ್ಗೆಯು ಕಡಿಮೆಯಾಗುತ್ತಿದೆ ಎಂದು ಗೌಡಗೆರೆಯ ಕೃಷ್ಣಪ್ಪ ಹೇಳುವರು.

ಅಧ್ಯಯನಕ್ಕೆ ಒಳಪಟ್ಟ ಬಳ್ಳಾರಿ, ಕರ್ನೂಲು, ಚಿತ್ರದುರ್ಗ, ಅನಂತಪುರಂ ಜಿಲ್ಲೆಗಳ ಗಡಿಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭಗಳಲ್ಲಿ ದೊರೆತ ಮಾಹಿತಿಯನ್ನು ಆಧರಿಸಿ ಹೇಳುವುದಾದರೆ ಕುರುಬರು ವಾಸಿಸುವ ಪ್ರತಿ ಗ್ರಾಮಗಳಲ್ಲಿಯೂ ಕಂಬಳಿ ನೇಯ್ಗೆಯ ಕುರುಹುಗಳಾಗಿ ಇಂದಿಗೂ ಖಾಲಿ ಮಗ್ಗಗಳು ಕಾಣಸಿಗುತ್ತವೆ. ನೇಯ್ಗೆಯು ಸಂಪೂರ್ಣವಾಗಿ ನಿಂತುಹೋಗಿವೆ. ಅಂಥ ಸ್ಥಳಗಳನ್ನು ನೋಡುವುದಾದರೆ ಬಳ್ಳಾರಿ, ಸಿರುಗುಪ್ಪ ತಾಲೂಕುಗಳ ಹಳ್ಳಿಗಳು. ಕರ್ನೂಲು ಜಿಲ್ಲೆಯ ಆಲೂರು, ಆದೋನಿ, ಹೊಳೆಗುಂದಿ, ಗೂಳ್ಯಂ, ಗ್ರಾಮದಲ್ಲಿ ಉಣ್ಣೆ ಕೈ ಮಗ್ಗ ನೇಕಾರರ ಸಂಘ ಅಸ್ತಿತ್ವದಲ್ಲಿದ್ದು, ಕಂಬಳಿ ನೇಯ್ಗೆಯು ನಡೆಯುತ್ತಿತ್ತು. ಅದು ಸಹ ನಿಂತುಹೋಗಿದೆ. ಮೊಳಕಾಲ್ಮೂರು ತಾಲೂಕು ಉತ್ತರ ಭಾಗದಲ್ಲಿ ಅಂದರೆ ರಾಂಪುರ, ಕರಡಿಹಳ್ಳಿ, ಅಶೋಕ ಸಿದ್ಧಾಪುರ, ಅನಂತಪುರಂ ಜಿಲ್ಲೆಯ ಗುಂತಕಲ್ಲು, ಡಿ. ಹಿರೇಹಾಳ. ರಾಯದುರ್ಗಂ ಒಳಗೊಂಡಂತೆ ಎಲ್ಲಾ ಕಡೆಯ ಕಂಬಳಿ ನೇಕಾರಿಕೆಯು ಸಂಪೂರ್ಣವಾಗಿ ನಿಂತಿದೆ. ಕಂಬಳಿ ನೇಕಾರಿಕೆಯು ಇಂದಿಗೂ ಜೀವಂತವಿರುವ ಪ್ರದೇಶಗಳೆಂದರೆ ಚಳ್ಳಕೆರೆ ತಾಲೂಕು, ಮೊಳಕಾಲ್ಮೂರು ತಾಲೂಕಿನ ಕೊಂಡ್ಲಹಳ್ಳಿ, ಕೋನಸಾಗರ, ಕಡೆ ಉಡೇವು, ಹೊನ್ನೂರು ಮುಂತಾದವು. ಅನಂತಪುರಂ ಜಿಲ್ಲೆಯ ವೇಪಲಪರ್ತಿ, ಕೋನಾಪುರಂ, ಗುಂಡಿಗೇನಪಲ್ಲಿ, ಸಾಗಿರೆಡ್ಡಿಪಲ್ಲಿ, ಪೋಲೆಪಲ್ಲಿ, ಭೈರವನತಿಪ್ಪ, ಕಪಟನಿಂಗಂಪಲ್ಲಿ, ತಿಪ್ಪನಪಲ್ಲಿ ಮುಂತಾದವು.

ಕಂಬಳಿ ಮಾರಾಟವು ಎರಡು ರೀತಿಯಲ್ಲಿ ನಡೆಯುತ್ತದೆ. ೧. ವೈಯಕ್ತಿಕ ಕಂಬಳಿಯನ್ನು ಸಿದ್ಧಪಡಿಸಿದ ವ್ಯಕ್ತಿಯೇ ಅದರ ಮಾರಾಟ ಮಾಡುವುದು. ೨. ಸಾಂಘಿಕ ಒಂದೇ ವೃತ್ತಿಯ

ಅನೇಕರು ಸೇರಿ ಒಂದು ಸಂಸ್ಥೆಯನ್ನು ಮಾಡಿಕೊಂಡು ತನ್ಮೂಲಕ ತಮ್ಮ ಉತ್ಪಾದನೆಗಳ ಕುರಿತಾದ ವ್ಯಾಪಾರ ವಹಿವಾಟನ್ನು ನಡೆಸುವುದು. ಇದೇ ರೀತಿಯಲ್ಲಿ ಕಂಬಳಿ, ಉಣ್ಣೆಯ ಉತ್ಪಾದನೆಗಳ ವ್ಯಾಪಾರವನ್ನು ಕೇಂದ್ರವಾಗಿಟ್ಟುಕೊಂಡು ಸಾಂಘಿಕ ರೂಪದಲ್ಲಿ ವ್ಯವಹಾರ ಮಾಡುವ ರೂಢಿಯಿದೆ. ಸರ್ ಎಂ. ವಿಶ್ವೇಶ್ವರಯ್ಯ ಅವರು ಹಳೇ ಮೈಸೂರು ರಾಜ್ಯದ ಕೈಗಾರಿಕೆಗಳ ಅಭಿವೃದ್ಧಿ ಯೋಜನೆಗಳನ್ನು ತಯಾರಿಸಿಕೊಟ್ಟ ಫಲವಾಗಿ ರಾಜ್ಯಸರ್ಕಾರ ಉಣ್ಣೆ, ಹತ್ತಿ, ರೇಷ್ಮೆಗಳ ಅಭಿವೃದ್ಧಿಗಾಗಿ ಸಹಕಾರ ಸಂಘಗಳನ್ನು ಪ್ರಾರಂಭಿಸಲು ಅನುಮತಿಸಿತು. ಇದಕ್ಕನುಗುಣವಾಗಿ ೧೯೫೬ರಲ್ಲಿ 'ಕರ್ನಾಟಕ ರಾಜ್ಯ ಉಣ್ಣೆ ಕೈ ಮಗ್ಗ ನೇಕಾರರ ಸಹಕಾರ ಸಂಘ ನಿಯಮಿತ' ಅಧಿಕೃತವಾಗಿ ನೋಂದಣಿಗೊಂಡು ಅಸ್ತಿತ್ವಕ್ಕೆ ಬಂದಿತು. "ಈ ಸಂಘದ ಕುರಿತಾಗಿ ಶಿವಾನಂದ ಗುಬ್ಬಣ್ಣವರ ಮಾಹಿತಿ ನೀಡಿದ್ದಾರೆ."[೨೪] ಉಣ್ಣೆ ನೇಕಾರರಿಗೆ ಕಚ್ಚಾ ಮಾಲನ್ನು ಒದಗಿಸಿ ಅವರು ಸಿದ್ಧಪಡಿಸಿದ ಕಂಬಳಿಗಳನ್ನು ರಾಜ್ಯ ಹಾಗೂ ದೇಶದ ವಿವಿಧ ಭಾಗಗಳಿಗೆ ಮಾರಾಟ ಮಾಡುವಂತಹ ಅನೇಕ ಗುರಿ ಹೊಂದಿದ ಈ ಸಂಘವು ಸಹಕಾರ ಹಾಗೂ ಖಾದಿ ಗ್ರಾಮೋದ್ಯೋಗ. ಆಯೋಗದ ೨೧.೪೪ ಲಕ್ಷ ರೂಪಾಯಿಗಳ ಷೇರು ಬಂಡವಾಳದೊಂದಿಗೆ ಪ್ರಾರಂಭವಾಯಿತು. ಕಂಬಳಿ ಸ್ಥಿತಿಗನುಗುಣವಾಗಿ ಸೋಡಿ, ರಕಮು ನೀಡುವುದಲ್ಲದೇ ಕಂಬಳಿಗಳ ದಾಸ್ತಾನಿಗಾಗಿ ಬಡ್ಡಿರಹಿತ ಮೂರು ಲಕ್ಷ ರೂಪಾಯಿಗಳ ಸಾಲ ನೀಡುವ ಮೂಲಕ ೧೫೦ ಸದಸ್ಯ ಸಂಘಗಳ ಅವಶ್ಯಕತೆಗನುಗುಣವಾಗಿ ಈ ಸಂಘ ಕಾರ್ಯ ನಿರ್ವಹಿಸುತ್ತಿದೆ. ೬ ಲಕ್ಷ ರೂಪಾಯಿಗಳಷ್ಟು ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನಿಂದ ಸಾಲ ತೆಗೆದುಕೊಂಡು ಕಾಫಿ, ಚಹಾ ತೋಟಗಳು ಹಾಗೂ ಸಹಕಾರಿ ಸಂಘಗಳಿಗೆ ಸುಮಾರು ೫೦ರಷ್ಟು ಕಂಬಳಿಗಳನ್ನು ಪೂರೈಸುತ್ತದೆ. ಉಳಿದ ಕಂಬಳಿಗಳನ್ನು ಮಡಿಕೇರಿ, ಚಿಕ್ಕಮಗಳೂರು, ಸಾಗರ, ಶಿರಸಿ, ಬೆಳಗಾವಿ ಪಾಂಡವಪುರಗಳಿಗೆ ಹಾಗೂ ಚಳ್ಳಕೆರೆಯಲ್ಲಿನ ಮಾರಾಟ ಮಳಿಗೆಗಳ ಮೂಲಕ ಮಾರಾಟ ಮಾಡುತ್ತದೆ. ಈ ಸಂಸ್ಥೆಯಡಿಯಲ್ಲಿ ಇಂದು ರಾಜ್ಯಾದ್ಯಂತ ಅನೇಕ ಸಹಕಾರಿ ಸಂಘಗಳು ಕಾರ್ಯ ನಿರ್ವಹಿಸುತ್ತಿವೆ. ಅದರಲ್ಲಿ ಚಳ್ಳಕೆರೆ ಕರ್ನಾಟಕ ರಾಜ್ಯ ಉಣ್ಣೆ ಕೈಮಗ್ಗ ನೇಕಾರರ ಹಾಗೂ ಖಾದಿಯೇತರ ಸಹಕಾರ ಸಂಘಗಳ ಮಹಾಮಂಡಳಕ್ಕೆ ೪೧ ಸಹಕಾರ ಸಂಘಗಳು ಸೇರುತ್ತವೆ. ಸುಮಾರು ೩೮ ಸಾವಿರ ನೇಕಾರರು ಸದಸ್ಯರಾಗಿದ್ದಾರೆ. ಈ ಭಾಗದಲ್ಲಿ ಗೊರ್ಲಕಟ್ಟೆ, ಚೌಳೂರು, ಪಗಡಲ ಬಂಡೆ, ಓಬಳಾಪುರ(ಸಿರಿವಾಳ) ಕೊಂಡ್ಲಹಳ್ಳಿ, ಕೋನಸಾಗರ, ಕಡೇ ಉಡೇವು, ನಾಗಸಮುದ್ರಗಳಲ್ಲಿರುವ ಉಣ್ಣೆ ಕೈಮಗ್ಗ ನೇಕಾರರ ಸಂಘಗಳು ಸಕ್ರಿಯವಾಗಿವೆ. ಅವುಗಳ ಸಂಕ್ಷಿಪ್ತ ಪರಿಚಯವನ್ನು ತಿಳಿಯುವುದು ಮತ್ತು ಅವುಗಳ ಸಮುದಾಯಮುಖಿ ಕಾರ್ಯಗಳ ಕುರಿತು ಚರ್ಚಿಸಲಾಗಿದೆ.

**ಗೊರ್ಲಕಟ್ಟೆ:** ಚಳ್ಳಕೆರೆ ತಾಲೂಕಿನಲ್ಲಿಯೇ ಆಧುನಿಕ ಯಂತ್ರಗಳನ್ನು ಬಳಸಿಕೊಂಡು ಆರ್ಥಿಕ ಪ್ರಗತಿಯತ್ತ ಸಾಗುತ್ತಿರುವ ಸಂಘಗಳಲ್ಲಿ ಗೊರ್ಲಕಟ್ಟೆಯ 'ಉಣ್ಣೆ ಕೈಮಗ್ಗ ನೇಕಾರರ ಸಹಕಾರ

ಸಂಘ'ವು ಪ್ರಮುಖವಾದುದು. ಒಂದು ಸಾವಿರಕ್ಕಿಂತಲೂ ಅಧಿಕ ಷೇರುಗಳನ್ನು ಹೊಂದಿರುವ ಈ ಸಂಘವು ಸ್ಥಳೀಯ, ದೇಶ-ವಿದೇಶಗಳಿಂದ ಕಚ್ಚಾ ಸಾಮಾಗ್ರಿಗಳನ್ನು ತರಿಸಿಕೊಂಡು ಉತ್ತಮ ಗುಣಮಟ್ಟದ ಬಿಳಿ ಕಂಬಳಿ, ಡಿಸೈನ್ ಕಂಬಳಿ, ಮಿಕ್ಸ್ ಡಿಸೈನ್, ಮೆರಿನೋ ಊಲ ಟಾಪ್ ಕರಿ ಕಂಬಳಿ, ಆಸ್ಟ್ರೇಲಿಯಾ ಉಣ್ಣೆಯ ಬಿಳಿ ಕಂಬಳಿಗಳ ಜೊತೆಗೆ ಸಾಂಪ್ರದಾಯಿಕ ಕಂಬಳಿಗಳ ತಯಾರಿಕೆಗೆ ಪ್ರಾಮುಖ್ಯತೆಯನ್ನು ನೀಡಿದೆ. ಅದರೊಂದಿಗೆ ನೇಕಾರರಿಗೆ ಕಚ್ಚಾ ಉಣ್ಣೆಯ ಸಾಮಗ್ರಿಗಳನ್ನು(ರೆಡಿಮೇಡ್) ಒದಗಿಸುವ ನೇಯ್ಗೆ ಮಗ್ಗಗಳನ್ನು ನಿರ್ಮಿಸಿಕೊಟ್ಟಿದೆ.

ನೇಕಾರರು ತಯಾರಿಸಿದ ಕಂಬಳಿಗಳನ್ನು ಖರೀಧಿಸುವ ಮುಖೇನ ಆರ್ಥಿಕ ಸ್ಥಿತಿಯನ್ನು ಉತ್ತಮವಾಗಿಸಿದೆ. ೧೦೦ಕ್ಕೂ ಅಧಿಕ ಮನೆಗಳ ನಿರ್ಮಾಣ, ಸಬ್ಸಿಡಿ ಸಾಲ, ಸೌಲಭ್ಯಗಳನ್ನು ಒದಗಿಸಿಕೊಳ್ಳದೆ ಸರ್ಕಾರದ ಸವಲತ್ತುಗಳನ್ನು ಪ್ರತಿಯೊಬ್ಬರಿಗೂ ತಲುಪಿಸಲು ಪ್ರಾಮಾಣಿಕ ಪ್ರಯತ್ನ ಮಾಡುತ್ತದೆ.

**ಚೌಳೂರು:** ಚಳ್ಳಕೆರೆ ತಾಲೂಕಿನ ಪರಶುರಾಮಪುರ ಹೋಬಳಿಯಲ್ಲಿ ಬರುವ ಗ್ರಾಮ. ೫೮೯ ಕುಟುಂಬಗಳನ್ನು ಹೊಂದಿದ್ದು. ೨೨೦ಕ್ಕೂ ಅಧಿಕ ಕುರುಬರ ಮನೆಗಳಿವೆ. ೧೯೮೯-೯೦ರಲ್ಲಿ ಪ್ರಾರಂಭವಾದ ಉಣ್ಣೆ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟದ ಸಹಕಾರ ಸಂಘ ನಿಯಮಿತ, ಸಂಘದ ಮೂಲಕವಾಗಿ ಪಾರಂಪರಿಕ ಕಂಬಳಿ ನೇಯ್ಗೆಯ ಜೊತೆಗೆ ಕಾಟನ್ ಬೈ ಉಲ್ಲನ್, ಅಂದರೆ ಗಂಜಿಯಿಲ್ಲದೆ ನೇಯುವ ಯಂತ್ರಗಳು ಬಂದಿವೆ. ಯಂತ್ರಗಳಿಂದ ನೇಯುವುದನ್ನು ಕಲಿಸಲು ಸಂಘದವರು 'ಹ್ಯಾಂಡ್ ಲೂಮ್ ತರಬೇತಿ' ಶಿಕ್ಷಕರಾದ ಲಿಂಗರಾಜು ಅವರಿಂದ ಸಮುದಾಯದ ೧೮ರಿಂದ ೩೫ ವರ್ಷಗಳೊಳಗಿನ ಎಲ್ಲರಿಗೂ ಎರಡು ತಿಂಗಳ ತರಬೇತಿ ಕೊಡಿಸುವರು. ಅದರಿಂದಾಗಿ ಸ್ತ್ರೀಯರು ದಿನಕ್ಕೆ ೫೦೦ ರೂಪಾಯಿಗಳವರೆಗೆ ದುಡಿಯಲು ಅವಕಾಶವಾಗಿದೆ. ಒಂದು ಬ್ಯಾಚ್‌ಗೆ ೬೦ ಜನರಿಗೆ ತರಬೇತಿ ನೀಡಲಾಗುತ್ತದೆ.

ಪಾರಂಪರಿಕ ಕಂಬಳಿ ಉತ್ಪಾದನೆಯೊಂದಿಗೆ ಆಧುನಿಕ ಉತ್ಪನ್ನಗಳಾದ ಶಾಲು, ರಗ್ಗು, ಸ್ವೆಟರ್, ಮ್ಯಾಟ್‌ಗಳಂಥವನ್ನು ತಯಾರಿಸುತ್ತಾರೆ. ಉತ್ಪಾದನಾ ಸರಕುಗಳನ್ನು ಸಂಘವೇ ಖರೀಧಿಸುವುದರಿಂದ ಮಾರಾಟ ಮಾಡುವ ಗೊಂದಲವಿಲ್ಲವಾಗಿದೆ. ಈ ಸಂಘದಲ್ಲಿ ಜಾಜೂರು, ಪರಶುರಾಮಪುರ, ಸೂರನಹಳ್ಳಿ, ವಡೇರಹಳ್ಳಿ, ಟಿ.ಎನ್. ಕೋಟೆಗಳಲ್ಲಿ ಒಟ್ಟು ೮೦೦ ಷೇರುದಾರರಿದ್ದಾರೆ.

ನೇಕಾರರಿಗೆ ಸಬ್ಸಿಡಿ ಸಾಲಗಳನ್ನು ವಿದ್ಯಾರ್ಥಿಗಳಿಗೆ ಸ್ಕಾಲರ್‌ಶಿಪ್, ವರ್ಕ್ ಶೆಡ್‌ಗಳು ಸರ್ಕಾರದಿಂದ ಬರುವ ಎಲ್ಲ ಸವಲತ್ತುಗಳನ್ನು ತಲುಪಿಸುವ ಕಾರ್ಯ ಮಾಡುತ್ತಿದ್ದಾರೆ.

**ಓಬಳಾಪುರ:** ಅಧಿಕೃತವಾಗಿ ಉಣ್ಣೆ ಸಹಕಾರ ಸಂಘಗಳಿಗೆ ಅನುಮತಿ ದೊರೆಯುವ ಮೊದಲೇ ತಾಲೂಕಿನ ಗಡಿಗ್ರಾಮವಾದ ಓಬಳಾಪುರ(ಸಿರಿವಾಳ)ದಲ್ಲಿ ೧೯೪೩ರಲ್ಲಿಯೇ 'ಉಣ್ಣೆ ಕೈ ಮಗ್ಗ

ಉತ್ಪಾದಕರ ಸಂಘ' ಪ್ರಾರಂಭವಾಗಿದೆ. ಕಾಮಸಮುದ್ರ, ಬಸಾಪುರ, ಓಬಳಾಪುರಗಳನ್ನು ಒಳಗೊಂಡಂತೆ ೮೦೦ ಷೇರುದಾರರನ್ನು ಹೊಂದಿದೆ. ಉಳಿದವು ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಂಡಿವೆ.

ಕಂಬಳಿ ನೇಯುವ ನೇಕಾರರಿಗೆ ಕಚ್ಚಾ ಸಾಮಾಗ್ರಿಗಳನ್ನು ಒದಗಿಸುವುದು ಮತ್ತು ಮಾರಾಟ ವ್ಯವಸ್ಥೆ ಕಲ್ಪಿಸುತ್ತದೆ. ಈ ಸಂಘದಲ್ಲಿ ಷೇರುಗಳನ್ನು ಹೊಂದಿರುವ ಕಾಮಸಮುದ್ರದಲ್ಲಿ ಉಣ್ಣೆ ಕೈ ಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘವನ್ನು ಪ್ರಾರಂಭಿಸಲು ೨೦೦೩-೦೪ರಲ್ಲಿ ಪ್ರಯತ್ನಿಸಿದರು. ಸ್ಥಳೀಯರು ಆಸಕ್ತಿ ತೋರದ್ದರಿಂದ ಅದು ಸ್ಥಾಪನೆಯಾಗಿಲ್ಲ. ಪಾರಂಪರಿಕ ಕಂಬಳಿ ನೇಯ್ಗೆಯು ಮಾತ್ರ ನಡೆಯುತ್ತಿರುವುದು ಅಭಿವೃದ್ಧಿಯನ್ನು ಕುಂಠಿತಗೊಳಿಸಿದೆ.

**ಪಗಡಲ ಬಂಡೆ:** ಚಳ್ಳಕೆರೆ ತಾಲೂಕಿನ ಗಡಿಗ್ರಾಮ. ಪಗಡಲ ಎಂಬುದು ತೆಲುಗು ಮೂಲದ ಪಗಡ್ಲ ಅಂದರೆ ಹವಳ, ಮುತ್ತು ಎಂದರ್ಥ. ಈಗಿರುವ ಊರ ಪಕ್ಕದಲ್ಲಿನ ಬೆಟ್ಟದ ಮೇಲೆ ಹಳೆಯ ಊರು ಮತ್ತು ಅದರ ಸುತ್ತಲೂ ಕೋಟೆಯಿದೆ. ಅದು ಹಿಂದೆ ಮುತ್ತುಗಳ ವ್ಯಾಪಾರ ಕೇಂದ್ರವಾಗಿತ್ತು. ಪಗಡ್ಲ>ಪಗಡಲ ಎಂದು ಶಿಕ್ಷಕರಾದ ಮಲ್ಲಿಕಾರ್ಜುನ ಅವರು ಹೇಳುವರು. ಒಟ್ಟು ೭೦೬ ಕುಟುಂಬಗಳನ್ನು ಹೊಂದಿರುವ ಈ ಗ್ರಾಮದಲ್ಲಿ ಕುರುಬ ಸಮುದಾಯದ ೩೫೦ಕ್ಕೂ ಅಧಿಕ ಮನೆಗಳಿವೆ. ಮೊದಲು ಪ್ರಾರಂಭವಾಗಿದ್ದ ಉಣ್ಣೆ ಕೈಮಗ್ಗ ನೇಕಾರರ ಉತ್ಪಾದನಾ ಸಹಕಾರ ಸಂಘ, ಕೆಲ ವರ್ಷಗಳು ನಡೆದು ಮುಚ್ಚಿ ಹೋಯಿತು. ನಂತರ ೧೯೯೨ರಲ್ಲಿ ಪುನರ್‌ಸ್ಥಾಪಿಸಲಾಗಿದೆ. ಆಧುನಿಕ ನೇಕಾರಿಕೆಯ ತರಬೇತಿಯನ್ನು ಪ್ರತಿವರ್ಷ ಕೊಡಲಾಗುತ್ತದೆ. ನೇಕಾರರಿಗೆ ವರ್ಕ್‌ಶೆಡ್, ಸಬ್ಸಿಡಿಗಳು ಸರಕಾರದಿಂದ ದೊರಕಿಸುತ್ತಿದೆ.

**ಕೊಂಡ್ಲಹಳ್ಳಿ:** ಮೊಳಕಾಲ್ಮೂರು ತಾಲೂಕಿನ ಈ ಗ್ರಾಮದಲ್ಲಿ ೧೯೫೬ರಲ್ಲಿ ಉಣ್ಣೆ ಕೈಮಗ್ಗ ಉತ್ಪತ್ತಿ ಮತ್ತು ಮಾರಾಟ ಸಂಘ ಪ್ರಾರಂಭವಾಗಿದೆ. ಇಲ್ಲಿನ ೧೦೦ಕ್ಕೂ ಅಧಿಕ ಕುಟುಂಬಗಳು ಕಂಬಳಿ ನೇಯ್ಗೆಯನ್ನು ವೃತ್ತಿ ಮಾಡಿಕೊಂಡು ಜೀವಿಸುತ್ತಿವೆ. ಸುತ್ತಮುತ್ತಲ ಗ್ರಾಮಗಳನ್ನು ಒಳಗೊಂಡಂತೆ ಒಂದು ಸಾವಿರ ಷೇರುದಾರರಿದ್ದಾರೆ. ಟಿ. ತಿಮ್ಮಯ್ಯ, ಕೆಪಿಸಿಸಿ ಮಾಜಿ ಸದಸ್ಯರು ಅವರ ಅವಧಿಯಲ್ಲಿ ಅಭಿವೃದ್ಧಿ ಪಥದತ್ತ ಸಾಗಿತ್ತು. ಅದರ ಫಲವಾಗಿ ಇಂದು ಸಂಘವು ಉತ್ತಮವಾಗಿ ನಡೆಯುತ್ತಿದೆ. ಸಂಘವು ೨೦೦ಕ್ಕೂ ಅಧಿಕ ಮನೆಗಳನ್ನು ನೇಕಾರರಿಗೆ ನಿರ್ಮಿಸಿ ಕೊಟ್ಟಿದೆ. ೫೦ಕ್ಕೂ ಹೆಚ್ಚು ವರ್ಕ್ ಶೆಡ್ಡ್‌ಗಳನ್ನು ನಿರ್ಮಿಸಿದೆ. ಹೊಸದಾಗಿ ೧೩೫ ಸೈಟ್‌ಗಳನ್ನು ಕೊಡಿಸಲಾಗಿದೆ. ಉಣ್ಣೆ ಹಿಂಜುವ ಯಂತ್ರದಿಂದ ಸಂಘಕ್ಕೆ ಪ್ರತಿ ತಿಂಗಳು ೧೦ ಸಾವಿರ ರೂಪಾಯಿಗಳು ಬಾಡಿಗೆ ಬರುತ್ತದೆ.

**ಕಡೆಲುಡೇವು:** ಮೊಳಕಾಲ್ಮೂರು ತಾಲೂಕಿನಲ್ಲಿ ಕುರುಬ ಸಮುದಾಯವೇ ಅಧಿಕವಾಗಿರುವ ಈ ಗ್ರಾಮದಲ್ಲಿ ೨೫೦ಕ್ಕೂ ಹೆಚ್ಚು ಕುಟುಂಬಗಳವರು ಕಂಬಳಿ ನೇಯ್ಗೆಯನ್ನೇ ವೃತ್ತಿಯಾಗಿಸಿ

ಕೊಂಡಿದ್ದಾರೆ. ಇಲ್ಲಿನ ಸಂಘವು ೩೦ಕ್ಕೂ ಹೆಚ್ಚು ನೇಯ್ಗೆ ಶೆಡ್ಡ್‌ಗಳನ್ನು ಒಂದೆಡೆ ಸಾಲಾಗಿ ನಿರ್ಮಿಸಿದೆ. ಇವನ್ನು ಹೊರತುಪಡಿಸಿ ವೈಯಕ್ತಿಕವಾಗಿಯೂ ೨೦೦ಕ್ಕೂ ಹೆಚ್ಚು ಮಗ್ಗಗಳಿವೆ. ದಿನವೊಂದಕ್ಕೆ ೧೦೦ಕ್ಕೂ ಹೆಚ್ಚು ಕಂಬಳಿಗಳನ್ನು ತಯಾರಿಸುವ, ನೇಯುವ ಈ ಗ್ರಾಮದಲ್ಲಿ ನೇಕಾರರಿಗೆ ಸಿಗಬೇಕಾದ ಸರಕಾರಿ ಸವಲತ್ತುಗಳನ್ನು ದೊರಕಿಸುವಲ್ಲಿ ಸಂಘವು ಶ್ರಮಿಸಿದೆ, ಶ್ರಮಿಸುತ್ತಿದೆ.

**ನಾಗಸಮುದ್ರ:** ಮೊಳಕಾಲ್ಮೂರು ತಾಲೂಕಿನಲ್ಲಿನ ಈ ಗ್ರಾಮದಲ್ಲಿ ೧೯೯೪ರಲ್ಲಿ ಉಣ್ಣೆ, ಕೈ ಮಗ್ಗ, ನೇಕಾರರ ಸಹಕಾರ ಸಂಘ ಸ್ಥಾಪನೆಯಾಗಿದೆ. ಸಂಘಕ್ಕೆ ಸಂಬಂಧಿಸಿದಂತೆ ಒಂದೆಕರೆ ಭೂಮಿಯಿದೆ. ೨೦ಕ್ಕೂ ಶೆಡ್‌ಗಳನ್ನು ಕಟ್ಟಿಸಲಾಗಿದೆ. ಸಂಘದಿಂದ ೫೦ಕ್ಕೂ ಹೆಚ್ಚು ಮನೆಗಳನ್ನು ಕಟ್ಟಲು ಸಬ್ಸಿಡಿ, ಲೋನ್‌ಗಳು ದೊರೆತಿವೆ. ಈ ಭಾಗದಲ್ಲಿ ಕಂಬಳಿ ನೇಯ್ಗೆಯು ಕಡಿಮೆಯಾಗುತ್ತಿದೆ.

ಇವಿಷ್ಟು ಸಹಕಾರ ಸಂಘಗಳ ಸಂಕ್ಷಿಪ್ತ ಪರಿಚಯ. ಎಲ್ಲಾ ಉಣ್ಣೆ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘಗಳ ಸಮುದಾಯಮುಖಿ ಕಾರ್ಯಗಳನ್ನು ಈ ಕೆಳಗಿನಂತೆ ಕ್ರೋಢಿಕರಿಸಬಹುದು.

* ಪ್ರತಿಯೊಂದು ಸಂಘಗಳಲ್ಲಿಯೂ ನಾಲ್ಕೈದು ಹಳ್ಳಿಗಳ ಸಮುದಾಯದ ಷೇರುದಾರರಿರುತ್ತಾರೆ. ಎಲ್ಲರಿಗೂ ಅದರಲ್ಲಿನ ಲಾಭದ ಅಂಶ ಸಲ್ಲುತ್ತದೆ. ಸಂಘಗಳಲ್ಲಿ ೫೦೦ರಿಂದ ೧೦೦೦ದ ವರೆಗೆ ಷೇರುದಾರರಿರುತ್ತಾರೆ.
* ನೇಕಾರರಿಗೆ ನೇಯ್ಗೆಗೆ ಬೇಕಾದ ಕಚ್ಚಾ ವಸ್ತುಗಳನ್ನು ಒದಗಿಸುವ ಜೊತೆಗೆ ಮಾರಾಟ ವ್ಯವಸ್ಥೆ ಕಲ್ಪಿಸುವುದು.
* ಕಂಬಳಿ ನೇಕಾರರಿಗೆ ವರ್ಕ್ ಶೆಡ್‌ಗಳನ್ನು ನಿರ್ಮಿಸಿಕೊಡುವುದು.
* ಕಂಬಳಿಗಳು ಕೊಳ್ಳುವವರ ಬೇಡಿಕೆಗಳಿಗನುಗುಣವಾಗಿ ಗುಣಮಟ್ಟ, ಬಣ್ಣ, ಆಕಾರಗಳಲ್ಲಿ ದೊರಕಿಸುವುದು.
* ಈ ಸಂಘಕ್ಕೆ ಕೇಂದ್ರ ಸರಕಾರದ ಖಾದಿ ಆಯೋಗ ೨೦% ರಿಯಾಯಿತಿ ರಾಜ್ಯ ಸರಕಾರದ ಖಾದಿ ಬೋರ್ಡ್ ೧೫% ರಿಯಾಯಿತಿ ಕೊಡುತ್ತದೆ.
* ಜವಳಿ ಇಲಾಖೆಯ ವತಿಯಿಂದ ಸಂಘವು ನೇಕಾರರ ಮಕ್ಕಳಿಗೆ ಪ್ರತಿವರ್ಷ ಶಿಷ್ಯವೇತನ ನೀಡುವುದು.
* ಸರಕಾರದ ಆಶ್ರಯ ಯೋಜನೆಯಡಿಯಲ್ಲಿ ನೇಕಾರರಿಗೆ ಆಶ್ರಯ ಮನೆಗಳ ಸೌಲಭ್ಯ ಕಲ್ಪಿಸಿಕೊಡುವುದು.

ಮುಂತಾದ ಅಂಶಗಳನ್ನು ಹೆಸರಿಸಬಹುದು.

ಈ ಎಲ್ಲ ಸಹಕಾರ ಸಂಘಗಳಲ್ಲಿ ಒಬ್ಬ ಅಧ್ಯಕ್ಷರು, ಕಾರ್ಯದರ್ಶಿ, ಏಳರಿಂದ ಹತ್ತರವರೆಗೆ ನಿರ್ದೇಶಕರಿರುತ್ತಾರೆ. ವಹಿವಾಟು ಹೆಚ್ಚಾಗಿರುವಲ್ಲಿ ಒಬ್ಬ ಗುಮಾಸ್ತನನ್ನು ನೇಮಿಸಿಕೊಳ್ಳುತ್ತಾರೆ.

ಇಲ್ಲಿ ತಯಾರಾದ ಉತ್ಪನ್ನಗಳೆಲ್ಲವೂ ಪ್ರತಿ ಭಾನುವಾರ ನಡೆಯುವ ಚಳ್ಳಕೆರೆ ಕಂಬಳಿ ಸಂತೆಗೆ ಬರುತ್ತವೆ. ಬೆಳಿಗ್ಗೆ ೭ ಗಂಟೆಯಿಂದ ಮಧ್ಯಾಹ್ನ ೩ ಗಂಟೆಯವರೆಗೆ ಕಂಬಳಿ ವ್ಯವಹಾರ ವಹಿವಾಟು ನಡೆಯುತ್ತದೆ. ಪ್ರತಿವಾರವು ೪೦ರಿಂದ ೫೦ ಲಕ್ಷಗಳವರೆಗೆ ವಹಿವಾಟು ನಡೆಯುವುದು. ಇಲ್ಲಿನ ಕಂಬಳಿಗಳಿಗೆ ಗೋವಾ, ಮಡಿಕೇರಿ, ಮಲೆನಾಡು ಹಾಗೂ ಕೇರಳ ಎಸ್ಟೇಟ್‌ಗಳಲ್ಲಿ ಭಾರಿ ಬೇಡಿಕೆಯಿದೆ. ಹಾಗೆಯೇ ಆಂಧ್ರಪ್ರದೇಶ, ಮಹಾರಾಷ್ಟ್ರ, ಹಿಮಾಚಲ ಪ್ರದೇಶ, ಕಾಶ್ಮೀರ, ಅಂಡಮಾನ್–ನಿಕೋಬರ್‌ಗಳಿಂದ ಕಂಬಳಿ ಖರೀದಿಸಲು ವ್ಯಾಪಾರಸ್ಥರು ಬರುತ್ತಾರೆ.

ಕರ್ನಾಟಕದ ಗಡಿ ಪರಿಸರದಲ್ಲಿನ ಚಳ್ಳಕೆರೆ, ಮೊಳಕಾಲ್ಮೂರು ಮತ್ತು ಪಾವಗಡ ತಾಲೂಕುಗಳ ಕೆಲವೇ ಗ್ರಾಮಗಳಲ್ಲಿ ಕಂಬಳಿ ನೇಯ್ಗೆಯು ತಕ್ಕಮಟ್ಟಿಗೆ ಪ್ರಗತಿಯಲ್ಲಿದೆ. ಅವನ್ನು ಹೊರತು ಪಡಿಸಿದರೆ ಬಳ್ಳಾರಿ ಜಿಲ್ಲೆಯಲ್ಲಿ ಎಲ್ಲಿಯೂ ಕಂಬಳಿ ನೇಕಾರಿಕೆ ಇಲ್ಲವೆ ಇಲ್ಲ. ಆಂಧ್ರಪ್ರದೇಶದ ಗಡಿ ಪರಿಸರವನ್ನು ಸಮೀಕ್ಷೆ ಮಾಡಿದಾಗ ತಿಳಿಯುವ ಸಂಗತಿಯೆಂದರೆ ಇಂದು ವೈಯಕ್ತಿಕವಾಗಿ ಕಂಬಳಿ ನೇಯ್ಗೆ ಮಾಡುವ ಹಳ್ಳಿಗಳು ಇವೆ. ಆಂಧ್ರಪ್ರದೇಶದ ಕೈಮಗ್ಗ ನೇಕಾರರ ಸಂಘವು ಕೈಮಗ್ಗ ಇಲಾಖೆ ಮತ್ತು ಸರಕಾರದ ಜವಳಿ ನಿಯಂತ್ರಣದಲ್ಲಿದೆ. ಆಂಧ್ರಪ್ರದೇಶ ಸಹಕಾರಿ ಸೊಸೈಟಿಗಳ ಕಾಯ್ದೆಯಡಿ ೧೯೭೬ರಲ್ಲಿ ನಂಬರ್ ಪಿಡಬ್ಲ್ಯೂ ೪೪ರ ಅಡಿಯಲ್ಲಿ ನೋಂದಣಿಗೊಂಡಿವೆ. ಈ ಕೈ ಮಗ್ಗವು ಖಾದಿ, ರೇಷ್ಮೆ ಮತ್ತು ಹತ್ತಿ ಬಟ್ಟೆಗಳನ್ನು ತಯಾರಿಸಿ, ಮಾರಾಟ ಮಾಡುವತ್ತ ಮಾತ್ರ ಗಮನ ಹರಿಸಿದೆ. ಕಂಬಳಿ ನೇಯ್ಗೆಯನ್ನು ನೇಕಾರಿಕೆಯಿಂದ ಹೊರವಿಟ್ಟಿದೆ. ಹಾಗಾಗಿ ಸಮುದಾಯವೆಂದು ಪರ್ಯಾಯ ವೃತ್ತಿಗಳತ್ತ ಸಾಗುತ್ತಿದೆ.

**ಗುಮ್ಮಗಟ್ಟ:** ಅನಂತಪುರಂ ಜಿಲ್ಲೆಯ ಮಂಡಲಗಳಲ್ಲಿ ಒಂದಾದ ಗುಮ್ಮಗಟ್ಟವು ವೇದಾವತಿ ನದಿ ದಂಡೆಯಲ್ಲಿದೆ. ಅಧಿಕೃತವಾಗಿ ಆಂಧ್ರಪ್ರದೇಶದಲ್ಲಿ ಕೈಮಗ್ಗ ನೇಕಾರರ ಸಹಕಾರ ಸಂಘ ನೋಂದಣಿಯಾಗುವ ಪೂರ್ವದಲ್ಲಿಯೇ ಅಂದರೆ ೧೮ ಫೆಬ್ರವರಿ ೧೯೬೩ರಲ್ಲಿಯೇ 'ಗುಮ್ಮಗಟ್ಟ ರೇವಣಸಿದ್ಧೇಶ್ವರ ಉಣ್ಣೆ ಸಂಗ್ರಹಣೆ, ಉತ್ಪತ್ತಿ, ಮತ್ತು ಮಾರಾಟ ಸಹಕಾರ ಸಂಘ ನಿಯಮಿತ (The gummagatta Revana siddeswara wool Industrial co-op production and sale society Ltd)ಪ್ರಾರಂಭವಾಯಿತು. ಷೇರುದಾರರಾಗಲು ಪ್ರತಿಯೊಬ್ಬರೂ ಹತ್ತು ರೂಪಾಯಿಗಳನ್ನು ಹಾಕಿಕೊಂಡರು. ಸಂಘದ ಮೊದಲ ಅಧ್ಯಕ್ಷರಾಗಿ ಕೆ.ಬಿ. ಕರೇಗೌಡ ಅವರು, ಕಾರ್ಯದರ್ಶಿಯಾಗಿ ಕೆ.ಎಂ. ಕೊನೇರಪ್ಪ, ನಿರ್ದೇಶಕರಾಗಿ ಕೆ.ಬಿ. ಚನ್ನಮಲ್ಲಪ್ಪ(ಮಾಜಿ ಶಾಸಕರು) ಬಿ. ಲಿಂಗಪ್ಪ, ಎಂ. ತಿಪ್ಪಯ್ಯ, ವಿ.ಸಿ. ತಿಪ್ಪಯ್ಯ, ಕೆ. ಹನುಮಂತಪ್ಪ ಅವರಿದ್ದರು. ಆ ಸಂದರ್ಭದಲ್ಲಿ ಅನಂತಪುರ ಜಿಲ್ಲೆಯಲ್ಲಿಯೇ ಉಣ್ಣೆ ಕೈಮಗ್ಗ ನೇಕಾರಿಕೆಯ ೧೬ ಸಂಘಗಳು ಇದ್ದವು. ೧೯೭೬ರಲ್ಲಿ ಕೈಮಗ್ಗ ನೇಕಾರರ ಸಂಘವನ್ನು ಪ್ರಾರಂಭಿಸಿದ ನಂತರದಲ್ಲಿ ಸರಕಾರಗಳು ಕೈಮಗ್ಗ ನೇಕಾರಿಕೆ ಅದರಲ್ಲಿಯೂ

ಖಾದಿ, ರೇಷ್ಮೆ ಮತ್ತು ಹತ್ತಿ ಕೈಮಗ್ಗಗಳನ್ನು ಮಾತ್ರ ಪ್ರೋತ್ಸಾಹಿಸುತ್ತಾ, ಉಣ್ಣೆ ಕೈಮಗ್ಗಗಳನ್ನು ನಿರ್ಲಕ್ಷಿಸುತ್ತ ಬಂದವು. ಪರಿಣಾಮವಾಗಿ ಇಪ್ಪತ್ತು ವರ್ಷಗಳಿಂದ ಒಂದೊಂದು ಸಂಘ ಕಾರ್ಯ ಸ್ಥಗಿತಗೊಳಿಸುತ್ತ ಬಂದು ಇಂದು ಎಲ್ಲವೂ ಸಂಪೂರ್ಣವಾಗಿ ನಿಂತು ಹೋಗಿವೆ. ಕೈಮಗ್ಗದ ಅನುದಾನ ಕೇಳಲು ಹೋದರೇ ನೀವು ನೇಕಾರರೇ ಅಲ್ಲವೆಂದು ಹೇಳುವ ಪರಿಸ್ಥಿತಿಯಿಂದು ನಿರ್ಮಾಣವಾಗಿದೆ.

ಆರಂಭದ ಹಂತದಲ್ಲಿ ಈ ಸಂಘಗಳು ಸಮುದಾಯದ ಸಹಭಾಗಿತ್ವ ಮತ್ತು ಸರಕಾರಿ ಸೌಲಭ್ಯಗಳನ್ನು ಬಳಸಿಕೊಂಡು ಉತ್ತಮವಾಗಿ ನಡೆಯುತ್ತಿದ್ದವು. ಜೊತೆಗೆ ಗುಣಮಟ್ಟದ ಉತ್ಪನ್ನಗಳನ್ನು ತಯಾರಿಸಿ ಮಾರಾಟ ಮಾಡುತ್ತಿದ್ದವು. ಪೆನುಗೊಂಡ ಶಾಸಕರಾದ ಬಿ.ಕೆ. ಪಾರ್ಥಸಾರಥಿ ಅವರು ಗುಮ್ಮಗಟ್ಟದ ಸಂಘಕ್ಕೆ 'ಭಾರತೀಯ ಸೈನ್ಯಕ್ಕೆ ಸ್ವೆಟರ್, ಬ್ಲಾಕ್ ಕಿಟ್ಸ್, ರಗ್ಗುಗಳಂಥ ಪರಿಕರಗಳನ್ನು ತಯಾರಿಸಿಕೊಡುವ ಟೆಂಡರ್ ಕೊಡಿಸಿದ್ದರು. ಅದಕ್ಕಾಗಿ ಸಂಘವು ಪರಿಣಿತರಿಂದ ಯಂತ್ರಗಳನ್ನು ಬಳಸಿ ನೇಯುವ ತರಬೇತಿಯನ್ನು ೨೦ಕ್ಕೂ ಹೆಚ್ಚು ಜನರಿಗೆ ನೀಡಿತ್ತು. ಹಲವು ವರ್ಷಗಳವರೆಗೆ ಗುಣಮಟ್ಟದ ಉಣ್ಣೆಯ ಮೃದು ಉತ್ಪನ್ನಗಳನ್ನು ಕಳುಹಿಸುತ್ತಿತ್ತು. ಆದರೆ ಆಂಧ್ರಪ್ರದೇಶ ಸರಕಾರದ ದಿವ್ಯ ನಿರ್ಲಕ್ಷ್ಯ ಧೋರಣೆಯಿಂದ ಆ ಟೆಂಡರ್ ಮುಂದಿನ ಅವಧಿಗೆ ಚಳ್ಳಕೆರೆಯ ಗೊರ್ಲಕಟ್ಟೆ ಸಂಘದ ಪಾಲಾಯಿತು. ಅದರ ಜೊತೆಗೆ ಉಣ್ಣೆಯನ್ನು ಕತ್ತರಿಸುವ ಕಸುಬುದಾರರ ಸಂಖ್ಯೆ ಕಡಿಮೆಯಾಯಿತು. ಪಾರಂಪರಿಕ ವೃತ್ತಿಯ ಮೇಲೆ ಆಧುನಿಕ ವಸ್ತುಗಳ ದಾಳಿಯು ಅವಸಾನದ ಅಂಚಿಗೆ ತಳ್ಳಿತು.

ಗಡಿ ಗ್ರಾಮಗಳಾದ ಪೋಲೆಪಲ್ಲಿ, ವೇಪಲಪರ್ತಿ, ಗುಂಡಿಗೇನಪಲ್ಲಿ, ನಾಗಿರೆಡ್ಡಿಪಲ್ಲಿ, ಬೈರವನ ತಿಪ್ಪ, ಕಪಟನಿಂಗಂಪಲ್ಲಿ, ತಿಪ್ಪನಪಲ್ಲಿಯಂತಹ ಕೆಲ ಗ್ರಾಮಗಳಲ್ಲಿ ಇಂದಿಗೂ ಪಾರಂಪರಿಕ ಕಂಬಳಿ ನೇಕಾರರಿದ್ದಾರೆ. ಅವರು ನೇಯ್ಗೆಗೆ ಬೇಕಾದ ಕಚ್ಚಾ ಸಾಮಾಗ್ರಿಗಳನ್ನು ಖರೀದಿಸಲು ಚಳ್ಳಕೆರೆ ಸಹಕಾರ ಸಂಘಕ್ಕೆ ಬರಬೇಕಾಗಿದೆ. ಅದಕ್ಕಾಗಿಯೇ ಕೆಲ ಕಂಬಳಿ ವ್ಯಾಪಾರಿಗಳು ಚಳ್ಳಕೆರೆ ಮಾರ್ಕೇಟನಿಂದ ಕಚ್ಚಾ ಸಾಮಾಗ್ರಿಗಳನ್ನು ತೆಗೆದುಕೊಂಡು ಹೋಗಿ ನೇಕಾರರಿಗೆ ಕೊಡುತ್ತಾರೆ. ನಂತರ ತಯಾರಾದ ಕಂಬಳಿಗಳನ್ನು ಅತೀ ಕಡಿಮೆ ಬೆಲೆಗೆ ಖರೀದಿಸುತ್ತಾರೆ. ಕಚ್ಚಾ ಸಾಮಗ್ರಿಗಳನ್ನು ವ್ಯಾಪಾರಿಗಳೇ ತಂದುಕೊಡುವರೆಂಬ ಕಾರಣಕ್ಕಾಗಿ ನೇಕಾರರು ಅತೀ ಕಡಿಮೆ ಲಾಭಕ್ಕೆ ಮಾರಾಟ ಮಾಡುತ್ತಾರೆ. ಒಟ್ಟಾರೆಯಾಗಿ ಅಧ್ಯಯನಕ್ಕೆ ಆಯ್ದುಕೊಂಡ ಕರ್ನಾಟಕ ಆಂಧ್ರಪ್ರದೇಶದ ಗಡಿನಾಡ ಪರಿಸರದಲ್ಲಿ ಇಂದು ಕಂಬಳಿ ಉದ್ದಿಮೆಯು ಕುಂಠಿತವಾಗುತ್ತಿದೆ. ಅದಕ್ಕೆ ಕಾರಣಗಳನ್ನು ಹೇಳುವುದಾದರೆ,

* ಕಂಬಳಿ ನೇಯ್ಗೆಯ ಖರ್ಚು ಕಡಿಮೆಯಾದರೂ, ಕಂಬಳಿ ಮಾಡಲು ಶ್ರಮ ಅಧಿಕವಾಗಿರುತ್ತದೆ. ಅಂದರೆ ಮನೆಯ ನಾಲ್ಕೈದು ಸದಸ್ಯರು ಸೇರಿ ದುಡಿದರೆ ದಿನಕ್ಕೊಂದು ಕಂಬಳಿ ತಯಾರಿಸಲು

ಸಾಧ್ಯ. ಅದರ ಬೆಲೆಯು ೪೦೦-೫೦೦ ರೂಪಾಯಿಗಳಷ್ಟು ಮಾತ್ರ. ಅದೇ ಬೇರೆ ಉದ್ಯೋಗಕ್ಕೆ ತೆರಳಿದರೆ ಒಬ್ಬರಿಗೆ ೨೦೦ ರೂಪಾಯಿಗಳಂತೆ ಆದರೂ, ದಿನಕ್ಕೆ ೮೦೦ರಿಂದ ೧೦೦೦ ರೂಪಾಯಿಗಳನ್ನು ದುಡಿಯಬಹುದು.

* ಕುರಿಗಳಿಂದ ನೇರವಾಗಿ ತುಪ್ಪಳ ಕತ್ತರಿಸಿ ತರುವ ಕಸುಬುದಾರರು ಕಡಿಮೆಯಾಗಿರುವರು. ಹಾಗಾಗಿ ನೇಯ್ಗೆಗೆ ಬೇಕಾದ ಕಚ್ಚಾ ಸಾಮಗ್ರಿಗಳನ್ನು ಮಾರ್ಕೆಟ್‌ನಿಂದಲೇ ಖರೀದಿಸಿ ತರಬೇಕು. ಆದರೆ ಮಾರುಕಟ್ಟೆಯಲ್ಲಿ ಖರೀದಿದಾರರು ಕಂಬಳಿ ಬೆಲೆಯನ್ನು ನಿಗದಿಪಡಿಸಿ, ಅತೀ ಕಡಿಮೆ ಬೆಲೆಗೆ ಕೊಳ್ಳುವುದರಿಂದ ನೇಕಾರರಿಗೆ ಲಾಭದ ಅಂಶ ದೊರೆಯುವುದು ಕಡಿಮೆ.
* ಕಂಬಳಿ ನೇಯುವ ಕುಟುಂಬಗಳಿಗೆ ಕೈಮಗ್ಗ ಮತ್ತು ಜವಳಿ ಇಲಾಖೆ ನೇಕಾರ ಕಲ್ಯಾಣ ಯೋಜನೆಯ ಅಡಿಯಲ್ಲಿ ನೇಕಾರರ ಮಕ್ಕಳಿಗೆ ವಿದ್ಯಾರ್ಥಿ ವೇತನ, ನೇಯ್ಗೆ ಮಗ್ಗಗಳನ್ನು ನಿರ್ಮಿಸುವುದು, ರಾಜೀವಗಾಂಧಿ ವಸತಿ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣ ಮಾಡುತ್ತಿದೆ. ಆದರೆ ಈ ಸೌಲಭ್ಯಗಳನ್ನು ಪಡೆಯಲು ಹರಸಾಹಸ ಮಾಡಬೇಕಾಗುತ್ತದೆ. ಕಟ್ಟಕಡೆಯ ನೇಕಾರನಿಗೂ ಇದನ್ನು ತಲುಪಿಸುವ ಕೆಲಸವಾಗುತ್ತಿಲ್ಲ.
* ಇಂದಿನ ಫ್ಯಾಷನ್ ಜಗತ್ತಿನಲ್ಲಿ ಗ್ರಾಹಕರು ಪಾರಂಪರಿಕ ವಸ್ತುಗಳನ್ನು ಕೊಳ್ಳಲು ಮುಂದೆ ಬರುತ್ತಿಲ್ಲ. ಮುಂತಾದ ಅಂಶಗಳು ಗೋಚರಿಸುತ್ತವೆ.

ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘಗಳಂತೆಯೇ ಮಹಿಳಾ ಸ್ವ-ಸಹಾಯ ಗುಂಪುಗಳು ಈ ಪರಿಸರದಲ್ಲಿನ ಪ್ರತಿ ಗ್ರಾಮಗಳಲ್ಲಿಯೂ ಕಂಡುಬರುತ್ತವೆ. ಸಣ್ಣ ಉಳಿತಾಯ ಮಾಡುವ ಮುಖೇನ ಸಮುದಾಯದ ಆರ್ಥಿಕತೆಯನ್ನು ಸುಧಾರಿಸಲು ಕೊಂಚಮಟ್ಟಿಗೆ ಪ್ರಯತ್ನಿಸುತ್ತಿವೆ. ಉದಾಹರಣೆಗೆ ಶ್ರೀ ಮಂಜುನಾಥೇಶ್ವರ ಮಹಿಳಾ ಸ್ವಸಹಾಯ ಸಂಘ, ಕಾವೇರಿ ಮಹಿಳಾ ಸ್ವ ಸಹಾಯ ಗುಂಪು, ನೇತ್ರಾವತಿ ಮಹಿಳಾ ಸ್ವ-ಸಹಾಯ ಸಂಘ, ಧನಲಕ್ಷ್ಮಿ ಮಹಿಳಾ ಸ್ವ ಸಹಾಯ ಗುಂಪು, ಜ್ಯೋತಿ ಮಹಿಳಾ ಸ್ವ-ಸಹಾಯ ಗುಂಪು, ತುಂಗಭದ್ರ ಮಹಿಳಾ ಸ್ವ-ಸಹಾಯ ಗುಂಪು, ಚೌಡೇಶ್ವರಿ ಮಹಿಳಾ ಸ್ವ-ಸಹಾಯ ಗುಂಪು, ಬನಶಂಕರಿ ಮಹಿಳಾ ಸ್ವ-ಸಹಾಯ ಸಹಕಾರಿ ಸಂಘ, ಹೊಸೂರಮ್ಮ ಮಹಿಳಾ ಸ್ವ-ಸಹಾಯ ಗುಂಪುಗಳೆಂದು ಅಂದರೇ ಕರ್ನಾಟಕದಲ್ಲಿ ಪ್ರಮುಖವಾದ ಸ್ತ್ರೀದೈವ, ನದಿ ಮತ್ತು ಗ್ರಾಮದೇವತೆಗಳ ಹೆಸರುಗಳನ್ನು ಇಡುತ್ತಾರೆ. ಈ ಸಂಘಗಳು ಜಿಲ್ಲಾ, ತಾಲೂಕು ರಾಜ್ಯ ಮಟ್ಟದಲ್ಲಿಯೂ ಇವೆ.

ಸಂಘವೊಂದರಲ್ಲಿ ೧೫-೨೦ರವರೆಗೆ ಸದಸ್ಯರಿರುತ್ತಾರೆ. ಸದಸ್ಯರಲ್ಲಿಯೇ ಒಬ್ಬರನ್ನು ಅಧ್ಯಕ್ಷ, ಕಾರ್ಯದರ್ಶಿ, ಖಜಾಂಚಿಯಾಗಿ ನೇಮಿಸಲಾಗಿರುತ್ತದೆ. ಕೆಲವು ವಾರದ, ಕೆಲವು ತಿಂಗಳ ಸಂಘಗಳಿರುತ್ತವೆ. ಪ್ರತಿವಾರವೂ ೧೦-೫೦ ರೂಪಾಯಿಗಳವರೆಗೆ ಪ್ರತಿ ಸದಸ್ಯರು ಉಳಿತಾಯ

ಮಾಡಬೇಕಾಗುತ್ತದೆ ಅವರಿಗೆ ಬ್ಯಾಂಕ್‌ಗಳಿಂದ ಸಬ್ಸಿಡಿ ಲೋನುಗಳು ದೊರೆಯುತ್ತವೆ. ಈ ಸಂಘಗಳು ಪ್ರತೀ ವಾರ ತಮ್ಮ ಸದಸ್ಯರಿಗಾಗಿಯೇ ಆಸ್ತಿಹಕ್ಕು, ಮಹಿಳಾ ಸಬಲೀಕರಣ, ಕಾನೂನು ಅರಿವುಗಳನ್ನು ಮೂಡಿಸುತ್ತವೆ. ಜೊತೆಗೆ ಗ್ರಾಮೀಣ ಜನರಿಗೆ ಪರಿಸರ, ಕೃಷಿ, ನೈರ್ಮಲ್ಯಗಳಂತವುಗಳ ಕುರಿತು ತಿಳಿಸುತ್ತವೆ. ಇದು ಆರ್ಥಿಕತೆಯ ಸಣ್ಣ ಘಟಕ ಮಾತ್ರ ಆಗಿರುವುದರಿಂದ ಇದರಿಂದಲೇ ಆರ್ಥಿಕವಾಗಿ ಸದೃಢವಾಗಲು ಸಾಧ್ಯವಾಗುವುದಿಲ್ಲ.

ಒಟ್ಟಾರೆಯಾಗಿ ಹೇಳುವುದಾದರೆ ಉಣ್ಣೆ ಕೈ ಮಗ್ಗ ನೇಕಾರರ ಸಂಘಗಳು ಸಕ್ರಿಯವಾಗಿರುವ ಕಡೆ ನೇಕಾರರಿಗೆ ಕೆಲ ಸೌಲಭ್ಯಗಳು ದೊರೆಯುತ್ತವೆ. ಉಳಿದಿರುವೆಡೆಯಲ್ಲಿ ಸವಲತ್ತುಗಳು ದೊರೆಯದೇ ಆರ್ಥಿಕವಾಗಿ ಹಿಂದುಳಿಯುವಂತೆ ಮಾಡಿವೆ. ಮಹಿಳಾ ಸ್ವ-ಸಹಾಯ ಗುಂಪುಗಳು ಅತೀ ಸಣ್ಣ ಉಳಿತಾಯ ಖಾತೆಗಳಾಗಿರುವುದು, ಇವುಗಳಿಂದಲೂ ಆರ್ಥಿಕವಾಗಿ ಅಭಿವೃದ್ಧಿಯಾಗುವುದು ಕಷ್ಟವೆಂದು ಪರ್ಯಾಯ ವೃತ್ತಿಗಳತ್ತ ಸಮುದಾಯ ವಾಲುತ್ತಿದೆ. ಹಾಗಾಗಿಯೇ ಇಂದು ದುಡಿಮೆಗಾಗಿ ಬೆಂಗಳೂರು, ಹೈದರಾಬಾದ್, ಮುಂಬೈ ನಗರಗಳತ್ತ ವಲಸೆ ಹೋಗುತ್ತಿರುವುದು ಪ್ರತಿ ಗ್ರಾಮಗಳಲ್ಲಿಯೂ ಕಂಡುಬರುವ ಸಾಮಾನ್ಯ ಸಂಗತಿಯಾಗಿದೆ.

**೩.೨.೩. ಕೃಷಿ:** ಗಡಿನಾಡಿನಲ್ಲಿ ನೆಲೆಸಿರುವ ಕುರುಬ ಸಮುದಾಯ ಕುರಿಸಾಕಣೆ ಮತ್ತು ಕಂಬಳಿ ನೇಯ್ಗೆ ಮಾಡಿಕೊಂಡು ಜೀವಿಸಿಕೊಂಡು ಬಂದಿದ್ದು, ಕಾಲಾಂತರದಲ್ಲಿ ಕೃಷಿಯತ್ತಲೂ ಸಾಗಿ ಬಂದಿದೆ. ಅದರಿಂದಾಗಿ ಹೆಚ್ಚು ಭೂ ಹಿಡುವಳಿ ಹೊಂದಿರುವ ಜಮೀನ್ದಾರರು ಈ ಭಾಗದಲ್ಲಿ ಕಾಣಸಿಗುವುದಿಲ್ಲ. ಅದರಲ್ಲಿಯೂ ಜಮೀನು ಇರುವವರು ಕಡಿಮೆ. ಇದ್ದರೂ ಸಣ್ಣ ಹಿಡುವಳಿ ಹೊಂದಿರುವ ಸಣ್ಣ ರೈತರು, ಅತೀ ಸಣ್ಣ ರೈತರು. ಇರುವುದು ಮಳೆಯಾಶ್ರಿತ ಬೆಳೆ ಬೆಳೆಯುವ ಫಲವತ್ತಲ್ಲದ ಭೂಮಿ. ಹಾಗಾಗಿ ವರ್ಷದ ಆರು ತಿಂಗಳು ವ್ಯವಸಾಯ ಮತ್ತೆ ಆರು ತಿಂಗಳು ಕಂಬಳಿ ನೇಕಾರಿಕೆಯಿಂದ ಬದುಕುತ್ತಿವೆ. ಆ ಜಮೀನುಗಳು ಜೌಗುಪ್ರದೇಶ ನೀರಾವರಿಗೆ ಸಮರ್ಪಕವಲ್ಲದ ಬಂಜರು ಭೂಮಿಯೋ, ಸಮತಟ್ಟಲ್ಲದ ದಿಣ್ಣೆಯೋ ಆಗಿದ್ದು, ಕೃಷಿಗೆ ಯೋಗ್ಯವಲ್ಲದ ಬಯಲು ಪ್ರದೇಶಗಳಾಗಿರುತ್ತವೆ.

ಅಧ್ಯಯನಕ್ಕೆ ಆಯ್ದುಕೊಂಡ ಬಳ್ಳಾರಿ, ಚಿತ್ರದುರ್ಗ, ಅನಂತಪುರಂ, ಕರ್ನೂಲು ಜಿಲ್ಲೆಗಳು ಅತೀ ಕಡಿಮೆ ಮಳೆ ಬೀಳುವ ಪ್ರದೇಶಗಳು. ಇರುವುದರಲ್ಲಿ ಸಿರುಗುಪ್ಪ ತಾಲೂಕು ಮಾತ್ರ ತುಂಗಭದ್ರ ನೀರನ್ನು ಉಪಯೋಗಿಸಿಕೊಂಡ ನೀರಾವರಿ ಪ್ರದೇಶ. ಉಳಿದೆಲ್ಲ ಪರಿಸರದಲ್ಲಿಯೂ ಮಳೆಯಾಶ್ರಿತ ಒಣಬೇಸಾಯವೇ ಅಧಿಕವಾಗಿದೆ.

ಮುಂಗಾರು, ಹಿಂಗಾರು ಮಳೆಗಳಿಗೆ ಈ ಪರಿಸರವೇ ಗಡಿ. ಅಂದರೆ ಎರಡು ಕಡೆಯಿಂದಲೂ ಬರುವ ಮಳೆ ಸುರಿಯುವ ಕಟ್ಟಕಡೆಯ ಪ್ರದೇಶಗಳಿವು. ಹಾಗಾಗಿ ಇಲ್ಲಿಯ ಬೇಸಾಯವು ಪಶ್ಚಿಮದಿಂದ

ಬರುವ ಮುಂಗಾರು ಮಳೆಗೆ ಬಿತ್ತನೆಯಾದರೆ. ಪೂರ್ವದಿಂದ ಬರುವ ಹಿಂಗಾರು ಮಳೆಗಳಿಗೆ ಕೊಯ್ಲಿಗೆ ಬರುತ್ತವೆ. ಮುಂಗಾರು ಕೈ ಕೊಟ್ಟರೂ ಬರ, ಹಿಂಗಾರು ಕೈಕೊಟ್ಟರು ಬರ. 'ಬೇಸಾಯವೆಂದರೆ ಮಳೆಯೊಡನೆ ಆಡುವ ಜೂಜಾಟ' ಎಂಬ ಮಾತು ಅಕ್ಷರಷಃ ಈ ಪರಿಸರಕ್ಕೆ ಅನ್ವಯಿಸುತ್ತದೆ. "ಕೃಷಿಯು ಮಾನವ ಮತ್ತು ಪ್ರಕೃತಿಯ ನಡುವಿನ ಹೊಂದಾಣಿಕೆಯ ವೃತ್ತಿಯಾಗಿದ್ದು, ಇಲ್ಲಿ ಬಹುಪಾಲು ಜನರು ತಮ್ಮ ಜೀವನೋಪಾಯಕ್ಕಾಗಿ ಕೃಷಿಯನ್ನೇ ಅವಲಂಬಿಸಿರುವುದರಿಂದ ಕೃಷಿ ಭಾರತದ ಆರ್ಥಿಕತೆಯ ಬೆನ್ನುಲುಬಾಗಿದೆ."[೨೫] ಭೂಮಿಯನ್ನು ಹದಗೊಳಿಸಿ ಉತ್ತಿ-ಬಿತ್ತಿ ಬೆವರು ಸುರಿಸಿ ಬೆಳೆದು ದೇಶಕ್ಕೆ ಅನ್ನದಾತನಾದರೂ, ಆತನ ಶ್ರಮಕ್ಕೆ ತಕ್ಕುದಾದ ಮತ್ತು ಬೆಳೆದ ಫಸಲಿಗೆ ನಿರ್ದಿಷ್ಟ ಬೆಲೆ ನಿಗದಿಯಾಗದಿರುವುದು ರೈತರ ಆರ್ಥಿಕತೆಯನ್ನು ಬಿಕ್ಕಟ್ಟಾಗಿಸಿದೆ.

**ಬಯಲು ಸೀಮೆ:**(ರಾಯಲಸೀಮಾ) ಇಲ್ಲಿ ಒಣಬೇಸಾಯವೇ ಹೆಚ್ಚಾಗಿದೆ. ಗಡಿನಾಡ ಪರಿಸರದಲ್ಲಿನ ೬೦ ಗ್ರಾಮಗಳನ್ನು ಬಳಸಿಕೊಂಡು ಕೃಷಿಯ ಕುರಿತ ಸಮೀಕ್ಷೆ ಮಾಡಿದಾಗ ದೊರೆತ ಮುಖ್ಯ ಸಂಗತಿಗಳೆಂದರೆ, ಈ ಗ್ರಾಮಗಳಲ್ಲಿ ಶೇಕಡಾ ೭೫ಕ್ಕಿಂತಲೂ ಹೆಚ್ಚು ಕೃಷಿ ಮಾಡುವ ಗ್ರಾಮಗಳೆಂದರೆ ಚಳ್ಳಕೆರೆಯ ಓಬಳಾಪುರ(ಸಿರಿವಾಳ), ಬಳ್ಳಾರಿಯ ಹಲಕುಂದಿ, ಹಂದಿಹಾಳ್, ಸಿರುಗುಪ್ಪ ತಾಲೂಕಿನ ಉತ್ತನೂರು, ಬಲಕುಂದಿ, ಶೆಟ್ಟೂರು ಮಂಡಲದ ಕೋನಾಪುರಂ, ಶೇಕಡಾ ೫೦ರಷ್ಟು ವ್ಯವಸಾಯ ಮಾಡುವ ಹಳ್ಳಿಗಳೆಂದರೆ ಕಾಮಸಮುದ್ರ, ಪಾತಪ್ಪನಗುಡಿ, ಓಬಯ್ಯನಹಟ್ಟಿ, ಗೌಡಗೆರೆ, ತುರುವನೂರು, ಚಾನಾಳು, ತಾಳೂರು, ಗೋಸ್ವಾಳ, ಬಲ್ಲೂರು, ನಾಗಿರೆಡ್ಡಿಪಲ್ಲಿ, ಮುದೆನೂರು, ಮುರುಡಿ, ಡಿ. ಹಿರೇಹಾಳ, ಓಬಳಾಪುರಂ, ಕನಕೂರು, ವಿಠಲಾಪುರ, ಗೂಳ್ಯಂ, ಅತೀ ಕಡಿಮೆ ವ್ಯವಸಾಯ ಮಾಡುವ ಗ್ರಾಮಗಳು ೩೫ಕ್ಕೂ ಮಿಗಿಲಾಗಿವೆ. ಪಗಡಲ ಬಂಡೆ, ಕಾಡುಸಿದ್ದಾಪುರ, ಕೋನಸಾಗರ, ಕಡೆಉಡೇವು, ನಾಗಸಮುದ್ರ, ಚೌಳೂರು, ಹಾಲಹರವಿ, ಚಿಂತಕುಂಟ, ಕದರಂಪಲ್ಲಿ, ಪೆದ್ದಹೋತೂರು, ಪೆದ್ದವುಲ್ತಿ, ವಡ್ರ ಹೊನ್ನೂರು, ರೇಖಲಕುಂಟ, ಗುಳ್ಯಂಪಾಳ್ಯಂ ಮುಂತಾದವು.

ಮುಖ್ಯವಾಗಿ ಗಮನಿಸಬೇಕಾದುದು ಎಂದರೆ ಕೃಷಿಯು ಹೆಚ್ಚಾಗಿರುವ ಗ್ರಾಮಗಳಲ್ಲಿ ಪಾರಂಪರಿಕ ವೃತ್ತಿಗಳಾದ ಕುರಿಸಾಕಣೆ, ಕಂಬಳಿ ನೇಯ್ಗೆಯು ಅವಸಾನದತ್ತ ಸಾಗಿದೆ. ಅದು ಹಾಗಿರಲಿ, ಕೃಷಿಯೆಂದರೆ ಮೊದಲೇ ಹೇಳಿರುವಂತೆ ಮಳೆಯಾಶ್ರಿತ ಒಣಬೇಸಾಯ ಪದ್ಧತಿ. ಜೊತೆಗೆ ಫಲವತ್ತಲ್ಲದ ಭೂಮಿ. ಮಳೆ ಬಂದರೆ ಬೆಳೆ, ಇಲ್ಲವೆಂದರೆ ಬರ ಕಟ್ಟಿಟ್ಟ ಬುತ್ತಿ. ಕೃಷಿ ಚಟುವಟಿಕೆಗಳು ಪಾರಂಪರಿಕ ವಿಧಾನದಲ್ಲಿಯೇ ನಡೆಯುವುದರಿಂದ ಲಾಭದ ಅಂಶ ಕಡಿಮೆಯೆಂದೇ ಹೇಳಬೇಕು. ಸಿರುಗುಪ್ಪ ತಾಲೂಕನ್ನು ಹೊರತುಪಡಿಸಿದರೆ ಉಳಿದೆಡೆ ಶಾಶ್ವತ ನೀರಾವರಿ ವ್ಯವಸ್ಥೆ ಇಲ್ಲ. ವೇದಾವತಿ ತುಂಬಿ ಹರಿದರೆ ಬೈರವನತಿಪ್ಪ(ಬಿ.ಟಿ. ಡ್ಯಾಂ) ತುಂಬುತ್ತದೆ. ಆಗ ಮಾತ್ರ ಬೈರವನತಿಪ್ಪ, ಪೋಲೆಪಲ್ಲಿ, ಗುಮ್ಮಗಟ್ಟ, ವೇಪಲಪರ್ತಿಗಳಂತಹ ಕೆಲ ಹಳ್ಳಿಗಳು ವರ್ಷಕ್ಕೆ ಎರಡು ಬಾರಿ ಭತ್ತ ಬೆಳೆಯುವರು. ಆದರೆ ೧೫-೨೦ ವರ್ಷಗಳಿಂದ ವೇದಾವತಿ ನೀರು ಬರದೇ ಬಿ.ಟಿ. ಡ್ಯಾಂ ತುಂಬದಿರುವುದು ಆ

ಭಾಗದಲ್ಲಿನ ರೈತರಿಗೆ ಸಂಕಷ್ಟವನ್ನುಂಟು ಮಾಡಿದೆ. ಇದಲ್ಲದೆ ಕಡದರಹಳ್ಳಿ, ಹರ್ತಿಕೋಟೆ, ನಾಗಸಮುದ್ರ, ವಿಠಲಾಪುರ, ನಾಯಕನಹಟ್ಟಿ ಬ್ರಹ್ಮ ಸಮುದ್ರಗಳಂಥ ಕೆಲ ಗ್ರಾಮಗಳಲ್ಲಿ ಕೆರೆಗಳಿವೆ. ಅವು ತುಂಬಿದರೇ ಸುತ್ತ-ಮುತ್ತಲ ಹಳ್ಳಿಗಳು ಆ ನೀರು ಬಳಸಿ ಭತ್ತ ಬೆಳೆಯುತ್ತಾರೆ. ಮಳೆ ಬೀಳದೇ ಕೆರೆಗಳು ತುಂಬಿ ದಶಕಗಳೇ ಕಳೆದಿವೆ. ಹಾಗಾಗಿ ಅತೀ ಕಡಿಮೆ ಮಳೆಯ ನಂಬಿಯೇ ಶೇಂಗಾ, ರಾಗಿ, ಜೋಳ, ನವಣೆ, ಸಜ್ಜೆಗಳನ್ನು ಬೆಳೆಯುವರು. ಅದರಲ್ಲಿ ಹೆಚ್ಚಾಗಿ ಶೇಂಗಾ(ಕಡ್ಲೆಕಾಯಿ)ವನ್ನು, ಅದರ ಮಧ್ಯೆ ಅಕ್ಕಡಿಕಾಳು(ಹುರುಳಿ, ಅಲಸಂದಿ, ಹೆಸರುಕಾಳು, ಹುಚ್ಚೆಳು, ತೊಗರಿ)ಗಳನ್ನು ಬೆಳೆಯುವರು.

**ಶೇಂಗಾ:** ಚಳ್ಳಕೆರೆ, ಮೊಳಕಾಲ್ಮೂರು, ರಾಯದುರ್ಗಂ, ಕಲ್ಯಾಣದುರ್ಗಂ ಪರಿಸರದಲ್ಲಿ ಬೆಳೆಯುವ ಪ್ರಮುಖ ಬೆಳೆ ಶೇಂಗಾ ಅಥವಾ ಕಡ್ಲೆಕಾಯಿ. ಪ್ರಾರಂಭದಲ್ಲಿ ಬರುವ ಮುಂಗಾರು ಮಳೆಗಳಿಂದ ಭೂಮಿಯನ್ನು ನೇಗಿಲು, ಕುಂಟೆಗಳಿಂದ ಹಸನು ಮಾಡಿಕೊಳ್ಳುವರು. ಜೂನ್ ಕೊನೆ ಇಲ್ಲವೇ ಜುಲೈ ಮೊದಲ ವಾರಗಳಲ್ಲಿ ಬಿತ್ತನೆ ಮಾಡುವರು. ಹದಿನೈದು-ಇಪ್ಪತ್ತು ಸಾಲುಗಳಿಗೆ ಒಂದರಂತೆ ಅಕ್ಕಡಿಕಾಳುಗಳನ್ನು ಬಿತ್ತುವರು. ಬಿತ್ತನೆಯಾದ ತಿಂಗಳಿಗೆ ಎಡೆ ಕುಂಟೆ ಹಾಕುವುದು, ಕಳೆ ತೆಗೆಯುವುದು ಮಾಡುವರು. ಈ ಬೆಳೆ ಮೂರುವರೆಯಿಂದ ನಾಲ್ಕು ತಿಂಗಳಿಗೆ ಕೊಯ್ಲಿಗೆ ಬರುತ್ತದೆ. ಶೇಂಗಾವನ್ನು ಕಿತ್ತು ಒಂದೆಡೆ ಬಣವೆ ಹಾಕಿ ಬಿಡಿಸುವರು. ಶೇಂಗಾದ ಹೊಟ್ಟು ಎತ್ತು, ದನಕುರಿಗಳಿಗೆ ಮೇವಾಗಿ ದೊರೆಯುತ್ತದೆ. ಬಿಡಿಸಿದ ಶೇಂಗಾವನ್ನು ಹಸನು ಮಾಡಿ ಗಟ್ಟಿ ಶೇಂಗವನ್ನು ಮುಂದಿನ ವರ್ಷದ ಬೀಜಕ್ಕಾಗಿ ತೆಗೆದಿಡುವರು. ಉಳಿದವನ್ನು ಚಳ್ಳಕೆರೆ, ಚಿತ್ರದುರ್ಗ ಮಾರುಕಟ್ಟೆಗೆ ಹಾಕುವರು. ಈ ಭಾಗದ ಎಲ್ಲ ಸಮುದಾಯಗಳು ಬೆಳೆಯುವ ವಾಣಿಜ್ಯ ಬೆಳೆಯಿದು. ಶೇಂಗಾದ ಜೊತೆಗೆ ಜೋಳ, ರಾಗಿಯನ್ನು ಬೆಳೆಯುತ್ತಾರೆ. ರಾಗಿಯೂ ಹೆಚ್ಚು ನೀರನ್ನು ಬಯಸುತ್ತದೆ. ಪರ್ಯಾಯವಾಗಿ ನವಣೆ, ಜೋಳ, ಮುಸುಕಿನ ಜೋಳಗಳನ್ನು ಬೆಳೆಯುವರು.

**ನೀರಾವರಿ:** ಈ ಪರಿಸರದಲ್ಲಿ ನೀರಾವರಿಗೆ ಆಧಾರವಾಗಿರುವುದು ರಂಗಯ್ಯನದುರ್ಗ, ವೇದಾವತಿ ನದಿಯ ಟಿ.ಬಿ. ಡ್ಯಾಂ ಜಲಾಶಯ ಮತ್ತು ಕೆರೆಗಳು. ಸಮೃದ್ಧ ಮಳೆ ಬಂದು ಕೆರೆಕಟ್ಟೆಗಳು ತುಂಬಿದರೆ ನೀರಾವರಿ. ಆಗ ಹೆಚ್ಚಾಗಿ ಬೆಳೆಯುವ ಬೆಳೆ ಭತ್ತ. ಜೊತೆಗೆ ಬೋರ್‌ವೆಲ್‌ಗಳನ್ನು ಕೊರೆಯಿಸಿ ನೀರಾವರಿ ವ್ಯವಸ್ಥೆ ಮಾಡಿಕೊಂಡಿದ್ದಾರೆ. ಈ ಭಾಗದಲ್ಲಿ ೩೦೦ರಿಂದ ೫೦೦ ಅಡಿ ಆಳ ಭೂಮಿಯನ್ನು ಕೊರೆಯಿಸಿದರೆ ನೀರು ದೊರೆಯುತ್ತದೆ. ಈ ನೀರಾವರಿಯಿಂದ ಅಡಿಕೆ, ದಾಳಿಂಬೆ, ಸಪೋಟ, ಮಾವುಗಳಂಥ ದೀರ್ಘಕಾಲೀನ ಬೆಳೆಗಳನ್ನು ಬೆಳೆಯುವುದಿಲ್ಲ. ಏಕೆಂದರೆ ಇಲ್ಲಿನ ಅಂತರ್ಜಲ ಕಡಿಮೆಯಾಗಿರುವುದರಿಂದ ಬೋರ್‌ವೆಲ್‌ಗಳು ಯಾವಾಗ ನೀರು ಬರದೇ ನಿಂತು ಹೋಗುತ್ತವೋ ಗೊತ್ತಾಗುವುದಿಲ್ಲ. ಉದಾಹರಣೆಗೆ ನಾಯಕನಹಟ್ಟಿ, ಸುತ್ತ-ಮುತ್ತಲೂ

ಗ್ರಾಮಗಳ ಸಾವಿರಾರು ಎಕರೆ ಅಡಿಕೆ ತೋಟಗಳು ಇಂದು ಅಂತರ್ಜಲವಿಲ್ಲದೆ ಒಣಗಿ ಹೋಗಿವೆ. ಭಾರತದ ಪ್ರತಿಯೊಂದು ಪರಿಸರದಲ್ಲಿ ಪ್ರತಿಕೂಲ ಪರಿಸ್ಥಿತಿಯ ನಡುವೆ ಕೃಷಿ ನಡೆಯುತ್ತದೆ. ಆದುದರಿಂದ ಕೃಷಿ ಬಿಕ್ಕಟ್ಟಿನಲ್ಲಿದೆ. ಕುರುಬರ ಕೃಷಿ ಸಮಸ್ಯೆಗಳನ್ನು ಈ ಕೆಳಗಿನಂತೆ ಕ್ರೋಢಿಕರಿಸಲಾಗಿದೆ.

* ಸಣ್ಣ ಇಡುವಳಿದಾರರಾದ ಕುರುಬರಿಗೆ ಬ್ಯಾಂಕ್‌ಗಳಿಂದ ಕೃಷಿ ಸಾಲ ಸೌಲಭ್ಯಗಳು ದೊರೆಯುವುದಿಲ್ಲ. ಏಕೆಂದರೆ ಅವರ ಭೂಮಿಗಳು ಮಳೆಯಾಶ್ರಿತ ಒಣಬೇಸಾಯಕ್ಕೆ ಮಾತ್ರ ಉಪಯೋಗಕ್ಕೆ ಬರುವುದರಿಂದ ಬ್ಯಾಂಕ್‌ಗಳಂತಹ ಹಣಕಾಸಿನ ಸಂಸ್ಥೆಗಳು ಸಾಲಸೌಲಭ್ಯ ನೀಡಲು ಹಿಂದೇಟು ಹಾಕುತ್ತವೆ. ಒಂದು ವೇಳೆ ಕೊಟ್ಟರೂ ಕಡಿಮೆ ಪ್ರಮಾಣದಲ್ಲಿರುತ್ತದೆ. ಇದರಿಂದಲೇ ಕೃಷಿಯ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸಾಧ್ಯವಿಲ್ಲ. ಹಾಗಾಗಿ ಮಧ್ಯವರ್ತಿ ವ್ಯಾಪಾರಿಗಳಿಂದ ಬೆಳೆಗಾಗಿ ಮುಂಗಡವಾಗಿ ಹಣ ಪಡೆಯುವರು. ಬೆಳೆ ಬಂದಾಗ ಕರಾರಿನಂತೆ ಅವರಿಗೆ ಮಾರಾಟ ಮಾಡುತ್ತಾರೆ. ಇದರಿಂದ ರೈತರಿಗೆ ಲಾಭದ ಅಂಶ ಕಡಿಮೆಯಾಗುತ್ತದೆ.
* ಪಾರಂಪರಿಕ ಬೇಸಾಯವನ್ನು ಅನುಸರಿಸಿಕೊಂಡು ಬರುವ ಮುಖೇನವಾಗಿ ಮಣ್ಣಿನ ಗುಣ, ಮಳೆಯ ಪ್ರಮಾಣ, ಹವಾಗುಣವನ್ನು ಅನುಸರಿಸಿ ಕೃಷಿ ಮಾಡದಿರುವುದು. ಅಂದರೆ ಕೃಷಿ ಅಧಿಕಾರಿಗಳನ್ನು ಸಂಪರ್ಕಿಸಿ ಮಣ್ಣಿನ ಸತ್ವ, ಗುಣಪರೀಕ್ಷೆ ಮಾಡಿಸದಿರುವುದು, ಆಧುನಿಕ ಯಂತ್ರಗಳನ್ನು ಬಳಸದಿರುವುದು.
* ಶಾಶ್ವತವಾದ ನೀರಾವರಿ ಸೌಲಭ್ಯ ಇಲ್ಲದಿರುವುದು. ನೀರಾವರಿ ವ್ಯವಸ್ಥೆ ಕೇವಲ ಕೆರೆಕಟ್ಟೆಗಳು ತುಂಬಿದಾಗ ಮಾತ್ರ ನಡೆಯುವುದು. ಭದ್ರಾ ಮೇಲ್ದಂಡೆ ಯೋಜನೆಯು ಈ ಪರಿಸರದ ಕೆರೆಗಳಿಗೆ ನೀರು ಒದಗಿಸುವ ಬಹುದೊಡ್ಡ ಯೋಜನೆ. ೫೦ ವರ್ಷಗಳಿಂದಲೂ ಆ ಯೋಜನೆಯು ನೆನೆಗುದಿಗೆ ಬಿದ್ದಿತ್ತು. ಇತ್ತೀಚೆಗೆ ಪ್ರಾರಂಭವಾಗಿ ಕೆಲಸ ನಡೆಯುತ್ತಿದೆ. ಆದರೂ ಅದು ನಿಧಾನ ಗತಿಯಲ್ಲಿದೆ. ಈ ಯೋಜನೆ ಅನುಷ್ಠಾನಗೊಂಡರೆ ಇಂದು ಬರದ ಸೀಮೆಗಳೆಂದು ಕರೆಯಿಸಿ ಕೊಳ್ಳುವ ಚಿತ್ರದುರ್ಗ, ಚಳ್ಳಕೆರೆ, ಮೊಳಕಾಲ್ಮೂರು, ಪಾವಗಡ ತಾಲೂಕುಗಳಲ್ಲಿ ಹಚ್ಚ ಹಸಿರನ್ನು ಕಾಣಬಹುದು. ಆ ಕಾರ್ಯ ಆಗಬೇಕಾಗಿದೆ.
* ಕೆಲವೆಡೆ ಬೋರ್‌ವೆಲ್ ಕೊರೆಯಿಸಿ ನೀರಾವರಿ ವ್ಯವಸ್ಥೆ ಮಾಡಿಕೊಂಡಿದ್ದಾರೆ. ಅಲ್ಲಿ ರಾಗಿ, ಜೋಳ, ಮುಸುಕಿನ ಜೋಳಗಳಂಥ ಬೆಳೆಗಳ ಜೊತೆಗೆ ಈರುಳ್ಳಿ, ಸೇವಂತಿ ರೇಷ್ಮೆಯಂಥ ವಾಣಿಜ್ಯ ಬೆಳೆಗಳನ್ನು ಬೆಳೆಯುವರಾದರೆ ದಿನಕ್ಕೆ ಮೂರರಿಂದ ನಾಲ್ಕು ತಾಸು ಮಾತ್ರ ವಿದ್ಯುತ್ ನೀಡುವುದರಿಂದ ಫಸಲು ಪಡೆಯಲು ಸಾಧ್ಯವಾಗುತ್ತಿಲ್ಲ.
* ಸುಧಾರಿತ ಬೀಜಗಳನ್ನು ಬಿತ್ತನೆಗೆ ಬಳಸದೇ ತಾವೇ ತಯಾರಿಸಿದ ಬೀಜಗಳನ್ನು ಬಳಸುವುದು. ಅಂದರೆ ಈ ವರ್ಷ ಬೆಳೆದ ಶೇಂಗಾವನ್ನು ಮುಂದಿನ ವರ್ಷಕ್ಕೆ ಬಿತ್ತನೆಗೆ ಎತ್ತಿಡುವುದು. ಈರುಳ್ಳಿಯಲ್ಲಿ ಕೆಲ ಪಾಕೇಟ್‌ಗಳನ್ನು ಉಳಿಸಿಕೊಂಡು, ಅವುಗಳಿಂದ ಮುಂದಿನ ಬೆಳೆಯ

ವೇಳೆಗೆ ಬೀಜಗಳನ್ನು ತಯಾರಿಸಿಕೊಳ್ಳುವುದು. ಹಾಗಾಗಿ ಇವು ಅಧಿಕ ಇಳುವರಿ ಕೊಡುವುದಿಲ್ಲ. ಸರಕಾರವು ಕೃಷಿ ಇಲಾಖೆಯಲ್ಲಿ ಸುಧಾರಿತ ಬೀಜಗಳನ್ನು ಸರಿಯಾದ ಸಮಯಕ್ಕೆ ಪೂರೈಸದಿರುವುದು.

* ಬೆಳೆ ಕೊಯ್ಲಿಗೆ ಬಂದು ಕಟಾವು ಮಾಡುವ ಸಮಯದಲ್ಲಿ ಬರುವ ಕೇಡು ಮಳೆಗಳಿಂದ ಬೆಳೆದ ಫಸಲು ರೈತರ ಕೈಗೆ ಸಿಗದೇ ಹೋಗುತ್ತದೆ. ಜೊತೆಗೆ ಅತಿವೃಷ್ಟಿ-ಅನಾವೃಷ್ಟಿಗಳಂತಹ ಪ್ರಕೃತಿ ವೈಪರಿತ್ಯಗಳಿಂದ ಬೆಳೆ ದೊರೆಯದಿರುವುದು.
* ರೈತರು ಬೆಳೆದ ಫಸಲಿಗೆ ಸರ್ಕಾರವು 'ಬೆಲೆ ನಿಗದಿ' ಮಾಡಿದರೆ ರೈತರನ್ನು ಸಂಕಷ್ಟಗಳಿಂದ ಪಾರು ಮಾಡಬಹುದು. ಆದರೆ ಮಾರ್ಕೆಟ್‌ನಲ್ಲಿ ವ್ಯಾಪಾರಸ್ಥರೇ ರೈತರ ಸರಕಿಗೆ ಬೆಲೆ ನಿರ್ಧರಿಸುವ ಮೂಲಕ ಮೋಸಗೊಳಿಸುತ್ತಾರೆ. ಇಂತಹ ಹಲವಾರು ಸಮಸ್ಯೆಗಳನ್ನು ಈ ಭಾಗದ ರೈತರು ಎದುರಿಸುತ್ತಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೇ ಈ ಪರಿಸರದಲ್ಲಿ ನೆಲೆಸಿರುವ ಕುರುಬ ಸಮುದಾಯವು ಕಾಯ್ದಿರಿಸಿದ ಅರಣ್ಯಗಳ ನಾಶ, ಭೂಮಿಯ ಸಮಸ್ಯೆಗಳಿಂದ ಕುರಿಸಾಕಣೆ, ಕಂಬಳಿ ನೇಯ್ಗೆ , ಕೃಷಿಯನ್ನು ಮಾಡಿ ಜೀವಿಸಲು ಸಾಧ್ಯವಾಗುತ್ತಿಲ್ಲ. ಪಾರಂಪರಿಕ ವೃತ್ತಿಗಳನ್ನು ನುಂಗಿ ಹಾಕಿರುವ ಕೈಗಾರಿಕೀಕರಣ ಮತ್ತು ಪ್ರಪಂಚೀಕರಣಗಳು ಸಮುದಾಯದ ಆರ್ಥಿಕತೆಯ ಮೇಲೆ ದುಷ್ಪರಿಣಾಮವನ್ನೇ ಬೀರಿವೆ. ಹಾಗಾಗಿ ಇಂದು ಅನಿವಾರ್ಯವಾಗಿ ಬೇರೆ ಉದ್ಯೋಗಗಳತ್ತ ಬರುವ ಮುಖೇನವಾಗಿ ಹೊಂದಿಕೊಳ್ಳುವ ಪ್ರಯತ್ನ ಮಾಡುತ್ತಿದೆ.

**೩.೩. ರಾಜಕೀಯ ಸಂಘಟನೆ**

ಭಾರತದ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಪ್ರಜೆಗಳು ತಮ್ಮ ಪ್ರತಿನಿಧಿಯನ್ನು ಆಯ್ಕೆ ಮಾಡಿ ಅವರ ಮೂಲಕ ಆಡಳಿತ ನಡೆಸುತ್ತಾರೆ. ಪ್ರಜಾಪ್ರಭುತ್ವವು ರಾಷ್ಟ್ರದ ಕನಿಷ್ಠ ಘಟಕವಾದ ಗ್ರಾಮದಲ್ಲಿ ಬೇರೂರಿದಾಗ ಅದು ರಾಷ್ಟ್ರಮಟ್ಟದಲ್ಲಿ ಬಲಿಷ್ಠವಾಗುತ್ತದೆ. ಸ್ಥಳೀಯ ಸರಕಾರಗಳು ಜನರಿಗೆ ರಾಜಕೀಯ ಪ್ರಜ್ಞೆ, ಜವಾಬ್ದಾರಿಯನ್ನು ಮೂಡಿಸುವಲ್ಲಿ ಯಶಸ್ವಿಯಾಗುತ್ತವೆ. ಸಮಾಜದ ಕೆಳಗಿನ ಹಂತದಿಂದ ಮೇಲಿನ ಹಂತದವರೆಗೂ ಎಲ್ಲಾ ವರ್ಗದ ಜನರು ಆಡಳಿತದಲ್ಲಿ ಸಕ್ರಿಯವಾಗಿ ಭಾಗವಹಿಸುವುದರಿಂದ ರಾಜಕೀಯ ವ್ಯಕ್ತಿಗಳ ಮತ್ತು ಅಧಿಕಾರಿಗಳ ನಿರಂಕುಶತ್ವ ತಡೆಗಟ್ಟುತ್ತದೆ. ಕೇಂದ್ರ ಮತ್ತು ರಾಜ್ಯ ಸರಕಾರಗಳು ಜಾರಿಗೆ ತಂದ ಯೋಜನೆಗಳು ಪರಿಣಾಮಕಾರಿಯಾಗಿ ಜಾರಿಯಾಗುತ್ತವೆ.

ಈ ವ್ಯವಸ್ಥೆಯು ಮೊದಲು ಕೆಲವು ಮೇಲ್ವರ್ಗಗಳ ಕಪಿಮುಷ್ಠಿಯಲ್ಲಿತ್ತು. ಹಿಂದುಳಿದ, ಅಲೆಮಾರಿ, ಅಲಕ್ಷಿತ ಶೂದ್ರ ಸಮುದಾಯಗಳು ರಾಜಕೀಯದತ್ತ ಸಾಗಿ ಬರಲು ಸಾಕಷ್ಟು ಸಮಯವೇ ಹಿಡಿಯಿತು. ಜನಸಂಖ್ಯೆಯಲ್ಲಿ ಹೆಚ್ಚಾಗಿದ್ದರೂ ರಾಷ್ಟ್ರ/ರಾಜ್ಯ ರಾಜಕೀಯ ಕ್ಷೇತ್ರದಲ್ಲಿ ನಿಷ್ಕ್ರಿಯರನ್ನಾಗಿ ಮಾಡಲಾಗಿತ್ತು.

ಅಂತಹ ಸಮಯದಲ್ಲಿ ಜಾತಿಯ ಹೆಸರಿನಲ್ಲಿ ಸಂಘಗಳು ಹುಟ್ಟಿಕೊಂಡವು. ಈ ಜಾತಿ ಸಂಘಟನೆಗಳು ಯಾವ ಬಲವಾದ ಪ್ರೇರಣೆಯಿಲ್ಲದೆ ಸಂಘಟಿಸಿಕೊಳ್ಳಲು ಸಾಧ್ಯವೆ? ಹೇಗೆ? ಎಂಬ ಸ್ವಾಭಾವಿಕ ಪ್ರಶ್ನೆಗಳಿಗೆ ಜಾನ್ ವಿಲ್ಸನ್ ಅವರು "ಜನರು ಜಾತಿ ಸಂಘಟನೆಗಳಾಗಿ ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಿರುವುದು ಏಕೆಂದರೆ ಅವರಿಗೆ ಅವರು ಇರುವ ಪರಿಸ್ಥಿತಿ ಬಗ್ಗೆ ಅತೃಪ್ತಿಯಿದ್ದು, ಅದನ್ನು ಬದಲಾಯಿಸಿಕೊಳ್ಳುವುದಕೋಸ್ಕರ ಅಂದಿನ ವ್ಯವಸ್ಥೆಯ ಬಗ್ಗೆ ತಮಗಿರುವ ಅಪನಂಬಿಕೆಯಿಂದಾಗಿ ಬೇರೆ ದಾರಿಯಿಲ್ಲದೆ ಸಂಘಟನೆಯ ಬಲದ ಮೂಲಕ ತಮಗೆ ಮಾನ್ಯತೆ ದೊರೆಯುವಂತೆ ನೋಡಿಕೊಳ್ಳುತ್ತಾರೆ"[೨೬] ಎಂದಿರುವರು.

೧೯೦೫ರಲ್ಲಿ ಲಿಂಗಾಯಿತ ಏಜ್ಯುಕೇಷನ್ ಸೊಸೈಟಿ ಪ್ರಾರಂಭವಾಗಿ ಲಿಂಗಾಯಿತರಲ್ಲಿ ಬಡ ಮಕ್ಕಳಿಗಾಗಿ ಶಿಕ್ಷಣ ಪ್ರಸಾರವನ್ನು, ಮಠಗಳ ಮೂಲಕವಾಗಿ ಶಾಲೆಗಳನ್ನು ತೆರೆದು ವಸತಿ ಸೌಕರ್ಯಗಳನ್ನು ಒದಗಿಸಿತು. ಜೊತೆಗೆ ನಗರಗಳಲ್ಲಿ ಹಾಸ್ಟೆಲ್‌ಗಳನ್ನು ತೆರೆಯಿತು. ೧೯೦೬ರಲ್ಲಿ ಸ್ಥಾಪನೆಯಾದ ಒಕ್ಕಲಿಗರ ಸಂಘ ಈ ದಿಸೆಯಲ್ಲಿ ಮಹತ್ತರ ಸಾಧನೆ ಮಾಡಿ, ಗ್ರಾಮಾಂತರಗಳಲ್ಲಿ ಚದುರಿ ಹೋಗಿದ್ದ ಜನರಲ್ಲಿ ಜಾಗೃತಿಯನ್ನು ಮೂಡಿಸಿತು. ಜೊತೆಗೆ ಶಿಕ್ಷಣದ ಅರಿವನ್ನು ಪಸರಿಸಿತು. ೧೯೧೯ರಲ್ಲಿ ಕುರುಬರ ಸಂಘ ಸ್ಥಾಪನೆಯಾಗಿ ಪರಿಶ್ರಮದ ಮೂಲಕ ಸಮುದಾಯವನ್ನು ಒಗ್ಗೂಡಿಸುವ ಪ್ರಯತ್ನ ಮಾಡಿತು. "ಮೇಲುನೋಟಕ್ಕೆ ಜಾತಿ ಸಂಘಗಳು ರಚನೆಯಾದ ರೀತಿಯೇ ದೊಡ್ಡ ಸಾಧನೆಯಂತೆ ಕಂಡುಬರದಿದ್ದರೂ, ಈ ಸಂಘಗಳು ಹೊಂದಿದ್ದ ಉದ್ದೇಶ, ಹಾಕಿಕೊಂಡ ಕಾರ್ಯಕ್ರಮ ನಡೆದುಕೊಂಡ ರೀತಿ, ಪಡೆದ ಫಲಿತಾಂಶ ಸಾಧಾರಣವಲ್ಲ."[೨೭] ಇದರಲ್ಲಿ ಲಿಂಗಾಯಿತ ಮತ್ತು ಒಕ್ಕಲಿಗ ಸಂಘಗಳು ಅಭಿವೃದ್ಧಿಯನ್ನು ಪಡೆದಷ್ಟು ಕುರುಬ ಸಮುದಾಯ ಪಡೆಯಲಿಲ್ಲ. ಏಕೆಂದರೆ ಅಲೆಮಾರಿಗಳಾಗಿದ್ದವರನ್ನು ಒಗ್ಗೂಡಿಸುವುದು ಅಷ್ಟು ಸುಲಭದ ಕೆಲಸವಾಗಿರಲಿಲ್ಲ. ಹಾಗಾಗಿ ಸ್ವಾತಂತ್ರ್ಯ ನಂತರವೂ ಒಗ್ಗೂಡಿಸುವ ಪ್ರಯತ್ನಗಳು ನಡೆಯುತ್ತಲೇ ಬಂದಿವೆ; ನಡೆಯುತ್ತಲೇ ಇವೆ.

ಸ್ವಾತಂತ್ರ್ಯ ನಂತರ ಭಾರತದಲ್ಲಿ ಪ್ರಜಾಪ್ರಭುತ್ವ ಸರಕಾರ ಅಸ್ತಿತ್ವಕ್ಕೆ ಬಂದು ೧೯೫೨ರಲ್ಲಿ ಮೊದಲ ಸಾರ್ವತ್ರಿಕ ಚುನಾವಣೆಗಳು ನಡೆದವು. ಆ ಚುನಾವಣೆಯಲ್ಲಿ ಸಮುದಾಯದ ೮ ಜನ ಸದಸ್ಯರು ಮಾತ್ರ ಚುನಾಯಿತ ಸದಸ್ಯರಾಗಿದ್ದರು. ಈ ವ್ಯವಸ್ಥೆ ಜಾರಿಗೆ ಬಂದಾಗಲೂ ಈ ಸಮುದಾಯ ತಮ್ಮ ಕುಲದ ಒಡೆಯ, ಯಜಮಾನ, ಗೌಡರಂಥವರು ಸೂಚಿಸಿದ ಪಕ್ಷ ಅಥವಾ ವ್ಯಕ್ತಿಗೆ ಮತ ಹಾಕುತ್ತ ಬಂದರು. ಕಾಲ ಸರಿದಂತೆ ಸಮುದಾಯವು ರಾಜಕೀಯದಲ್ಲಿ ಸಕ್ರಿಯವಾಗುತ್ತ ಬಂದಿತು. ಅಧ್ಯಯನಕ್ಕೆ ಆಯ್ದುಕೊಂಡ ಪರಿಸರದಲ್ಲಿ ಸಮುದಾಯ ರಾಜಕೀಯದಲ್ಲಿ ಭಾಗವಹಿಸುವಿಕೆಯ ಕುರಿತು ಚರ್ಚಿಸುವ ಮೊದಲು ಕರ್ನಾಟಕ–ಆಂಧ್ರಪ್ರದೇಶ ಗಡಿನಾಡಿನಲ್ಲಿನ ರಾಜಕೀಯ ಸ್ಥಿತಿಗತಿಯನ್ನು ತಿಳಿದುಕೊಳ್ಳುವುದು ಮುಖ್ಯವೆನಿಸುತ್ತದೆ.

ಭಾಷಾವಾರು ಏಕೀಕರಣದ ನಂತರ ಲಿಂಗಾಯಿತರು, ಒಕ್ಕಲಿಗರು ಶಿಕ್ಷಣ ಹಾಗೂ ಉದ್ಯೋಗದಲ್ಲಿ ಅಲ್ಲದೆ ರಾಜಕಾರಣದಲ್ಲಿ ಸಿಂಹಪಾಲು ಪಡೆದರು. ಹಿಂದುಳಿದ, ದಲಿತರಂಥ ತಳ ಸಮುದಾಯಗಳು ಸಂಖ್ಯೆಯಲ್ಲಿ ಹೆಚ್ಚಿದ್ದರೂ ಶೈಕ್ಷಣಿಕ ಹಾಗೂ ರಾಜಕಾರಣದಲ್ಲಿ ಸಮಬಲರಾಗಲು ಸಾಧ್ಯವಾಗಲೇ ಇಲ್ಲ. ಈ ಕಾರಣಗಳಿಂದಾಗಿಯೇ ಹಳೇ ಮೈಸೂರು ಪ್ರಾಂತ್ಯದಲ್ಲಿ ಮೀಸಲಾತಿ ನಿಯಮಗಳು ೧೯೧೮ರಿಂದ ೧೯೬೦ರವರೆವಿಗೂ ಬ್ರಾಹ್ಮಣರು–ಬ್ರಾಹ್ಮಣೇತರರು ಎನ್ನುವ ವಿಶಾಲ ತಳಹದಿಯ ಮೇಲೆಯೇ ಪಡೆದವು. "ಆರ್. ನಾಗನಗೌಡ ಅಧ್ಯಕ್ಷತೆಯ ಸಮಿತಿಯ ಶಿಫಾರಸ್ಸಿನನ್ವಯ ೩೦% ಹಿಂದುಳಿದವರಿಗೆ, ೧೮% ಪರಿಶಿಷ್ಟರಿಗೆ ಉಳಿದ ೫೨% ಸಾಮಾನ್ಯ ವರ್ಗಕ್ಕೆ ಮೀಸಲಾತಿ ನಿಯಮಗಳು ರೂಪಿತವಾದವು."[೨೮]

ಹಿಂದುಳಿದವರ ಪಾಲಿಗೆ ಸುವರ್ಣಯುಗವೆಂದು ೧೯೭೨ರಲ್ಲಿ ಪ್ರಾರಂಭವಾಯಿತು. ಡಿ.ದೇವರಾಜ ಅರಸು ಅವರು ಹಿಂದುಳಿದ ವರ್ಗಗಳ ಮೊದಲ ಮುಖ್ಯಮಂತ್ರಿಯಾದರು. ಆ ಮೂಲಕ ಹಿಂದುಳಿದವರಲ್ಲಿ ರಾಜಕೀಯ ಶಕ್ತಿ ತುಂಬಲು ಕಾರಣರಾದರು. ಕರ್ನಾಟಕದಲ್ಲಿ ಇನೆಯ ಅತಿ ದೊಡ್ಡ ಸಮುದಾಯವಾದರೂ, ದಕ್ಷ ಆಡಳಿತಗಾರರು, ಬುದ್ಧಿವಂತರನ್ನು ಒಳಗೊಂಡಿದ್ದರೂ ಮೂಲೆಗುಂಪಾದುದು ವಿಪರ್ಯಾಸ. ೧೯೫೨ರ ಚುನಾವಣೆಯಲ್ಲಿ ೮ ಜನ, ೧೯೫೭ರಲ್ಲಿ ೯ ಜನ, ಶಾಸಕರಿದ್ದದ್ದು, ೧೯೬೨ ಮತ್ತು ೧೯೬೭ರಲ್ಲಿ ಕೇವಲ ೫ಕ್ಕೆ ಇಳಿಯಿತು. ೧೯೭೨ರಲ್ಲಿ ಅರಸರ ಕಾಲ ಆರಂಭವಾದ ತರುವಾಯ ೧೧ ಜನ ಸದಸ್ಯರು ಸಮಾಜವನ್ನು ಪ್ರತಿನಿಧಿಸಿ ಸಂಖ್ಯಾಬಲ ಪ್ರದರ್ಶಿಸಲು ಸಾಧ್ಯವಾಯಿತು.

ಸಮುದಾಯದ ಎಸ್. ಸಿದ್ಧರಾಮಯ್ಯ ಅವರು ಇಂದು ಕರ್ನಾಟಕ ರಾಜ್ಯದ ಮುಖ್ಯಮಂತ್ರಿಯಾಗಿದ್ದಾರೆ. ಆದರೆ ಇದಕ್ಕಿಂತಲೂ ಪೂರ್ವದಲ್ಲಿಯೇ ಅನೇಕ ನಾಯಕರು ಮುಖ್ಯಮಂತ್ರಿಯಾಗುವ ಅವಕಾಶದಿಂದ ವಂಚಿತರಾಗಿದ್ದಾರೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ ಕ್ಷೇತ್ರದಿಂದ ಆರ್. ನಾಗನಗೌಡ ಅವರು ೧೯೭೨ರಲ್ಲಿ ಸ್ಪರ್ಧಿಸಿದ್ದರು. ಅವರು ವಿಜಯಿಯಾದರೆ ಹಿಂದುಳಿದ, ಪರಿಶಿಷ್ಟ ಬೆಂಬಲದಿಂದ ಕರ್ನಾಟಕದ ಮುಖ್ಯಮಂತ್ರಿಯಾಗುವರು ಎನ್ನುವ ಉದ್ದೇಶಕ್ಕೆ ಅವರ ಸೋಲನ್ನು ಪಕ್ಷದಲ್ಲಿನ ಕೆಲವರು ಮಾಡಿದರು ಎಂಬುದು ಗೊತ್ತಿರುವ ಸತ್ಯ. ಅದರಂತೆಯೇ ಮಂಡ್ಯ ಜಿಲ್ಲೆಯ ನಾಗಮಂಗಲ ಕ್ಷೇತ್ರದ ಟಿ. ಮರಿಯಪ್ಪ ಅವರು ೧೯೪೭–೫೨ರ ಆಂತರಿಕ ಸರಕಾರದಲ್ಲಿಯೂ ಸಚಿವರಾಗಿ ಸೇವೆ ಸಲ್ಲಿಸಿದರು. ಆದರೆ ಸಮಾಜದ ದುರ್ದೈವವೋ, ರಾಜಕಾರಣ ಅಂತಃಕಲಹವೋ ೧೯೭೨ರಲ್ಲಿ ಅವರು ಚುನಾವಣೆಗೆ ಸ್ಪರ್ಧಿಸಲಾಗಲಿಲ್ಲ. ರಾಜಕಾರಣದಲ್ಲಿ ಮುಂದುವರಿದಿದ್ದಲ್ಲಿ, ದೇಹಸ್ಥಿತಿ ಸುಧಾರಿಸಿದ್ದಲ್ಲಿ ಮುಖ್ಯಮಂತ್ರಿಯಾಗಬಹುದಿತ್ತು ಅಥವಾ ಕೇಂದ್ರ ಮಂತ್ರಿಯಾಗಬಹುದಿತ್ತು.

ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಗಾಂಧಿವಾದಿ ಕೊಲ್ಲೂರು ಮಲ್ಲಪ್ಪ ಅವರು ಹೈದರಾಬಾದ್–ಕರ್ನಾಟಕದ ಪ್ರಮುಖ ರಾಜಕಾರಣಿ. ಹೈದರಾಬಾದ್ ನಿಜಾಮರಿಂದ ಹೈದರಾಬಾದ್ ಕರ್ನಾಟಕ

ವಿಮೋಚನೆಗಾಗಿ ಹೋರಾಡಿ ಕರ್ನಾಟಕಕ್ಕೆ ಭಾಷಾವಾರು ಪ್ರಾಂತ್ಯವಾಗಿ ಸೇರಿಸುವಲ್ಲಿ ಮುಖ್ಯರಾದವರಲ್ಲಿ ಒಬ್ಬರು. ಪಕ್ಷದ ನಿಷ್ಠಾವಂತ ಕಾರ್ಯಕರ್ತರಾಗಿ ಪಕ್ಷ ಕಟ್ಟಲೂ ಶ್ರಮಿಸಿದರೂ, ಮೂಲೆಗುಂಪಾಗಿಸುವ ಹುನ್ನಾರಗಳು ನಡೆದವು. ಆದರೂ ಹಿರಿಯರಾಗಿ, ಸಲಹೆಗಾರರಾಗಿ ದುಡಿದು, ೧೯೭೨ರಲ್ಲಿ ಡಿ. ದೇವರಾಜ ಅರಸು ಮುಖ್ಯಮಂತ್ರಿಯಾಗಲು ಕಾರಣೀಭೂತರಾದವರಲ್ಲಿ ಒಬ್ಬರು. ಇವರಲ್ಲದೇ ಕರ್ನಾಟಕ ರಾಜ್ಯದ ರಾಜಕಾರಣದಲ್ಲಿ ಸಮುದಾಯದ ಸಾಕಷ್ಟು ಜನಪ್ರತಿನಿಧಿಗಳು ಜನಪರ ಕೆಲಸಗಳನ್ನು ಮಾಡಿದ್ದಾರೆ; ಮಾಡುತ್ತಿದ್ದಾರೆ. ಅವರಲ್ಲಿ ಪ್ರಮುಖವಾಗಿ ಚನ್ನಯ್ಯ ಒಡೆಯರು, ಎಸ್.ಎಲ್. ಪಾಟೀಲ, ಸಾಹುಕರ್ ಅಂಗತಹಳ್ಳಿ ಮುದ್ದ ಬಸವಯ್ಯ, ಡಿ.ಕೆ. ನಾಯ್ಕರ, ಎಚ್. ವಿಶ್ವನಾಥ, ಕೆ.ಎಸ್. ಈಶ್ವರಪ್ಪ, ವೈ.ನಾಗಪ್ಪ ಕೆ.ಎಂ. ಕೃಷ್ಣಮೂರ್ತಿ, ಎಚ್.ಎಂ. ರೇವಣ್ಣ, ಬಿ.ಬಿ. ಚಿಮ್ಮನಕಟ್ಟಿ, ಲಕ್ಷ್ಮೀದೇವಿ ರಾಮಣ್ಣ, ಸಿ.ಬಿ.ಸುರೇಶಬಾಬು, ಬಂಡೆಪ್ಪ ಕಾಶೆಂಪುರ ಮುಂತಾದವರನ್ನು ಹೆಸರಿಸಬಹುದು. ಹೀಗೆ ರಾಜಕೀಯದಲ್ಲಿ ಏಳು–ಬೀಳುಗಳನ್ನು ಕಾಣುತ್ತಲೇ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತ, ಬಂದುದರ ಫಲವಾಗಿ ರಾಜ್ಯದಲ್ಲಿ ಮೊದಲ ಬಾರಿಗೆ ಸಮುದಾಯದ ಮುಖ್ಯಮಂತ್ರಿಯನ್ನು ಕಾಣಲು ಸಾಧ್ಯವಾಗಿದೆ.

ಇನ್ನೂ ಆಂಧ್ರಪ್ರದೇಶ ಮೊದಲಿನಿಂದಲೂ ನಾಯ್ಡು, ರೆಡ್ಡಿ, ಕಮ್ಮಾ ಸಮುದಾಯಗಳಿಂದಲೇ ಮುಖ್ಯಮಂತ್ರಿಗಳಾಗಿರುವುದು ಕಾಣುತ್ತಾ ಬಂದಿದ್ದೇವೆ. ಆದಾಗ್ಯೂ ಕುರುಬ ಸಮುದಾಯವನ್ನು ಪ್ರತಿನಿಧಿಸಿ ಚುನಾಯಿತರಾದ ಸಂಸದ, ಶಾಸಕರಾಗಿದ್ದಾರೆ. ಹಿಂದಿನಿಂದಲೂ ಪ್ರಮುಖ ಹುದ್ದೆಗಳನ್ನು ಕೊಟ್ಟಿರುವುದು ತುಂಬಾ ವಿರಳ ಎಂಬುದನ್ನು ಇತಿಹಾಸದಿಂದ ತಿಳಿಯಬಹುದು. ಆರ್ಥಿಕವಾಗಿ ಹಿಂದುಳಿದಿರುವುದು, ಶೈಕ್ಷಣಿಕವಾಗಿ ಅಭಿವೃದ್ಧಿಯಾಗದೇ ಇರುವುದು ಅದಕ್ಕೆ ಕಾರಣಗಳು. ಇದೇ ಮೀಸಲಾತಿಯಿಂದ ಗೆದ್ದು ಬಂದ ಸೋದರ ಸಮುದಾಯಗಳು ಹೆಚ್ಚು ಮನ್ನಣೆ ಪಡೆದಿವೆ. ಅದೇನೆ ಇದ್ದರೂ ಸಮುದಾಯವನ್ನು ಪ್ರತಿನಿಧಿಸಿ ಚುನಾಯಿತರಾಗಿ ಸಮಾಜಮುಖಿ ಕೆಲಸಗಳನ್ನು ಮಾಡಿದ ಪ್ರಮುಖರನ್ನು ಹೆಸರಿಸುವುದಾದರೆ ಕೆ.ಬಿ. ಚನ್ನಮಲ್ಲಪ್ಪ–ಅನಂತಪುರಂ, ದತ್ತಾತ್ರೇಯ ಭಂಡಾರು–ಸಿಕಿಂದ್ರಬಾದ್, ಗೋಪಿನಾಥ ವಸಿಕೇರಿ–ಮಡಕಸಿರಾ, ಕೃಷ್ಣ ಬತ್ತಿರಿ–ಹೈದರಬಾದ್, ನರಸಪ್ಪ ಎನ್.–ಮೆಹಬೂಬನಗರ, ನರಸಪ್ಪ ಕೆ.ಬಿ.–ಕರ್ನೂಲು, ಸತ್ಯನಾರಾಯಣ ಡಿ.–ಅನಂತಪುರಂ ಮುಂತಾದವರನ್ನು ಹೆಸರಿಸಬಹುದು. ಇವಿಷ್ಟು ಎರಡು ರಾಜ್ಯಗಳಲ್ಲಿನ ಸಮುದಾಯದ ರಾಜಕೀಯ ಕಿರುಚಿತ್ರಣ.

ಪ್ರಸ್ತುತ ಅಧ್ಯಯನದ ಪರಿಸರವನ್ನು ಕ್ಷೇತ್ರಕಾರ್ಯ ಮುಖೇನ ಸಂಗ್ರಹಿಸಿಕೊಂಡ ಮಾಹಿತಿ ಮತ್ತು ಪೂರಕ ದತ್ತಾಂಶಗಳನ್ನು ಒಂದುಗೂಡಿಸಿ ಹೇಳುವುದಾದರೇ ಅನಂತಪುರಂ ಜಿಲ್ಲೆಯ ಲೋಕಸಭೆಯ ಸದಸ್ಯರಾಗಿ ಜೆ.ಸಿ. ದಿವಾಕರ ರೆಡ್ಡಿ ಅವರು, ಹಿಂದೂಪುರಂ ಲೋಕಸಭೆಯಿಂದ

ಕ್ರಿಷ್ಟಪ್ಪ ನಿರ್ಮಲ ಅವರು ಚುನಾಯಿತರಾಗಿದ್ದಾರೆ. ಆದರಲ್ಲಿ ಪೆನುಗೊಂಡ ಕ್ಷೇತ್ರದಲ್ಲಿ ಕೆ.ಬಿ. ಪಾರ್ಥಸಾರಥಿ ಅವರು ತೆಲುಗು ದೇಶಂ ಪಕ್ಷದಿಂದ ಸ್ಪರ್ಧಿಸಿ ಶಾಸಕರಾಗಿ ಚುನಾಯಿತರಾಗಿದ್ದಾರೆ. ಅವರನ್ನು ಹೊರತುಪಡಿಸಿದರೆ ಮಡಕ ಸಿರಾ, ಕಲ್ಯಾಣದುರ್ಗಂ, ರಾಯದುರ್ಗಂ, ಗುಂತಕಲ್ಲುಗಳಲ್ಲಿ ಸಂಖ್ಯಾದೃಷ್ಟಿಯಲ್ಲಿ ಅಧಿಕವಾಗಿದ್ದರೂ, ಸಂಘಟನೆಯ ಕೊರತೆಯಿಂದಾಗಿ ಚನ್ನಮಲ್ಲಪ್ಪ ಕೆ.ಬಿ. ಗೋಪಿನಾಥ ವಸಿಕೇರಿ ಅವರ ನಂತರದಲ್ಲಿ ಯಾರು ಆರಿಸಿ ಬರುತ್ತಿಲ್ಲ. ಇಲ್ಲಿ ಸಮುದಾಯ ವಿವಿಧ ಪಕ್ಷಗಳಲ್ಲಿ ಹಂಚಿ ಹೋಗಿದ್ದು, ರಾಜಕೀಯ ಸಂಘಟನೆ ಕಡಿಮೆಯಿದೆ ಎಂದೇ ಹೇಳಬೇಕಾಗುತ್ತದೆ. ಕರ್ನೂಲು ಜಿಲ್ಲೆಯ ಲೋಕಸಭೆಯ ಸದಸ್ಯರಾಗಿ ಬುಟ್ಟ ರೇಣುಕಾ ಅವರು ಚುನಾಯಿತರಾಗಿರುವರು. ೧೪ ವಿಧಾನಸಭೆ ಕ್ಷೇತ್ರಗಳಲ್ಲಿ ಸಮುದಾಯದ ಒಬ್ಬರೂ ಶಾಸಕರಿಲ್ಲ. ಇಲ್ಲಿ ನರಸಪ್ಪ ಕೆ.ಬಿ. ಅವರಂಥವರ ನಂತರ ಯಾರು ಪ್ರಬಲವಾಗಿ ಬೆಳೆದು ಬಂದಿಲ್ಲ.

ಬಳ್ಳಾರಿ ಜಿಲ್ಲೆಯ ಲೋಕಸಭೆಯು ಇಂದು ಪರಿಶಿಷ್ಟ ಪಂಗಡಕ್ಕೆ ಮೀಸಲು ಕ್ಷೇತ್ರವಾಗಿದೆ. ಪರಿಶಿಷ್ಟ ಪಂಗಡದಲ್ಲಿ ಬರುವ ಕಾಡುಕುರುಬ ಸಮುದಾಯದ ವ್ಯಕ್ತಿಯೊಬ್ಬರು ಎರಡು ಸಲ ಪಕ್ಷೇತರರಾಗಿ ಸ್ಪರ್ಧಿಸಿದರು. ಆದರೇ ಸಮುದಾಯವಿಂದು ರಾಷ್ಟ್ರೀಯ ಪಕ್ಷಗಳಲ್ಲಿ ಹಂಚಿ ಹೋಗಿದೆ. ಹಾಗಾಗಿ ಪಕ್ಷೇತರರಾಗಿ ಯಾರು ಸ್ಪರ್ಧಿಸಿದರೂ ಗೆಲ್ಲುವುದು ಅಷ್ಟು ಸುಲಭವಲ್ಲ. ಗೆಲ್ಲಲೇ ಬೇಕಾದವರೂ ರಾಷ್ಟ್ರೀಯ ಪಕ್ಷಗಳ ಟಿಕೇಟ್ ಪಡೆಯಬೇಕಾಗುತ್ತದೆ. ಲೋಕಸಭೆಯಂತೆಯೇ ಸಿರುಗುಪ್ಪ, ಸಂಡೂರು, ಬಳ್ಳಾರಿ, ಗ್ರಾಮಾಂತರ ವಿಧಾನಸಭಾ ಸ್ಥಾನಗಳು ಪರಿಶಿಷ್ಟ ಪಂಗಡಕ್ಕೆ ಮೀಸಲಾಗಿರುವ ಕ್ಷೇತ್ರಗಳು. ಬಳ್ಳಾರಿ ನಗರ ಸಾಮಾನ್ಯ ಕ್ಷೇತ್ರವಾಗಿದೆಯಾದರೂ ಹಣಬಲವಿದ್ದವರು ಮಾತ್ರ ಇಲ್ಲಿ ಜಯಶಾಲಿಗಳಾಗಿರುವುದಕ್ಕೆ ಸಾಕಷ್ಟು ನಿದರ್ಶನಗಳಿವೆ. ಚಿತ್ರದುರ್ಗ ಜಿಲ್ಲೆ ಲೋಕಸಭಾ ಕ್ಷೇತ್ರವು ಪರಿಶಿಷ್ಟ ಜಾತಿಗೆ ಮೀಸಲು ಕ್ಷೇತ್ರವಾಗಿದೆ. ಚಳ್ಳಕೆರೆ, ಮೊಳಕಾಲ್ಮೂರು ಕ್ಷೇತ್ರಗಳು ಪರಿಶಿಷ್ಟ ಪಂಗಡಕ್ಕೆ ಮೀಸಲಾಗಿವೆ. ಹೊಸದುರ್ಗ ಕ್ಷೇತ್ರದಲ್ಲಿ ಮಾತ್ರ ಬಿ.ಜಿ. ಗೋವಿಂದಪ್ಪ ಅವರು ಸಮುದಾಯದ ಚುನಾಯಿತ ಶಾಸಕರಾಗಿದ್ದಾರೆ. ಅಧ್ಯಯನ ಕ್ಷೇತ್ರದ ನಾಲ್ಕು ಜಿಲ್ಲೆಗಳ ಗಡಿ ಪ್ರದೇಶದಲ್ಲಿ ಕೆ.ಬಿ. ಪಾರ್ಥಸಾರಥಿ ಅವರು ಮಾತ್ರ ಚುನಾಯಿತ ಸದಸ್ಯರಿರುವುದು. ಹಾಗಾಗಿಯೇ ಇಲ್ಲಿನ ಸಮುದಾಯ ಆರ್ಥಿಕವಾಗಿ ತೀರಾ ಹಿಂದುಳಿದಿದೆ. ಏಕೆಂದರೆ ಯಾವುದೇ ಸಮುದಾಯದ ಸರ್ವಾಂಗೀಣ ಅಭಿವೃದ್ಧಿಯು ರಾಜಕೀಯ ಶೈಕ್ಷಣಿಕ ಪ್ರಗತಿಯನ್ನು ಅವಲಂಬಿಸಿರುತ್ತದೆ.

ಸರಕಾರದ ಅಧಿಕಾರಿಗಳು ಕೇವಲ ಕೇಂದ್ರ ಅಥವಾ ರಾಜ್ಯ ಸರಕಾರಗಳಲ್ಲಿ ಮಾತ್ರ ಇರದೇ ಜಿಲ್ಲೆ, ತಾಲೂಕು ಮಂಡಲ ಮತ್ತು ಗ್ರಾಮಗಳ ಸ್ಥಳೀಯ ಹಂತಗಳಿಗೂ ಹಂಚಿಕೆಯಾಗಬೇಕೆಂಬುದು ಭಾರತದ ಒಟ್ಟಾರೆ ಆಡಳಿತ ನೀತಿ. ಈ ದಿಕ್ಕಿನಲ್ಲಿ ಚಿಂತನೆ ನಡೆದು ೧೯೫೭ರಲ್ಲಿ ರಾಷ್ಟ್ರೀಯ ಅಭಿವೃದ್ಧಿ ಪರಿಷತ್ತು ಗ್ರಾಮೀಣ ಸ್ಥಳೀಯ ಸರಕಾರದ ರಚನೆಯನ್ನು ತಂದಿತು. ೧೯೫೯ರಲ್ಲಿ ಪಂಚಾಯತಿ ರಾಜ್ಯವು ರಚನೆಗೊಂಡಿತು. ಸಂವಿಧಾನದ ೨೪೩ನೆಯ ವಿಧಿಯು ಪಂಚಾಯತಿಗಳ

ರಚನೆಯನ್ನು ಆಯಾ ರಾಜ್ಯ ಶಾಸನ ಸಭೆಗಳ ತೀರ್ಮಾನಕ್ಕೆ ಬಿಟ್ಟಿತು. ಆ ಕಾನೂನಿನನ್ವಯ ಕರ್ನಾಟಕ ಆಂಧ್ರಪ್ರದೇಶ ಸರಕಾರಗಳು ಜಿಲ್ಲಾ ಪಂಚಾಯ್ತಿ, ತಾಲೂಕು/ಮಂಡಲ ಪಂಚಾಯ್ತಿ, ಗ್ರಾಮ ಪಂಚಾಯ್ತಿಗಳನ್ನು ಜಾರಿಗೆ ತಂದಿವೆ. ಪ್ರಸ್ತುತ ಅಧ್ಯಯನದ ಗಡಿನಾಡ ಪರಿಸರದಲ್ಲಿನ ಕುರುಬ ಸಮುದಾಯವು ಈ ಸ್ಥಳೀಯ ರಾಜಕೀಯ ಸಂಸ್ಥೆಗಳಲ್ಲಿ ಭಾಗವಹಿಸುವಿಕೆಯ ಕುರಿತಂತೆ ಚರ್ಚಿಸಲಾಗಿದೆ.

ಪ್ರಸ್ತುತ ಕುರುಬ ಸಮುದಾಯದ ರಾಜಕೀಯ ಚಿತ್ರಣವನ್ನು ಕಟ್ಟಿಕೊಡಲು ಚಳ್ಳಕೆರೆ ತಾಲೂಕಿನ ೧೨ ಗ್ರಾಮ ಪಂಚಾಯ್ತಿಗಳು, ಮೊಳಕಾಲ್ಮೂರು ತಾಲೂಕಿನ ೮ ಗ್ರಾಮ ಪಂಚಾಯ್ತಿಗಳು, ಸಂಡೂರು ತಾಲೂಕಿನ ೧ ಗ್ರಾಮ ಪಂಚಾಯ್ತಿ, ಬಳ್ಳಾರಿ ತಾಲೂಕಿನ ೫ ಗ್ರಾಮ ಪಂಚಾಯ್ತಿಗಳು, ಸಿರುಗುಪ್ಪ ತಾಲೂಕಿನ ೫ ಗ್ರಾಮ ಪಂಚಾಯ್ತಿಗಳನ್ನು ಒಳಪಡಿಸಲಾಗಿದೆ. ಅಂತೆಯೇ ಕರ್ನೂಲು ಜಿಲ್ಲೆಯ ಆಲೂರು ಮಂಡಲದ ೫ ಗ್ರಾಮ ಪಂಚಾಯ್ತಿಗಳು, ಆದೋನಿ ಮಂಡಲದ ೬ ಗ್ರಾಮಪಂಚಾಯ್ತಿಗಳು, ಹಾಲಹರವಿ ಮಂಡಲದ ೪ ಗ್ರಾಮ ಪಂಚಾಯ್ತಿಗಳು, ಅನಂತಪುರಂ ಜಿಲ್ಲೆಯ ಗುಂತಕಲ್ಲು ಮಂಡಲದ ೩ ಗ್ರಾಮ ಪಂಚಾಯ್ತಿಗಳು, ಡಿ. ಹಿರೇಹಾಳ ಮಂಡಲದ ೧೦ ಗ್ರಾಮ ಪಂಚಾಯ್ತಿಗಳು, ರಾಯದುರ್ಗಂ ಮಂಡಲದ ೪ ಗ್ರಾಮ ಪಂಚಾಯ್ತಿಗಳು, ಗುಮ್ಮಗಟ್ಟದ ೪ ಗ್ರಾಮ ಪಂಚಾಯ್ತಿಗಳು, ಬೆಳಗುಪ್ಪ ಮಂಡಲದ ೩ ಗ್ರಾಮ ಪಂಚಾಯ್ತಿಗಳು, ಬ್ರಹ್ಮ ಸಮುದ್ರಂ ಮಂಡಲದ ೪ ಗ್ರಾಮ ಪಂಚಾಯ್ತಿಗಳು, ಶೆಟ್ಟೂರು ಮಂಡಲದ ೪ ಗ್ರಾಮ ಪಂಚಾಯ್ತಿಗಳು, ಕುಂದುರ್ಪಿ ಮಂಡಲದ ೨ ಗ್ರಾಮ ಪಂಚಾಯ್ತಿಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ. ಗಡಿಭಾಗದಲ್ಲಿನ ೮೦ ಪಂಚಾಯ್ತಿಗಳನ್ನು ನೋಡಿದಾಗ ಚಳ್ಳಕೆರೆ ತಾಲೂಕಿನಲ್ಲಿ ಚೌಳೂರು ಮತ್ತು ಓಬುಳಾಪುರ(ಸಿರಿವಾಳ), ಬಳ್ಳಾರಿ ತಾಲೂಕಿನಲ್ಲಿ ಹಲಕುಂದಿ, ಸಂಡೂರು ತಾಲೂಕಿನ ವಿಠಲಾಪುರ, ಸಿರುಗುಪ್ಪ ತಾಲೂಕಿನ ಬಲಕುಂದಿ, ಕರೂರುಗಳಲ್ಲಿ ಮಾತ್ರ ಸಮುದಾಯದವರು ಅಧ್ಯಕ್ಷರಾಗಿದ್ದಾರೆ. ಮೊಳಕಾಲ್ಮೂರು ತಾಲೂಕಿನಲ್ಲಿ ಯಾರೂ ಇಲ್ಲ. ಇನ್ನೂ ಕರ್ನೂಲು ಜಿಲ್ಲೆಯ ಹಾಲಹರವಿ ಮಂಡಲದಲ್ಲಿ ಗೂಳ್ಯಂ, ಅನಂತಪುರಂ ಜಿಲ್ಲೆಯ ಡಿ.ಹಿರೇಹಾಳ ಮಂಡಲದ ಡಿ.ಹಿರೇಹಾಳ, ಮಲಪನಗುಡಿ, ರಾಯದುರ್ಗಂ ಮಂಡಲದ ವಡ್ರವನ್ನೂರು, ಗುಮ್ಮಗಟ್ಟದ ಗುಮ್ಮಗಟ್ಟ, ಬೆಳಗುಪ್ಪ ಮಂಡಲದ ವೇಪಲಪರ್ತಿ, ಶೆಟ್ಟೂರು ಮಂಡಲದ ಕನಕೂರುಗಳಲ್ಲಿ ಮಾತ್ರ ಸಮುದಾಯದ ಸರ್‌ಪಂಚ(ಅಧ್ಯಕ್ಷ)ರಾಗಿರುವರು.

ಗಡಿನಾಡ ಪರಿಸರದಲ್ಲಿ ಅಧ್ಯಯನಕ್ಕೆ ಒಳಪಡಿಸಿದ ೮೦ ಗ್ರಾಮ ಪಂಚಾಯ್ತಿಗಳಲ್ಲಿ ೧೩ ರಲ್ಲಿ ಮಾತ್ರ ಅಧ್ಯಕ್ಷರಿರುವುದು ಮೇಲಿನ ಅಂಕಿ-ಅಂಶಗಳಿಂದ ತಿಳಿಯಬಹುದು. ಜನಸಂಖ್ಯಾ ದೃಷ್ಟಿಯಿಂದ ಗಮನಿಸಿದಾಗ ಇದು ತುಂಬಾ ಕಡಿಮೆ. ಏಕೆಂದರೆ ಗಡಿಯಲ್ಲಿನ ಹೆಚ್ಚಿನ ಗ್ರಾಮಗಳಲ್ಲಿ ಸಮುದಾಯ ಮತ್ತು ಗ್ರಾಮ ಪಂಚಾಯ್ತಿ ಸದಸ್ಯರು ಇದ್ದರಾದರೂ ಅಧ್ಯಕ್ಷರಾಗಿರುವುದೇ ಕಡಿಮೆ. ಹಿಂದುಳಿದ ವರ್ಗಕ್ಕೆ ಮೀಸಲಾದ ಪಂಚಾಯ್ತಿಗಳು ಕುರುಬ ಸಮುದಾಯಕ್ಕಿಂತ ಬೇರೆ ಸಮುದಾಯಗಳು ಪಡೆದಿರುವುದು ಹೆಚ್ಚು. ಏಕೆಂದರೆ ಇಲ್ಲಿ ಸಮುದಾಯ ಆರ್ಥಿಕವಾಗಿ ಹಿಂದುಳಿದಿದೆ. ಜೊತೆಗೆ

ರಾಜಕೀಯ ಸಂಘಟನೆಯಿಲ್ಲದೇ ವಿವಿಧ ಪಕ್ಷಗಳಲ್ಲಿ ಹಂಚಿಹೋಗಿದೆ. ಇತ್ತೀಚೆಗೆ ಸಂಘಟನೆಯಾಗುತ್ತಿದೆ ಆದರೂ ಉಳಿದ ಸಮುದಾಯಗಳಿಗೆ ಹೋಲಿಸಿದರೆ ಇದು ಕಡಿಮೆಯೆಂದೇ ಹೇಳಬೇಕು.

ಒಟ್ಟಾರೆಯಾಗಿ ಈ ಪ್ರದೇಶದಲ್ಲಿ ಸಮುದಾಯವನ್ನು ರಾಜಕೀಯವಾಗಿ ಸಂಘಟಿಸುವ ಮುಖೇನ ಆರ್ಥಿಕ, ಶೈಕ್ಷಣಿಕವಾಗಿ ಬೆಳೆಯುವಂತೆ ಪ್ರೇರೇಪಿಸುವ ಕಾರ್ಯಗಳನ್ನು ಜರೂರಾಗಿ ಮಾಡಬೇಕಿದೆ. ಅದಕ್ಕಾಗಿ ಸಮುದಾಯದ ಮುಖಂಡರು ಶಿಕ್ಷಣ ಪಡೆದವರು, ಸಂಘ-ಸಂಸ್ಥೆಗಳಿಗೆ ಪುನಃಶ್ಚೇತನ ನೀಡಿ ದುಡಿಯಬೇಕಿದೆ.

### ೩.೪. ಶೈಕ್ಷಣಿಕ ಸ್ಥಿತಿಗತಿ

ಭಾರತೀಯ ಪಾರಂಪರಿಕ ಶಿಕ್ಷಣ ಪದ್ಧತಿಗೆ ಪುರಾತನ ಇತಿಹಾಸವಿದೆ. ಹಿಂದೆ ಗುರುಕುಲ ಪದ್ಧತಿಯಿದ್ದು, ಗುರುಗಳ ಹತ್ತಿರ ವಿದ್ಯಾರ್ಥಿಗಳು ವೇದ-ಶಾಸ್ತ್ರ ಗ್ರಂಥಗಳನ್ನು ಅಧ್ಯಯನ ಮಾಡುತ್ತಿದ್ದರು. ಅಂದು ಸ್ತ್ರೀ-ಪುರುಷರೆಂಬ ಭೇದವಿಲ್ಲದೇ ಎಲ್ಲರೂ ವಿದ್ಯೆ ಕಲಿಯುವ ಮುಕ್ತ ಅವಕಾಶವಿತ್ತು. ಕಾಲ ಸರಿದಂತೆ ಶಿಕ್ಷಣವೆಂದರೆ ಕೆಲವೇ ಸಮುದಾಯಗಳು ಅದರಲ್ಲಿಯೂ ಪುರುಷರು ಮಾತ್ರವೇ ಪಡೆಯಬೇಕು ಎಂಬಂತೆ ಬೆಳೆಯುತ್ತಾ ಬಂದಿತು. ಅದಕ್ಕೆ ಸಂಬಂಧಿಸಿದಂತೆ ಚರಿತ್ರೆಯ ಪುಟಗಳಲ್ಲಿ ಸಾಕಷ್ಟು ಪುರಾವೆಗಳು ದೊರೆಯುತ್ತವೆ. ಬ್ರಿಟೀಷರು ಬಂದ ಮೇಲೆ ಜಾರಿಗೆ ತಂದ ಚಾರ್ಟರ್ ಆಕ್ಟ್, ಮಾರ್ಲೆ-ಮಿಂಟೋ ಸುಧಾರಣೆ, ಮೆಕಾಲೆ ವರದಿ ಮತ್ತು ಭಾರತ ಸರಕಾರ ಕಾಯ್ದೆಗಳು 'ಸಾರ್ವತ್ರಿಕ ಶಿಕ್ಷಣ ಪದ್ಧತಿ'ಗೆ ನಾಂದಿ ಹಾಡಿತು. ಬ್ರಿಟೀಷರಿಂದ ಭಾರತಕ್ಕೆ ಸಾಕಷ್ಟು ತೊಂದರೆಗಳಾಗಿವೆ. ಆದರೂ ಶಿಕ್ಷಣ ವ್ಯವಸ್ಥೆಯಲ್ಲಿನ ಸುಧಾರಣೆಗಳು ಮಾತ್ರ ಅಮೂಲ್ಯವಾದವು ಎಂದೇ ಹೇಳಬೇಕು.

ಸ್ವಾತಂತ್ರ್ಯನಂತರ ಭಾರತ ಸರಕಾರವು ಸಂವಿಧಾನದ ನಾಲ್ಕನೆಯ ಪರಿಚ್ಛೇದದ ರಾಜ್ಯ ನಿರ್ದೇಶಕ ತತ್ವಗಳಲ್ಲಿ ಬರುವ ೪೫ನೇ ವಿಧಿಯ ಪ್ರಕಾರ ೬ರಿಂದ ೧೪ನೆಯ ವರ್ಷದ ವಯೋಮಾನದ ವರೆಗಿನ ಎಲ್ಲ ಮಕ್ಕಳಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ಒದಗಿಸಲು ಕ್ರಮ ವಹಿಸಿದೆ. ೨೦೦೨ರಲ್ಲಿ ಸಂವಿಧಾನಕ್ಕೆ ೮೬ನೇ ತಿದ್ದುಪಡಿ ತರುವ ಮೂಲಕ ಪ್ರಾಥಮಿಕ ಹಂತದವರೆಗೆ ಶಿಕ್ಷಣ ಪಡೆಯುವ ಹಕ್ಕನ್ನು ಮೂಲಭೂತ ಹಕ್ಕನ್ನಾಗಿ ಸಂವಿಧಾನದ ೨೧ನೇ ಅನುಚ್ಛೇದಕ್ಕೆ ಸೇರಿಸಲಾಯಿತು. ಕೊಠಾರಿ, ಮೊದಲಿಯರ್, ರಾಧಾಕೃಷ್ಣನ್ ಆಯೋಗಗಳ ವರದಿಗಳು ಪ್ರಾಥಮಿಕದಿಂದ ಉನ್ನತ ಶಿಕ್ಷಣದವರೆಗೆ ಶಿಕ್ಷಣ ನೀಡುವ ಕುರಿತಾಗಿ ವರದಿ ರೂಪಿಸಿದವು. ಹೀಗಾಗಿ ಶಿಕ್ಷಣದಲ್ಲಿ ಕ್ರಾಂತಿಕಾರಕ ಬದಲಾವಣೆ ಗಳಾದವು. ಇದು ಸಮಾಜದ ಮರು ಸಂಘಟನೆ ಮತ್ತು ಆರ್ಥಿಕ ಅಭಿವೃದ್ಧಿಯ ಸಾಧನ. ಆದ್ದರಿಂದಲೇ 'ಶಿಕ್ಷಣ ರಕ್ಷಣೆಯಷ್ಟೇ ಮುಖ್ಯ' ಎಂಬ ಶಿಕ್ಷಣ ತಜ್ಞ ಎಚ್. ನರಸಿಂಹಯ್ಯ ಅವರ ಮಾತು ಸ್ಪಷ್ಟ ನಿದರ್ಶನ ಎನಿಸುತ್ತದೆ.

ಬಿ.ಆರ್. ಅಂಬೇಡ್ಕರ್ ಅವರು ಶಿಕ್ಷಣದಿಂದ ಮಾತ್ರ ದಲಿತ, ಶೋಷಿತ, ಹಿಂದುಳಿದವರನ್ನು ಶೋಷಣೆಯಿಂದ ಮುಕ್ತಗೊಳಿಸಲು ಸಾಧ್ಯವೆಂದಿರುವರು. ಈ ಹಿನ್ನೆಲೆಯಲ್ಲಿ ಹೇಳುವುದಾದರೆ

ದೇಶವೊಂದರ ಅಭಿವೃದ್ಧಿ ಮಾಪನವು ಅಲ್ಲಿನ ಶಿಕ್ಷಣವನ್ನು ಅವಲಂಭಿಸಿರುತ್ತದೆ. ಈ ಕಾರಣದಿಂದಲೇ ವಿಶ್ವ ಅಭಿವೃದ್ಧಿ ವರದಿಯು ಪ್ರಸ್ತುತ ಪಡಿಸಿರುವ "ದೇಶದ ಅಭಿವೃದ್ಧಿಯ ಮಾನದಂಡಗಳಾಗಿರುವ ಮಾನವ ಅಭಿವೃದ್ಧಿ ಸೂಚಿ ಹಾಗೂ ಜೀವನದ ಭೌತಿಕ ಅನುಸೂಚಿಯಲ್ಲಿ ಶಿಕ್ಷಣವನ್ನು ಪ್ರಮುಖ ಸೂತ್ರವನ್ನಾಗಿ ಬಳಸಿಕೊಂಡಿದೆ."[೨೯] ಇದರಿಂದ ಮಾತ್ರ ದೇಶ ಆರ್ಥಿಕವಾಗಿ ಅಭಿವೃದ್ಧಿ ಪಥದತ್ತ ಬರಲು ಸಾಧ್ಯ ಎಂಬುದನ್ನು ಮುಖ್ಯವಾಗಿಟ್ಟುಕೊಂಡು ಭಾರತದಲ್ಲಿಯೂ ಕ್ರಾಂತಿಕಾರಕ ಬದಲಾವಣೆ ಗಳನ್ನು ತರಲಾಯಿತು.

ಸರಕಾರಗಳು ಇಂದು ಸಮಾಜಮುಖಿ ಯೋಜನೆಗಳ ಮುಖೇನ ಶಿಕ್ಷಣ ನೀಡುತ್ತಿವೆ. ಆದರೂ ಇಂದಿನ ಆಧುನಿಕ ಶಿಕ್ಷಣವನ್ನು ಸಂಪೂರ್ಣವಾಗಿ ಬಳಸಿಕೊಂಡು ಮುನ್ನೆಲೆಗೆ ಬರಲು ಕೆಲ ಸಮುದಾಯಗಳಿಗೆ ಇಂದಿಗೂ ಸಾಧ್ಯವಾಗುತ್ತಿಲ್ಲ. ಅದರಲ್ಲಿಯೂ ಈ ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ವೇದಾವತಿ-ತುಂಗಭದ್ರ ನದಿಗಳ ನಡುವಿನ ಗಡಿನಾಡು ದ್ವಿಭಾಷಿಕ ಪರಿಸರ. ಗಡಿನಾಡು ಎಂಬುದೆಂದಿಗೂ ಎರಡು ರಾಜ್ಯಗಳ ದಿವ್ಯನಿರ್ಲಕ್ಷ್ಯಕ್ಕೆ ಒಳಗಾದ ಪ್ರದೇಶವಾಗಿರುತ್ತದೆ. ಹಾಗಾಗಿ ಅಲ್ಲಿ ನೆಲೆಸಿರುವ ಸಮುದಾಯಗಳು ಆರ್ಥಿಕವಾಗಿಯೂ, ರಾಜಕೀಯವಾಗಿಯೂ ತೀರಾ ಹಿಂದುಳಿದಿರುತ್ತದೆ. ಆದುದರಿಂದಲೇ ಶೈಕ್ಷಣಿಕ ಸೌಲಭ್ಯಗಳು ದೊರೆಯುವುದು ದುರ್ಲಬವೆಂದೇ ಹೇಳಬೇಕಾಗುತ್ತವೆ. ಪ್ರಸ್ತುತ ೨೦೧೧ರ ಜನಗಣತಿಯ ಪ್ರಕಾರ ಕರ್ನಾಟಕದ ಸಾಕ್ಷರತಾ ಪ್ರಮಾಣ ಶೇಕಡಾ ೭೫.೩೬, ಆಂಧ್ರಪ್ರದೇಶದ ಸಾಕ್ಷರತೆ ಶೇಕಡ ೬೭.೦೨ರಷ್ಟಿದೆ. ಇದನ್ನು ಮಾನದಂಡವಾಗಿಟ್ಟುಕೊಂಡು ಅಧ್ಯಯನಕ್ಕೆ ಆಯ್ದುಕೊಂಡ ಈ ಪರಿಸರದಲ್ಲಿನ ಕುರುಬ ಸಮುದಾಯದ ಶೈಕ್ಷಣಿಕ ಸ್ಥಿತಿಗತಿಯನ್ನು ಸಮೀಕ್ಷೆಗೆ ಒಳಪಡಿಸಿದಾಗ ಅತೀ ನಿರಾಶಾದಾಯಕವಾದ ಫಲಿತಾಂಶ ದೊರೆಯುತ್ತದೆ. ಏಕೆಂದರೆ ಎರಡೂ ರಾಜ್ಯಗಳ ಗಡಿಯಲ್ಲಿಯೂ ಸಾಕ್ಷರತೆಯ ಪ್ರಮಾಣ ತೀರಾ ಕಡಿಮೆಯಿದೆ.

ಕರ್ನಾಟಕದ ಪಾವಗಡ ತಾಲೂಕಿನ ಜಾಲೋಡಿನಿಂದ ಹಿಡಿದು ಸಿರುಗುಪ್ಪ ತಾಲೂಕಿನ ಉತ್ತನೂರಿನವರೆಗೆ ಒಟ್ಟು ೩೮ ಹಳ್ಳಿಗಳ ಸಾಕ್ಷರತಾ ಪ್ರಮಾಣ, ಆಂಧ್ರಪ್ರದೇಶದ ಅನಂತಪುರಂ ಜಿಲ್ಲೆಯ ಕುಂದುರ್ಪಿ ಮಂಡಲದಿಂದ ಕರ್ನೂಲು ಜಿಲ್ಲೆಯ ಹಾಲಹರವಿ ಮಂಡಲದ ಚಿಂತಕುಂಟದವರೆಗೆ ಒಟ್ಟು ೩೨ ಗ್ರಾಮಗಳು. ಇವುಗಳಲ್ಲಿ ೨೦೧೧ರ ಜನಗಣತಿ ಪ್ರಕಾರ ಹೆಚ್ಚು ಸಾಕ್ಷರತೆ ಹೊಂದಿರುವ ೫ ಗ್ರಾಮಗಳು, ಅತೀ ಕಡಿಮೆ ಸಾಕ್ಷರತಾ ಗ್ರಾಮಗಳನ್ನು ಈ ಕೆಳಗಿನ ಕೋಷ್ಟಕಗಳಲ್ಲಿ ನೀಡಲಾಗಿದೆ"[೩೦]

## ಹೆಚ್ಚು ಸಾಕ್ಷರತೆ ಹೊಂದಿರುವ ಕರ್ನಾಟಕದ ಗಡಿಗ್ರಾಮಗಳು

| ಕ್ರಸಂ | ಗ್ರಾಮದ ಹೆಸರು | ಸಾಕ್ಷರತೆ ಶೇಕಡವಾರು | ಪುರುಷರ ಸಾಕ್ಷರತೆ | ಮಹಿಳೆಯರ ಸಾಕ್ಷರತೆ | ಪು.ಮ.ಸಾಕ್ಷರತೆಯ ನಡುವಿನ ವ್ಯತ್ಯಾಸ |
|---|---|---|---|---|---|
| ೦೧. | ಕೊಂಡ್ಲಹಳ್ಳಿ | ೭೬.೯೨ | ೮೭.೫೩ | ೬೫.೯೫ | ೨೧.೫೮ |
| ೦೨. | ಪಗಡಲ ಬಂಡೆ | ೭೩.೮೪ | ೮೪.೫೨ | ೬೨.೪೨ | ೨೨.೦೯ |
| ೦೩. | ಮೊಗಲಹಳ್ಳಿ | ೭೩.೩೭ | ೮೫.೯೯ | ೫೯.೮೩ | ೨೬.೧೬ |
| ೦೪. | ಚೌಳೂರು | ೭೨.೨೨ | ೭೯.೭೬ | ೬೪.೧೪ | ೧೫.೬೨ |
| ೦೫. | ನೇರ್ಲಗುಂಟೆ | ೭೨.೧೫ | ೮೨.೦೩ | ೬೪.೦೩ | ೧೮.೦೦ |

## ಹೆಚ್ಚು ಸಾಕ್ಷರತೆ ಹೊಂದಿರುವ ಆಂಧ್ರಪ್ರದೇಶದ ಗಡಿ ಗ್ರಾಮಗಳು

| ಕ್ರಸಂ | ಗ್ರಾಮದ ಹೆಸರು | ಸಾಕ್ಷರತೆ ಶೇಕಡವಾರು | ಪುರುಷರ ಸಾಕ್ಷರತೆ | ಮಹಿಳೆಯರ ಸಾಕ್ಷರತೆ | ಪು.ಮ.ಸಾಕ್ಷರತೆಯ ನಡುವಿನ ವ್ಯತ್ಯಾಸ |
|---|---|---|---|---|---|
| ೦೧. | ಗುಂಡಿಗೇನಪಲ್ಲಿ | ೬೭.೧೨ | ೭೮.೪೬ | ೫೫.೮೯ | ೨೨.೫೭ |
| ೦೨ | ಕುಂದುರ್ಪಿ | ೬೬.೬೦ | ೭೭.೮೩ | ೫೪.೫೬ | ೨೩.೨೭ |
| ೦೩. | ಸೋಮಲಾಪುರಂ | ೬೬.೧೭ | ೭೬.೫೫ | ೫೫.೮೦ | ೨೦.೭೫ |
| ೦೪. | ಹಿರ್ದೇಹಾಳ್ | ೬೪.೩೦ | ೭೭.೫೮ | ೫೦.೮೯ | ೨೬.೬೯ |
| ೦೫. | ಹಾಲಹರವಿ | ೬೪.೧೪ | ೭೭.೨೯ | ೫೦.೬೧ | ೨೬.೬೮ |

## ಅತೀ ಕಡಿಮೆ ಸಾಕ್ಷರತೆ ಹೊಂದಿರುವ ಕರ್ನಾಟಕದ ಗಡಿ ಗ್ರಾಮಗಳು

| ಕ್ರಂ.ಸಂ | ಗ್ರಾಮದ ಹೆಸರು | ಸಾಕ್ಷರತೆ ಶೇಕಡವಾರು | ಪುರುಷರ ಸಾಕ್ಷರತೆ | ಮಹಿಳೆಯರ ಸಾಕ್ಷರತೆ | ಪು.ಮಸಾಕ್ಷರತೆಯ ನಡುವಿನ ವ್ಯತ್ಯಾಸ |
|---|---|---|---|---|---|
| ೦೧. | ಉತ್ತನೂರು | ೪೪.೬೭ | ೫೫.೦೫ | ೩೪.೫೨ | ೨೦.೫೩ |
| ೦೨. | ಬಲಕುಂದಿ | ೪೪.೬೨ | ೫೭.೪೧ | ೩೨.೧೧ | ೨೫.೩೦ |
| ೦೩. | ಗೋಸ್ಬಾಳ | ೪೯.೨೦ | ೬೨.೫೫ | ೫೫.೭೪ | ೨೬.೮೧ |
| ೦೪. | ನಾಗಸಮುದ್ರ | ೫೦.೮೪ | ೫೯.೦೫ | ೪೨.೦೮ | ೧೬.೯೭ |
| ೦೫. | ಅಶೋಕ ಸಿದ್ಧಾಪುರ | ೫೧.೮೬ | ೬೩.೦೮ | ೪೦.೭೩ | ೨೨.೩೫ |

## ಅತೀ ಕಡಿಮೆ ಸಾಕ್ಷರತೆಯ ಆಂಧ್ರಪ್ರದೇಶದ ಗಡಿಗ್ರಾಮಗಳು

| ಕ್ರಂ.ಸಂ | ಗ್ರಾಮದ ಹೆಸರು | ಸಾಕ್ಷರತೆ ಶೇಕಡವಾರು | ಪುರುಷರ ಸಾಕ್ಷರತೆ | ಮಹಿಳೆಯರ ಸಾಕ್ಷರತೆ | ಪು.ಮ.ಸಾಕ್ಷರತೆಯ ನಡುವಿನ ವ್ಯತ್ಯಾಸ |
|---|---|---|---|---|---|
| ೦೧. | ಡಿ.ಕೊಂಡಾಪುರಂ | ೩೫.೭೩ | ೪೬.೨೬ | ೨೮.೭೫ | ೧೭.೫೧ |
| ೦೨. | ನಾಗಿರೆಡ್ಡಿಪಲ್ಲಿ | ೪೦.೮೮ | ೫೧.೭೫ | ೨೯.೯೭ | ೨೨.೦೦ |
| ೦೩. | ನೇಮಕಲ್ಲು | ೪೪.೫೨ | ೫೩.೯೨ | ೩೪.೭೫ | ೧೯.೧೭ |

| | | | | |
|---|---|---|---|---|
| ೦೪. ಗೂಳ್ಯಂ | ೪೫.೩೦ | ೫೪.೦೪ | ೩೬.೪೭ | ೧೭.೫೮ |
| ೦೫. ಮಲಪನಗುಡಿ | ೪೭.೨೩ | ೫೭.೭೦ | ೩೫.೬೩ | ೨೨.೦೭ |

ಮೇಲಿನ ಕೋಷ್ಟಕಗಳು ಗಡಿಯಲ್ಲಿನ ಶೈಕ್ಷಣಿಕ ಸ್ಥಿತಿಗತಿಯನ್ನು ಗ್ರಹಿಸಲು ಸಹಾಯಕವಾಗಿವೆ. ಈ ಪರಿಸರದಲ್ಲಿ ನೆಲೆಸಿರುವ ಕುರುಬ ಸಮುದಾಯ ಪಡೆದ ಶಿಕ್ಷಣ ಸ್ಥಿತಿ ಇದಕ್ಕಿಂತಲೂ ಕಡಿಮೆಯಿದೆ ಎಂದೇ ಹೇಳಬೇಕು. ಏಕೆಂದರೆ ಅಧ್ಯಯನಕ್ಕೆ ಒಳಪಡಿಸಿದ ಗಡಿ ಗ್ರಾಮಗಳಲ್ಲಿ ಕುರುಬ ಸಮುದಾಯವು ಪ್ರಾಥಮಿಕ ಶಿಕ್ಷಣದಿಂದ ಉನ್ನತ ಶಿಕ್ಷಣದವರೆಗಿನ ಅಂಕಿ-ಅಂಶಗಳನ್ನು ಗಮನಿಸಿದಾಗ ಇಂದು ಪ್ರತಿ ಗ್ರಾಮಗಳಲ್ಲಿಯೂ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಪಡೆಯುವವರ ಸಂಖ್ಯೆ ಹೆಚ್ಚಾಗಿದೆ. ಉನ್ನತ ಶಿಕ್ಷಣ ಪಡೆದವರ ಸಂಖ್ಯೆ ಕಡಿಮೆಯಿದೆ. ಅದರಲ್ಲಿಯೂ ವೈದ್ಯಕೀಯ ಮತ್ತು ತಾಂತ್ರಿಕ ಶಿಕ್ಷಣ ಪಡೆದವರು ಬೆರಳೆಣಿಕೆಯಷ್ಟು ಮಾತ್ರ. ಶಿಕ್ಷಣವನ್ನು ಪಡೆದು ಉದ್ಯೋಗಕ್ಕೆ ಸೇರಿದ ಸಮುದಾಯದ ಶೈಕ್ಷಣಿಕ ಪ್ರಗತಿಯ ಚಿತ್ರಣವನ್ನು ಈ ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

| ಕ್ರಸಂ. | ಉದ್ಯೋಗ/ಹುದ್ದೆಗಳು | ಒಟ್ಟು ಸಂಖ್ಯೆ |
|---|---|---|
| ೦೧ | ಪ್ರಾಥಮಿಕ ಶಾಲಾ ಶಿಕ್ಷಕರು | ೧೯೮ |
| ೦೨ | ಪ್ರೌಢಶಾಲಾ ಶಿಕ್ಷಕರು | ೯೩ |
| ೦೩ | ಉಪನ್ಯಾಸಕರು | ೧೯ |
| ೦೪ | ಅಭಿಯಂತರರು | ೧೬ |
| ೦೫. | ವೈದ್ಯರು | ೦೫ |
| ೦೬. | ಆರಕ್ಷಕರು (Potice) | ೭೫ |
| ೦೭. | ಇತರೆ<br>ಡಿ.ಡಿ.ಪಿ.ಐ., ರೈಲ್ವೆ, ಅಗ್ರಿ,<br>ಸೈನಿಕ, ಅಂಚೆ ಇತ್ಯಾದಿ | ೫೦ |

ಈ ಪರಿಸರದಲ್ಲಿನ ಕುರುಬ ಸಮುದಾಯವು ಹೆಚ್ಚು ಪ್ರಾಥಮಿಕ ಶಾಲಾ ಶಿಕ್ಷಕರನ್ನು ಒಳಗೊಂಡಿರುವುದನ್ನು ಮೇಲಿನ ಕೋಷ್ಟಕದಿಂದ ತಿಳಿಯಬಹುದು. ಕೊಂಡ್ಲಹಳ್ಳಿ-೮೦ಕ್ಕೂ ಅಧಿಕವಾಗಿ, ಓಬುಳಾಪುರ(ಸಿರಿವಾಳ)-೨೦, ನಾಯಕನಹಟ್ಟಿ-೧೨, ಚೌಳೂರು-೧೦, ಪೋಲೆಪಲ್ಲಿ-೮, ಉಳಿದ ಗ್ರಾಮಗಳಲ್ಲಿ ೪-೫ ಸಂಖ್ಯೆಯಲ್ಲಿ ಪ್ರಾಥಮಿಕ ಶಿಕ್ಷಕರು ಇದ್ದಾರೆ. ಮೆಚ್ಚಿರಿ, ವಡ್ರಹೊನ್ನೂರು, ಗೋಸ್ಬಾಳಗಳಲ್ಲಿ ಒಬ್ಬರು ಮಾತ್ರ ಶಿಕ್ಷಕರಾಗಿರುವುದು. ಪ್ರೌಢಶಾಲೆಯ ಶಿಕ್ಷಕರಾಗಿರುವುದು ತೀರಾ ಕಡಿಮೆಯಾಗಿದ್ದು ಕೆಲವೆಡೆ ೪-೫ ಜನರಿದ್ದರೆ ಮತ್ತೆ ಕೆಲವೆಡೆ ಒಬ್ಬರು ಅಥವಾ ಇಲ್ಲದಿರುವುದೇ ಹೆಚ್ಚಾಗಿದೆ. ಉಪನ್ಯಾಸಕರು ಅಲ್ಲಲ್ಲಿ ಒಬ್ಬೊಬ್ಬರಿದ್ದು, ಸರಕಾರಿ ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಅಭಿಯಂತರರು ಗುಮ್ಮಗಟ್ಟದ ಶ್ರೀಧರ್, ಕೋನಾಪುರಂನ ಶ್ರೀನಿವಾಸ ಅಮೇರಿಕಾದಲ್ಲಿ, ಮುದ್ದುಕೃಷ್ಣ ಚೆನ್ನೈ, ಉಳಿದವರು ಬೆಂಗಳೂರು ಒಳಗೊಂಡಂತೆ ಮತ್ತಿತರ ಕಡೆ ಉದ್ಯೋಗದಲ್ಲಿದ್ದಾರೆ. ಚೌಳೂರಿನ ಡಾ. ಸಂತೋಷ–ಅಮೆರಿಕಾ, ಡಾ. ರೇವಣ್ಣ, ಡಾ. ರಾಘವೇಂದ್ರ, ಡಾ. ಸುಹಾಸಿನಿ, ಡಾ. ರಾಜು ಅವರು ಕರ್ನಾಟಕದಲ್ಲಿಯೇ ಉದ್ಯೋಗದಲ್ಲಿರುವರು. ಇನ್ನೂ ಅಗ್ರಿಕಲ್ಚರಲ್ ಡೈರೆಕ್ಟರಾಗಿ ಗುಮ್ಮಗಟ್ಟದ ಹೊನ್ನೂರಪ್ಪ, ಕಾಮಸಮುದ್ರದ ಸಿ. ಕರೇಗೌಡ ಅವರು ಸೇವೆಯಲ್ಲಿದ್ದಾರೆ. ಗುಮ್ಮಗಟ್ಟದ ಕೆ.ಬಿ. ಸಿದ್ಧಪ್ಪ ಅವರು ಹೈಕೋರ್ಟಿನ ಜಡ್ಜ್ ಆಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಚೌಳೂರಿನ ಆನಂದಪ್ಪ ಅವರು ಪೋಲೀಸ್ ಇನ್ಸ್‌ಪೆಕ್ಟರ್ ಆಗಿದ್ದಾರೆ. ಉಳಿದಂತೆ ೮ ಜನ ಸೈನ್ಯದಲ್ಲಿ, ೬ ಜನ ಅಂಚೆ ಇಲಾಖೆಯಲ್ಲಿ ಮುಂತಾಗಿ ಸೇವೆಯಲ್ಲಿರುವುದನ್ನು ಕಾಣಬಹುದು.

ಈ ಪರಿಸರದಲ್ಲಿನ ಸಮುದಾಯದ ಜನಸಂಖ್ಯೆಯ ದೃಷ್ಟಿಯಿಂದ ಗಮನಿಸಿದರೆ ಶಿಕ್ಷಣ ಮತ್ತು ಉದ್ಯೋಗ ಪಡೆದವರ ಸಂಖ್ಯೆ ಶೇಕಡ ೧ಕ್ಕಿಂತಲೂ ಕಡಿಮೆಯಿದೆ. ಇತ್ತೀಚಿನ ವರ್ಷಗಳಲ್ಲಿ ಮಕ್ಕಳಿಗೆ ಶಿಕ್ಷಣ ಕೊಡಿಸಲು ಪೋಷಕರು ಆಸಕ್ತಿ ತೋರಿಸುತ್ತಿದ್ದಾರೆ. ಪ್ರತಿ ಗ್ರಾಮಗಳಲ್ಲಿಯೂ ಬಾಲಕಿ–ಬಾಲಕರೆನ್ನದೇ ಪ್ರೌಢಶಾಲೆಯವರೆಗೆ ಶಿಕ್ಷಣ ಕೊಡಿಸುತ್ತಿದ್ದಾರೆ. ಆದರೆ ಪದವಿ ಪೂರ್ವ, ಪದವಿ ಶಿಕ್ಷಣ ಪಡೆಯಲು ತಾಲೂಕು ಅಥವಾ ಜಿಲ್ಲಾ ಕೇಂದ್ರಗಳಿಗೆ ಹೋಗಬೇಕಾಗುತ್ತದೆ. ಆದುದರಿಂದ ಪ್ರೌಢ ಶಿಕ್ಷಣದ ನಂತರ ಮುಂದಿನ ವಿದ್ಯಾಭ್ಯಾಸಕ್ಕೆ ಕಳುಹಿಸುವುದು ಕಡಿಮೆಯಿದೆ. ಅದರಲ್ಲಿಯೂ ಮಹಿಳೆಯರನ್ನು ಕಳುಹಿಸುವುದೇ ಇಲ್ಲ. ಉದಾಹರಣೆಗೆ ಕರ್ನಾಟಕದ ಗಡಿಗ್ರಾಮಗಳು ತಮ್ಮ ತಾಲೂಕು, ಜಿಲ್ಲಾ ಕೇಂದ್ರಗಳನ್ನು ಉಪಯೋಗಿಸಿಕೊಳ್ಳುತ್ತಿದೆ. ಓಬುಳಾಪುರ (ಸಿರಿವಾಳ), ಪಗಡಲ ಬಂಡೆ, ಕಾಮಸಮುದ್ರ, ಬಸಾಪುರ, ಘಟ್ಟಪರ್ತಿ, ಹೊನ್ನೂರು, ಕೋಡಿಹಳ್ಳಿಗಳನ್ನು ಒಳಗೊಂಡಂತೆ ಇರುವ ಗಡಿಗ್ರಾಮಗಳು ಪರಶುರಾಮಪುರ, ಚಳ್ಳಕೆರೆ ಹಾಗೂ ಚಿತ್ರದುರ್ಗವನ್ನು, ಕೊಂಡ್ಲಹಳ್ಳಿ, ಮೊಗಲಹಳ್ಳಿ, ಕೋನಸಾಗರ, ಹನುಮಂತನಹಳ್ಳಿ, ಕಡೆಉಡೇವು, ನಾಗಸಮುದ್ರ, ಚಿಕ್ಕೇರಹಳ್ಳಿ, ಬೊಮ್ಮಕ್ಕನಹಳ್ಳಿಗಳನ್ನು ಒಳಗೊಂಡಂತೆ ಮೊಳಕಾಲ್ಮೂರನ್ನು, ಕಣಕುಪ್ಪೆ, ಮುರುಡಿ, ತಮ್ಮೇನಹಳ್ಳಿ, ಕರಡಿಹಳ್ಳಿ, ಸಿರೇಕುಳ, ಭದ್ರಳ್ಳಿ, ದೇವಸಮುದ್ರ, ಅಶೋಕ ಸಿದ್ಧಾಪುರ ಗ್ರಾಮಗಳು ರಾಂಪುರ, ಮೊಳಕಲ್ಮೂರು, ಚಿತ್ರದುರ್ಗ, ಬಳ್ಳಾರಿಗಳತ್ತ ಬರುತ್ತಿದ್ದಾರೆ. ಬಳ್ಳಾರಿಯ ಗಡಿಗ್ರಾಮಗಳು, ಸಿರುಗುಪ್ಪ ಗಡಿಗ್ರಾಮಗಳು ಆಯಾ ತಾಲೂಕು ಜಿಲ್ಲಾ ಕೇಂದ್ರಗಳನ್ನು ಅವಲಂಬಿಸಿವೆ. ಆಂಧ್ರಪ್ರದೇಶದ ಗಡಿ ಗ್ರಾಮಗಳು ಅಲ್ಲಿನ ಮಂಡಲ ಅಥವಾ ಜಿಲ್ಲಾ ಕೇಂದ್ರಗಳನ್ನು ಉನ್ನತ ಶಿಕ್ಷಣ ಪಡೆಯಲು ಬಳಸಿಕೊಳ್ಳುತ್ತಿವೆ. ಉದಾಹರಣೆಗೆ ಗುಮ್ಮಗಟ್ಟ, ವೇಪಲಪರ್ತಿ, ರಾಯಂಪಲ್ಲಿ, ವಡ್ರಹೊನ್ನೂರು, ಮಾರಂಪಲ್ಲಿ ಸುತ್ತಲ ಗ್ರಾಮಗಳು ರಾಯದುರ್ಗಂಗೆ ಪದವಿ ಪೂರ್ವ, ಪದವಿ ಶಿಕ್ಷಣಕ್ಕೆ ಬರಬೇಕು. ಇಂತಹ ಸಮಸ್ಯೆಗಳು ಗಡಿಯಾದ್ಯಂತ ಕಂಡುಬರುತ್ತವೆ. ಇಂದಿನ ಪಟ್ಟಣಗಳಲ್ಲಿನ ನಾಜೂಕಿನ ಬದುಕು ಮಕ್ಕಳನ್ನು ಹಾಳು ಮಾಡುತ್ತದೆಯೆಂಬ ಭಯದಿಂದ, ಅಲ್ಲಿ ಸೌಕರ್ಯಗಳನ್ನು ಒದಗಿಸಲು

ಆಗದಿರುವುದು, ಹಾಸ್ಟೆಲ್ ವ್ಯವಸ್ಥೆಗಳಿಲ್ಲದಿರುವುದು, ಆರ್ಥಿಕ ಮುಗ್ಗಟ್ಟುಗಳಿಂದ ಉನ್ನತ ಶಿಕ್ಷಣ ಪಡೆಯುವವರ ಸಂಖ್ಯೆ ಆಶಾದಾಯಕವಾಗಿಲ್ಲ. ಭಾರತವು ಭಾಷಾವಾರು ಪ್ರಾಂತ್ಯಗಳಾಗಿ ವಿಂಗಡನೆಯಾಗುವ ಪೂರ್ವದಲ್ಲಿ ಕನ್ನಡದ ಪ್ರದೇಶಗಳಾಗಿದ್ದ ಆಲೂರು, ಆದೋನಿ, ರಾಯದುರ್ಗಂ, ಕಲ್ಯಾಣದುರ್ಗಂ, ಮಡಕಸಿರಾ ಮುಂತಾದ ಪ್ರದೇಶಗಳಲ್ಲಿ ಒಂದು ವರದಿಯಲ್ಲಿ ಉಲ್ಲೇಖಿಸಿರುವ ಅಂಕಿಸಂಖ್ಯೆ ಪ್ರಕಾರ ಅನಂತಪುರಂ ಜಿಲ್ಲೆಯಲ್ಲಿ –೮, ಕರ್ನೂಲು ಜಿಲ್ಲೆಯಲ್ಲಿ–೩೦, ಮೆಹಬೂಬ್ ನಗರ ಜಿಲ್ಲೆಯಲ್ಲಿ–೧೨, ಮೆದಕ್ ಜಿಲ್ಲೆಯಲ್ಲಿ–೧೦, ಹೈದರಾಬಾದ್ ನಗರದಲ್ಲಿ–೨ ಶಾಲೆಗಳು ಸೇರಿದಂತೆ ಒಟ್ಟು ೮೪ ಕನ್ನಡ ಶಾಲೆಗಳಿವೆ. ಅದರಲ್ಲಿ ಸುಮಾರು ೧೮ ಸಾವಿರ ವಿದ್ಯಾರ್ಥಿಗಳು ೧ನೆಯ ತರಗತಿಯಿಂದ ೧೦ನೆಯ ತರಗತಿಯವರೆಗೆ ಕನ್ನಡದಲ್ಲಿ ಕಲಿಯುತ್ತಿದ್ದರು. ಅಧ್ಯಯನ ಕೈಗೊಂಡ ಪರಿಸರದಲ್ಲಿ ಡಿ.ಹಿರೇಹಾಳ ಮಂಡಲದಲ್ಲಿ ೧೪ ಪ್ರಾಥಮಿಕ, ೨ ಪ್ರೌಢಶಾಲೆಗಳಿವೆ. ಗೂಳ್ಯಂ ಸುತ್ತಮುತ್ತಲು ೦೮ ಪ್ರಾಥಮಿಕ, ೧ ಪ್ರೌಢಶಾಲೆಯಿದೆ. ರಾಯದುರ್ಗಂ, ಕಲ್ಯಾಣದುರ್ಗಂ ಪರಿಸರದಲ್ಲಿ ಇದ್ದ ಕನ್ನಡ ಶಾಲೆಗಳನ್ನು ಮುಚ್ಚಲಾಗಿದೆ. ಅದಕ್ಕೆ ಅನೇಕ ಕಾರಣಗಳಿವೆ. ಗಡಿ ಪ್ರದೇಶದಲ್ಲಿ ತೆಲುಗು ಮಾಧ್ಯಮಕ್ಕಿಂತಲೂ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಕೊಡಿಸಲು ಆಸಕ್ತಿ ತೋರಿಸುತ್ತಿದ್ದಾರೆ. ಅದಕ್ಕಾಗಿ ಕರ್ನಾಟಕದಲ್ಲಿರುವ ತಮ್ಮ ಸಂಬಂಧಿಕರ ಮನೆಗಳಲ್ಲಿ ಮಕ್ಕಳನ್ನು ಬಿಟ್ಟು ಕನ್ನಡ ಶಾಲೆಗಳಲ್ಲಿ ಕಲಿಸುತ್ತಿದ್ದಾರೆ. ಇಂದು ಪೆನುಗೊಂಡದ ಶಾಸಕರಾಗಿರುವ ಬಿ.ಕೆ. ಪಾರ್ಥಸಾರಥಿ ಅವರು ಬೆಂಗಳೂರು ವಿಶ್ವವಿದ್ಯಾಲಯದಿಂದ ಪದವಿ ಪಡೆದವರಾಗಿದ್ದಾರೆ. ಅದರಂತೆಯೇ ಡಾಕ್ಟರ್, ಇಂಜಿನೀಯರ್‌ಗಳಾಗಿ ಇಂದು ಸೇವೆ ಸಲ್ಲಿಸುತ್ತಿರುವವರು ಕರ್ನಾಟಕದಲ್ಲಿ ಶಿಕ್ಷಣ ಪಡೆದವರೇ ಹೆಚ್ಚಾಗಿದ್ದಾರೆ.

ಮುಖ್ಯವಾದ ಸಂಗತಿಯೆಂದರೆ ಈ ಪರಿಸರದಲ್ಲಿನ ಕುರುಬ, ಗೊಲ್ಲ, ಲಿಂಗಾಯಿತರಂಥ ಸಮುದಾಯಗಳ ಮನೆ ಮಾತು ಕನ್ನಡವಾಗಿದೆ. ವ್ಯವಹಾರಕ್ಕೆ ತೆಲುಗು ಭಾಷೆಯನ್ನು ಅವಲಂಭಿಸಿದ್ದಾರಾದರೂ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಶೈಕ್ಷಣಿಕ ಒಡನಾಟವು ಕರ್ನಾಟಕದೊಂದಿಗೆ ಹೆಚ್ಚಾಗಿದೆ. ಹಾಗಾಗಿಯೇ ಇಲ್ಲಿ ಪ್ರತಿವರ್ಷವೂ ಮಂಡಲ/ತಾಲೂಕು ಮಟ್ಟದಲ್ಲಿಕನ್ನಡ ಸಾಹಿತ್ಯ ಸಮ್ಮೇಳನಗಳಂಥವನ್ನು ನಡೆಸಿಕೊಂಡು ಬಂದಿದ್ದಾರೆ; ಬರುತ್ತಲಿದ್ದಾರೆ. ಆ ಮುಖೇನ ಕರ್ನಾಟಕಾಂಧ್ರ ಗಡಿ ಪರಿಸರದ ನಾಡು–ನುಡಿ ಸಂಸ್ಕೃತಿಯನ್ನು ಉಳಿಸಿ–ಬೆಳೆಸುವ ಕಾರ್ಯಕ್ರಮಗಳನ್ನು ಸ್ಥಳೀಯ ಕನ್ನಡ–ತೆಲುಗು ಮತ್ತು ಕರ್ನಾಟಕದ ವಿದ್ವಾಂಸರನ್ನು ಕರೆಯಿಸುವ ಮೂಲಕ ಗೋಷ್ಠಿಗಳನ್ನು ಆಯೋಜಿಸುತ್ತಿದ್ದಾರೆ. ಕಲ್ಯಾಣದುರ್ಗಂದಿಂದ ಹಿಡಿದು ಆಲೂರಿನವರೆಗೂ ಈ ಕಾರ್ಯಕ್ರಮಗಳು ನಡೆಯುತ್ತಿವೆ. ಎರಡು ಕಡೆಯ ಗಡಿಯಲ್ಲಿನ ಸಮುದಾಯಗಳಿಗೆ ಎರಡು ಭಾಷೆಗಳ ಮೇಲು ಪ್ರೀತಿಯಿದೆ. ಭಾಷೆಗೆ ಗಡಿಯಿದೆ ಬಾಂಧವ್ಯಕ್ಕೆ ಗಡಿಯಿಲ್ಲ ಎಂಬಂತೆ, ಇದು ರಾಜಕೀಯ ಗಡಿ ಮಾತ್ರವೇ ಹೊರತು ಸಾಂಸ್ಕೃತಿಕ ಗಡಿಯಲ್ಲವೆಂಬಂತೆ ಅನ್ಯೋನ್ಯವಾಗಿ ಬದುಕುತ್ತಿದ್ದಾರೆ.

ಈ ಎಲ್ಲ ಅಂಶಗಳ ಜೊತೆಗೆ ಗಮನಿಸಬೇಕಾದುದು ಎಂದರೆ ಈ ಪರಿಸರದಲ್ಲಿ ಕನ್ನಡ ಶಾಲೆಗಳು ಪ್ರೌಢಶಾಲೆಗಳವರೆಗೆ ಮಾತ್ರ ಇವೆ. ಹಾಗಾಗಿ ಪದವಿಪೂರ್ವ, ಪದವಿ ಶಿಕ್ಷಣ ಪಡೆಯಲು ಕರ್ನಾಟಕದ ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳನ್ನು ಅವಲಂಬಿಸಿದ್ದಾರೆ. ಉನ್ನತ ಶಿಕ್ಷಣ ಕನ್ನಡದಲ್ಲಿ ಪಡೆದವರಿಗೆ ಆಂಧ್ರಪ್ರದೇಶದಲ್ಲಿ ಕೇವಲ ಕನ್ನಡ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿಗೆ ಶಿಕ್ಷಕರಾಗಲು ಮಾತ್ರ ಅರ್ಹರಾಗಿರುತ್ತಾರೆ. ಉಳಿದಂತೆ ಯಾವುದೇ ಹುದ್ದೆಗಳಿಗೂ ಅವರನ್ನು ಪರಿಗಣಿಸುವುದಿಲ್ಲ.

ಅಂತೆಯೇ ಕರ್ನಾಟಕದಲ್ಲಿಯೂ ಅವರಿಗೆ ಅವಕಾಶಗಳಿಲ್ಲ. ಹಾಗಾಗಿ ಆಂಧ್ರಪ್ರದೇಶದಲ್ಲಿ ಕನ್ನಡ ಮಾಧ್ಯಮದಲ್ಲಿ ಕಲಿತವರು ನಿರುದ್ಯೋಗಿಗಳಾಗುತ್ತಿದ್ದಾರೆ. ಈ ಅಂಶವು ಸಮುದಾಯದ ಶೈಕ್ಷಣಿಕ ಪ್ರಗತಿಯ ಮೇಲೆ ಪರಿಣಾಮ ಬೀರಿದೆ. ಏಕೆಂದರೆ ಇಲ್ಲಿನ ಕುರುಬ ಸಮುದಾಯ ಹೆಚ್ಚು ಕನ್ನಡ ಮಾಧ್ಯಮದಲ್ಲಿಯೇ ಶಿಕ್ಷಣವನ್ನು ಪಡೆಯುತ್ತಿದೆ.

ಎರಡು ರಾಜ್ಯಗಳ ಗಡಿಯಲ್ಲಿ ಸಮುದಾಯವನ್ನು ಶೈಕ್ಷಣಿಕವಾಗಿ ಬೆಳೆಯಲು ಅನೇಕರು ಶ್ರಮಿಸಿದ್ದಾರೆ. ಅಂದರೆ ಸಮಾಜಮುಖಿಯಾಗುವಂತಹ ಕೆಲಸಗಳನ್ನು ಮಾಡುತ್ತಿದ್ದಾರೆ. ಉದಾಹರಣೆಗೆ ಶಾಲೆಗಳನ್ನು ಪ್ರಾರಂಭಿಸಿ ಅವುಗಳ ಮುಖೇನ ಸಮುದಾಯದಲ್ಲಿ ಆರ್ಥಿಕವಾಗಿ ಹಿಂದುಳಿದ ಮಕ್ಕಳಿಗೆ ಉಚಿತ ಶಿಕ್ಷಣ ನೀಡುವಂತಹ ಕೆಲಸಗಳು ಆಗುತ್ತಿವೆ. ಆದರೂ ಆ ಸಂಖ್ಯೆ ಕಡಿಮೆಯೆಂದೇ ಹೇಳಬೇಕು. ಏಕೆಂದರೆ ಕೊಂಡ್ಲಹಳ್ಳಿ, ಹಿರೇಹಳ್ಳಿ, ಜಾಜೂರುಗಳಲ್ಲಿ ಮಾತ್ರ ಅಂತಹ ಶಾಲೆಗಳಿವೆ. ಅದರೊಂದಿಗೆ ಈ ಭಾಗದಲ್ಲಿ ಪ್ರತಿವರ್ಷ ಕನಕದಾಸ ಜಯಂತಿ, ರೇವಣ ಸಿದ್ಧೇಶ್ವರ, ಬೀರಪ್ಪ, ಮೈಲಾರ ದೈವಗಳ ಜಾತ್ರೆಯ ಸಮಯಗಳಲ್ಲಿ ಶ್ರೀ ಕನಕದಾಸ ಕುರುಬ ನೌಕರರ ಸಂಘ, ಶ್ರೀ ರೇವಣ್ಣಸಿದ್ಧೇಶ್ವರ ಸಂಘ, ಉಣ್ಣೆ ಕೈಮಗ್ಗ ನೇಕಾರರ ಸಂಘ, ಶ್ರೀ ಬೀರಲಿಂಗೇಶ್ವರ ಸಂಘ, ಮೈಲಾರ ಲಿಂಗೇಶ್ವರ ಸಂಘ, ಬನಶಂಕರಿ ಸಂಘ, ಶ್ರೀ ಹೊಸೂರಮ್ಮ ಸಂಘಗಳಂಥ ಮುಂತಾದ ಸಮುದಾಯದ ಸಂಘ-ಸಂಸ್ಥೆಗಳ ಮುಖೇನವಾಗಿ ಅತೀ ಹೆಚ್ಚು ಅಂಕಗಳನ್ನು ಪಡೆದ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರಗಳು, ಉದ್ಯೋಗಕ್ಕೆ ಸೇರಿದ ನೌಕರರನ್ನು ಪುರಸ್ಕರಿಸುವ ಸಮಾಜಮುಖಿ ಕೆಲಸಗಳಾಗುತ್ತಿವೆ.

ಇಂಥ ಸಮಾಜಮುಖಿ ಕಾರ್ಯಗಳನ್ನು ಮಾಡಿ ಸಮುದಾಯವನ್ನು ಶೈಕ್ಷಣಿಕವಾಗಿ ಮುನ್ನಡೆಗೆ ತರುವ ಪ್ರಯತ್ನಗಳು ನಡೆದಿವೆ; ನಡೆಯುತ್ತಲಿವೆ. ಆದರೂ ಆ ಕಾರ್ಯಗಳು ಪ್ರಗತಿಪರವಾಗಿ ಜರುಗುತ್ತಿಲ್ಲ. ಏಕೆಂದರೆ ಯಾವತ್ತಿಗೂ ಬರವನ್ನು ಬೆನ್ನಿಗೆ ಕಟ್ಟಿಕೊಂಡು ಬದುಕುತ್ತಿರುವ ಸಮುದಾಯ ಆರ್ಥಿಕವಾಗಿ ತೀರಾ ಹಿಂದುಳಿದಿರುವುದು, ಜೊತೆಗೆ ದೈನಂದಿನ ಹೊಟ್ಟೆಪಾಡಿಗಾಗಿ ಬದುಕುವುದೇ ದುಸ್ತರವಾಗಿರುವುದರಿಂದ ಶಿಕ್ಷಣ ಪಡೆಯುವಲ್ಲಿ ಹಿಂದೆ ಬಿದ್ದಿದೆ. ಜೊತೆಗೆ ಗಡಿನಾಡಿನಲ್ಲಿ ಬಸ್ಸು ಸೌಕರ್ಯಗಳಿಲ್ಲದಿರುವುದು, ಶಿಕ್ಷಕರ ಕೊರತೆ, ಸರಕಾರಗಳ ದಿವ್ಯ ನಿರ್ಲಕ್ಷ್ಯಗಳೂ ಇದಕ್ಕೆ ಕಾರಣಗಳು. ಒಟ್ಟಾರೆಯಾಗಿ ಗಡಿನಾಡ ಕುರುಬ ಸಮುದಾಯದ ಸಾಕ್ಷರತೆಯ ಪ್ರಮಾಣ, ಉದ್ಯೋಗದ

ಪ್ರಮಾಣಗಳಿಂದ ತಿಳಿಯುವ ಅಂಶವೆಂದರೆ ಇವರು ಪಾರಂಪರಿಕ ವೃತ್ತಿಗಳಾದ ಕುರಿಸಾಕಾಣಿಕೆ, ಕಂಬಳಿ ನೇಯ್ಗೆಯಂಥ ವೃತ್ತಿಗಳು ಇಂದು ಕಡಿಮೆಯಾಗಿರುವುದು, ಕೃಷಿಯಲ್ಲಿಯೂ ಆರ್ಥಿಕವಾಗಿ ಪ್ರಬಲವಾಗಿಲ್ಲ. ಅಂತೆಯೇ ರಾಜಕೀಯವಾಗಿಯೂ ಪ್ರಬಲವಾಗಿಲ್ಲದಿರುವುದು. ಜೊತೆಗೆ ಹಳ್ಳಿಗಳಲ್ಲಿ ವಾಸ ಮಾಡುತ್ತಿರುವುದರಿಂದ, ಅರೆ ಅಲೆಮಾರಿತನವಿರುವುದು ಶಿಕ್ಷಣದ ಬಗ್ಗೆ ಒಲವು ತೋರಿಸಲು ಆಗುತ್ತಿಲ್ಲ ಎಂದೇ ಹೇಳಬೇಕು. ಸರಕಾರಗಳು ಗಡಿನಾಡನ್ನು ವಿಶೇಷವಾಗಿ ಪರಿಗಣಿಸಿ ಶೈಕ್ಷಣಿಕ ಯೋಜನೆಗಳನ್ನು ಹಾಕಿಕೊಂಡರೆ ಮುಂದಿನ ದಿನಮಾನಗಳಲ್ಲಿಯಾದರೂ ಶೈಕ್ಷಣಿಕ ಪ್ರಗತಿಯನ್ನು ಕಾಣಲು ಸಾಧ್ಯವಾಗುತ್ತದೆ.

**ಕೊನೆಟಿಪ್ಪಣಿಗಳು**

೧. ವೀರಣ್ಣದಂಡೆ(ಸಂ), ಸುವರ್ಣ ಜಾನಪದ ಲೇಖನಗಳು, ಪು. ೩೪೮.

೨. ಲಕ್ಕಪ್ಪಗೌಡ ಎಚ್.ಜೆ., ಕುರುಬ ಜನಾಂಗದ ಐತಿಹಾಸಿಕ ಹಿನ್ನೆಲೆ, ಪು. ೧೩೪.

೩. ಲಕ್ಕಪ್ಪಗೌಡ ಹೆಚ್. ಜೆ.(ಸಂ), ಹಾಲಕೆನೆ, ಬೋ.ನಾ. ಬಸವರಾಜ, ಕುರುಬರ ಗೋತ್ರ ಬೆಡುಗುಗಳು, ಪು. ೧೫೦.

೪. ಯರ‍್ರಪ್ಪ ಡಿ., ಅಲೆಮಾರಿ ಕುರುಬ, ಪು. ೩೯.

೫. ಪೂರ್ವೋಕ್ತ, ಕುರುಬರ ಗೋತ್ರಗಳು ಹಾಗೂ ಬೆಡಗುಗಳು, ಪು. ೧೫೦-೧೫೮.

೬. ನಾಗಿರೆಡ್ಡಿ ಮದ್ದುಲ ಚೆರುವು, ಕುರುಬ ಕುಲ ವೈಭವಂ, ಪು. ೮೩-೯೫.

೭. ಸುಧಾಕರ(ಸಂ), ವ್ಹಿ.ಆರ್. ಹನುಮಂತಯ್ಯ ಅವರ ಕುರುಬರ ಚರಿತ್ರೆ, ಪು. ೨೬

೮. ಮಾಹಿತಿ: ಚಂದ್ರಶೇಖರಯ್ಯ ಒಡೆಯರು, ವಯಸ್ಸು ೫೫, ಕುಂದುರ್ಪಿ.

೯. ಮಾಹಿತಿ: ಸಿದ್ಧಪ್ಪ ಒಡೆಯರು, ವಯಸ್ಸು ೭೫, ರಂಗವ್ವನಹಳ್ಳಿ.

೧೦. ಬಿರಾದಾರ ಬಿ.ಜಿ., ಕುರುಬರ ಗುರು ಒಡೆಯರು, ಪು. ೪೫.

೧೧. ಪ್ರಭಾಕರ ಎ.ಎಸ್.(ಸಂ), ಆದಿವಾಸಿ ಆಖ್ಯಾನ, ಪು. ೨೦೭.

೧೨. ಹಳ್ಳಿಕೇರಿ ಎಫ್.ಟಿ.(ಸಂ), ಹಾಲುಮತ ವ್ಯಾಸಂಗ-೪, ಬಾಗಲಕೋಟೆ ಪರಿಸರದ ಕುರುಬರ ಆರ್ಥಿಕ ಸ್ಥಿತಿಗತಿಗಳು, ಪು. ೨೫೪.

೧೩. ಮಂಗಳ.ಎನ್., ಅನಿಕೇತನ, ಅಮೃತಮಹಲ್ ಕಾವಲು ಉಳಿಸುವ ಹೋರಾಟದೊಂದಿಗೆ ಕೈಜೋಡಿಸಿ(ಪೂರ್ಣ ವರದಿ).

೧೪. ಚಕ್ರವರ್ತಿ ಜಿ.ಎಸ್.(ಸಂ), ಸಂಸ್ಕೃತ-ಕನ್ನಡ-ನಿಘಂಟು.

೧೫. ಕ.ಸಾ.ಪ. ಕನ್ನಡ ನಿಘಂಟು, ೨ನೆಯ ಸಂಪುಟ..

೧೬. ನಾಗೇಗೌಡ ಎಚ್.ಎಲ್. (ಪ್ರ.ಸಂ.), ಕನ್ನಡ ಜಾನಪದ ಕೋಶ.

೧೭. ಸೀತಾರಾಮಾಚಾರ್ಯುಲು ಬ.(ಸಂ), ಶಬ್ದರತ್ನಾಕರಮು.

೧೮. ವಿಜಯಶ್ರೀ ಇಟ್ಟಣ್ಣವರ, ಕಂಬಳಿ ಸಾಂಸ್ಕೃತಿಕ ಅಧ್ಯಯನ, ಪು. ೮೧.

೧೯. ಅದೇ, ಪು. ೮೨.

೨೦. ಕಲಬುರ್ಗಿ ಎಂ.ಎಂ., ಸಿದ್ಧಮಂಕ ಚರಿತೆ, ಪದ್ಯ-೩೪, ಪು. ೩೨.

೨೧. ಕಲಬುರ್ಗಿ ಎಂ.ಎಂ., ಸಿದ್ಧಮಂಕ ಚರಿತೆ, ಪು. ೩೨.

೨೨. ಹಾಡಿದವರು: ಚನ್ನಕೇಶವ, ಶಿಕ್ಷಕರು, ವಯಸ್ಸು ೪೫, ನಾಯಕನಹಟ್ಟಿ.

೨೩. ವಿಜಯಶ್ರೀ ಇಟ್ಟಣ್ಣವರ, ಕಂಬಳಿ ಸಾಂಸ್ಕೃತಿಕ ಅಧ್ಯಯನ, ಪು. ೫೯.

೨೪. ಸುಧಾಕರ(ಸಂ), ಕರ್ನಾಟಕದ ಕುರುಬರು, ಪು. ೧೧೫.

೨೫. ಎಚ್ಚಾರ್ಕೆ, ಭಾರತದ ಆರ್ಥಿಕ ವ್ಯವಸ್ಥೆ, ಪು. ೧೫೭.

೨೬. John wilson, introduction of social movement, Page No. ೩೨.

೨೭. ಪ್ರಮಿಳಾದೇವಿ ಬಿ.ಕೆ., ಮೈಸೂರು ಸಂಸ್ಥಾನದಲ್ಲಿ ಹಿಂದುಳಿದ ವರ್ಗಗಳ ಚಳುವಳಿ ಹಾಗೂ ರಾಜಕೀಯ ಜಾಗೃತಿ, ಪು. ೨೧.

೨೮. ಶಿವೋತ್ತಮರಾವ್ ಕಲ್ಲೆ, ಎನ್.(ಗೌ.ಸಂ), ಗುರುವಂದನ, ಪು. ೨೬೮.

೨೯. ಚಂದ್ರಶೇಖರ ಟಿ.ಆರ್., ಕರ್ನಾಟಕ ಜನಗಣತಿ ೨೦೧೧, ಪು.೩

೩೦. ೨೦೧೧ರ ಜನಜನಗಣತಿ ಅಂಕಿ ಅಂಶಗಳು (ಅಂತರ್ಜಾಲ)

# ಅಧ್ಯಾಯ ನಾಲ್ಕು

# ಕರ್ನಾಟಕ–ಆಂಧ್ರಪ್ರದೇಶದ ಗಡಿನಾಡ ಕುರುಬ ಸಮುದಾಯ: ಅಭೌತಿಕ ಅಧ್ಯಯನ

# ಅಧ್ಯಾಯ ನಾಲ್ಕು

# ಕರ್ನಾಟಕ-ಆಂಧ್ರಪ್ರದೇಶದ ಗಡಿನಾಡ ಕುರುಬ ಸಮುದಾಯ: ಅಭೌತಿಕ ಅಧ್ಯಯನ

## ಕುರುಬ ಸಮುದಾಯದ ದೈವಗಳು: ನಂಬುಗೆ ಆಚರಣೆ ಮತ್ತು ಉತ್ಸವಗಳು

ಭಾರತ ದೇಶದಲ್ಲಿ ಕ್ರಿ.ಶ. ಪೂರ್ವ ಏಳನೆಯ ಶತಮಾನಕ್ಕಿಂತ ಪೂರ್ವದಲ್ಲಿಯೇ ದೈವ ಅಸ್ತಿತ್ವದ ಬಗ್ಗೆ ಪ್ರಸ್ತಾಪಗಳು ದೊರೆಯುತ್ತವೆ. ಅದರಲ್ಲಿಯೂ ಜನಪದ ದೈವಗಳಿಗೆ ಮಾನವ ವಿಕಾಸಕ್ಕಿರುವಷ್ಟೇ ಪ್ರಾಚೀನ ಚಹರೆಯಿದೆ. ನಮ್ಮಲ್ಲಿ ಪಿತೃಪ್ರಧಾನ ದೇವತೆಗಳಿಗಿಂತ ಮಾತೃದೇವತೆಯ ಕಲ್ಪನೆಯೇ ಪುರಾತನವಾದುದೆಂಬ ಸತ್ಯ ಪ್ರಾಗೈತಿಹಾಸಿಕ ಉತ್ಖನನಗಳಿಂದ ತಿಳಿಯುತ್ತದೆ. ಇದು ಮೂಲ ದ್ರಾವಿಡ ಸಮುದಾಯಗಳಲ್ಲಿ ಹೆಚ್ಚಾಗಿತ್ತು ಎಂಬುದಕ್ಕೆ ಸಾಕಷ್ಟು ನಿದರ್ಶನಗಳು ದೊರೆಯುತ್ತವೆ. "ಈ ದೈವಗಳನ್ನು ರುದ್ರದೇವತೆಗಳು, ಸೌಮ್ಯದೇವತೆಗಳು, ಶಕ್ತಿದೇವತೆಗಳು, ಗಡಿರಕ್ಷಣಾ ದೇವತೆಗಳು, ಫಲದೇವತೆಗಳು, ರೋಗನಿವಾರಣಾ ದೇವತೆಗಳೆಂದು ಹಾಗೆಯೇ ಮನೆದೈವಗಳು, ಕುಲದೈವ, ಗ್ರಾಮದೈವ, ಪ್ರಾಂತ್ಯದೈವ, ನಾಡದೈವಗಳೆಂದು ವರ್ಗೀಕರಿಸಬಹುದು."[೧]

ಆರಂಭದಲ್ಲಿ ಮಾನವ ಪ್ರಕೃತಿಯ ಆರಾಧಕನಾಗಿದ್ದನೆಂಬುದರ ಹಿನ್ನೆಲೆಯನ್ನಿಟ್ಟುಕೊಂಡು ಹೇಳುವುದಾದರೆ ಮೇಲ್ವರ್ಗಗಳು ಪೂಜಿಸುವ ಶಿಷ್ಟದೇವತೆಗಳಿಗಿಂತ ಕೆಳವರ್ಗಗಳು ಆರಾಧಿಸುವ ಗ್ರಾಮ ಮತ್ತು ಕುಲದೇವತೆಗಳು ಅಂದರೆ ದೇಸಿ ದೈವಗಳು ಜನರ ಬದುಕಿನ ಭಾಗವಾಗಿದ್ದವು. ಅದಕ್ಕೆ ಸಾಕ್ಷಿಯೆಂಬಂತೆ ನಮ್ಮಲ್ಲಿ ಗ್ರಾಮದೈವ, ಕುಲದೈವಗಳಿಲ್ಲದ ಹಳ್ಳಿಗಳು ಮತ್ತು ಸಮುದಾಯಗಳೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಅವು ನಮ್ಮೊಳಗೆ ಬೆರೆತುಕೊಂಡಿವೆ. ಮಾನವ ತಾನು ಪ್ರಕೃತಿಯೊಂದಿಗೆ ಬದುಕುವುದನ್ನು ಕಲಿತುಕೊಳ್ಳುತ್ತ, ಅಲ್ಲಿ ನಡೆಯುವ ಅಸಾದೃಶ್ಯ ಘಟನೆಗಳಿಗೆ ಹೆದರಿ ಇದು ಅಗೋಚರ ಶಕ್ತಿಯ ಪ್ರಭಾವಗಳೆಂದು ಭಾವಿಸುತ್ತ ಅವಕ್ಕೆ ದೈವದ ಕಲ್ಪನೆಯನ್ನು ಕೊಡುತ್ತ ಬಂದನು.

ನಂಬುಗೆಗಳು ಬಲವಾದಂತೆ ದೇವರ ಕಲ್ಪನೆ ನಿಶ್ಚಿತವಾಗುತ್ತ ಸಾಗಿತು. ಮೊದಮೊದಲು ಪ್ರಕೃತಿಯಲ್ಲಿದ್ದ ಗಿಡ, ಮರ, ಪ್ರಾಣಿ, ಪಕ್ಷಿ, ಸೂರ್ಯ, ಚಂದ್ರರನ್ನು ಆರಾಧಿಸುತ್ತಿದ್ದವನು ನಂತರ ಕಾಲಕ್ಕೆ ಬರುವ ವೇಳೆಯಲ್ಲಿ ರುದ್ರ, ಬ್ರಹ್ಮ, ಭೂದೇವಿ, ಪಾರ್ವತಿಯರು ಆರಾಧನೆಗೆ ಒಳಪಟ್ಟರು. ಜೊತೆ ಜೊತೆಗೆ ಆಯಾ ಸಮುದಾಯಗಳಲ್ಲಿನ ವ್ಯಕ್ತಿಗಳೇ ಮತ್ತೊಂದು ಕಾಲಘಟ್ಟಕ್ಕೆ ದೈವತ್ವಕ್ಕೆ ಏರಿದ್ದು ಕಾಣಸಿಗುತ್ತವೆ. ಅಂದರೆ ಸಮುದಾಯದಲ್ಲಿ ಹುಟ್ಟಿ, ಬೆಳೆದು ಸಮಾಜಮುಖಿಯಾಗುವಂತಹ ಕೆಲಸಗಳನ್ನು ಮಾಡುತ್ತ ಪವಾಡ ಸಾದೃಶ್ಯ ಕೆಲಸಗಳನ್ನು ಮಾಡಿದವರು, ಆಯಾ ಸಮುದಾಯಗಳಲ್ಲಿ ಪೂಜನೀಯ ವ್ಯಕ್ತಿಗಳಾಗಿ ನಂತರ ದೈವತ್ವಕ್ಕೇರಿದ ನಿದರ್ಶನಗಳು ದ್ರಾವಿಡ ಸಮುದಾಯಗಳಲ್ಲಿ ಹೆಚ್ಚಾಗಿ ಕಾಣಸಿಗುತ್ತವೆ.

ಅದರಲ್ಲಿಯೂ ದಕ್ಷಿಣ ಭಾರತದಲ್ಲಿನ ಪ್ರತಿಯೊಂದು ಸಮುದಾಯವು ಇಂತಹ ವ್ಯಕ್ತಿಗಳನ್ನೆ ದೈವಗಳೆಂದು ಆರಾಧಿಸುತ್ತ ಬಂದಿರುವುದು ಹೆಚ್ಚಾಗಿ ಕಂಡುಬರುತ್ತದೆ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ೧೨ನೆಯ ಶತಮಾನದಲ್ಲಿ ಬಾಳಿದ ಬಸವಣ್ಣ, ಹರಿಹರ ಕವಿಯ ಕಾಲಕ್ಕೆ ದೈವತ್ವಕ್ಕೆ ಏರಿದ. ಅದರಂತಯೇ ಹಿಂದುಳಿದ ಸಮುದಾಯಗಳಲ್ಲಿ ಅಂತಹ ನಿದರ್ಶನಗಳು ಸಾಕಷ್ಟಿವೆ. ಉದಾಹರಣೆಗೆ ನೋಡುವುದಾದರೆ ಮ್ಯಾಸಬೇಡರಲ್ಲಿ ಗಾದ್ರಿ ಪಾಲನಾಯಕ, ಬೋಸೆನಾಯಕ, ಜಗಲೂರು ಪಾಪನಾಯಕ, ಯರಮಂಚಿ ನಾಯಕ, ದಡ್ಡಿಸೂರ ನಾಯಕ, ಬೊಮ್ಮಗೊಂಡ ಮುಂತಾದವರು, ಕಾಡುಗೊಲ್ಲರಲ್ಲಿ ಎತ್ತಪ್ಪ, ಜುಂಜಪ್ಪ, ಕುರುಬರಲ್ಲಿ ಬೀರಪ್ಪ, ಮೈಲಾರಲಿಂಗ, ಮಾಳಿಂಗರಾಯ, ರೇವಣಸಿದ್ಧ, ಸಿದ್ಧರಾಮ, ಶಾಂತಮುತ್ತಯ್ಯ, ಮಾಯಮ್ಮ, ಯಲ್ಲಮ್ಮ ಮುಂತಾದವರು ಈ ರೀತಿಯಲ್ಲಿಯೇ ದೈವತ್ವಕ್ಕೆ ಏರಿದವರಾಗಿದ್ದಾರೆ.

ಹೀಗೆ ಪ್ರತಿಯೊಂದು ಸಮುದಾಯವು ತಮ್ಮದೇ ರೂಢಿ, ಸಂಪ್ರದಾಯ, ಆಚಾರ-ವಿಚಾರಗಳನ್ನು ಹೊಂದಿರುವಂತೆ ಊರದೇವತೆ, ಆರಾಧ್ಯದೈವ, ಕುಲದೈವ, ನಾಡದೈವಗಳೆಂದು ತಮ್ಮ ಸಂಪ್ರದಾಯಕ್ಕನುಗುಣವಾಗಿ ದೈವಗಳನ್ನು ಮಾಡಿಕೊಂಡು ಹಬ್ಬ, ಪೂಜೆ-ಪುನಸ್ಕಾರ, ಉತ್ಸವ-ಜಾತ್ರೆಗಳನ್ನು ಮಾಡಿಕೊಂಡು ಬಂದಿವೆ; ಬರುತ್ತಲಿವೆ. ಈ ರೂಢಿ-ಸಂಪ್ರದಾಯ, ಪರಂಪರೆಗೆ ಕುರುಬ ಸಮುದಾಯವು ಹೊರತಾಗಿಲ್ಲ. ಕುರುಬ ಸಮುದಾಯದಲ್ಲಿ ಬೀರಪ್ಪ, ಮಾಳಿಂಗರಾಯ, ಮಲ್ಲಯ್ಯ(ಮೈಲಾರಲಿಂಗ), ಬರಮದೇವ, ಬಪ್ಪರಾಯರಂಥ ಕುಲದೈವಗಳು, ಮಾಯಮ್ಮ, ಎಲ್ಲಮ್ಮ, ಹೊಸಕೇರಮ್ಮ, ಬನಶಂಕರಿ, ಮಾಳಮ್ಮರಂಥ ಸ್ತ್ರೀ ದೈವಗಳು ಅದರಂತೆಯೇ ರೇವಣಸಿದ್ಧ, ಸಿದ್ಧರಾಮ, ಅಮೋಘಸಿದ್ಧ, ಮರುಳಸಿದ್ಧ ಗುರು ಪರಂಪರೆಯು ಹಿಂದಿನಿಂದಲೂ ನಡೆದುಕೊಂಡು ಬರುತ್ತಿದೆ. ಅದರಲ್ಲಿಯೂ ಬೀರಪ್ಪನಿಗಿರುವಷ್ಟು ಪರ್ಯಾಯ ಹೆಸರುಗಳು ಮತ್ಯಾವ ದೇವರಿಗೂ ಸಿಗುವುದಿಲ್ಲ. ಆತನನ್ನು ಅಷ್ಟು ಹೆಸರುಗಳಿಂದ ಕುರುಬ ಸಮುದಾಯ ಪೂಜೆ ಮಾಡುತ್ತಾ ಬರುತ್ತಲಿದೆ. ಈ ಬರೆಹದಲ್ಲಿ ಕುರುಬ ಸಮುದಾಯದ ದೈವಗಳು, ನಂಬುಗೆ, ಆಚರಣೆ ಮತ್ತು ಉತ್ಸವಗಳನ್ನು ಒಂದೊಂದಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

## ೪.೧.೧. ಬೀರಪ್ಪ

ಬೀರಪ್ಪ ಹಾಲುಮತ ಸಮುದಾಯದ ಆರಾಧ್ಯ ದೈವ, ಕುಲದೈವ ಮತ್ತು ಸಾಂಸ್ಕೃತಿಕ ವೀರ. ಈ ಸಮುದಾಯ ಆರಾಧಿಸುವ ದೈವಗಳಲ್ಲಿ ಬೀರಪ್ಪನಿಗೆ ಅಗ್ರಸ್ಥಾನವಿದೆ. ಮಾನವ ವಿಕಾಸ ಸಂದರ್ಭದಲ್ಲಿ ಅದರಲ್ಲಿಯೂ ಪಶುಪಾಲನೆ, ಕೃಷಿಯನ್ನು ಮುಖ್ಯ ಕಸುಬಾಗಿಸಿಕೊಂಡು ಜೀವಿಸುತ್ತಿದ್ದ ಕಾಲದಲ್ಲಿ ದೈವಿಕ ಭಾವನೆಗಳು ಅಸ್ಪಷ್ಟವಾಗಿ ಗೋಚರಿಸಿ, ಸ್ಪಷ್ಟವಾಗುತ್ತ ಸಾಗುವ ಸಂದರ್ಭದಲ್ಲಿ ಪ್ರತಿಯೊಂದು ಸಮುದಾಯವು ತಮ್ಮ ಪೂರ್ವಿಕರನ್ನೆ ಪೂಜಿಸುತ್ತ ಕಾಲಾಂತರದಲ್ಲಿ ದೈವತ್ವಕ್ಕೆ ಏರಿಸಿದ ಉದಾಹರಣೆಗಳು ಅನೇಕ ಸಮುದಾಯಗಳಲ್ಲಿ ಕಾಣಸಿಗುತ್ತವೆ. ಸ್ವತಃ ಪಶುಪಾಲಕನಾಗಿ ಕುರಿಗಳನ್ನು ಕಾಯುತ್ತ ಜೀವಿಸಿದ್ದ ಬೀರಪ್ಪ ಕುರುಬ ಸಮುದಾಯದ ಏಳ್ಗೆಗಾಗಿ ತನ್ನ ಶಕ್ತಿ ಪ್ರದರ್ಶಿಸಿ, ಅವರನ್ನು ರಕ್ಷಿಸಿ ಕಾಪಾಡಿದ್ದರಿಂದ ದೈವೀ ಪುರುಷನಾದನು. ಆತನಿಗೆ ಸಂಬಂಧಿಸಿದಂತೆ ಸಿಗುವ ಸಾಹಿತ್ಯಿಕ ಮತ್ತು ಮೌಖಿಕ ಆಕರಗಳು ಇದಕ್ಕೆ ಪುಷ್ಠಿಯನ್ನು ನೀಡುತ್ತವೆ. ಕೆಲ ಆಕರಗಳಲ್ಲಿ ಸಾಮಾನ್ಯ ವ್ಯಕ್ತಿಯಾಗಿ ಜನಿಸಿದವನು ತನ್ನ ಅಸಾದೃಶ್ಯ ಪವಾಡಗಳಿಂದ ದೈವತ್ವಕ್ಕೆ ಏರಿದ್ದು ಕಂಡುಬಂದರೆ, ಆತನ ಮೂಲವನ್ನು ಕೈಲಾಸಕ್ಕೆ ಕೊಂಡೊಯ್ದಿರುವುದನ್ನು ಕೆಲ ಆಕರಗಳು ಬಿಂಬಿಸಿವೆ. ಈ ಹೇಳಿಕೆಗಳನ್ನು ಅವಲೋಕಿಸಿದರೆ ಬೀರಪ್ಪ ಒಬ್ಬ ಪುರಾಣ ಪುರುಷನಾಗಿಯೂ, ಚಾರಿತ್ರಿಕ ವ್ಯಕ್ತಿಯಾಗಿಯೂ ಜೀವಿಸಿರಬಹುದು ಎಂಬಂತೆ ಎಲ್ಲರ ಗಮನ ಸೆಳೆಯುತ್ತದೆ.

ಬೀರಪ್ಪನೆಂದರೆ ಹಾಲುಮತ ಸಮುದಾಯ ಎನ್ನುವಷ್ಟರ ಮಟ್ಟಿಗೆ ಬೆರೆತಿರುವ ಆತನ ದೇವಾಲಯಗಳನ್ನು ಈ ಸಮುದಾಯ ವಾಸಿಸುತ್ತಿರುವ ಪ್ರತಿ ಗ್ರಾಮಗಳಲ್ಲಿಯೂ ಕಾಣಬಹುದು. ನಮ್ಮ ನಾಡಿನಲ್ಲಿ ಅಲ್ಲದೇ ತಮಿಳುನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರ ಪರಿಸರದಲ್ಲಿಯೂ ಆತನ ದೇವಾಲಯಗಳಿವೆ, ಪುರಾಣ ಕತೆಗಳಿವೆ, ಧಾರ್ಮಿಕ ಆಚರಣೆಗಳಿವೆ. ಇದನ್ನು ಗಮನಿಸಿದರೆ ದಕ್ಷಿಣಭಾರತವೇ ಆತನ ಕಾರ್ಯಕ್ಷೇತ್ರ ಎಂದು ಹೇಳುವುದು ಅತಿಶಯೋಕ್ತಿಯಲ್ಲ ಎನಿಸುತ್ತದೆ. ಪ್ರಸ್ತುತ ಈ ಅಧ್ಯಯನದ ಬರಹದಲ್ಲಿ ಕರ್ನಾಟಕಾಂಧ್ರ ಪ್ರದೇಶದ ಅದರಲ್ಲಿಯೂ ವೇದಾವತಿ ಮತ್ತು ತುಂಗಭದ್ರ ನದಿ ನಡುವಿನ ಗಡಿ ಭಾಗದಲ್ಲಿ ನೆಲೆಸಿರುವ ಕುರುಬ ಸಮುದಾಯದ ಜನರಿರುವ ಸ್ಥಳಗಳಲ್ಲಿರುವ ಬೀರಪ್ಪನ ನೆಲೆಗಳನ್ನು ಆತನ ವಿವಿಧ ಹೆಸರುಗಳೊಂದಿಗೆ ಅಲ್ಲಿನ ನಂಬಿಕೆ, ಐತಿಹ್ಯ, ಧಾರ್ಮಿಕ ಆಚರಣೆ ಮುಂತಾದ ಅಂಶಗಳನ್ನು ಒಳಗು ಮಾಡಿಕೊಂಡು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಡಿ. ಹಿರೇಹಾಳ:** ಬೀದರ್–ಶ್ರೀರಂಗಪಟ್ಟಣಕ್ಕೆ ರಾಷ್ಟ್ರೀಯ ಹೆದ್ದಾರಿ '೧೫೦ಎ'ರಲ್ಲಿ ಬರುವ ಗ್ರಾಮ. ಬಳ್ಳಾರಿಯಿಂದ ೨೪ ಕಿ.ಮೀ. ದೂರದಲ್ಲಿದ್ದು, ಕರ್ನಾಟಕದಲ್ಲಿಯೇ ಬೆರೆತಂತಿದೆ. ಮಂಡಲ ಗ್ರಾಮವಾದ ಇಲ್ಲಿನ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೬೦ಕ್ಕಿಂತಲೂ ಹೆಚ್ಚು ಕುರುಬ ಸಮುದಾಯದವರೇ ವಾಸಿಸುತ್ತಿದ್ದಾರೆ. ಊರ ಹೊರಗಿನ ವಲಯದಲ್ಲಿ ೧೯೩೫ರಲ್ಲಿ ಕಟ್ಟಿಸಿದ ಬೀರಪ್ಪನ ಲಿಂಗದ ಗುಡಿಯಿದೆ. ಗುಡಿಯ ಸುತ್ತಲೂ ನಾಲ್ಕು ಎಕರೆ ಜಮೀನು ದೇವರಿಗೆ

ಸಂಬಂಧಿಸಿದ್ದಿದೆ. ಪಕ್ಕದಲ್ಲಿಯೇ ಮಲೆಯಮ್ಮನ ಚಿಕ್ಕ ಗುಡಿಯಿದೆ. ಅದಲ್ಲದೇ ಊರಲ್ಲಿಯೇ ಈರಾಳಪ್ಪನ ಗುಡಿ, ಗ್ವಾದ್ಲಪ್ಪ, ಗಡ್ಡದಯ್ಯ ಮತ್ತು ಚೌಡಮ್ಮನ ಗುಡಿಗಳಿವೆ. ಪಟ್ಟದ ದೇವರನ್ನು ಮಾಡುವಾಗ ಪ್ರಮುಖ ದೈವವಾದ ಈರಾಳಪ್ಪನೊಂದಿಗೆ ಬಸಾಪುರದ ವಸಕೇರಪ್ಪ, ಬಳ್ಳಾರಿಯ ಬಳ್ಳಾರಪ್ಪ, ಅಂತಾಪುರದ ಮಲೆಯಮ್ಮ, ಕುರುಗೋಡಿನ ಕಲ್ಗುಡಿಯಪ್ಪ, ಹಿರೇಹಾಳಿನ ಇತರ ದೈವಗಳಾದ ಗ್ವಾದ್ಲಪ್ಪ, ಚೌಡಮ್ಮ, ಮಲೆಯಮ್ಮ ದೈಗಳೊಂದಿಗೆ ಮೆರವಣಿಗೆಯ ಮೂಲಕ ಹಿರೇಹಾಳ ಗ್ರಾಮದಿಂದ ೧೦ ಕಿ.ಮೀ. ದೂರದಲ್ಲಿರುವ ಗವಿಸಿದ್ಧೇಶ್ವರ ಬೆಟ್ಟದ ಗವಿಯ ಒಳಗೆ ದೈವಗಳಿಗೆಲ್ಲ ಗಂಗಾಸ್ನಾನ ಮತ್ತು ಅಭಿಷೇಕವನ್ನು ಮಾಡಿ ಪೂಜಿಸಲಾಗುತ್ತದೆ. ೨೦೧೫ರಲ್ಲಿ ದೊಡ್ಡದ್ಯಾವರ ಉತ್ಸವವನ್ನು ಮಾಡಲಾಯಿತು. ಈ ಸಲ ಗವಿಗೆ ಹೋಗದೆ ಹಂಪೆಯ ತುಂಗಭದ್ರ ನದಿಯ ಹತ್ತಿರ ಬಂದು ಪೂಜಿಸಿಕೊಂಡು ಜಾತ್ರೆ ಮಾಡಲಾಯಿತು. ಅಲ್ಲಿ ಹೀಗೆ ಒಂದೆಡೆ ಸೇರಿದ ದೈವಗಳ ಪೂಜಾರಿಗಳೆಲ್ಲ ಹೊಸದಾಗಿ ಪೂಜಾರಿಯಾಗುವ ಕೋರೆ ಹುಡುಗನಿಗೆ ಸ್ನಾನ ಮಾಡಿಸಿ ದೈವದ ಮಂತ್ರಗಳನ್ನು ಕಿವಿಯಲ್ಲಿ ಬೋಧಿಸಿ, ಕೈಗೆ ಬೆಳ್ಳಿ ಕಡಗವನ್ನು ಹಾಕುವರು. ಅಂದಿನಿಂದಲೂ ಆತ ಪೂಜಾರಿಯಾಗಿ ಕಟ್ಟುಪಾಡುಗಳನ್ನು ಅನುಸರಿಸಿಕೊಂಡು ದೇವರ ಪೂಜೆ-ಪುನಸ್ಕಾರಗಳನ್ನು ನಡೆಸಿಕೊಂಡು ಬರಬೇಕು. ಅವರು ಪೂಜಿಸುವ ಈರಾಳಪ್ಪ ಬೆಳ್ಳಿಯ ದೇವರು ಆಗಿರುವುದರಿಂದ ಬೆಳ್ಳಿಯ ಯಾವುದೇ ಆಭರಣಗಳನ್ನು ಆ ಒಕ್ಕಲಿನವರು ತೊಡುವುದಿಲ್ಲ. ಹಾಗಾಗಿ ಒಕ್ಕಲದವರನ್ನು ಮದುವೆಯಾಗಿ ಬರುವ ಸ್ತ್ರೀಯರು ಕಾಲಿಗೆ ಬೆಳ್ಳಿ ಕಾಲುಂಗುರ, ಬೆಳ್ಳಿ ಕಾಲುಚೈನುಗಳನ್ನು ಧರಿಸುವಂತಿಲ್ಲ. ಹಾಗೆಯೇ ಮದುವೆಯಲ್ಲಿ ಕಾಲಿಗೆ ಬೆಳ್ಳಿಯುಂಗುರ(ಮಿಂಚು) ಇಡುವ ಮಿಂಚು ಕುರುಬರೆಂಬ ಒಕ್ಕಲಿನವರೊಂದಿಗೆ ಸಂಬಂಧವನ್ನು ಬೆಳೆಸುವುದಿಲ್ಲ. ಅದರಿಂದ ತಮಗೆ ಕೇಡಾಗುತ್ತದೆ ಎಂಬ ನಂಬುಗೆ ಇಂದಿಗೂ ಅವರಲ್ಲಿದೆ.

ಪ್ರತಿವರ್ಷ ಶಿವರಾತ್ರಿಯ ದಿನ ಬೀರಪ್ಪ ಮತ್ತು ಕನ್ನಿಕಾಮವ್ವರ ಮದುವೆ ಕಾರ್ಯಕ್ರಮವನ್ನು ಊರಿನ ಕುರುಬ ಸಮುದಾಯದವರೆಲ್ಲ ಸೇರಿ ಊರ ಹೊರಗಿನ ಹಳೆಯ ಬೀರಪ್ಪನ ಲಿಂಗದಗುಡಿಯ ಮುಂದೆ ಮಾಡುತ್ತಾರೆ. ಅದರಲ್ಲಿ ಈರಾಳಪ್ಪನ ಒಕ್ಕಲಾದ ಐಗಳೋರು ಕುಲದವರು ಕಾಮಕ್ಕಳಾಗಿ ಮೂರು ಉಣ್ಣೆ(ಮೂರುಹಿಂಡು)ಯವರು ಬೀರಪ್ಪನಾಗಿ ಈ ಕಾರ್ಯಕ್ರಮದಲ್ಲಿ ಭಾಗವಹಿಸುವರು. ರಾತ್ರಿ ಪಾನಕವನ್ನು ತಯಾರಿಸಿ, ಲಿಂಗದ ಬೀರಪ್ಪನನ್ನು ಪೂಜಿಸಿ, ಪ್ರಸಾದವಾಗಿ ಪಾನಕವನ್ನು ಸೇವಿಸುತ್ತಾರೆ. ನಂತರ ಬೆಳಗಿನವರೆಗೂ ಬೀರಪ್ಪ, ಮೂರುಣ್ಣೆ ನಾಗದೇವ, ಮಲೆಯಮ್ಮ ದೈವಗಳಿಗೆ ಸಂಬಂಧಿಸಿದ ಡೊಳ್ಳಿನ ಹಾಡುಗಳನ್ನು ಹಾಡುವರು. ರಾತ್ರಿಯೆಲ್ಲ ಬೀರಪ್ಪ ಮತ್ತು ಕನ್ನಿಕಾಮವ್ವನ ಮದುವೆಯ ಶಾಸ್ತ್ರಗಳನ್ನೆಲ್ಲ ಮಾಡುವರು. ಹೀಗೆ ಹಾಡುತ್ತಲೇ ರಾತ್ರಿಯನ್ನು ಕಳೆದು ಬೆಳಿಗ್ಗೆ ಬೀರಪ್ಪನಿಗೆ ಪೂಜೆ ಸಲ್ಲಿಸಿ ಮನೆಗಳಿಗೆ ತೆರಳುವರು. ಈ ಧಾರ್ಮಿಕ ಪದ್ಧತಿಯೂ ಹಿಂದಿನಿಂದಲೂ

ನಡೆದುಕೊಂಡು ಬರುತ್ತಿದೆ. ದಸರೆಯಲ್ಲಿ ಬನ್ನಿ ಮುಡಿಯುವುದು, ಪ್ರತಿ ಭಾನುವಾರ ವಿಶೇಷ ಪೂಜೆಯಿದ್ದು, ಅಂದು ಡೊಳ್ಳಿನ ಹಾಡುಗಳನ್ನು ಹಾಡುತ್ತಾರೆ.

**ಬಲ್ಲೂರು:** ಕರ್ನೂಲು ಜಿಲ್ಲೆಯ ಆಲೂರು ಮಂಡಲಂನಲ್ಲಿ ಬರುವ ಗಡಿಗ್ರಾಮ. ಬಳ್ಳಾರಿ ತಾಲೂಕಿನ ತಾಳೂರು ಮತ್ತು ಬಲ್ಲೂರು ಮಧ್ಯೆ ವೇದಾವತಿ ನದಿಯಿದೆ. ಇದರ ಎಡ ದಡಕ್ಕೆ ತಾಳೂರು ಬಲಕ್ಕೆ ಬಲ್ಲೂರು ಇದೆ. ಈ ದೇವ ಮತ್ತು ಒಕ್ಕಲಿಗೆ ಸಂಬಂಧಿಸಿದ ಕತೆಯೊಂದು ಈ ರೀತಿಯಲ್ಲಿದೆ. ಬಲ್ಲೂರಪ್ಪನ ಒಕ್ಕಲಾದ ಬೀರ್ಲಾರ ಕುಲದವರು ಮೊದಲು ಪತ್ತಿಕೊಂಡ ಹತ್ತಿರವಿರುವ ರಾಟ್ನಗಿರಿಗಟ್ನಿಯಲ್ಲಿ ನೆಲೆಸಿದ್ದರು. ಅವರು ನಾಲ್ಕು ಜನ ಅಣ್ಣ-ತಮ್ಮಂದಿರು. ಹಿರೇಮಲ್ಲನಗೌಡ, ಮರಿಮಲ್ಲನಗೌಡ, ಕರೇಗೌಡ, ಎಲ್ಲರಿಗಿಂತ ದೊಡ್ಡವನು ಯರೇಗೌಡ. ಈ ನಾಲ್ಕು ಜನ ಅಣ್ಣ ತಮ್ಮಂದಿರ ಬೆನ್ನಿಗೆ ಒಬ್ಬ ಸೋದರಿ ಜನಿಸಿದರು. ಆಕೆಯ ಹೆಸರು ಈರಬೊಮ್ಮಕ್ಕ. ಆಕೆ ದಿನಾಲು ಪತ್ತಿಕೊಂಡಕ್ಕೆ ಹಾಲು-ಮೊಸರು ಮಾರಲು ಹೋಗುತ್ತಿದ್ದಳು. ಪಟ್ಟಣದಲ್ಲಿ ಮೊಸರು ಮಾರುವವಳನ್ನು ನೋಡಿದ ಪತ್ತಿಕೊಂಡ ರಾಜನು ಮದುವೆಯಾಗಲು ತನ್ನ ಮಂತ್ರಿಗಳಿಂದ ಹೇಳಿ ಕಳುಹಿಸಿದನು. ಅವರು ಈ ವಿಷಯ ಈರಬೊಮ್ಮಕ್ಕಳಿಗೆ ತಿಳಿಸಿದರು. ಈ ಸುದ್ದಿಯನ್ನು ತಿಳಿದ ಆಕೆ ಮನೆಗೆ ಬಂದು ಅಲ್ಲಿ ನಡೆದ ವಿಷಯವನ್ನೆಲ್ಲ ಅಣ್ಣಂದಿರಿಗೆ ತಿಳಿಸಿದಳು. ಹಾಲಿನಂಥ ಹಾಲುಮತ ಕುಲವನ್ನು ಉಳಿಸಿಕೊಳ್ಳಬೇಕಾದರೇ ರಾಜನೊಂದಿಗೆ ಹೋರಾಡಬೇಕು. ಅದು ನಾಲ್ಕು ಜನರಿಂದ ಸಾಧ್ಯವಿಲ್ಲ ಎಂಬುದನ್ನು ಗ್ರಹಿಸಿದ ಅವರು ರಾತ್ರೋರಾತ್ರಿ ತಮ್ಮ ಗಂಟುಮೂಟೆ ಕಟ್ಟಿಕೊಂಡು, ಕುರಿ ದನಗಳನ್ನು ಹೊಡೆದುಕೊಂಡು ತಮ್ಮ ದೈವವಾದ ಬೀರಪ್ಪನನ್ನು ಜೊತೆಯಲ್ಲಿ ತೆಗೆದುಕೊಂಡು ಆಲೂರಿನ ಹತ್ತಿರವಿರುವ ಅದ್ದಿಗೇರಿಗೆ ಬಂದರು. ಅಲ್ಲಿ ತಮ್ಮ ಕುಲದೈವ ಬೀರಪ್ಪನನ್ನು ಪ್ರತಿಷ್ಠಾಪಿಸಿ, ಕೆಲಕಾಲ ವಾಸ ಮಾಡಿಕೊಂಡಿದ್ದರು. ಆದರೆ ಆ ಸ್ಥಳದಲ್ಲಿ ಅವರಿಗೆ ಏಳಿಗೆಯಾಗಲಿಲ್ಲ. ಹಾಗಾಗಿ ಅಲ್ಲಿಂದ ಬೇರೆಡೆ ಹೋಗಲು ಅಣಿಯಾದರು. ಆದರೆ ಅಲ್ಲಿ ಪ್ರತಿಷ್ಠಾಪಿಸಿದ ಬೀರಲಿಂಗ ಗಟ್ಟಿಯಾಗಿ ತಳವೂರಿದಾತ ಮೇಲೇಳಲಿಲ್ಲ. ಅವರಲ್ಲಿ ಒಬ್ಬಾತನನ್ನು ಅಲ್ಲಿಯೇ ಪೂಜೆ ಮಾಡಲು ಬಿಟ್ಟು, ಉಳಿದವರು ತಂಗಿಯೊಂದಿಗೆ ದೇವರಗುಡ್ಡ(ಮೀನಗುಂದಿ)ಕ್ಕೆ ಬಂದರು. ಅಲ್ಲಿ ನೆಲೆಸಿದಾತನು ಮಾಯಕಾರ ಮಲ್ಲಯ್ಯ. ಕುರಿಹಟ್ಟಿ ಕಟ್ಟಿಕೊಂಡು ಸಾವಿರಾರು ಕುರಿಗಳನ್ನು ಮೇಯಿಸುತ್ತಿದ್ದ ಸಹೋದರರೊಂದಿಗೆ ಇರುತ್ತಿದ್ದ ಈರಬೊಮ್ಮಕ್ಕನ ಸೌಂದರ್ಯಕ್ಕೆ ಮರುಳಾದ ಮಲ್ಲಯ್ಯ ಆಕೆಯನ್ನು ಪಡೆಯಬೇಕೆಂಬ ಉದ್ದೇಶದಿಂದ ಬೆಳಗಾಗುವುದರ ಒಳಗೆ ಕುರಿಗಳನ್ನೆಲ್ಲ ಮಾಯಮಾಡಿ ಹುತ್ತದಲ್ಲಿ ಹುದುಗಿಸಿದನು. ಬೆಳಿಗ್ಗೆ ಎದ್ದವರು ಕುರಿಗಳು ಇಲ್ಲದ್ದು ಕಂಡು ಗಾಬರಿಯಾಗಿ ಹುಡುಕಲು ಹೊರಟರು. ಹುಡುಕುತ್ತಿದ್ದವರಿಗೆ ಯಾರೋ ಒಬ್ಬಾತ ಜೋಳದರಾಶಿಯಲ್ಲಿ ನವಲಿ ಪೆಟ್ಟಯ್ಯ ಅಂತ ಜ್ಯೋತಿಷಿ ಇದ್ದಾರೆ. ಆತನನ್ನು ವಿಚಾರಿಸಿದರೆ ನಿಮ್ಮ ಕುರಿಗಳು ಎಲ್ಲಿವೆ ಎಂದು ಹೇಳುತ್ತಾನೆ ಎಂದು ತಿಳಿಸಿದನು.

ಅದರಂತೆ ಕೇಳಿದ ಇವರಿಗೆ ಜ್ಯೋತಿಷಿಯು ನವಣೆ ಅನ್ನ, ತುಪ್ಪವನ್ನು ಉಣಬೇಡಿರಿ. ನಿಮ್ಮ ತಂಗಿಯನ್ನು ಮಾಯಕಾರ ಮಲ್ಲಯ್ಯನಿಗೆ ಕೊಟ್ಟು ಲಗ್ನಮಾಡಿ. ನಂತರ ನಿಮ್ಮ ಕುರಿಗಳು ದೊರೆಯುತ್ತವೆ ಎಂದು ಹೇಳಿದನು. ಅದರಂತೆ ಮಾಡಲಾಗಿ ಕುರಿಗಳು ದೊರೆತವು. ಆದರೆ ಕುರಿಗಳನ್ನು ಹುಡುಕುವ ಗಡಿಬಿಡಿಯಲ್ಲಿ ಅವರು ತಮ್ಮ ದೈವ ಬೀರಪ್ಪನನ್ನು ಕಳೆದುಕೊಂಡಿದ್ದರು. ಆಗ ಮಲ್ಲಯ್ಯ ಎಲ್ಲಿ ಗೋವೊಂದು ಹುತ್ತಕ್ಕೆ ಹಾಲು ಕರೆಯುತ್ತದೆಯೋ ಅಲ್ಲಿ ನಿಮ್ಮ ದೇವರಿರುತ್ತಾನೆ ಎಂದು ಹೇಳಿ ಕಳುಹಿಸಿದನು. ಕುರಿ ಮೇಯಿಸುತ್ತ ಬರುವಾಗ ವೇದಾವತಿ ದಡದ ತೋಪಿನ ಒಂದು ಹುತ್ತದ ಮೇಲೆ ಗೋವು ಹಾಲು ಸುರಿಸುತ್ತಿರುವುದನ್ನು ಕಂಡರು. ಅಲ್ಲಿ ನೋಡಲಾಗಿ ಹುತ್ತಿನ ಒಳಗೆ ಲಿಂಗವಿತ್ತು. ಇದೇ ತಮ್ಮ ದೇವರೆಂದು ಪರಿಭಾವಿಸಿ ಅಂದಿನಿಂದ ಪೂಜೆ ಮಾಡುತ್ತ ಅಲ್ಲಿಯೇ ನೆಲೆನಿಂತರು. ಈ ದೈವವನ್ನೆ ಬಲ್ಲೂರಪ್ಪನೆಂದು ಪೂಜಿಸುತ್ತ ಬಂದರು. ಈ ಕತೆಯನ್ನು ಪುಷ್ಠೀಕರಿಸಲು ಡೊಳ್ಳಿನ ಮಂಗಳಾರುತಿ ಪದವೊಂದು ಹೀಗಿದೆ.

ಮಂಗಳಾನ್ನಿರಿ ದೇವಗೆ ಶ್ರೀ ಬಲ್ಲೂರೇಶನಿಗೆ ॥ಪ॥<br>
ಕರ್ಪೂರದಾರುತಿ ಬೆಳಗುವ ಮುದದಿಂದ<br>
ಸರ್ಪಭೂಷಣ ಶಿವ ಶಂಕರಗೆ ॥ ಮಂಗಳಾನ್ನಿರಿ ॥<br>
ಹುತ್ತಿನ ಪಡೆಯೊಳು ವಾಸವಾದವಗೆ<br>
ಗೋವಿನ ಹಾಲು ಸವಿದುಂಡವಗೆ ॥ ಮಂಗಳಾನ್ನಿರಿ ॥<br>
ಚತುರ್ಥಿ ಮೇಟಿ ಸಲವುತ ಬಂದವಗೆ<br>
ಇನ್ನುಳಿದ ಭಕ್ತರ ಸಲಹಿದವಗೆ ॥ ಮಂಗಳಾನ್ನಿರಿ ॥<br>
ಡೊಳ್ಳು ಜಯಭೇರಿಗಳ ನುಡಿಸುತ ಬಂದವಗೆ<br>
ಆದಿತ್ಯವಾರ ಪೂಜೆ ಗೊಂಡವಗೆ ॥<br>
ಮಂಗಳಾನ್ನಿರಿ ಶ್ರೀ ಬಲ್ಲೂರೇಶನಿಗೆ"[೨]

ಹೀಗೆ ತಮಗೆ ದೊರೆತ ದೈವವನ್ನು ಆರಾಧಿಸುತ್ತ ಅಲ್ಲಿಯೇ ನೆಲೆನಿಂತರು. ಪ್ರತಿ ಭಾನುವಾರ ಆತನಿಗೆ ವಿಶೇಷ ಪೂಜೆಗಳು ನಡೆಯುತ್ತವೆ.

ಈ ದೈವಕ್ಕೆ ಸಂಬಂಧಿಸಿದ ಅಂದರೆ ಭಂಡಾರಕ್ಕೆ ಸೇರಿದ ಇತರ ದೈವಗಳೆಂದರೆ ಊಳೂರು ಬೀರಪ್ಪ, ತಾಳೂರಿನ ತಾಳೂರಪ್ಪ, ಮುದೇನೂರಿನ ಮುದೆನೂರಪ್ಪ, ಬಲಕುಂದೆಯ ಬಲಕುಂದಪ್ಪ, ಸಿಂದ್ವಾಳದ ಕಟ್ರಳೇಶ್ವರ. ಈ ಎಲ್ಲ ಗ್ರಾಮಗಳಲ್ಲಿ ಯಾವುದೇ ಉತ್ಸವ ನಡೆದರೂ ತಪ್ಪದೇ ಭಂಡಾರವನ್ನು ಕೊಡಲೇಬೇಕು. ಬಲ್ಲೂರಿನಲ್ಲಿ ದೊಡ್ಡದ್ಯಾವರ ಉತ್ಸವ ಮಾಡಿದರೆ ಈ ದೈವಗಳನ್ನು ಒಳಗೊಂಡಂತೆ ಒಂಭತ್ತು ಭಂಡಾರಗಳನ್ನು ಕಟ್ಟುತ್ತಾರೆ. ೨೦೧೩ರಲ್ಲಿ ಬಲಕುಂದೆಯಲ್ಲಿ ದೊಡ್ಡದ್ಯಾವರ ಉತ್ಸವ ನಡೆಯಿತು. ಅಲ್ಲಿಗೆ ಹನ್ನೊಂದು ದೇವರುಗಳು ಭಂಡಾರಕ್ಕೆ ಬಂದಿದ್ದವು.

ಬೀರ್ಲಾರು ಎಂಬ ಬೆಡಗಿನವರು ಎಲ್ಲಿಯೇ ಇದ್ದರೂ ಬಲ್ಲೂರಪ್ಪನಿಗೆ ನಡೆದುಕೊಳ್ಳುತ್ತಾರೆ. ಇಂದಿಗೂ ಅವರನ್ನು ನಾಲ್ಕು ಮೇಟಿಯವರೆಂದು ಗುರುತಿಸುತ್ತಾರೆ. ಸಂಡೂರು ಮೇಟಿ, ಮುತ್ತೆಲಾರು ಮೇಟಿ, ಎಮ್ಮೇರ ಮೇಟಿ, ಪೂಜಾರಿಗಳ ಮೇಟಿ ಎಂಬ ನಾಲ್ಕು ಮೇಟಿಗಳಿವೆ. ಅವು ಮೊದಲ ನಾಲ್ಕು ಜನ ಅಣ್ಣ-ತಮ್ಮಂದಿರನ್ನು ಸೂಚಿಸುತ್ತವೆ.

**ಮುದೇನೂರು:** ಕರ್ನೂಲು ಜಿಲ್ಲೆಯ ಆಲೂರು ಮಂಡಲದ ಕಟ್ಟಕಡೆಯ ಗ್ರಾಮ. ಸಿರುಗುಪ್ಪ ತಾಲೂಕಿನ ಬಲಕುಂದಿ ಮತ್ತು ಮುದೇನೂರು ವೇದಾವತಿ ನದಿಯ ಎಡಬಲ ದಂಡೆಯಲ್ಲಿವೆ. ಗೌಡ್ಲಾರು ಬೆಡಗಿನವರು ಮುದೇನೂರಪ್ಪ ಅಥವಾ ಕರೆಬೀರಪ್ಪನ ಒಕ್ಕಲು ಮಕ್ಕಳು. ನಾಲ್ಕು ಜನ ಅಣ್ಣ-ತಮ್ಮಂದಿರು ಕಾಲಾಂತರದಲ್ಲಿ ಭಾಗವಾಗಿ ಇಂದು ಶಿಶುಮಕ್ಕಳಾಗಿ ನಡೆದುಕೊಳ್ಳುತ್ತಾರೆ. ವೇದಾವತಿ ನದಿ ದಂಡೆಯ ಮೇಲೆ ಸಾಲಾಗಿ ಐದು ಗುಡಿಗಳನ್ನು ಕಟ್ಟಲಾಗಿದೆ. ಮುದೇನೂರಪ್ಪ, ಪಿಡ್ಡೆಪ್ಪ, ಬೂವಪ್ಪ, ಪೋತಪ್ಪ, ಕುಂಟು ಪೂಜಾರಪ್ಪ. ಇವುಗಳ ಜೊತೆಗೆ ಮುದೇನೂರಪ್ಪ ದೇವಾಲಯಕ್ಕಿಂತ ಒಂದು ಮೊಳ ಗುಡಿಯೊಂದು ಮುಂಭಾಗಕ್ಕೆ ಕಟ್ಟಲಾಗಿದೆ. ಅದು ಮುದೇನೂರಪ್ಪನ ಜಾತ್ರೆಯ ಸಮಯದಲ್ಲಿ ಊಟವಿಲ್ಲದೆ, ದಣಿವಿಲ್ಲದೆ ಡೊಳ್ಳು ಬಡಿದಿರುವ ಭಕ್ತ ಬಲವಂತನ ಗುಡಿ. ಭಕ್ತಿಯಿಂದ ಮಾಡಿದ ಈ ಕೆಲಸಕ್ಕಾಗಿ ಮುದೇನೂರಪ್ಪನೇ ನನಗಿಂತಲೂ ನನ್ನ ಭಕ್ತನ ಗುಡಿ ಒಂದು ಮೊಳ ಮುಂದಿರಲಿ ಎಂದು ಹೇಳಿದ್ದನೆಂದು ಹೇಳುವರು. ಆದರೇ ಈ ನಾಲ್ಕು ಜನರಲ್ಲಿ ಯಾರು ಆ ಭಕ್ತ ಎಂಬುದನ್ನು ಯಾರು ನಿಖರವಾಗಿ ಹೇಳುತ್ತಿಲ್ಲ. ಬೇರೆಡೆ ಎಲ್ಲಿಯಾದರೂ ಮಾಹಿತಿ ದೊರೆಯುತ್ತದೆಯೋ ಎಂದು ನೋಡಿದರೂ ಸಿಗುತ್ತಿಲ್ಲ. ಇಲ್ಲಿ ಹದಿನಾಲ್ಕು ವರ್ಷಗಳ ಹಿಂದೆ ದೊಡ್ಡದೇವರನ್ನು ಮಾಡಿ ಪೂಜಾರಿಯನ್ನು ನೇಮಿಸಲಾಗಿದೆ. ಮುದೇನೂರಪ್ಪನಿಗೆ ಇತ್ತೀಚೆಗೆ ತೇರು ಮಾಡಿಸಿದ್ದಾರೆ. ಪ್ರತಿವರ್ಷ ಬಸವ ಜಯಂತಿಯಂದು ರಥೋತ್ಸವ ನಡೆಯುತ್ತದೆ. ರಥೋತ್ಸವದ ಒಂಭತ್ತು ದಿನಗಳ ಮುಂಚೆಯೇ ಮುದೇನೂರಪ್ಪನಿಗೆ ಐದು ಸಲ ಅಭಿಷೇಕ ಮಾಡಿ ಪೂಜಿಸಿ, ಕಂಕಣವನ್ನು ಕಟ್ಟಲಾಗುತ್ತದೆ. ಅಂದಿನಿಂದ ರಥೋತ್ಸವ ಮುಗಿದು ಕಂಕಣ ಬಿಚ್ಚುವವರೆಗೂ ಊರಲ್ಲಿ ಯಾರು ಮಾಂಸದೂಟವನ್ನು ಸೇವಿಸುವುದಿಲ್ಲ. ಈ ಪರಂಪರೆಯನ್ನು ಕುರುಬರಲ್ಲದೆ ಊರಿನ ಎಲ್ಲ ಸಮುದಾಯದವರೂ ಪಾಲಿಸುತ್ತಾರೆ.

ರಥದಲ್ಲಿ ಮುದೇನೂರಪ್ಪನ ಬೆಳ್ಳಿಮೂರ್ತಿಯನ್ನು ಇಟ್ಟುಕೊಂಡು ಎದುರು ಬಸವಣ್ಣನ ಗುಡಿಯವರೆಗೆ ತೇರು ಹರಿದು ಅಲ್ಲಿ ಪೂಜೆಯನ್ನು ಸಲ್ಲಿಸಿ ನಂತರ ದೇವಾಲಯಕ್ಕೆ ಹಿಂತಿರುಗಿ ಬರುತ್ತದೆ. ದೊಡ್ಡದೇವರು ಉತ್ಸವ ಮಾಡಿದಾಗ ಧೂಳುಮರಿ ಸೇವೆ ಇರುತ್ತದಾದರೂ ರಥೋತ್ಸವ ಸಂದರ್ಭದಲ್ಲಿ ನಿಷಿದ್ಧವಾಗಿರುತ್ತದೆ. ಬಲಕುಂದಪ್ಪ ಮತ್ತು ಮುದೇನೂರಪ್ಪ ನೆಂಟ-ಬಂಟರ(ಬೀಗರ) ದೇವರುಗಳು. ಮುದೇನೂರಪ್ಪ ದೇವರು ಹೆಣ್ಣುಮಗಳ ದೇವರು ಆಗಿರುವುದರಿಂದ ಮೊದಲ

ಪೂಜೆ ಇಲ್ಲಿಯೇ ನಡೆಯಬೇಕು. ನಂತರ ಬಲಕುಂದಪ್ಪನ ಪೂಜೆ ನಡೆಯಬೇಕೆಂಬ ಪ್ರತೀತಿ ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಇಲ್ಲಿನ ಮತ್ತೊಂದು ವಿಶೇಷತೆ ಎಂದರೆ, ಮುದೇನೂರಪ್ಪನ ಜಗುಲಿ ಹೊಡೆದಿಲ್ಲದಿರುವುದು. ಅಂದರೆ ಒಂದು ದೇವರಿಗೆ ಸಂಬಂಧಿಸಿದ ಒಕ್ಕಲಿನ ಅಣ್ಣ-ತಮ್ಮಂದಿರು ಬೇರೆ ಬೇರೆ ಕಡೆ ವಾಸಿಸುವಾಗ ಮೂಲಸ್ಥಳಕ್ಕೆ ಬಂದು ಪೂಜೆ ಸಲ್ಲಿಸಲು ಸಾಧ್ಯವಾಗುವುದಿಲ್ಲ. ಅಂತಹ ಸಮಯದಲ್ಲಿ ಮೂಲದೇವರ ಗುಡಿಯಲ್ಲಿರುವ ದೇವರ ಯಾವುದಾದರೂ ಒಂದು ವಸ್ತುವನ್ನು ಅಂದರೆ ದೇವರ ಬೆತ್ತ, ಬೆಳ್ಳಿಯ ಛತ್ರಿ, ಕುದುರೆಯಂಥ ಯಾವುದಾದರೂ ಒಂದನ್ನು ತೆಗೆದುಕೊಂಡು ಹೋಗಿ ತಾವು ವಾಸಿಸುವ ಸ್ಥಳದಲ್ಲಿ ದೇವಾಲಯ ಕಟ್ಟಿಕೊಂಡು ದೇವರನ್ನು ಪ್ರತಿಷ್ಠಾಪಿಸಿಕೊಳ್ಳುವುದು. ಆದರೆ ಒಕ್ಕಲಿನ ಅಣ್ಣ-ತಮ್ಮಂದಿರ ಸಂಖ್ಯೆ ಬೆಳೆದಿದ್ದರೂ ಇಂದಿಗೂ ಮುದೇನೂರಪ್ಪನ ಜಗುಲಿ ಹೊಡೆದಿಲ್ಲದಿರುವುದು ಅವರ ಸಾಂಸ್ಕೃತಿಕ ಬಾಂಧವ್ಯವನ್ನು ತಿಳಿಸುತ್ತದೆ.

**ಕಾಮಸಮುದ್ರ:** ಚಳ್ಳಕೆರೆ ತಾಲೂಕಿನ ಗಡಿ ಗ್ರಾಮವಾದ ಇಲ್ಲಿ ಸುಲುಪನ್ ಕುರುಬರ ಕರಿಯಣ್ಣನ ದೇವಾಲಯವಿದೆ. ಊರ ಹೊರಗೆ ಲಿಂಗದ ಗುಡಿ ಮತ್ತು ಊರ ಒಳಗೆ ಹೊಸಗುಡಿಯನ್ನು ಕಟ್ಟಿಸಲಾಗಿದೆ. ಸುಮಾರು ೧೨೦ ವರ್ಷಗಳ ಹಿಂದೆ ದೊಡ್ಡದೇವರ ಉತ್ಸವ ಮೊದಲಾಗಿದ್ದು, ಮತ್ತೆ ಇತ್ತೀಚೆಗೆ ಮಾಡಿದಾಗ ಒಕ್ಕಲಿನ ಅಣ್ಣ-ತಮ್ಮಂದಿರೆಲ್ಲ ಸೇರಿ ದೇವರ ಧಾರ್ಮಿಕ ಆಚರಣೆಗಳನ್ನು ಮಾಡಿದ್ದರು. ಈ ಭಾಗದಲ್ಲಿಯೇ ಅತೀ ದೊಡ್ಡ ಬೆಡಗು ಸುಲುಪನ್ ಕುರುಬರದು. ಈ ದೈವದ ಕುರಿತಾಗಿರುವ ಕಥೆಯೊಂದು ಹೇಳುವಂತೆ ದೆಹಲಿಯಲ್ಲಿದ್ದ ಕರಿಯಣ್ಣ ದೇವರ ಒಕ್ಕಲಿನ ಅಣ್ಣ-ತಮ್ಮಂದಿರು ಸುಲ್ತಾನನ ಕಣ್ಣು ತಮ್ಮ ಹೆಣ್ಣುಮಕ್ಕಳ ಮೇಲೆ ಬಿದ್ದಿದ್ದರಿಂದ ಹಾಲಿನಂತಹ ಕುಲವನ್ನು ಕೆಡಿಸಿಕೊಳ್ಳಲು ಇಚ್ಛೆಯಿಲ್ಲದೆ ದಕ್ಷಿಣದ ಕಡೆ ಬಂದರು. ಅವರನ್ನು ಹಿಂಬಾಲಿಸಿಕೊಂಡು ಬಂದ ಸುಲ್ತಾನನ ಸೈನ್ಯದಿಂದ ತಪ್ಪಿಸಿಕೊಳ್ಳಲು ತುಂಬಿ ಹರಿಯುವ ಗಂಗೆಯನ್ನು ಸಂತೃಪ್ತಿಗೊಳಿಸಿದ್ದರಿಂದ ದಾಟಲು ದಾರಿ ಕೊಟ್ಟಳು. ದಾಟುವಾಗ ಹೆಣ್ಣುಮಗುವೊಂದನ್ನು ಆ ದಂಡೆಯಲ್ಲಿಯೇ ಬಿಟ್ಟು ಬಂದಿದ್ದರು. ಆ ಮಗುವನ್ನು ಹದ್ದೊಂದು ಎತ್ತಿಕೊಂಡು ಹೋಗಿ ಮಚ್ಚಸಂದ್ರ ಎಂಬ ಗ್ರಾಮದಲ್ಲಿ ಬಿಟ್ಟು ಹೋಯಿತು. ಅಲ್ಲಿಂದ ಬಂದವರು ಕಾಮಸಮುದ್ರದಲ್ಲಿ ದೇವರನ್ನು ಪ್ರತಿಷ್ಠಾಪಿಸಿಕೊಂಡು ನೆಲೆಸಿದರು. ಹಾಗಾಗಿಯೇ ವರ್ಷವೂ ದಸರದಲ್ಲಿ ಮಾಡುವ ಹಿರಿಯರ ಹಬ್ಬದಲ್ಲಿ ಮಚ್ಚಸಂದ್ರಕ್ಕೆ ಹೋಗಿ ಅಲ್ಲಿರುವ ಹದ್ದು ಇಳಿಸಿದ ಮಗುವಿನ ಸ್ಥಳಕ್ಕೆ(ಗದ್ದುಗೆ) ಪೂಜೆ ಸಲ್ಲಿಸಿ ಬರುತ್ತೀವೆಂದು ಹೇಳುವರು. ಮತ್ತೊಂದು ಕತೆಯು ಹಂಪಿ ಪರಿಸರದಲ್ಲಿ ಇವರ ಪೂರ್ವಜರು ಕುರಿ ಕಾಯುತ್ತ ನೆಲೆಸಿದ್ದರು. ಅಲ್ಲಿದ್ದ ಕರಿಯಣ್ಣ ದೇವರಿಗೆ ನಿತ್ಯವೂ ಹಾಲು ಮೊಸರಿನಿಂದ ಪೂಜೆ ಮಾಡುತ್ತಿದ್ದರು. ಅವರ ಭಕ್ತಿಗೆ ಮೆಚ್ಚಿದ ಕರಿಯಣ್ಣ ನಾನು ನಿಮ್ಮೊಂದಿಗೆ ಬರುತ್ತೇನೆ. ಕರೆದುಕೊಂಡು ಹೋಗಿರೆಂದು ಹೇಳಿದನು. ದೇವರನ್ನು ತಮ್ಮೊಂದಿಗೆ ಕರೆದುಕೊಂಡು ಹೋಗುವ ಸುದ್ದಿಯನ್ನು ಕೇಳಿದ ಆ

ಊರ ಗೌಡ ತನ್ನ ದಂಡಿನೊಂದಿಗೆ ಇವರನ್ನು ಹಿಂಬಾಲಿಸಿಕೊಂಡು ಬಂದರು. ಅವರಿಂದ ತಪ್ಪಿಸಿಕೊಳ್ಳೋದು ಸಾಧ್ಯವಿಲ್ಲ ಎಂಬುದನ್ನರಿತು ದೇವರನ್ನು ಅವರೊಂದಿಗೆ ಇದ್ದ ಮಾದಿಗರಾತನ ಕೈಗೆ ನೀಡಿದರು. ಹಿಂದಿನ ಕಾಲದಲ್ಲಿ ಕುರಿಮಂದೆಯ ಜೊತೆಗೆ ಚಪ್ಪಲಿ ರಿಪೇರಿಯಂತಹ ಕೆಲಸಗಳನ್ನು ಮಾಡಿಕೊಡಲು ಮಾದಿಗರವರನ್ನು ಆಯಾಗಾರನನ್ನಾಗಿ ಇಟ್ಟುಕೊಳ್ಳುವ ಪದ್ಧತಿಯಿತ್ತು. ಆತ ಕೈಚೀಲದಲ್ಲಿ ದೇವರನ್ನು ಬಚ್ಚಿಟ್ಟುಕೊಂಡನು. ಅವರನ್ನು ಹುಡುಕಿಕೊಂಡು ಬಂದ ಗೌಡನ ದಂಡಿಗೆ ಎಷ್ಟು ಹುಡುಕಿದರೂ ದೇವರು ಸಿಗಲಿಲ್ಲ. ಹಾಗಾಗಿ ಇವರನ್ನು ಬಿಟ್ಟು ಹಿಂತಿರುಗಿದನು. ನಂತದಲ್ಲಿ ದೇವರನ್ನು ಪಡೆದು ಕಾಮಸಮುದ್ರದಲ್ಲಿ ಪ್ರತಿಷ್ಠಾಪಿಸಿ ಅಲ್ಲಿಯೇ ನೆಲೆಸಿದರು. ಅವರೊಂದಿಗೆ ಇದ್ದ ಮಾದಿಗರಾತ ಪಕ್ಕದಲ್ಲಿನ ಜಾಜುರಿನಲ್ಲಿ ನೆಲೆಸಿದ. ಅದರಿಂದಾಗಿಯೇ ಜಾಜೂರಿನಲ್ಲಿ ಕರಿಯಮ್ಮ ದೇವಿಯ ಜಾತ್ರೆಯಲ್ಲಿ ಕಡಿದ ಕೋಣದ ಮಾಂಸವನ್ನು ಹಂಚಿಕೊಳ್ಳುವಾಗ ಕಾಮಸಮುದ್ರದ ಕರಿಯಣ್ಣ ದೇವರ ಪಾಲು ಎಂದು ಎತ್ತಿಡುತ್ತಾರೆ. ನೆಂಟರಿಷ್ಟರು ಕುಚೋದ್ಯಕ್ಕೆ ಇಂದಿಗೂ ಸುಲುಪನ್ ಕುರುಬರನ್ನು ದೊಡ್ಡಮಾದಿಗರೆಂದು ಕರೆಯುತ್ತಾರೆ.

ಕರಿಯಣ್ಣ ದೇವರಿಗೆ ಇತ್ತೀಚೆಗೆ ದೊಡ್ಡದೇವರ ಜಾತ್ರೆ ಮಾಡಲಾಗಿದೆ. ದೇವರಿಗಾಗಿ ಕಲೆತ ಒಟ್ಟು ದೈವಗಳ ಮಂದೆಯನ್ನು ಹಂಪೆಯ ತಿರುಗುಮಡುಗು(ಚಕ್ರತೀರ್ಥ) ಹತ್ತಿರ ಕರೆತಂದು ಪೂಜಿಸಿ, ದೈವಕ್ಕೆ ಜೀವಕಾಳು ತುಂಬಿ ಹೊಸ ಪೂಜಾರಿಯನ್ನು ನೇಮಿಸಿದ್ದಾರೆ. ಅಂದು ಒಡೆಯರು ಶಾಸ್ತ್ರೋಕ್ತವಾಗಿ ಪೂಜಾರಿಯಾಗುವ ಹುಡುಗನಿಗೆ ಮಂತ್ರಗಳನ್ನು ಬೋಧಿಸಿ, ಇಂದಿನಿಂದ ನೀನು ದೇವರ ಕಾರ್ಯವನ್ನು ನೇಮ-ನಿಷ್ಠೆಯಿಂದ ಮಾಡಿಕೊಂಡು ಬರಲು ಹೇಳುತ್ತಾರೆ. ದೇವರನ್ನು ವರ್ಷಕ್ಕೊಮ್ಮೆ ಗಂಗಾಪೂಜೆಗೆ ಹೊರಡಿಸುತ್ತಾರೆ. ಆ ಸಮಯದಲ್ಲಿ ಭಕ್ತರು ಹರಕೆಗಳನ್ನು ತೀರಿಸಿ ಕುರುಹು ಕೇಳುವ ಕಾರ್ಯ ನಡೆಯುತ್ತದೆ. ಕರಿಯಣ್ಣ ದೇವರು ನೀಡಿದ ಕುರುಹುಗಳು ಹುಸಿಯಾಗುವುದಿಲ್ಲ ಎಂಬ ನಂಬಿಕೆ ಈ ಭಾಗದಲ್ಲಿ ಬಲವಾಗಿದೆ. ಇಲ್ಲಿನ ಮತ್ತೊಂದು ಪ್ರಮುಖ ಆಚರಣೆಯೆಂದರೆ ಕರಿಯಣ್ಣ ದೇವಾಲಯದಲ್ಲಿ ಒಕ್ಕಲಿನ ಎಲ್ಲರೂ ಸೇರಿ ಯುಗಾದಿಯ ದಿನ 'ಹಿರಿಯರ ಹಬ್ಬ'ವನ್ನು ಮಾಡುವರು. ದೈವಕ್ಕೆ ಸಂಬಂಧಿಸಿದ ಒಕ್ಕಲಿನ ಅಣ್ಣತಮ್ಮಂದಿರು ಬಂದು ತಮ್ಮ ಪೂರ್ವಜರನ್ನು ಪೂಜಿಸುವ ಕ್ರಮವೇ ಹಿರಿಯರ ಹಬ್ಬ. ಈ ಆಚರಣೆಯಲ್ಲಿ ಅವರ ಹಿರಿಯರು ಉಪಯೋಗಿಸಿದ ಪರಿಕರಗಳನ್ನು ಮತ್ತು ಇಷ್ಟವಾದ ಪದಾರ್ಥಗಳನ್ನು ಇಟ್ಟು ಪೂಜಿಸುತ್ತಾರೆ. ಇದು ಹಿರಿಯರನ್ನು ನೆನಪಿಸಿಕೊಳ್ಳುವುದರ ದ್ಯೋತಕವಾಗಿದೆ. ಈ ಹಬ್ಬಕ್ಕೆ ಅಣ್ಣ ತಮ್ಮಂದಿರೆಲ್ಲಾ ಎಲ್ಲಿಯೇ ನೆಲೆಸಿದರೂ ತಪ್ಪದೇ ಹಾಜರಾಗುತ್ತಾರೆ. ಒಂದೆಡೆ ಕಲೆತು ಆಚರಿಸುವ ಈ ಪದ್ಧತಿಯು ತಾವೆಲ್ಲರೂ ಒಂದು ಕುಟುಂಬ, ಒಂದೇ ಪರಂಪರೆಯ ಮೂಲಕ್ಕೆ ಸೇರಿದವರೆಂಬ ದ್ಯೋತಕವಾಗಿದೆ.

**ಜಾಲೋಡು:** ತುಮಕೂರು ಜಿಲ್ಲೆಯ ಪಾವಗಡ ತಾಲೂಕಿನ ವೈ.ಎನ್. ಹೊಸಕೋಟೆ ಹೋಬಳಿಯಲ್ಲಿ ಬರುವ ಗ್ರಾಮ. ಇಲ್ಲಿ ಕೋಟೆ ಕುರುಬರ ಕರಿಯಣ್ಣ ಸ್ವಾಮಿ, ಎಕ್ಕಲ ಕುರುಬರ ಬೀರಲಿಂಗೇಶ್ವರ ಮತ್ತು ಯಲ್ಲಮ್ಮನ ಗುಡಿಗಳಿವೆ. ೨೦೧೨ ಏಪ್ರಿಲ್ ೪ರಿಂದ ೭ರವರೆಗೆ ದೊಡ್ಡದೇವರ ಜಾತ್ರೆ ನಡೆಸಲಾಯಿತು. ಕರ್ನಾಟಕ-ಆಂಧ್ರದಲ್ಲಿರುವ ಎಲ್ಲ ಒಕ್ಕಲಿನ ಅಣ್ಣ-ತಮ್ಮಂದಿರು ಭಾಗವಹಿಸಿದ್ದರು. ಪೆರೂರಿನ ಕಲಕಂದಪ್ಪ, ಶಿವಪುರದ ಬಾಗಪ್ಪ, ತಿಮ್ಮಂಪಲ್ಲಿಯ ಕಂಬದೂರಪ್ಪ, ಚಿಕ್ಕ ಜಾಲೋಡಿನ ಹೊಸಕೇರಪ್ಪ-ಗೋಪಿಗಿರಿಯಪ್ಪ, ಕಪ್ಪಗಲ್ಲು ಆಗಲೂರಪ್ಪ, ಓಬುಳಾಪುರ(ಸಿರಿವಾಳ)ದ ಕುರುಕುಂಟಪ್ಪ, ಕುಂದುರ್ಪಿಯ-ಮುದ್ದುಲಿಂಗೇಶ್ವರ, ರಾಳ್ಳ ಅನಂತಪುರಂನ ಬೀರಪ್ಪ ದೈವಗಳು ಮಂದೆಗೆ ಕಲೆತಿದ್ದವು. ಮೂಡುಚಿಂತಲ ವಂಕ(ಹಳ್ಳ)ದ ಹತ್ತಿರ ಗಂಗಾಪೂಜೆಯನ್ನು ಮಾಡಿ ಕರಿಯಣ್ಣಸ್ವಾಮಿ, ಬೀರಲಿಂಗೇಶ್ವರಸ್ವಾಮಿ, ಯಲ್ಲಮ್ಮ ದೇವರುಗಳಿಗೆ ಪೂಜಾರಿಗಳ ಪಟ್ಟವನ್ನು ಕಟ್ಟಲಾಯಿತು. ಹಾಗೆಯೇ ದೇವರ ಯಜಮಾನ ಪಟ್ಟ, ಗೌಡಿಕೆ ಪಟ್ಟ, ಹೂವಿನ ಯಜಮಾನನ ಪಟ್ಟ, ಜೋಗಮಣಿ ಪಟ್ಟ, ಅಣ್ಣ-ತಮ್ಮಂದಿರ ಪಟ್ಟಗಳನ್ನು ಸಂಬಂಧಿಸಿದವರಿಗೆ ಕಟ್ಟಲಾಯಿತು. ವಿಶೇಷತೆಯೆಂದರೆ ಈ ದೈವಕ್ಕೆ ಪೂಜೆಗೆ ಹೂವು ತರುವವರಿಗೂ ಪಟ್ಟ ಕಟ್ಟುವ ಕ್ರಮವಿದೆ. ಈ ಪದ್ಧತಿ ಬೇರೆಲ್ಲಿಯೂ ಕಂಡುಬರುವುದಿಲ್ಲ.

**ಗುಂತಕಲ್ಲು:** ಅನಂತಪುರಂ ಜಿಲ್ಲೆಯ ಮಂಡಲ ಕೇಂದ್ರ. ಇಲ್ಲಿ ಗುಂತಕಲ್ಲಪ್ಪನ ದೇವಾಲಯವಿದೆ. ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೪೫ ಕಿ.ಮೀ. ದೂರದಲ್ಲಿದೆ. ಕರ್ನಾಟಕದ ಗಡಿಯೊಂದಿಗೆ ಹೊಂದಿಕೊಂಡಿರುವ ಇಲ್ಲಿ ಕನ್ನಡ ಮತ್ತು ತೆಲುಗು ಭಾಷೆಯನ್ನಾಡುವ ತೆಲುಗು ಕುರುಬರಿದ್ದು, ಪರಸ್ಪರ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಿದ್ದಾರೆ. ಈ ದೇವಾಲಯದಲ್ಲಿಯೇ ಗುಂತಕಲ್ಲಪ್ಪನೊಂದಿಗೆ ಗದ್ದುಗೆ ಹಂಚಿಕೊಂಡಿರುವ ಇತರ ದೈವಗಳೆಂದರೆ ಗುತ್ತಿ ಗುಂತಕಲ್ಲಪ್ಪ, ದೊಡ್ಡ ವಸಿಕೇರಪ್ಪ, ಸಣ್ಣ ವಸಿಕೇರಪ್ಪ, ದೊಡ್ಡ ಉಜ್ಜಿನಪ್ಪ, ಸಣ್ಣ ಉಜ್ಜಿನಪ್ಪ. ಈ ಆರು ದೈವಗಳು ಗುಂತಕಲ್ಲು ಸುತ್ತಮುತ್ತ ಯಾವುದೇ ಸ್ಥಳದಲ್ಲಿ ನೆಲೆಸಿದ್ದರೂ ಜೊತೆಯಾಗಿಯೇ ಜಗುಲಿ ಹಂಚಿಕೊಂಡಿರುವುದು ವಿಶೇಷವಾಗಿದೆ. ಈ ದೈವಗಳಿಗೆ ಸಂಬಂಧಿಸಿದ ಕತೆಯೊಂದು ಹೀಗಿದೆ: ಸುಮಾರು ನಾಲ್ಕೈದು ಶತಮಾನಗಳ ಹಿಂದೆ ಐದು ಜನ ಅಣ್ಣ-ತಮ್ಮಂದಿರು ತಂಗಿ ನಾಗಮ್ಮನೊಂದಿಗೆ ವಾಸಿಸುತ್ತಿದ್ದರು. ಅವರಲ್ಲಿನ ಒಬ್ಬಾತ ಪರ ಊರಿಗೆ ಹೆಂಡತಿ-ಮಗನೊಂದಿಗೆ ಹೋಗಿ ನೆಲೆಸಿದ್ದನು. ಊರಲ್ಲಿದ್ದ ಅಣ್ಣ-ತಮ್ಮಂದಿರು ಊರ ಗೌಡಿಕೆಯೊಂದಿಗೆ ಪಶುಪಾಲನೆ ಹಾಗೂ ಕೃಷಿ ಮಾಡಿಕೊಂಡಿದ್ದರು. ಹೀಗಿರುವಾಗ ಪರಸ್ಥಳದಿಂದ ಬಂದ ಬ್ರಾಹ್ಮಣನೊಬ್ಬ ಇಲ್ಲಿಗೆ ಬಂದು, ಅವರ ಸಹಕಾರದಿಂದ ಇಲ್ಲಿಯೇ ನೆಲೆಸಿದನು. ಕಾಲ ಸರಿದಂತೆ ಬ್ರಾಹ್ಮಣನಿಗೆ ಅವರ ಆಸ್ತಿ ಮತ್ತು ಗೌಡಿಕೆಯ ಮೇಲೆ ಆಸೆ ಮೂಡಿ ಅದನ್ನು ಅಪಹರಿಸುವ ಕುವಿಚಾರವು ಮನಸ್ಸಿನಲ್ಲಿ ಮೂಡಿತು. ಹೇಗಾದರೂ ಮಾಡಿ ಈ ನಾಲ್ವರನ್ನು ಕೊಂದು ಹಾಕಿದರೆ ಇವರ ವಂಶಕ್ಕೆ ವಾರಸುದಾರ ಇರುವುದಿಲ್ಲ. ಗೌಡಿಕೆಯೊಂದಿಗೆ ಆಸ್ತಿ, ಐಶ್ವರ್ಯ

ಸಿಗುತ್ತದೆಯೆಂದು ಆಲೋಚಿಸಿ, ಮಾಟವನ್ನು ಮಾಡಿ ಊರ ಅಗಸಿಯಲ್ಲಿ ಅವರು ಬಂದುಹೋಗುವ ದಾರಿಯಲ್ಲಿ ಹೂತುಬಿಡುತ್ತಾನೆ. ತಮ್ಮ ಕೆಲಸಕ್ಕಾಗಿ ಹೊಲಗದ್ದೆಗೆ ಮತ್ತು ಕುರಿ ಮೇಯಿಸಲು ಹೋದವರು, ಒಬ್ಬೊಬ್ಬರಾಗಿ ಬಂದು ಆ ಮಾಟವನ್ನು ತುಳಿದು ಸತ್ತು ಹೋಗುತ್ತಾರೆ. ಈ ವಿಷಯವು ಅದೇ ಊರಿನಲ್ಲಿದ್ದ ಸಹೋದರಿ ನಾಗವ್ವಗೆ ಗೊತ್ತಾಗಿ ತಕ್ಷಣ ಬೇರೆ ಊರಿನಲ್ಲಿದ್ದ ಇನ್ನೊಬ್ಬ ಅಣ್ಣನಿಗೆ ವಿಷಯ ತಿಳಿಸಿ ನೀನು ಬೇಗ ಬೇರೆ ಕಡೆ ಪಾರಾಗಿ ಹೋಗು. ಇಲ್ಲದಿದ್ದರೆ ನಿನ್ನನ್ನು ಕೊಂದು ಹಾಕುತ್ತಾನೆ ಎಂಬ ಸುದ್ದಿಯನ್ನು ತಲುಪಿಸುತ್ತಾಳೆ. ಬ್ರಾಹ್ಮಣನ ಗಿಡಗಂಟೆಗೆ ಹೆದರಿ ಊರಿಗೆ ಬರದವನನ್ನು ಉಪಾಯದಿಂದ ಊರಿಗೆ ಬರುವಂತೆ ಮಾಡಿ ಮಾಟ ಮಂತ್ರದಿಂದ ಸಾಯಿಸಿದನು. ತಂದೆಯನ್ನು ಕಳೆದುಕೊಂಡ ಅನಾಥನಾದ ಅಣ್ಣನ ಮಗನನ್ನು ನಾಗವ್ವಳು ತನ್ನ ಒಂದು ಆಡಿಗೆ  ನೀನೆ ತಾಯಿಯಾಗಿ ಸಾಕಿ ಸಲುಹಬೇಕೆಂದು ಕೇಳಿಕೊಳ್ಳುತ್ತಾಳೆ. ಆಡು ಒಂದು ನಿಬಂಧನೆಯನ್ನು ಹಾಕುತ್ತದೆ. ಈ ಮಗುವನ್ನು ಹನ್ನೆರಡು ವರ್ಷ ಹಾಲುಣಿಸಿ ಸಾಕುತ್ತೇನೆ. ಮುಂದೆಯೂ ಅವನ ವಂಶಸ್ಥರಾರು ಆಡನ್ನು ಕೊಂದು ಅದರ ಮಾಂಸವನ್ನು ತಿನ್ನಕೂಡದೆಂದು ಹೇಳುತ್ತದೆ. ಮಗು ಬೆಳೆದಂತೆ ಹಾಲುಣಿಸಿದ ಆಡು ನವಣೆ ತಿನ್ನಲು ರಾಶಿಯ ಮೇಲೆ ಹೋಗಿ ಉರುಳಿ ಬಿದ್ದು ಸತ್ತುಹೋಗುತ್ತದೆ. ಈ ದೈವದ ಗುಡಿಕಟ್ಟಿನ ಮೂಲ ವ್ಯಕ್ತಿಯನ್ನು ಸಾಕಿ ಸಲಹಿದ ಮೇಕೆ ನವಣೆ ರಾಶಿಯ ಮೇಲೆ ಸತ್ತದ್ದರಿಂದ ಅವರು ನವಣೆಯನ್ನೂ ತಿನ್ನುವುದಿಲ್ಲ. ಜೊತೆಗೆ ನವಣೆ ಬೆಳೆ ಇರುವ ಹೊಲದಲ್ಲಿ ನಡೆದು ಹೋಗುವುದಿಲ್ಲ. ಈ ಕಟ್ಟುಪಾಡನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ಬೆಳೆದು ದೊಡ್ಡವನಾದವನು ಬೀರಪ್ಪನ ಅನುಗ್ರಹದಿಂದ ಆಸ್ತಿಯನ್ನು, ಗೌಡಿಕೆಯನ್ನು ಬ್ರಾಹ್ಮಣನಿಂದ ಪಡೆದು ತಮ್ಮ ಹಕ್ಕು ಸ್ಥಾಪಿಸಿಕೊಳ್ಳುತ್ತಾರೆ. ಆತನಿಗೆ ಮೂರು ಜನ ಮಕ್ಕಳಾದರು. ಅವರಲ್ಲಿನ ಮೊದಲ ಇಬ್ಬರಿಗೆ ಐದು ಜನ ಗಂಡುಮಕ್ಕಳು ಜನಿಸಿದರು. ಕೊನೆಯವನಿಗೆ ಒಬ್ಬ ಮಗನಾದನು. ಅವರು ತಮ್ಮ ದೇವರ ಗುಡಿಯನ್ನು ಕಟ್ಟಿಸಿದರು. ಇಂದು ಅಲ್ಲಿರುವ ದೈವಗಳಿಗೂ ಮೂರು ಮೇಟಿಗಳಿವೆ. ಮೊದಲನೆಯ ಮೇಟಿ ಗೂಳ್ಯಂಪಾಳ್ಯಂನಲ್ಲಿದ್ದು, ಅವರಿಗೆ ಓತೂರು ಮೇಟಿ ಎಂಬ ಹೆಸರಿದೆ. ಎರಡನೆಯವರು ಗುಂತಕಲ್ಲಿನಲ್ಲಿರುವ ಗುಂತಗಲ್ ಮೇಟಿಯವರು. ಮೂರನೆಯವರು ಮದ್ದಿಕೇ(ಗೇ)ರಿಯಲ್ಲಿ ಮತ್ತಿಗೇರಿ ಮೇಟಿಯವರು. ಇಂದು ಒಂದೊಂದು ಮೇಟಿಗೂ ಮೂರೂ ಜನ ಪೂಜಾರಿಗಳಿದ್ದಾರೆ. ಎಲ್ಲಾ ಕಡೆಯೂ ಒಂದು ದೈವಕ್ಕೆ ಪಟ್ಟದ ಪೂಜಾರಿ ಹೊಳೆ ಪೂಜಾರಿ ಎಂದು ನೇಮಿಸಿದರೆ ಇಲ್ಲಿ ಒಂದೊಂದು ಮೇಟಿಗೂ ಮೂರು ಜನ ಪೂಜಾರಿಗಳುಇರುವುದು ವಿಶೇಷವಾಗಿದೆ.

ಪ್ರತಿವರ್ಷ ಶ್ರಾವಣ ಮಾಸದ ಭಾನುವಾರಗಳಂದು ದೈವಕ್ಕೆ ಸಂಬಂಧಿಸಿದ ಒಕ್ಕಲು ಮಕ್ಕಳು, ಶಿಶು ಮಕ್ಕಳು, ಭಕ್ತರು ತಮ್ಮ ಕುಟುಂಬಗಳ ಸಮೇತವಾಗಿ ಬಂದು ಕುಲದೈವಕ್ಕೆ ಪೂಜೆಯನ್ನು ಸಲ್ಲಿಸಿ, ದೇವಾಲಯದ ಹತ್ತಿರದಲ್ಲಿರುವ ವೀರಗಲ್ಲುಗಳಿಗೆ ಹಿಂದಿನ ಪೂಜಾರಿಗಳ ಸಮಾಧಿಗಳಿಗೆ

ಪೂಜೆ ಸಲ್ಲಿಸುವರು. ಅಂದು ರಾತ್ರಿ ಅಲ್ಲಿಯೇ ತಂಗಿದ್ದು, ಮರುದಿನ ತಮ್ಮ ತಮ್ಮ ಗ್ರಾಮಗಳಿಗೆ ತೆರಳುವರು. ಈ ನಾಲ್ಕು ಭಾನುವಾರಗಳಲ್ಲಿ ಯಾವುದಾದರೂ ಒಂದು ವಾರ ತಪ್ಪದೇ ಎಲ್ಲರೂ ಬಂದು ಹೋಗುತ್ತಾರೆ. ಇಲ್ಲವೆಂದರೆ ಕೇಡಾಗುತ್ತದೆ ಎಂಬ ನಂಬಿಕೆ ಬಲವಾಗಿದೆ. ಶ್ರಾವಣ ಮಾಸದಲ್ಲಿ ಬರಲು ಸಾಧ್ಯವಾಗದವರು ತಪ್ಪು ಕಾಣಿಕೆ ಕಟ್ಟಿಕೊಂಡು ಪ್ರತಿ ಭಾನುವಾರ ನಡೆಯುವ ವಿಶೇಷ ವಾರದ ಪೂಜಾ ಕಾರ್ಯಕ್ರಮಕ್ಕೆ ಬಂದು ಪೂಜೆ ಸಲ್ಲಿಸಿ, ದೇವರಿಗೆ ಕಟ್ಟಿಕೊಂಡ ಹರಕೆಗಳನ್ನು ತೀರಿಸಿ, ಪೂಜೆಗಳನ್ನು ಮಾಡಿಸಿಕೊಂಡು ಹೋಗುವುದು ವಾಡಿಕೆ. ಕೊನಕೊಂಡ್ಲ, ಗುತ್ತಿ, ಗುಲಬಾಲಂ, ಕಮಲಬಾಡು, ಗೆಂಚಿಕುಂಟ, ಚಾವಾಲ, ಪೆಂಚಲವಾಡ, ಡೊನೆಕಲ್ಲು, ಮದ್ದಿಗೇರಿ, ವಿಡಿಪನಪಲ್ಲಿ, ಕುಡಿತಿನಿ, ಹಲಕುಂದಿ, ಕಮಲಾಪುರ ಮುಂತಾದ ಸ್ಥಳಗಳಲ್ಲಿ ಈ ದೈವಗಳಿಗೆ ಸಂಬಂಧಿಸಿದ ಒಕ್ಕಲಿನ ಅಣ್ಣ–ತಮ್ಮಂದಿರು ಹೆಚ್ಚಾಗಿದ್ದಾರೆ.

**ಗೂಳ್ಯಂ:** ಕರ್ನೂಲು ಜಿಲ್ಲೆಯಲ್ಲಿ ಬರುವ ಗಡಿ ಗ್ರಾಮವಾಗಿದ್ದು, ಹಗರಿ ನದಿಯ ದಡದಲ್ಲಿದೆ. ಪ್ರಾಚೀನ ಕಾಲದಿಂದಲೂ ಕುರುಬ ಸಮುದಾಯ ಸಾಂಧ್ರವಾಗಿ ನೆಲೆಸಿರುವ ಇಲ್ಲಿ ಚಿನ್ನೂರೇಶ್ವರ, ಮಾರೆಬೀರಪ್ಪ, ಯಲ್ಲಮ್ಮ, ಗಾದಿಲಿಂಗಪ್ಪನ ದೇವಾಲಯಗಳಿವೆ. ಚಿನ್ನೂರೇಶ್ವರನ ದೇವಾಲಯವು ಊರ ಮಧ್ಯದಲ್ಲಿ ನಿರ್ಮಿತವಾಗಿದೆ. ಇಲ್ಲಿ ಉತ್ಸವ ಮೂರ್ತಿಯನ್ನು ಇಡಲಾಗಿದೆ. ಕಟ್ಟಿಗೆಯಿಂದ ರಥದ ಆಕಾರದಲ್ಲಿ ಮಾಡಿದ ಪೀಠದಲ್ಲಿ ಚಿನ್ನೂರಪ್ಪನು ಕುದುರೆಯೇರಿ ವೀರನ ಭಂಗಿಯಲ್ಲಿ ಕುಳಿದಿದ್ದಾನೆ. ಕೈಯಲ್ಲಿ ಭಲ್ಲೆಯಿದ್ದು, ಗುರಿಯಿಟ್ಟ ಭಂಗಿಯಲ್ಲಿ ಮೂರ್ತಿಯು ನಿರ್ಮಿತವಾಗಿದೆ. ಚಿನ್ನೂರಪ್ಪನ ಸೇವಾಚರಣೆಗಳಲ್ಲಿ ಮತ್ತು ಗಾದಿಲಿಂಗಪ್ಪನ ಉತ್ಸವಗಳಲ್ಲಿ ಈ ಜಗುಲಿಯ ಮನೆತನವರದ್ದು ಪ್ರಮುಖ ಪಾತ್ರವಾಗಿದೆ. ಡೊಳ್ಳಿನ ವಾಲಗ, ಗಂಡಾರ್ತಿ ಸೇವೆ, ದಂಡೆ ಧರಸಿ ಕಳಸ ಸೇವೆ, ದೀಡು ನಮಸ್ಕಾರ, ಕುಂಭ ಸೇವೆಗಳು ಮೊದಲಾದ ಪ್ರಮುಖ ಸೇವೆಗಳು ಇಲ್ಲಿಂದಲೇ ಪ್ರಾರಂಭವಾಗುತ್ತವೆ.

ಪ್ರತಿ ಗುರುವಾರ ಸಾಯಂಕಾಲ ಚಿನ್ನೂರಪ್ಪನ ದೇವಾಲಯದಿಂದ ಡೊಳ್ಳುವಾದ್ಯಗಳೊಂದಿಗೆ ಕಳಸವು ಗಾಂದಿಲಿಂಗಪ್ಪನವರ ದೇವಾಲಯಕ್ಕೆ ಮೆರವಣಿಗೆಯಲ್ಲಿ ಹೋಗುತ್ತದೆ. ಈ ಸಂದರ್ಭದಲ್ಲಿ ನೂಲಿನ ಪಂಜು ಹೊತ್ತಿಸಿ, ಪಂಜನ್ನು ಹಿಡಿದುಕೊಂಡು ಹೋಗುತ್ತಾರೆ. ಇದಕ್ಕೆ ಚಿನ್ನೂರಪ್ಪನ ಬೆಳಕು ಎಂದು ಕರೆಯುತ್ತಾರೆ. ಗಾಂದಿಲಿಂಗಪ್ಪನ ದೇವಾಲಯದಲ್ಲಿ ಪೂಜೆಗೊಂಡು, ನಂತರ ಪೂಜೆ ಮುಗಿಸಿ ಮರಳಿ ಚಿನ್ನೂರಪ್ಪನ ಗುಡಿಯತ್ತ ಬರುವಾಗ ದೀವಟಿಗೆಗೆ ಗಾದಿಲಿಂಗಪ್ಪನವರ ದೇವಾಲಯದ ಎಣ್ಣೆಯನ್ನು ಹಾಕುತ್ತಾರೆ. ಇದಕ್ಕೆ ಗಾದಿಲಿಂಗಪ್ಪನವರ ಬೆಳಕು ಎಂದು ಕರೆಯಲಾಗುತ್ತದೆ. ಚಿನ್ನೂರಪ್ಪನ ಭಕ್ತನಾಗಿದ್ದುಕೊಂಡು ಜೀವಿಸಿದ್ದ ಗಾದಿಲಿಂಗಪ್ಪ ತನ್ನ ಪವಾಡಗಳಿಂದ ದೈವವೆಂದು ಪೂಜೆಗೊಳ್ಳುತ್ತಿದ್ದಾನೆ. ಈ ಪ್ರದೇಶದಲ್ಲಿಯೇ ಪ್ರಮುಖ ದೈವವಾದ ಈತನೊಂದಿಗೆ ಇಂದು ಚಿನ್ನೂರಪ್ಪ, ಮಾರೆ ಬೀರಪ್ಪನ ಆಚರಣೆಗಳು ನಡೆಯುತ್ತವೆ. ಪ್ರತಿ ವರ್ಷ ಶಿವರಾತ್ರಿ ಅಮಾವಾಸ್ಯೆ ಆದ

ಐದನೆಯ ದಿನ ಪಂಚಮಿಯಂದು ಗಾದಿಲಿಂಗಪ್ಪನ ಜೋಡು ರಥೋತ್ಸವ ಜರುಗುತ್ತದೆ. ಭಕ್ತೆ ಶಾಂತಮ್ಮನ ಮನೆಯಿಂದ ಕುಂಭ ಮತ್ತು ಚಿನ್ನೂರಪ್ಪ ದೇವರ ಗುಡಿಯಿಂದ ಕಳಸ ಬಂದ ನಂತರವೇ ತೇರು ಪ್ರಾರಂಭವಾಗಬೇಕೆಂದು ಅಂದೇ ಗಾದಿಲಿಂಗಪ್ಪ ಹೇಳಿದ್ದನಂತೆ. ಅದರಂತೆಯೇ ಅವು ಬಂದ ನಂತರ ಗಾದಿಲಿಂಗಪ್ಪನ ಜೋಡು ರತೋತ್ಸವ ಉತ್ಸವ ಮೂರ್ತಿಯೊಂದಿಗೆ ಪಾದಗಟ್ಟೆಯವರೆಗೂ ಹೋಗಿ ಪೂಜೆಗೊಂಡು ತನ್ನ ಸ್ವ ಸ್ಥಾನಕ್ಕೆ ಮರಳುತ್ತದೆ. ಜಾತ್ರೆ ಮುಗಿದ ತಿಂಗಳವರೆಗೂ ಭಕ್ತರು ಕಟ್ಟಿಕೊಂಡ ಹರಕೆಗಳನ್ನು ತೀರಿಸುತ್ತಾರೆ.

ಶ್ರಾವಣ ಮಾಸದ ಮೂರನೆಯ ಗುರುವಾರ ಮಾರೆಬೀರಪ್ಪನ ಮುಳ್ಳಾವಿಗೆ ಪೂಜೆ ನಡೆಯುತ್ತದೆ. ಇದು ಗಾದಿಲಿಂಗಪ್ಪನ ದೇವಾಲಯದಲ್ಲಿಯೇ ನಡೆಯುತ್ತದೆ. ಮಾರೆಬೀರಪ್ಪ ಮತ್ತು ಚಿನ್ನೂರಪ್ಪ ದೇವರುಗಳು ಊರಲ್ಲಿ ಮೆರವಣಿಗೆಯಲ್ಲಿ ಬಂದು ಗಾದಿಲಿಂಗಪ್ಪನ ದೇವಾಲಯದ ಬಲಭಾಗದಲ್ಲಿ ಪ್ರತಿಷ್ಠಾಪಿತವಾಗುತ್ತವೆ. ಅಲ್ಲಿ ಆ ದೈವಗಳ ಪೂಜಾರಿಗಳು ಪಂಜಿನ ಸೇವೆಯನ್ನು ಮಾಡುವರು ಅಂದರೆ ಐದು ಬತ್ತಿಗಳನ್ನು ಮಾಡಿ ತುಪ್ಪದಲ್ಲಿ ನೆನೆಸಿರುತ್ತಾರೆ. ಆ ಬತ್ತಿಗಳನ್ನು ಹಚ್ಚಿ ಪೂಜಾರಿಗಳ ಕೈಗೆ ಕೊಡುವರು. ಆ ಬತ್ತಿಗಳನ್ನು ಬೆಂಕಿಯ ಸಮೇತವಾಗಿ ನುಂಗುವರು. ಈ ಪಂಜಿನ ಸೇವೆ ಅಥವಾ ಬತ್ತಿನುಂಗುವ ಸೇವೆಯು ಪ್ರಮುಖವಾಗಿದೆ.

**ವೇಪಲಪರ್ತಿ:** ಅನಂತಪುರಂ ಜಿಲ್ಲೆಯ ಬ್ರಹ್ಮಸಮುದ್ರಂ ಮಂಡಲದಲ್ಲಿರುವ ಗ್ರಾಮ. ಇಲ್ಲಿ ಹಾಲುಕುರುಬರ ಸಿರಿವಾಳದಪ್ಪ, ಅರಸುಲು ಕುರುಬರ ಕ್ವಾಟೆಕರಿಯಣ್ಣ ಮತ್ತು ಎಲ್ಲಮ್ಮನ ದೇವಾಲಯಗಳು ಪ್ರಮುಖವಾದವು. ಸಿರಿವಾಳದಪ್ಪನ ದೊಡ್ಡದೇವರ ಜಾತ್ರೆಯನ್ನು ೨೦೧೨ ಮಾರ್ಚ್ ತಿಂಗಳ ೨ರಿಂದ ೭ನೆಯ ತಾರೀಖಿನವರೆಗೆ ನಡೆಸಲಾಗಿದೆ. ಮೊದಲ ದಿನ ಗುಮ್ಮಗಟ್ಟದ ಬಾಗಲ ಕುರುಬರ ಮಲ್ಲೇಶ್ವರಸ್ವಾಮಿ, ಗೋಸೆಲಾರು ಕುರುಬರ ಗೋಸ್ಬಾಳಪ್ಪ, ಓಬುಳಾಪುರ(ಸಿರಿವಾಳ)ದ ಅಳ್ಳೆನ ಕುರುಬರ ಕುರುಕುಂಟೇಶ್ವರ, ವೇಪಲಪರ್ತಿಯ ಕ್ವಾಟೆಕರಿಯಣ್ಣ ದೈವಗಳು ಪಟ್ಟದ ದೇವರಾದ ಸಿರಿವಾಳದಪ್ಪನೊಂದಿಗೆ ಹಂಪೆಗೆ ಕರೆತರಲಾಗುತ್ತದೆ. ಮರುದಿನ ಬೆಳಿಗ್ಗೆ ತುಂಗಭದ್ರ ನದಿಯ ಚಕ್ರತೀರ್ಥ ಅಂದರೆ ತಿರುಗುಮಡುಕುವಿನ ಕೋಟಿಲಿಂಗಗಳ ಹತ್ತಿರ ಗಂಗಾಪೂಜೆ ಮತ್ತು ರುದ್ರಾಭಿಷೇಕ ಮಾಡಿ ಪಟ್ಟದ ದೈವಕ್ಕೆ ಜೀವಕಾಳು ತುಂಬುವ ಕಾರ್ಯವನ್ನು ಮಾಡುವರು. ನಂತರ ಹಂಪಿ ವಿರೂಪಾಕ್ಷನಿಗೆ ಪೂಜೆ ಸಲ್ಲಿಸಿ, ಆತನ ದರ್ಶನ ಪಡೆದ ಮೇಲೆ ಊರಿಗೆ ಮರಳಿ ಬರುತ್ತಾರೆ.

ಹಂಪಿಯಿಂದ ಮರಳಿ ಬಂದ ದೇವರುಗಳಿಗೆ ವೇದಾವತಿ ನದಿಯಲ್ಲಿ ಪೂಜೆಯನ್ನು ಸಲ್ಲಿಸಿ ದೈವಗಳ ಸೂಚನೆಯ ಮೇರೆಗೆ ಒಡೆಯರು ಪೂಜಾರಿಯಾಗುವ ಕೋರೆ ಹುಡುಗನಿಗೆ ಮಂತ್ರದೀಕ್ಷೆ ನೀಡಿ ಪೂಜಾರಿಯ ಪಟ್ಟ ಕಟ್ಟುವ ಕಾರ್ಯಕ್ರಮ ನಡೆಸುವರು. ಈ ದೈವಕ್ಕೆ ಪಟ್ಟದ ಪೂಜಾರಿ ಮತ್ತು ಹೊಳೆ ಪೂಜಾರಿ ಎಂದು ಇಬ್ಬರನ್ನು ಪೂಜಾರಿಗಳಾಗಿ ನೇಮಿಸಿದ್ದಾರೆ. ನಂತರ ಎಲ್ಲಮ್ಮನ

ಸಾಕಿ, ರೇವಣಸಿದ್ಧೇಶ್ವರನಿಗೆ ಕರಿಕಂಬಳಿ ಪೂಜೆ, ಇತರ ದೈವಗಳೊಂದಿಗೆ ಪಟ್ಟದ ದೇವರ ಮೆರವಣಿಗೆ, ಧಾರ್ಮಿಕ ಉಪನ್ಯಾಸಗಳಂತಹ ಕಾರ್ಯಕ್ರಮಗಳು ನಡೆಯುತ್ತವೆ. ಕೊನೆಯ ದಿನ ಬಂದ ದೇವರುಗಳಿಗೆ ಮಹಾಮಂಗಳಾರತಿ, ಪೂಜೆಯನ್ನು ಸಲ್ಲಿಸಿ ಆಯಾ ಗ್ರಾಮಗಳಿಗೆ ಭಂಡಾರ ಕೊಟ್ಟು ಕಳುಹಿಸಲಾಗುತ್ತದೆ. ಹಿಂದೆ ದೊಡ್ಡದೇವರು ಜಾತ್ರೆ ಮಾಡುವಾಗ ಹಂಪೆಗೆ ನಡೆದುಕೊಂಡು ಹೋಗಿ ದೇವರಿಗೆ ಜೀವಕಾಳು ತುಂಬಿಕೊಂಡು ಬರುತ್ತಿದ್ದರು. ಹಾಗಾಗಿ ಒಂದು ತಿಂಗಳು ಜಾತ್ರೆ ನಡೆಯುತ್ತಿತ್ತು. ಇಂದು ವಾಹನಗಳಲ್ಲಿ ಹೋಗಿ ಬರುವುದರಿಂದ ವಾರದೊಳಗಾಗಿ ಕಾರ್ಯಕ್ರಮಗಳು ಮುಗಿಯುತ್ತವೆ. ಇದಲ್ಲದೇ ಐದು ವರ್ಷಕ್ಕೊಮ್ಮೆ ಇಲ್ಲಿಯ ದೊಡ್ಡ ಜಾತ್ರೆಯನ್ನು ವೇದಾವತಿ ನದಿಯ ಹತ್ತಿರದಲ್ಲಿ ಮಾಡುವರು. ಇಲ್ಲಿ ಪ್ರತೀ ಭಾನುವಾರ ವಾರದ ವಿಶೇಷ ಪೂಜೆ ಮತ್ತು ಹರಕೆ ತೀರಿಸುವ ಕಾರ್ಯಕ್ರಮಗಳಿರುತ್ತವೆ.

**ಬಾಗವಾಡಿ:** ಬಳ್ಳಾರಿ ಜಿಲ್ಲೆ ಸಿರುಗುಪ್ಪ ತಾಲೂಕಿನಲ್ಲಿ ಬರುವ ಕುರುಬ ಸಮುದಾಯದ ಒಂದು ನೆಲೆಯಾಗಿದೆ. ಪ್ರತಿವರ್ಷ ಇಲ್ಲಿನ ಆರಾಧ್ಯ ದೈವಗಳಾದ ತರಸಾಲಪ್ಪ, ಈರನಾಗಪ್ಪ ದೇವರ ಪಲ್ಲಕ್ಕಿ ಉತ್ಸವವು ಶ್ರದ್ಧಾಭಕ್ತಿಯಿಂದ ನಡೆಯುತ್ತದೆ. ಈ ದೈವಗಳು ಬೀರಪ್ಪನ ವಿವಿಧ ರೂಪಗಳಾಗಿವೆ. ಬೀರದೇವರನ್ನು ತಮ್ಮ ಊರ ಹೆಸರಿನೊಂದಿಗೆ ಸೇರಿಸಿ ಪೂಜಿಸುವುದು ಕರ್ನಾಟಕ–ಆಂಧ್ರಪ್ರದೇಶದ ಗಡಿಭಾಗದ ಹಾಲುಮತಸ್ಥರ ಸಂಪ್ರದಾಯವಾಗಿದೆ. ಇದು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದ ಪದ್ಧತಿಯಾಗಿದೆ. ಪ್ರತಿವರ್ಷ ದೀಪಾವಳಿ ಬಲಿಪಾಡ್ಯದಂದು ಗ್ರಾಮದ ಬಹುಸಂಖ್ಯಾತರಾದ ಈ ಒಕ್ಕಲಿನವರು ದೇವರುಗಳನ್ನು ಅಲಂಕೃತ ಪಲ್ಲಕ್ಕಿಯಲ್ಲಿ ಸ್ಥಾಪಿಸಿಕೊಂಡು, ದೇವಾಲಯದಿಂದ ಬೆಳಗಿನ ಕಳಸ, ಡೊಳ್ಳು ವಾದ್ಯಗಳೊಂದಿಗೆ ಹಾಡುತ್ತಾ, ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕುವುದರೊಂದಿಗೆ ಗ್ರಾಮದ ಬೀದಿಯಲ್ಲಿ ಮೆರವಣಿಗೆಯಲ್ಲಿ ಸಾಗುತ್ತಾರೆ. ಆ ಮೆರವಣಿಗೆಯು ತುಂಗಭದ್ರಾ ನದಿಗೆ ತೆರಳುತ್ತದೆ. ಅಲ್ಲಿ ಕುದುರೆ ದೇವರುಗಳನ್ನು ನದಿಯಲ್ಲಿ ಗಂಗಾಸ್ನಾನ ಮಾಡಿಸಲಾಗುತ್ತದೆ. ನದಿ ದಂಡೆಯಲ್ಲಿಯೇ ಗದ್ದುಗೆ ಸ್ಥಾಪಿಸಿ, ಧಾರ್ಮಿಕ ಪೂಜಾ ವಿಧಿವಿಧಾನಗಳನ್ನು ಕೈಗೊಳ್ಳುತ್ತಾರೆ. ಇಡೀ ದಿನ ದೈವಗಳಿಗೆ ವಿಶೇಷ ಪೂಜೆಯನ್ನು ನಡೆಸಿದ ಭಕ್ತರು ಕಾಯಿ–ಕರ್ಪೂರ ಮತ್ತು ತಮ್ಮ ಮನೆಗಳಲ್ಲಿ ಮಾಡಿದ ಹೋಳಿಗೆ ನೈವೇದ್ಯಗಳನ್ನು ಸಮರ್ಪಿಸಿ ದರ್ಶನ ಪಡೆದು ತಾವು ಕಟ್ಟಿಕೊಂಡ ಹರಕೆಗಳನ್ನು ತೀರಿಸುವರು.

ದೇವರುಗಳನ್ನು ವಿವಿಧ ಪುಷ್ಪಗಳಿಂದ ಮತ್ತು ದೊಡ್ಡ ದೊಡ್ಡ ಹಾರಗಳಿಂದ ಅಲಂಕರಿಸಲಾಗುತ್ತದೆ. ಡೊಳ್ಳುಗಳನ್ನು ಬಾರಿಸುವ ಯುವಕರ ತಂಡ ವಿವಿಧ ಭಂಗಿಗಳಲ್ಲಿ ಹಾಡುತ್ತ, ಕುಣಿಯುತ್ತಾ ಡೊಳ್ಳಿನ ಚಮತ್ಕಾರಗಳನ್ನು ಪ್ರದರ್ಶಿಸುತ್ತಾರೆ. ಗೊರವಯ್ಯನವರ ತಂಡಗಳು ಈ ದೇವರ ಮಹಿಮೆಯನ್ನು ಗೊರವರ ಹಾಡುಗಳಲ್ಲಿ ಕೊಂಡಾಡುತ್ತಾ ಕುಣಿಯುತ್ತಾರೆ. ಸಾಯಂಕಾಲ ನದಿಯಿಂದ ಹೊರಟ ದೇವರ ಮೆರವಣಿಗೆಯು ಗ್ರಾಮದ ವಿವಿಧ ಬೀದಿಗಳಲ್ಲಿ ನಡೆಯುತ್ತದೆ. ಮೆರವಣಿಗೆಯು ಊರಿನ ಎಲ್ಲಾ ದೇವಾಲಯಗಳಿಗೂ ತೆರಳಿ ಎಲ್ಲ ದೇವರಿಗೆ ಹಣ್ಣುಕಾಯಿಯನ್ನು ಅರ್ಪಿಸಿ ಪೂಜೆ

ಸಲ್ಲಿಸಲಾಗುತ್ತದೆ. ನಂತರ ಮೂಲ ದೇವಸ್ಥಾನಕ್ಕೆ ಬಂದು ಎರಡೂ ದೇವರುಗಳು ಸದರಿ ಪೀಠವನ್ನು ಏರುತ್ತವೆ. ಇಲ್ಲಿ ಶಾಸ್ತ್ರೋಕ್ತವಾಗಿ ಪೂಜೆ ಪುನಸ್ಕಾರಗಳು ಜರುಗುತ್ತವೆ. ಇದಾದ ನಂತರ ದೇವರು ಗುಡಿದುಂಬುತ್ತವೆ.

**ಗೂಳ್ಯಂ ಪಾಳ್ಯಂ:** ಗುಂತಕಲ್ಲು ಮಂಡಲಂದಲ್ಲಿ ಬರುವ ಗ್ರಾಮ. ಇಲ್ಲಿ ಗುಂತಕಲ್ಲಪ್ಪನ ದೇವಸ್ಥಾನವಿದ್ದು, ಇದರ ಮೂಲನೆಲೆ ಗುಂತಗಲ್ಲು ದೇವಸ್ಥಾನವೆಂದು ಹೇಳಲಾಗುತ್ತದೆ. ಗೂಳ್ಯಂಪಾಳ್ಯಂನ ದೇವಾಲಯದಲ್ಲಿ ಆರು ಕುದುರೆ ದೇವರುಗಳಿವೆ. ಹಾಲುಮತ ಧಾರ್ಮಿಕ ವಲಯದಲ್ಲಿ ಕುದುರೆ ದೇವರುಗಳೆಂಬ ಅಭಿದಾನವು ವೀರದೇವತೆಗಳನ್ನು ಸಂಕೇತಿಸುತ್ತದೆ. ಆ ದೈವಗಳು ಕ್ರಮವಾಗಿ ಎಡದಿಂದ ದೊಡ್ಡ ಉಜ್ಜಿನಪ್ಪ, ಸಣ್ಣ ಉಜ್ಜಿನಪ್ಪ, ಗುಂತಕಲ್ಲಪ್ಪ, ಗುತ್ತಿ ಗುಂತಗಲ್ಲಪ್ಪ, ಚಿಕ್ಕ ಹೊಸಕೇರಪ್ಪ, ದೊಡ್ಡ ಹೊಸಕೇರಪ್ಪ ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಈ ಎಲ್ಲ ದೈವಗಳು ಬೀರಪ್ಪನ ಪರ್ಯಾಯ ಹೆಸರುಗಳು.

ಕುದುರೆ ಮೇಲೆ ಕುಳಿತು ಯುದ್ಧಕ್ಕೆ ಹೊರಟು ಭಲ್ಲೆಯನ್ನು ಎತ್ತಿ ಹಿಡಿದು ನಿಂತಿರುವ ಚಿತ್ರಗಳನ್ನು ಒಳಗೊಂಡಿರುವ ಎರಡು ತಾಮ್ರದ ಬಿಲ್ಲೆಗಳಿವೆ. ಇವುಗಳ ಆವರಣದಲ್ಲಿ ಎಲ್ಲಮ್ಮ ದೇವರ ದೇವಾಲಯವಿದೆ. ಕರ್ನಾಟಕದಲ್ಲಿರುವ ಪ್ರತಿ ಬೀರದೇವರ ದೇವಾಲಯಗಳ ಆವರಣದಲ್ಲಿ ಕಂಡು ಬರುವ ಶಕ್ತಿ ದೇವತೆಯ ಆವಾಸ ಸ್ಥಾನದ ಗುರುತು ಇಲ್ಲಿ ಉಳಿದುಕೊಂಡಿದೆ. ಓತೂರು ಮೇಟಿಯ ವಂಶಸ್ಥರು ಈ ದೇವಾಲಯದ ಪೂಜಾರಿಗಳಾಗಿದ್ದಾರೆ. ಇವರದು ಕಾಶಿಗೋತ್ರ, ಯಡವಲರ ಕುಲವಾಗಿದೆ.

**ಬಲಕುಂದಪ್ಪ:** ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲೂಕಿನ ಬಲಕುಂದಿ ಗ್ರಾಮವು ಗಡಿ ಗ್ರಾಮವಾಗಿದ್ದು ಹಗರಿ ನದಿಯ ದಂಡೆಯಲ್ಲಿದೆ. ಇಲ್ಲಿ ಬಲಕುಂದಪ್ಪ ಎಂದು ಬೀರಪ್ಪನನ್ನು ಕರೆಯುತ್ತಾರೆ. ಆತನ ಜೊತೆಗೆ ಇನ್ನೂ ನಾಲ್ಕು ಗುಡಿಗಳನ್ನು ಕಟ್ಟಿಸಲಾಗಿದೆ. ಮೊದಲು ಬುಳ್ಳಾ ಬೀರಪ್ಪ, ಮಧ್ಯದಲ್ಲಿ ಬಲಕುಂದಪ್ಪ ನಂತರ ರಾಮದೇವರ ಗುಡಿಗಳಿವೆ. ಎದುರಿನಲ್ಲಿ ಮಾಪಬೀರಪ್ಪ, ಲಕ್ಕಬೀರಪ್ಪನ ಗುಡಿಗಳಿವೆ. ಇತ್ತೀಚೆಗೆ ಈ ಗುಡಿಗಳನ್ನು ನವೀಕರಿಸಿ ಹೊಸದಾಗಿ ಕಟ್ಟಲಾಗಿದೆ. ಊರ ಒಳಗೆ ಬಲಕುಂದಪ್ಪನ ಹಳೆಯ ದೇವಾಲಯವಿದೆ. ಈ ದೈವಕ್ಕೆ ಸಂಬಂಧಿಸಿದ ಕತೆಯೊಂದು ಹೀಗಿದೆ: ನಾಲ್ಕು ಜನ ಸಹೋದರರಲ್ಲಿ ದೊಡ್ಡವರಿಬ್ಬರು ದೇವರ ಕಾರ್ಯಗಳನ್ನು ಮಾಡಿಕೊಂಡಿದ್ದರು. ಕೊನೆಯವರು ಕುರಿಗಳನ್ನು ಕಾಯುತ್ತಿದ್ದರು. ಕಾಲಾಂತರದಲ್ಲಿ ನಾವು ಮಾತ್ರ ಏಕೆ ಮಳೆ-ಗಾಳಿ, ಬಿಸಿಲೆನ್ನದೇ ಅಡವಿಯಲ್ಲಿ ಸುತ್ತಬೇಕು ಎಂದು ಅಣ್ಣಂದಿರ ಹತ್ತಿರ ನಾವು ಭಾಗ ಹೋಗುತ್ತೇವೆ ಎಂದು ಹೇಳಿದರು. ಹಾಗೆ ಆಗಲಿ ಎಂದು ಅಣ್ಣಂದಿರು ಬೆಳಿಗ್ಗೆ ಕುರಿ ಹೊರಡಿಸುವ ಸಮಯದಲ್ಲಿ ಮಂದೆಗೆ ಹೋಗಿ ಕಂಬಳಿಯನ್ನು ಹಾರಿಸಿದರು. ಅದಕ್ಕೆ ಗಾಬರಿ ಬಿದ್ದು ಎದ್ದು ಹೋದ ಕುರಿಗಳೆಲ್ಲ ನಿಮಗೆ ಸೇರಿದವು. ಮಲಗಿದವು ನಮಗೆ ಸೇರಿದವೆಂದು ಹೇಳಿದರು. ಅದರಂತೆ ಮಾಡಲಾಗಿ

ಗಾಬರಿ ಬಿದ್ದು ಎದ್ದ ಹೆಚ್ಚಿನ ಕುರಿಗಳು ತಮ್ಮಂದಿರಿಬ್ಬರ ಪಾಲಾದವು. ಕುಂಟುಬಿದ್ದ, ಮುದಿಯಾದ, ಶಕ್ತಿಯಿಲ್ಲದ, ಕುರುಡು ಕುರಿಗಳು ಮಾತ್ರ ಅಣ್ಣಂದಿರ ಭಾಗಕ್ಕೆ ಬಂದವು. ಹೀಗೆ ಕಾಲ ಗತಿಸಿದಂತೆ ತಮ್ಮಂದಿರಿಗೆ ತುಂಬಾ ತೊಂದರೆ ತಾಪತ್ರಯಗಳಾದವು. ಆಗ ಅಣ್ಣಂದಿರ ಹತ್ತಿರ ನಮ್ಮ ತಪ್ಪನ್ನು ಮನ್ನಿಸಬೇಕೆಂದು ಕೇಳಿಕೊಂಡರು. ಅಂದಿನಿಂದ ಅವರು ಈ ದೈವಕ್ಕೆ ಶಿಶುಮಕ್ಕಳಾಗಿ ನಡೆದು ಕೊಳ್ಳುತ್ತಾರೆ. ಬಲಕುಂದಪ್ಪನ ಜೊತೆಗಿರುವ ಬುಳ್ಳಬೀರಪ್ಪ ಮತ್ತು ಮಾಪಬೀರಪ್ಪನ ಗುಡಿಗಳು ಆತನ ಮೊದಲ ಪೂಜಾರಿಗಳ ದೇವಾಲಯಗಳು. ಇಂದು ಈ ದೈವಕ್ಕೆ ನಾಲ್ಕು ಮೇಟಿಗಳಿವೆ.

ಈ ದೈವಕ್ಕೆ ಇತ್ತೀಚೆಗೆ ದೊಡ್ಡದ್ಯಾವರ ಉತ್ಸವ ನಡೆಸಲಾಯಿತು. ಅದರಲ್ಲಿ ೧೧ ದೇವರುಗಳು ಬಂದು ಮಂದೆಗೆ ಸೇರಿದ್ದವು. ದೇವಾಲಯದಿಂದ ಬೆಳಿಗ್ಗೆ ಇಲ್ಲಿನ ದೈವಗಳು ಮತ್ತು ಬಂದ ದೈವಗಳೆಲ್ಲ ಸೇರಿ ಮೆರವಣಿಗೆಯ ಮೂಲಕ ಹಗರಿ ನದಿಗೆ ಬರುತ್ತವೆ. ಅಲ್ಲಿ ಗಂಗೆ ಸ್ನಾನ ಮಾಡಿಸಿ ಗದ್ದುಗೆಗೆ ಕೂರಿಸಲಾಗುತ್ತದೆ. ನಂತರ ಕಲೆತ ದೈವಗಳಿಗೆ ಮಂದೆ ಪೂಜೆಯನ್ನು ಮಾಡಲಾಗುತ್ತದೆ. ಅಲ್ಲಿ ಕೋರೆ ಹುಡುಗನಿಗೆ ಪೂಜಾರಿ ಪಟ್ಟವನ್ನು ಕಟ್ಟಲಾಗುತ್ತದೆ. ನಂತರ ಊರೊಳಗೆ ಮೆರವಣಿಗೆ ಮೂಲಕ ಬಂದು ಊರಲ್ಲಿನ ಎಲ್ಲ ದೈವಗಳಿಗೂ ಪೂಜೆಯನ್ನು ಸಲ್ಲಿಸಿ ಗುಡಿತುಂಬುತ್ತವೆ. ಬಂದ ಭಕ್ತರಿಗೆಲ್ಲ ಅನ್ನ ಸಂತರ್ಪಣೆ ಮಾಡಲಾಗತ್ತದೆ. ಹಾಗೆಯೇ ಸಾಮೂಹಿಕ ವಿವಾಹಗಳನ್ನು ಅಂದು ನಡೆಸಲಾಗುತ್ತದೆ. ಸುಮಾರು ಐವತ್ತಕ್ಕೂ ಅಧಿಕ ಸಾಮೂಹಿಕ ವಿವಾಹಗಳು ಅಂದು ಜರುಗುತ್ತವೆ. ದೈವಕ್ಕೆ ಸಂಬಂಧಿಸಿದ ಭಕ್ತರೆಲ್ಲರೂ ಬಂದು ಹರಕೆಗಳನ್ನು ತೀರಿಸಿ ಪೂಜೆ ಮಾಡಿಕೊಂಡು ಹೋಗುವರು.

**ವಸಿಗೇರಪ್ಪಸ್ವಾಮಿ:** ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನಲ್ಲಿ ಬರುವ ಗ್ರಾಮ ಬಸಾಪುರ. ಈ ಗ್ರಾಮದಲ್ಲಿ ಬೀರಪ್ಪನನ್ನು ವಸಗೇರಪ್ಪಸ್ವಾಮಿ ಎಂದು ಪೂಜಿಸುವರು. ಬಸಾಪುರವು ವಸಗೇರಪ್ಪನ ಮೂಲಸ್ಥಾನವೆಂದು, ಇಲ್ಲಿಂದ ಹೋದ ೧೨ ಜಗುಲಿಗಳು ವಿಠಲಾಪುರ, ಅಂತಾಪುರ, ಒಡ್ಡು, ಗಾದಿಗನೂರು, ಕುರುಕೊಪ್ಪ, ಸಂಜೀವರಾಯನ ಕೋಟೆ, ಓಬುಳಾಪುರಂ, ಕುಡುತಿನಿ ಮೊದಲಾದ ಪ್ರದೇಶಗಳಲ್ಲಿವೆ ಎಂದು ಹೇಳುವರು. ಬಸಾಪುರವು ಶೇಕಡ ೯೦ರಷ್ಟು ಕುರುಬ ಸಮುದಾಯವೇ ವಾಸಿಸುವ ಗ್ರಾಮವಾಗಿದೆ. ಭಂಡಾರದೋರು, ಶಾವಂತ್ಲನೋರು, ಬ್ಯಾಲದವರು, ಬೋದ್ಲರು, ಬನ್ನೆಲಾರು, ಮೂರುಣ್ಣೇರು, ದೇವೆಲಾರು, ಚೆಟ್ಲರು, ಕಂಚೆಲಾರು, ಐಗಳೋರು, ದಮ್ಮೂರು ಹಟ್ಟೆಲಾರು, ಅಲ್ದೆರು ಮೊದಲಾದ ಬೆಡಗಿನ ಕುರುಬರು ಇಲ್ಲಿದ್ದಾರೆ.

ವಸಿಗೇರಪ್ಪ ಸ್ವಾಮಿಯ ಪೂಜಾ ಮನೆತನದವರನ್ನು ಮೂರು ತೋಳಿನ ಮನೆತನದವರೆಂದು ಕರೆಯುವರು. ಇಲ್ಲಿ ತೋಳು ಎಂದರೇ ಭುಜಗಳಲ್ಲ. ಅವು ಪೂಜೆ ಮಾಡುವ ಮನೆತನದ ಮೂರು ಭಾಗಗಳು. ವಸಿಗೇರಪ್ಪ ಕುದುರೆ ದೇವರಾಗಿದ್ದಾನೆ. ಆದರೆ ಬಸಾಪುರದ ವಸಿಗೇರಪ್ಪನು ಒಂದು ಮುದಿಬೆತ್ತದಲ್ಲಿ ಪ್ರತಿಷ್ಠಾಪನೆಗೊಂಡಿದ್ದಾನೆ. ಆ ಬೆತ್ತದ ತುದಿಗೆ ಮುಖವಾಡವನ್ನು ಇರಿಸಲಾಗಿದೆ.

ಮುಖವಾಡದ ಶಿಲ್ಪದ ಮೇಲೆ ಏಳು ಹೆಡೆಯ ಸರ್ಪವಿದೆ. ಮ್ಯಾಸಬೇಡರಲ್ಲಿ ಆರಾಧ್ಯದೈವವಾಗಿರುವ ಗಾದ್ರಿಪಾಲನಾಯಕನು ಕಂಡುಬರುವುದು ಈ ಮಾದರಿಯಲ್ಲಿಯೇ ಆಗಿದೆ. ಇದನ್ನು ಶೃಂಗರಿಸುವುದು ಒಂದು ನಾಗರ ಬೆತ್ತವನ್ನು ಅಲಂಕರಿಸಿದಂತೆ ಕಾಣುತ್ತದೆ. ಜಗುಲಿಯ ಅಕ್ಕಪಕ್ಕದಲ್ಲಿ ಎರಡು ಗಂಡು ಕೊಡಲಿಗಳನ್ನು ಇಡಲಾಗಿದೆ. ಇದೇ ದೇವಾಲಯದಲ್ಲಿಯೇ ಮಲೆಯಮ್ಮನ ಮೂರ್ತಿಯೂ ಇದೆ.

೯, ೧೧ ವರ್ಷಗಳಿಗೊಮ್ಮೆ ದೇವರನ್ನು ಮಾಡಲಾಗುತ್ತದೆ. ಇದಕ್ಕೆ ದೊಡ್ಡದೇವರ ಜಾತ್ರೆ ಮಾಡುವುದು ಎಂದು ಕರೆಯುತ್ತಾರೆ. ಸುಮಾರು ೨೦ ಕುದುರೆ ದೈವಗಳನ್ನು ಭಂಡಾರಕ್ಕೆ ಕೊಟ್ಟು ದೇವರನ್ನು ಮಾಡಲಾಗುತ್ತದೆ. ಗಂಗೆಪೂಜೆ, ಪಟ್ಟಗಳನ್ನು ಕಟ್ಟುವ ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ. ಪಂಜಿನ ಕುಣಿತ ಮತ್ತು ಕಾಮವ್ವನಾಟಗಳಂತಹ ಆಚರಣೆಗಳು ಇರುತ್ತವೆ. ಭಾನುವಾರ ವಾರದ ಪೂಜೆ ಮಾಡುವುದರ ಜೊತೆಗೆ ಡೊಳ್ಳಿನ ಹಾಡುಗಳನ್ನು ಹಾಡುತ್ತಾರೆ. ಶಿವರಾತ್ರಿ, ಹುಣ್ಣಿಮೆ–ಅಮಾವಾಸ್ಯೆಗೆ ವಿಶೇಷ ಪೂಜೆಗಳು ನಡೆಯುತ್ತವೆ.

**ದಮ್ಮೂರು ಬೀರಲಿಂಗೇಶ್ವರ:** ಬಳ್ಳಾರಿ ತಾಲೂಕಿನಲ್ಲಿ ಬರುವ ಪುಟ್ಟ ಗ್ರಾಮವಾಗಿದೆ ದಮ್ಮೂರು. ಬೀರಪ್ಪನ ದೇವಾಲಯವು ಊರ ಮಧ್ಯದಲ್ಲಿದ್ದು, ಕರಿಕಲ್ಲಿನಿಂದ ಕಟ್ಟಿದ ಕಟ್ಟಡವಾಗಿದೆ. ಬೀರಲಿಂಗೇಶ್ವರ ದೇವಾಲಯದ ವಾಸ್ತುಶಿಲ್ಪವನ್ನು ನೋಡಿದರೆ ಇದನ್ನು ಸುಮಾರು ೩೦೦–೪೦೦ ವರ್ಷಗಳ ಹಿಂದೆ ಕಟ್ಟಿಸಲಾಗಿದೆ ಎಂದು ಹೇಳಬಹುದು. ಸಂಪೂರ್ಣ ಕಲ್ಲಿನಿಂದ ಕಟ್ಟಿದ ದೇವಾಲಯವು ದೊಡ್ಡ ಕಲ್ಲಿನ ಕಂಬ ಮತ್ತು ತೊಲೆಗಳನ್ನು ಹೊಂದಿದೆ. ಕ್ರಿ.ಶ. ೨೦೧೧ರಲ್ಲಿ ಕುದುರೆ ಬೀರದೇವರಿಗೆ ಲಿಂಗರೂಪವನ್ನು ನೀಡಲಾಗಿದೆ. ಬೀರಪ್ಪನ ಗರ್ಭ ಗುಡಿಯಲ್ಲಿ ಬೀರದೇವರ ಪೀಠದಲ್ಲಿ ಲಿಂಗ ಸ್ಥಾಪನೆ ಮಾಡಲಾಗಿದೆ. ಜೊತೆಗೆ ಅದೇ ಗರ್ಭಗುಡಿಯಲ್ಲಿ ಎಂಟು ಲಿಂಗಗಳನ್ನು ಸ್ಥಾಪಿಸಲಾಗಿದ್ದು, ಮೊದಲ ಲಿಂಗವು ಸೇರಿ ನವಲಿಂಗಗಳು ಪೂಜೆಗೊಳ್ಳುತ್ತವೆ. ಕುದುರೆ ದೇವರನ್ನು ಹೊರಗಿಟ್ಟು ಆರಾಧಿಸಲಾಗುತ್ತದೆ. ಶ್ರಾವಣ ಮಾಸದ ಮೂರನೆಯ ಭಾನುವಾರ ಈ ದೇವರ ಉತ್ಸವ ನಡೆಯುತ್ತದೆ. ಅಂದು ಪಾಲಕಿ ಪೂಜೆ, ಮೆರವಣಿಗೆ ಮತ್ತು ಸಾರ್ವಜನಿಕರಿಗೆ ದೇವರ ಪ್ರಸಾದ ವ್ಯವಸ್ಥೆ ಇರುತ್ತದೆ. ವಿಜಯದಶಮಿಯ ದಿನ ಒಂಭತ್ತು ದಿನಗಳ ಪೂಜೆ, ಬನ್ನಿ ಮುಡಿಯುವ ಕಾರ್ಯಕ್ರಮದಲ್ಲಿ ಮೆರವಣಿಗೆ ಮೂಲಕ ಮಾಡಲಾಗುತ್ತದೆ. ಕುರುಬರಲ್ಲದೇ ಎಲ್ಲಾ ಜಾತಿ ಜನಾಂಗದವರೂ ಈ ದೇವರಿಗೆ ನಡೆದುಕೊಳ್ಳುತ್ತಾರೆ. ದಮ್ಮೂರು ಹಟ್ಟೆಲಾರು ಈ ದೈವದ ಪ್ರಮುಖ ಭಕ್ತ ಸಮುದಾಯದವರಾಗಿದ್ದಾರೆ. ಇಲ್ಲಿನ ಹೇಳಿಕೆಗಳು ಹುಸಿ ಹೋಗುವುದಿಲ್ಲ ಎಂಬ ನಂಬುಗೆ ಭಕ್ತ ಸಮೂಹದಲ್ಲಿದೆ.

**ಬಚ್ಚಲ ಕಲ್ಲಪ್ಪ:** ಬೀರಪ್ಪನನ್ನು ಗುಂತಕಲ್ಲು, ಬೊಮ್ಮನಹಾಳ್, ಗೋವಿಂದವಾಡ ಮಂಡಲಗಳ ಸುತ್ತಮುತ್ತಲ ಗ್ರಾಮಗಳಲ್ಲಿ ಬಚ್ಚಲ ಕಲ್ಲಪ್ಪನೆಂದು ಕರೆಯುವರು. ಅಂಕಮ್ಮನಹಾಳ್ ಗ್ರಾಮದಲ್ಲಿ

ಈತನ ಮೂಲ ಗುಡಿಯಿದೆ. ಅದನ್ನು ಲಿಂಗದಗುಡಿ ಎಂದು ಕರೆಯುವರು. ಈ ದೈವಕ್ಕೆ ನಡೆದುಕೊಳ್ಳುವ ಬ್ಯಾಲದ ಕುರುಬರದು ಈ ಭಾಗದಲ್ಲಿಯೇ ದೊಡ್ಡ ಒಕ್ಕಲಾಗಿದೆ. ಜೊತೆಗೆ ಕಲ್ಲುದೇವನಹಳ್ಳಿ, ಕರಡಿಹಳ್ಳಿ, ಕಮಲಾಪುರಗಳಲ್ಲಿಯೂ ಈತನ ಗುಡಿಗಳನ್ನು ಕಟ್ಟಿಕೊಂಡಿದ್ದಾರೆ. ಬೊಮ್ಮನಹಾಳ್ ಮಂಡಲದ ಕಲ್ಲುದೇವನ ಹಳ್ಳಿಯಲ್ಲಿ ಶತಮಾನದಷ್ಟು ಪ್ರಾಚೀನವಾದ ಬಚ್ಚಲ ಕಲ್ಲಪ್ಪನ ಚಿಕ್ಕಲಿಂಗದ ಗುಡಿಯಿತ್ತು. ಅದನ್ನು ೨೦೧೩ರಲ್ಲಿ ಕೆಡವಿ ಹೊಸ ಗುಡಿಯನ್ನು ಕಟ್ಟಿಸಲಾಗಿದ್ದು, ಅವಾಗ ಹೊಸ ಪೂಜಾರಿಯಾಗುವ ಕೋರೆ ಹುಡುಗನನ್ನು ಊರ ಹತ್ತಿರದಲ್ಲಿರುವ ಬಾವಿಗೆ ಹೋಗಿ ಗಂಗೆ ಪೂಜೆ ಮಾಡಿಕೊಂಡು ಬಂದು ಗೋವಿಂದವಾಡದ ಗುರುಗಳನ್ನು ಕರೆಯಿಸಿ ನೇಮನಿಷ್ಟಗಳನ್ನು ಮಾಡಿ ಪೂಜಾರಿಯನ್ನಾಗಿ ನೇಮಿಸಲಾಗಿದೆ.

ಹೊಸಗುಡಿಯಲ್ಲಿ ಪ್ರತಿಷ್ಠಾಪಿಸಲು ಹೊಸ ಶಿವಲಿಂಗವನ್ನು ತಂದು ಜೀವಕಾಳು ತುಂಬುವ ಕಾರ್ಯ ನಡೆಯಿತು. ಹೊಸದಾಗಿ ತಂದ ಲಿಂಗವನ್ನು ನವಧಾನ್ಯಗಳೊಂದಿಗೆ ಬೆರೆಸಿ ೪೧ ದಿನಗಳವರೆಗೆ ದೇವರ ಬಾವಿಯಲ್ಲಿ ಇಡಲಾಗಿತ್ತು. ಆ ನೀರನ್ನು ಯಾರೂ ಬಳಸದಂತೆ ನೋಡಿಕೊಳ್ಳುತ್ತಾರೆ. ಪ್ರತಿಷ್ಠಾಪಿಸುವ ದಿನದಂದು ಬೆಳಿಗ್ಗೆ ದೇವರಿಗೆ ಸಂಬಂಧಿಸಿದ ಗೌಡ, ಪೂಜಾರಿ, ಯಜಮಾನ, ಕೋಲುಕಾರರು(ಈ ಭಾಗದಲ್ಲಿ ಕೋಲ್ಕಾರನನ್ನು ಬಿಲ್ಲೆ ಜವಾನ ಎಂದು ಕರೆಯುವರು) ಊರಿನ ಸಮುದಾಯದವರೊಂದಿಗೆ ಜೀವಕಾಳು ತುಂಬುವ ಬಾವಿಯ ಹತ್ತಿರ ಹೋಗುವರು. ಅಲ್ಲಿ ಗುರುಗಳು ಹೊಸ ಶಿವಲಿಂಗವನ್ನು ಪೂಜಿಸಿ, ನಂತರ ಮೆರವಣಿಗೆಯ ಮುಖೇನ ಮುತ್ತೈದೆಯರು ೧೦೧ ಕುಂಭಗಳ ನೀರನ್ನು ಹೊತ್ತುಕೊಂಡು ಬರುತ್ತಾರೆ. ಅಲ್ಲಿಂದ ಹೊಸದಾಗಿ ಕಟ್ಟಿದ ಗುಡಿಯಲ್ಲಿ ಪ್ರತಿಷ್ಠಾಪಿಸಲಾಗುತ್ತದೆ. ಲಿಂಗ ಪ್ರತಿಷ್ಠಾಪಿಸಿ ಪೂಜೆಯನ್ನು ಮಾಡಲು ಬಳ್ಳಾರಿಯ ಪಂಪಾಪತಿ ಶಾಸ್ತ್ರಿಗಳನ್ನು ಕರೆಯಿಸಿದ್ದರು.

ಆ ಸಮಯದಲ್ಲಿ ದೇವರ ಸೇವೆಗೆ ಪೂಜಾರಿಯ ಪಟ್ಟ ಜೊತೆಗೆ ಸಂಬಂಧಿಸಿದ ಗೌಡ, ಯಜಮಾನ, ಕೋಲ್ಕಾರ ಪಟ್ಟಗಳನ್ನು ಕಟ್ಟಲಾಗುತ್ತದೆ. ದೇವಾಲಯದಲ್ಲಿ ಪ್ರತಿ ಭಾನುವಾರ ವಿಶೇಷ ಪೂಜೆಗಳು ನಡೆಯುತ್ತವೆ. ಇಲ್ಲಿ ದೇವಾಲಯವಿದ್ದರೂ ಪ್ರತಿ ವರ್ಷ ಯುಗಾದಿಗೆ ಮೂಲ ದೇವಾಲಯವಿರುವ ಅಂಕಮ್ಮನಹಾಳಕ್ಕೆ ದಂಪತಿಗಳು ಹೋಗಿ ಪೂಜೆ ಸಲ್ಲಿಸಿ ಬರುವ ಪದ್ಧತಿಯು ಹಿಂದಿನಿಂದಲೂ ನಡೆದುಕೊಂಡು ಬಂದಿದೆ; ಬರುತ್ತಲಿದೆ. ಏಕೆಂದರೆ ಯುಗಾದಿಯಲ್ಲಿ ಅಂಕಮ್ಮನಹಾಳ್ ದೇವಾಲಯದಲ್ಲಿ ಜರುಗುವ ದೇವರ ಆಚರಣೆಗಳಲ್ಲಿ ಪೂಜೆ ಸಲ್ಲಿಸಿ ಬಂದರೆ ಒಳಿತಾಗುತ್ತದೆಯೆಂಬ ನಂಬುಗೆಯು ಇಲ್ಲಿದೆ. ಬೇರೆ ಕಡೆ ಬಚ್ಚಲ ಕಲ್ಲಪ್ಪನ ದೇವಾಲಯಗಳಿದ್ದರೂ ಮೂಲ ನೆಲೆ ಇದಾಗಿರುವುದರಿಂದ ಎಲ್ಲರು ಯುಗಾದಿಯಲ್ಲಿ ಇಲ್ಲಿ ಸೇರಿ ಪೂಜೆ ಸಲ್ಲಿಸುತ್ತಾರೆ. ಹಾಗಾಗಿ ಲಕ್ಷಕ್ಕೂ ಅಧಿಕವಾಗಿ ಭಕ್ತರು ಸೇರುವ ದೊಡ್ಡ ಒಕ್ಕಲಿನ ದೇವರಾಗಿದೆ.

**ನಾಗಲಿಂಗೇಶ್ವರ:** ಕಣೇಕಲ್ಲು ಮಂಡಲದ ಬೊಮ್ಮಸಮುದ್ರದಲ್ಲಿನ ಅಟ್ಟೆಲಾರು ಬೆಡಗಿನವರು ಬೀರಪ್ಪನನ್ನು ಈ ಹೆಸರಿನಿಂದ ಕರೆಯುವರು. ಈ ದೇವರ ಒಕ್ಕಲಿನವರು ರಾಕೆಟ್ಲ, ಆಮ್‌ದೇಲಿ, ಕುರುಕುಂಟ, ಚಾಬಾಲ, ಚೇಳಗುರ್ಕಿಯನ್ನು ಒಳಗೊಂಡಂತೆ ವಿವಿಧ ಭಾಗಗಳಲ್ಲಿದ್ದಾರೆ. ಇಲ್ಲಿ ಲಿಂಗದ ಗುಡಿ, ಬೀರಪ್ಪನ ಗುಡಿಗಳಿವೆ. ಮೊದಲು ಬೊಮ್ಮಸಮುದ್ರದಲ್ಲಿ ನಾಗಲಿಂಗೇಶ್ವರನ ಜಗುಲಿ ಮಾತ್ರ ಇತ್ತು. ಅನಂತರದಲ್ಲಿ ಪೆಟ್ಟಿಗೆ ದೇವರು ಮತ್ತು ದೇವರ ಪರಿಕರಗಳನ್ನು ಮಾಡಿಸಿ ತಂದು ಜೀವಕಾಳು ತುಂಬಿಸಿ ಗುಡಿಯಲ್ಲಿ ಪ್ರತಿಷ್ಠಾಪಿಸಿದ್ದಾರೆ.

ಪ್ರತಿ ೧೨ ವರ್ಷಗಳಿಗೆ ಒಮ್ಮೆ ಪಟ್ಟದ ದೇವರನ್ನು ಮಾಡಲಾಗುತ್ತದೆ. ದ್ಯಾವರಕ್ಕೆ ವಿಡಿಪನಕಲ್ಲು, ರಾಕೆಟ್ಲ, ಪೆದ್ದಹೋತೂರುಗಳ ದೈವಗಳು ಭಂಡಾರಕ್ಕೆ ಬರುತ್ತವೆ. ಗೋವಿಂದವಾಡದ ಗುರುವಲಯ್ಯರಾದ ಪಂಪಾಪತಿ ಸ್ವಾಮಿ ಅವರು ಕೈಗೆ ದೇವರ ರಾಗಿ ಕಡಗವನ್ನು ಧರಿಸಿಕೊಂಡು ದೊಡ್ಡ ಬಿಂದಿಗೆಯಲ್ಲಿ ನೀರು ಹೊತ್ತು ತಂದು ಗುಡಿಯಲ್ಲಿ ದೇವರನ್ನು ಪೂಜಿಸುವರು. ಅದಾದ ಮೇಲೆಯೇ ಜಾತ್ರೆಯು ಶಾಸ್ತ್ರೋಕ್ತವಾಗಿ ಪ್ರಾರಂಭವಾಗುತ್ತದೆ. ಜಾತ್ರೆಯ ಮೊದಲ ದಿನ ಬಂದ ದೇವರುಗಳನ್ನು ಮಂದೆಗೆ ಕೂರಿಸುತ್ತಾರೆ. ನಂತರ ದೈವಗಳನ್ನು ಗಂಗೆಪೂಜೆಗೆ ವೇದಾವತಿ ನದಿಯ ಹತ್ತಿರಕ್ಕೆ ಇಲ್ಲವೇ ಹತ್ತಿರದಲ್ಲಿನ ಹಳ್ಳಕ್ಕೆ ಹೋಗಿ ಪೂಜೆ ಮಾಡಿಕೊಂಡು ಬರಲಾಗುತ್ತದೆ. ನಂತರ ಎರಡು ದಿನಗಳು ಮಂದೆ ಊಟ, ಪಟ್ಟದ ಕಾರ್ಯಕ್ರಮಗಳಂಥ ಧಾರ್ಮಿಕ ಆಚರಣೆಗಳನ್ನು ಶ್ರದ್ಧಾಭಕ್ತಿಯಿಂದ ಆಚರಿಸುತ್ತಾರೆ. ದೇವರ ಸನ್ನಿಧಾನದಲ್ಲಿ ಸಾಮೂಹಿಕ ವಿವಾಹಗಳನ್ನು ನಡೆಸಲಾಗುತ್ತದೆ.

ಈ ದೇವರ ಒಕ್ಕಲಿನ ಅಣ್ಣ-ತಮ್ಮಂದಿರು ತಾವು ನೆಲೆಸಿರುವ ಗ್ರಾಮಗಳಲ್ಲಿ ತಮ್ಮ ಕುಲದೈವದ ಗುಡಿಯನ್ನು ಕಟ್ಟಿಕೊಂಡು ದೇವರನ್ನು ಪ್ರತಿಷ್ಠಾಪಿಸಿಕೊಳ್ಳಬೇಕೆಂದರೆ ಬೊಮ್ಮಸಮುದ್ರದ ಜಗುಲಿಗೆ ಬಂದು ದೇವರ ಯಾವುದಾದರೂ ವಸ್ತುವನ್ನು ತೆಗೆದುಕೊಂಡು ಹೋಗಿ ಪ್ರತಿಷ್ಠಾಪಿಸಬೇಕು. ಅಲ್ಲಿ ಪೂಜಾರಿಯಾಗಿ ಆಯ್ಕೆಯಾಗುವ ಕೋರೆ ಹುಡುಗನು ಬೊಮ್ಮಸಮುದ್ರದ ಮೂಲ ದೈವದ ಜಗುಲಿಗೆ ಬಂದು ಒಂದು ತಿಂಗಳವರೆಗೂ ಪೂಜೆಯನ್ನು ನೇಮ-ನಿಷ್ಠೆಗಳಿಂದ ಮಾಡಿಕೊಂಡು ಇರಬೇಕಾಗುತ್ತದೆ. ಅದಕ್ಕೆ ತಿಂಗಳ ಪೂಜೆ ಎಂದು ಕರೆಯುವರು. ತಿಂಗಳ ಅವಧಿ ಮುಗಿದ ಮೇಲೆ ಗುರುವಿನ ಅಪ್ಪಣೆ ಪಡೆದು ಹೊಸ ದೇವರ ಪೂಜಾರಿಯಾಗಿ ಪಟ್ಟವೇರಲು ಅರ್ಹನಾಗುತ್ತಾನೆ. ಅಂದಿನಿಂದ ದೇವರ ಧಾರ್ಮಿಕ ಕಾರ್ಯಕ್ರಮಗಳನ್ನು ಚಾಚುತಪ್ಪದೇ ಪಾಲಿಸಿಕೊಂಡು ಹೋಗಬೇಕಾಗುತ್ತದೆ. ಈ ಆಚರಣೆಯು ಪಾರಂಪರಿಕವಾಗಿ ಹಿಂದಿನಿಂದಲೂ ನಡೆದು ಬಂದ ಪದ್ಧತಿಯಾಗಿದೆ.

**ವುಲ್ತಪ್ಪ-ಕಾರಮಂಚಪ್ಪ:** ಪೆದ್ದವುಲ್ತಿ ಮತ್ತು ಚಿನ್ನವುಲ್ತಿ ಗ್ರಾಮಗಳಲ್ಲಿ ಬೀರಪ್ಪನೇ ಈ ಹೆಸರುಗಳಿಂದ ಕರೆಸಿಕೊಳ್ಳುತ್ತಾನೆ. ಈ ಗ್ರಾಮದ ಪ್ರಾಚೀನ ಹೆಸರು ಕುರಿಹಟ್ಟಿ. ಕುರಿಗಾರರೆಲ್ಲ ಕುರಿಮಂದೆ ತರುಬಿಕೊಂಡು ಇರುತ್ತಿದ್ದ ಸ್ಥಳವಾಗಿತ್ತು. ದಿನಾ ರಾತ್ರಿ ಹುಲಿಯೊಂದು ಕುರಿಯನ್ನು ಎತ್ತಿಕೊಂಡು ಇಂದು ಗುಡಿಯಿರುವ ಪೊದೆಯೊಳಗೆ ಹೋಗುತ್ತಿತ್ತು. ಬೆಳಿಗ್ಗೆ ಕುರಿಗಳನ್ನು ಎಣಿಸಿದರೆ ಕುರಿಗಳೆಲ್ಲವೂ ಸರಿಯಾಗಿಯೇ

ಇರುತ್ತಿದ್ದವು. ಈ ಸೋಜಿಗವನ್ನು ಕಂಡು ಹುಲಿಯನ್ನು ಹೊಡೆಯಲು ಆ ಪೊದೆಯನ್ನು ಕಡಿಯುತ್ತಾ ಬಂದವರಿಗೆ ಸ್ವಯಂಭೂ ಲಿಂಗ ಕಾಣಿಸಿತು. ಹುಲಿ ಹುಡುಕಿದಾಗ ದೊರೆತ ದೈವವಾದ್ದರಿಂದ ಇದಕ್ಕೆ ವುಲ್ತಪ್ಪ ಎಂದು ಕರೆಯುವರು.

ಇಲ್ಲಿ ವುಲ್ತಪ್ಪನೊಂದಿಗೆ ಕಾರಮಂಚಪ್ಪ, ಬಂದಮ್ಮವ್ವ(ಬನಶಂಕರಿ)ನ ದೇವಾಲಯಗಳಿವೆ. ಊರ ಹೊರಗಿನ ಲಿಂಗದ ಗುಡಿಯನ್ನು ವುಲ್ತಪ್ಪನ ಲಿಂಗದ ಗುಡಿ ಎನ್ನುವರು. ಈ ದೇವಾಲಯವನ್ನು ಕಲ್ಲು-ಗಾರೆಯಿಂದ ಕಟ್ಟಿಸಿದ್ದು, ವಿಜಯನಗರ ಕಾಲದ ಗುಡಿಯಾಗಿದೆ. ೧೯೯೬ರಲ್ಲಿ ಹೊಸ ಗೋಪುರವನ್ನು ಮಾಡಿಸಲಾಗಿದೆ. ಮೊದಲು ಗುಡಿ ಕಟ್ಟುವಾಗ ತಳಪಾಯ ನಿಲ್ಲುತ್ತಿರಲಿಲ್ಲ. ಹಾಗಾಗಿ ಗುರುವಿನ ಚರಣದ ಮಣ್ಣು ತಂದಾಗ ಕಟ್ಟಲು ಸಾಧ್ಯವಾಗಿದೆ ಎಂದು ಹೇಳುವರು. ಮತ್ತೆ ಈ ಕುರಿಗಾರರು ಹುಲಜಂತಿಯ ಕಡೆಯಿಂದ ವಲಸೆ ಬಂದು ಇಲ್ಲಿ ನೆಲೆಸಿರುವುದರಿಂದ ಹುಲಜಂತಿಯೇ ವುಲ್ತಿ ಆಗಿದೆ ಎಂದ್ಹೇಳುವರು. ದೇವಾಲಯದ ಪಕ್ಕದಲ್ಲಿ ಹಿಂದಿನ ಪೂಜಾರಿಗಳ ಸಮಾಧಿಗಳಿವೆ. ಪ್ರಸ್ತುತ ರಂಗಣ್ಣ ಅವರು ಪೂಜಾರಿಯಾಗಿ ದೇವರ ಕಾರ್ಯ ಮಾಡುತ್ತಿದ್ದಾರೆ.

ಪ್ರತಿ ದೀಪಾವಳಿ ಪಾಡ್ಯಕ್ಕೆ ಜಾತ್ರೆ ನಡೆಯುತ್ತದೆ. ಐದು. ಏಳು. ಇಲ್ಲವೇ ಒಂಭತ್ತು ವರ್ಷಗಳಿಗೊಮ್ಮೆ ಪಟ್ಟದ ದೇವರ ಉತ್ಸವ ಮಾಡುತ್ತಾರೆ. ಮದ್ದಿಕೇರಿ, ಗುತ್ತಿ, ಲಕ್ಷ್ಮಂಪಲ್ಲಿ, ಕಾರಮಂಚಿ, ನಾನಾಪುರ, ಹರಿಯಾಣ, ವೆಂಗಳಾಯ ದೊಡ್ಡಿಯ ದೈವಗಳನ್ನು ಒಳಗೊಂಡಂತೆ ೧೮ ದೇವರುಗಳು ಭಂಡಾರಕ್ಕೆ ಬರುತ್ತವೆ. ಬಂದ ದೈವಗಳೊಂದಿಗೆ ವುಲ್ತಪ್ಪನನ್ನು ಹಗರಿ ನದಿಯ ಹತ್ತಿರಕ್ಕೆ ಜಲ್ದಿಗೆ ಮೆರವಣಿಗೆ ಮೂಲಕ ಕರೆತರಲಾಗುತ್ತದೆ. ಅಲ್ಲಿ ಮೊದಲು ಗುರುವಾದ ಚಿಂತಕುಂಟದ ಸಿದ್ಧಲಿಂಗ ಸ್ವಾಮಿಯ ಗಂಗೆಪೂಜೆ ಮಾಡುವರು. ನಂತರ ಗಂಗೆ ಕಟ್ಟೆಯಲ್ಲಿ ಮಂದೆಗೆ ಕುಳಿತ ದೈವಗಳಿಗೆ ಹಗರಿ ನದಿಯಿಂದ ನೀರು ತಂದು ಗುರುಗಳು ಪೂಜೆ ಸಲ್ಲಿಸುವರು.

ದೇವರಿಗೆ ಪೂಜಾರಿಯಾಗುವ ಹುಡುಗನನ್ನು ಸಂಬಂಧಿಸಿದ ಒಕ್ಕಲಿನ ಅಣ್ಣ-ತಮ್ಮಂದಿರು, ನಿಶ್ಚಯಿಸಿರುತ್ತಾರೆ. ಆ ಕೋರೆ ಹುಡುಗನನ್ನು ಗುರುಗಳು ಶುಚಿಯಾಗಿಸಿ ಮೈಗೆಲ್ಲ ಭಂಡಾರವನ್ನು ಬಳಿದು ಗುರು ದೀಕ್ಷೆ ನೀಡುವರು. ದೀಕ್ಷೆ ಎಂದರೆ ಚೆಂಡು ಹೂವನ್ನು ಭಂಡಾರದಲ್ಲಿ ಅದ್ದಿ ಅದರಿಂದ ಮುದ್ರೆ ಒತ್ತುವುದು. ಅಲ್ಲಿ ಮಂದೆಗೆ ಕುಳಿತ ದೇವರುಗಳಿಗೆ ಕಡ್ಲೆಬೇಳೆ ಮತ್ತು ಕೆಂಪು ಸಕ್ಕರೆಯನ್ನು ನೈವೇದ್ಯಕ್ಕೆ ಇಡಲಾಗುತ್ತದೆ. ಪೂಜಾರಿಯ ಆಯ್ಕೆಯ ಕಾರ್ಯಕ್ರಮ ಮುಗಿದ ನಂತರ ದೈವಕ್ಕೆ ಸಂಬಂಧಿಸಿದ ಒಕ್ಕಲಿನ ಅಣ್ಣ-ತಮ್ಮಂದಿರಿಗೆಲ್ಲ ದೀಕ್ಷೆ ನೀಡುತ್ತಾರೆ. ನಂತರ ಮುಳ್ಳಾವುಗೆ ಪೂಜೆ ಅಂದರೆ ಗುರುವು ಹಚ್ಚಿರುವ ಬೆಂಕಿಯ ಬತ್ತಿಗಳನ್ನು ದೇವರ ಮುಂದೆ ಪಟ್ಟವಾದ ಪೂಜಾರಿಗಳು ನುಂಗುತ್ತಾರೆ. ಇದಕ್ಕೆ ಕೆಲವೆಡೆ ಪಂಜು ನುಂಗುವುದು ಎಂದು ಕರೆಯುವರು. ಕರಿಕಂಬಳಿಯ ಪೂಜೆ, ಒಗ್ಗಯ್ಯರ ಆಟಗಳು ನಡೆಯುತ್ತವೆ. ಕೊನೆಗೆ ಹರಕೆ ಭಂಡಾರವನ್ನು ಬಂದಿರುವ ಎಲ್ಲ ದೈವಗಳಿಗೆ ನೀಡಿ ಮೂಲಸ್ಥಾನಗಳಿಗೆ ಕಳುಹಿಸಿ ಕೊಡುವುದಾಗಿದೆ.

**ಬಾಗಾಡಪ್ಪ :** ಬನ್ನೆಲಾರು ಬೆಡಗಿನವರು ಬೀರಪ್ಪನನ್ನು ಈ ಹೆಸರಿನಿಂದ ಹಂದಿಹಾಳ್, ಉತ್ತನೂರು, ಬಾಗಡೆ ಮುಂತಾದೆಡೆ ಆರಾಧಿಸುತ್ತಾರೆ. ಬೀರಪ್ಪ ಬಾಗಾಡಪ್ಪನಾಗಿ ದೊರೆತ ಕಥೆಯೊಂದನ್ನು ಈ ರೀತಿಯಲ್ಲಿ ಹೇಳುವರು. ಸಿಂಧನೂರು ತಾಲೂಕಿನಲ್ಲಿನ ಬಾಗಡೆಯೆಂಬ ಹಳ್ಳಿಯಲ್ಲಿ ಬಹು ಹಿಂದೆ ತಾಯಿ–ಮಗ ಕುರಿಗಳನ್ನು ಕಾಯುತ್ತ ಜೀವಿಸುತ್ತಿದ್ದರು. ಕುರಿಗಳನ್ನು ಮೇಯಿಸುವುದಕ್ಕಾಗಿ ದೇಶಾಂತರ ತಿರುಗುತ್ತಿದ್ದರು. ಹೀಗೆ ಹೋಗಿರುವಾಗ ಒಮ್ಮೆ ರಾತ್ರಿ ಮಂದೆ ಕಾಯುತ್ತಿದ್ದಾಗ, ಕಳ್ಳರು ಬಂದು ಆ ಹುಡುಗನನ್ನು ಕೊಂದು ಮಂದೆಯನ್ನು ತರುಬಿದ್ದ ಹೊಲದ ಬೇವಿನಮರದ ಹತ್ತಿರ ಹೂತುಹಾಕಿ ಕುರಿಗಳನ್ನೆಲ್ಲ ಕದ್ದೊಯ್ದರು. ಮರುದಿನ ಊರಲ್ಲಿನ ಜನರಿಗೆ ಪರಸ್ಥಳ(ದೇಶಾಂತರ)ಕ್ಕೆ ಕುರಿ ಮೇಯಿಸಲು ಬಂದ ಯುವಕನನ್ನು ಕೊಂದಿರುವ ಸುದ್ದಿ ತಿಳಿಯಿತು. ಮಗನ ಸಾವಿನಿಂದ ದುಃಖಿತಳಾದ ತಾಯಿಯು ಸತ್ತುಹೋದಳು. ಕುರಿಗಾಯಿ ಯುವಕನನ್ನು ಹೂತಿಟ್ಟ ಸ್ಥಳವನ್ನು ಸಾಕುನಾಯಿ ತೋರಿಸಿತು. ತಬ್ಬಲಿಗಳಾಗಿ ಸತ್ತ ತಾಯಿ–ಮಗನ ಶವ ಸಂಸ್ಕಾರಗಳನ್ನು ಊರವರೇ ಮಾಡಿ ಮುಗಿಸಿದರು.

ಕಾಲ ಗತಿಸಿದಂತೆ ಆ ಘಟನೆಯು ಜನರ ಮನಸ್ಸಿನಿಂದ ಮರೆಯಾಯಿತು. ಸಮಾಧಿಯ ಮೇಲಿದ್ದ ಕಲ್ಲನ್ನು ಕುಂಟೆಯ ಮೇಲಿಟ್ಟುಕೊಂಡು ಹೊಲದ ಯಜಮಾನನ ಮಗ ನಿತ್ಯವೂ ಉಳುಮೆ ಮಾಡುತ್ತಿದನು. ಬೇಸಾಯ ನಿಲ್ಲಿಸಿ ಬರುವಾಗ ಕಲ್ಲನ್ನು ಆ ಸ್ಥಳದಲ್ಲಿಯೇ ಬಿಟ್ಟು ಹೋಗುತ್ತಿದನು. ಆದರೆ ಆ ಕಲ್ಲು ದಿನಾಲು ಸಮಾಧಿಯ ಹತ್ತಿರಕ್ಕೆ ಹೋಗಿ ಬಿದ್ದಿರುತ್ತಿತ್ತು. ನಾನು ದಿನಾಲು ಎಲ್ಲಿ ಬೇಸಾಯ ಬಿಡುತ್ತಿದ್ದೆನೋ ಅಲ್ಲಿರದೆ ದಿನಾಲು ಇಲ್ಲಿಗೇ ಬರುತ್ತಿದೆಯಲ್ಲಾ ಎಂದು ಆತನಿಗೆ ಸೋಜಿಗವಾಯಿತು. ಆ ಸುದ್ಧಿಯನ್ನು ತನ್ನ ತಂದೆಗೆ ತಿಳಿಸಿದನು. ಇದು ದೇವರ ಮಹಿಮೆಯೋ, ದೆವ್ವದ ಚೇಷ್ಟೆಯೋ ಎಂದುಕೊಳ್ಳತೊಡಗಿದರು. ಅಂದು ರಾತ್ರಿ ಆತನ ಕನಸಿನಲ್ಲಿ ಬಂದ ಆ ದೈವ ನಾನು ಬಾಗಾಡಪ್ಪ ನಿನ್ನ ಮಗನಿಗೆ ಒಲಿದು ಬಂದಿದ್ದೇನೆ. ಒಂದೇ ದಿನದಲ್ಲಿ ಮಣ್ಣಿಗೆ ಕುರಿಹಾಲು ಸೇರಿಸಿ ದೇವಾಲಯವನ್ನು ಕಟ್ಟಿ ನನಗೆ ನಡೆದುಕೊಳ್ಳಿ ನಿಮಗೆ ಒಳಿತಾಗುತ್ತದೆ ಎಂದು ಹೇಳಿದಂತಾಯಿತು. ಅದರಂತೆ ಒಂದೇ ದಿನದಲ್ಲಿ ಗುಡಿಯನ್ನು ಕಟ್ಟಿಸಿ ಬಾಗಾಡಪ್ಪನಿಗೆ ನಡೆದುಕೊಂಡು ಬರುತ್ತಿದ್ದಾರೆ. ಈ ಒಕ್ಕಲಿನವರು ಮೂಲ ಸಮಾಧಿ ಮತ್ತು ದೇವರಿಗೆ ನಡೆದುಕೊಳ್ಳುತ್ತಿದ್ದಾರೆ. ಉತ್ತನೂರಿನಲ್ಲಿ ಹೊಸದಾಗಿ ಬಾಗಾಡಪ್ಪನ ದೇವಾಲಯವನ್ನು ನಿರ್ಮಿಸಿದ್ದಾರೆ. ಪ್ರತೀ ವರ್ಷ ಕಾರಹುಣ್ಣಿವೆಗೆ ದ್ಯಾವರ ಗಂಗಾ ಪೂಜೆ ಐದು ವರ್ಷಗಳಿಗೆ ಒಮ್ಮೆ ದೊಡ್ಡ ದ್ಯಾವರ ಜಾತ್ರೆ ಮಾಡಲಾಗುತ್ತದೆ. ಬಂಡಾರಕ್ಕೆ ಒಂಬತ್ತು ದೇವರುಗಳು ಬರುತ್ತವೆ. ಬಲ್ಲೂರಪ್ಪ, ತಾಳೂರಪ್ಪ, ಆಗಲೂರಪ್ಪ, ಶಾಗಪ್ಪ, ಕೆಂಚಪ್ಪ ದೈವಗಳೊಂದಿಗೆ ದೇವರ ಮಂದೆಪೂಜೆ, ಗಂಗಾ ಸ್ನಾನ, ಪೂಜಾರಿಯ ಪಟ್ಟ, ಯಜಮಾನ, ಗೌಡನ ಪಟ್ಟ, ಸೇವಾಗಾರರ ಪಟ್ಟಗಳನ್ನು ಕಟ್ಟಲಾಗುತ್ತದೆ. ದೇವರ ಪೂಜಾ ಕಾರ್ಯಕ್ರಮಗಳು ಎರಡು ದಿನಗಳವರೆಗೆ ನಡೆಯುತ್ತವೆ.

**ಕರಿಸಿದ್ದೇಶ್ವರ :** ಬಳ್ಳಾರಿಯ ಹಲಕುಂದಿ ಗ್ರಾಮದಲ್ಲಿರುವ ಚುಕ್ಕೆಲಾರು ಬೆಡಗಿನವರು ಕರಿಸಿದ್ದೇಶ್ವರನ ಒಕ್ಕಲು. ಬೆಳಗಾವಿ ಜಿಲ್ಲೆಯ ಹಾರೋಗೇರಿಯಲ್ಲಿ ಇರುವುದೇ ಈ ದೇವರ ಮೂಲನೆಲೆ. ಅಲ್ಲಿಂದ

ಕುರಿ ಪಾಲನೆ ಮಾಡುತ್ತಾ ಈ ಭಾಗಕ್ಕೆ ವಲಸೆ ಬಂದವರು ತಾವೆಂದು ಹೇಳುವರು. ಅವರೊಂದಿಗೆ ಹಾವಾಗಿ ಬಂದ ಬೀರಪ್ಪ ನಾನು ಎಲ್ಲಿ ಹೋಗಿ ನೆಲೆಸಿರುತ್ತೇನೆಯೋ ಅಲ್ಲಿಗೆ ಬಂದು ನೆಲೆಸಿರೆಂದು ದೈವವೇ ಹೇಳಿತು. ಹೀಗೆ ಬಂದ ದೈವ ಹಲಕುಂದಿಯಲ್ಲಿನ ಉದ್ಭವಲಿಂಗದಲ್ಲಿ ಐಕ್ಯವಾಯಿತು. ಅಂದಿನಿಂದ ಇವರು ಇಲ್ಲಿಯೇ ನೆಲೆಸಿದರು.

ದೇವಾಲಯವು ಪುರಾತನವಾಗಿದ್ದು, ಸುತ್ತಲೂ ಚಿಕ್ಕ ಕಾಂಪೌಂಡನ್ನು ಕಟ್ಟಲಾಗಿದೆ. ಗರ್ಭಗುಡಿಯಲ್ಲಿ ನೂರೊಂದು ಲಿಂಗಗಳಿವೆ. ಹಾಗಾಗಿ ದ್ಯಾವರ ಮಾಡುವಾಗ ಹಂಪಿಗೆ ಹೋಗುವುದಿಲ್ಲ. ಊರ ಹತ್ತಿರದಲ್ಲಿರುವ ಹಳ್ಳಕ್ಕೆ ಗಂಗೆ ಪೂಜೆಗೆ ಹೋಗಿ ಬರುತ್ತಾರೆ. ಈ ಭಾಗದಲ್ಲಿ ದೊಡ್ಡದ್ಯಾವರ ಮಾಡುವಾಗ ಹಂಪೆಯ ತುಂಗಭದ್ರ ನದಿಯ ಹತ್ತಿರ ಬಂದು ಜೀವಕಾಳು ತುಂಬಿಸಿಕೊಂಡು ಹೋಗುವ ಪದ್ದತಿ ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಆ ಪದ್ಧತಿಗೆ ಈ ದೈವ ಅಪವಾದವಾಗಿದೆ. ಏಕೆಂದರೆ ತಮ್ಮ ದೇವರ ಗುಡಿಯಲ್ಲಿಯೇ ನೂರಕ್ಕೂ ಅಧಿಕ ಲಿಂಗಗಳು ಇರುವುದರಿಂದ ಹಂಪೆಗೆ ಹೋಗುವುದಿಲ್ಲ. ಒಂದು ವೇಳೆ ಹೋದರೆ ತಮಗೆ ಒಳಿತಾಗುವುದಿಲ್ಲ ಎಂಬುದಕ್ಕೆ ನಿದರ್ಶನಗಳ ಸಮೇತ ಹೇಳುವರು. ಬ್ರಿಟಿಷರ ಕಾಲಾವಧಿಯಲ್ಲಿ ಕರಿಸಿದ್ದೇಶ್ವರ ದೇವರ ಪೂಜಾರಿಯಾದ ಕರಿಸಿದ್ದಪ್ಪ ಊರ ಗೌಡಿಕೆ ಮಾಡಿಕೊಂಡಿದ್ದರು. ಒಂದೊಮ್ಮೆ ಬ್ರಿಟಿಷರ ಪೋಲೀಸ್ ಅಧಿಕಾರಿಗಳು ಊರ ಮಾಹಿತಿ ಸಂಗ್ರಹಿಸಲು ಹಲಕುಂದಿಗೆ ಬಂದರು. ಕರಿಸಿದ್ದಪ್ಪ ದೇವಾಲಯದಲ್ಲಿ ಇರುವ ಸುದ್ಧಿ ತಿಳಿದ ಪೋಲೀಸರು ಬೂಟು ಕಾಲುಗಳಲ್ಲಿಯೇ ದೇವಾಲಯದೊಳಕ್ಕೆ ಪ್ರವೇಶಿಸಿದರು. ಇದರಿಂದ ಮನನೊಂದು ಪೂಜಾರಿ ತಮ್ಮ ಕಟ್ಟುಪಾಡುಗಳಿಗೆ ಧಕ್ಕೆಯಾಗಿದೆ ಎಂದು ಊರ ಗೌಡಿಕೆಯನ್ನು ಬಿಟ್ಟನು.

ಈ ದೇವಾಲಯದ ಹತ್ತಿರದಲ್ಲಿಯೇ ಮಲೆಯಮ್ಮನ ದೇವಾಲಯವಿದೆ. ಕರಿಸಿದ್ದೇಶ್ವರನ ಧಾರ್ಮಿಕ ಕಾರ್ಯಕ್ರಮಗಳಲ್ಲಿಯೂ ಮಲೆಯಮ್ಮ ಭಾಗಿಯಾಗಿರುವಳು. ಪ್ರತೀ ಸೋಮವಾರ ಗಂಗೆಯನ್ನು ಊರಿನ ಜನರೆಲ್ಲಾ ಸೇರಿ ಮೆರವಣಿಗೆಯ ಮೂಲಕ ತಂದು ದೈವವನ್ನು ಪೂಜಿಸಲಾಗುತ್ತದೆ. ಒಂಬತ್ತು ವರ್ಷಗಳಿಗೊಮ್ಮೆ ನಡೆಯುವ ದೊಡ್ಡದ್ಯಾವರ ಉತ್ಸವದಲ್ಲಿ ಮಂದೆ ಪೂಜೆ, ಗಂಗೆ ಪೂಜೆಯಂತಹ ಧಾರ್ಮಿಕ ಆಚರಣೆಗಳೊಂದಿಗೆ ಪೂಜಾರಿಯ ಪಟ್ಟ, ಗೌಡನಪಟ್ಟ, ಸೇವಾಗಾರರ ಪಟ್ಟಗಳನ್ನು ಕಟ್ಟುವ ಜೊತೆಗೆ ಸಾಮೂಹಿಕ ವಿವಾಹಗಳನ್ನು ನಡೆಸುವರು.

ಉತ್ತರ ಕರ್ನಾಟಕದಲ್ಲಿ ಬೀರಪ್ಪನಿಗೆ ಪ್ರತಿವರ್ಷ ಜಾತ್ರೆಗಳು ನಡೆದರೆ, ದಕ್ಷಿಣ ಕರ್ನಾಟಕ ಮತ್ತು ಮಧ್ಯ ಕರ್ನಾಟಕದಲ್ಲಿ ಮೂರು, ಐದು, ಏಳು, ಒಂಭತ್ತು, ಹನ್ನೆರಡು ವರ್ಷಗಳಿಗೆ ಒಮ್ಮೆ ಜಾತ್ರಾ ಉತ್ಸವಗಳು ನಡೆಯುತ್ತವೆ. ಈ ಉತ್ಸವಗಳನ್ನು ಚಿತ್ರದುರ್ಗ, ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಗಳಲ್ಲಿ 'ತೋಪುಜಾತ್ರೆ'ಗಳೆಂದು ಕರೆದರೆ, ತುಮಕೂರು, ಚಿತ್ರದುರ್ಗ, ಅನಂತಪುರಂ(ಸೀಮಾಂಧ್ರ) ಜಿಲ್ಲೆಯ ಗಡಿಪ್ರದೇಶಗಳಲ್ಲಿ 'ದೊಡ್ಡಜಾತ್ರೆ'ಗಳೆಂದು ಕರೆಯುವರು. ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ

'ಪರ'(ಬೀರಪ್ಪನ ಪರ) ಎಂದು ಹೇಳಿದರೆ, ಕೋಲಾರ, ಚಿಕ್ಕಬಳ್ಳಾಪುರ, ಬೆಂಗಳೂರು ಜಿಲ್ಲೆಗಳಲ್ಲಿ 'ದೊಡ್ಡದ್ಯಾವರ ಉತ್ಸವ' ಎಂದು ಕರೆಯುತ್ತಾರೆ.

ಬೀರಪ್ಪನ ಪರಂಪರೆಯ ಕುರಿತು ಗಡಿನಾಡಲ್ಲಿ ನಡೆಯುವ ಆಚರಣೆಗಳಲ್ಲಿ ಕೋಲಾರ, ಚಿತ್ತೂರು ಗಡಿಯ ಬ್ಯಾಲಹಳ್ಳಿಯಲ್ಲಿನ ಜಾತ್ರೆಯು ವಿಶೇಷತೆಯಿಂದ ಕೂಡಿದೆ. ಈ ಅಧ್ಯಯನದ ಮಿತಿಯು ತುಂಗಭದ್ರಾ ಮತ್ತು ವೇದಾವತಿ ನದಿ ಮಧ್ಯೆಯ ಗಡಿಭಾಗವಾಗಿದ್ದರೂ ಬೀರಪ್ಪನ ಆಚರಣಾ ವಿಶೇಷತೆಗಳನ್ನು ಗುರುತಿಸುವುದಕ್ಕಾಗಿ ಈ ಜಾತ್ರೆಯಲ್ಲಿ ಭಾಗವಹಿಸಲಾಗಿತ್ತು. ಈ ಜಾತ್ರೆಯ ಧಾರ್ಮಿಕ ಆಚರಣೆಗಳು ವಿಶಿಷ್ಟವಾಗಿದ್ದು, ಕೆಲವೊಂದಿಷ್ಟು ಇಲ್ಲಿನ ಬೀರಪ್ಪನ ಆಚರಣೆಗಳಿಗೆ ಸಾಮ್ಯತೆ ಹೊಂದಿರುವುದರಿಂದ ಅದನ್ನು ಈ ಅದ್ಯಾಯದಲ್ಲಿ ಗುರುತಿಸಿ, ವಿಶ್ಲೇಷಿಸಲಾಗಿದೆ.

**ದೊಡ್ಡದ್ಯಾವರ ಉತ್ಸವಕ್ಕೆ ಪುರಾಣದ ಹಿನ್ನೆಲೆ:** ವೇದಗಳಲ್ಲಿ ಪ್ರತಿಪಾದಿತವಾಗಿರುವ ಹಲವಾರು ಸಂಗತಿಗಳನ್ನು ಕಥೆಯ ಚೌಕಟ್ಟಿನಲ್ಲಿ ವಿವರಿಸುವುದು ಪುರಾಣಗಳ ವಿಶಿಷ್ಟ ಲಕ್ಷಣ. ಪವಿತ್ರ ಗ್ರಂಥಗಳಾದ ಇವು ಭಾರತೀಯ ಸಂಸ್ಕೃತಿಯನ್ನು ಬಿಂಬಿಸುವ ವಿಶ್ವಕೋಶಗಳು. ಭಾರತೀಯರಾದ ನಾವು ನಮೆಲ್ಲ ಧಾರ್ಮಿಕ ಆಚರಣೆಗಳ ಮೂಲ ಬೇರನ್ನು ಪುರಾಣದ ಹಿನ್ನೆಲೆಯಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಿಕೊಂಡು ಬಂದಿದ್ದೇವೆ. ಅದಕ್ಕೆ ನಿಖರವಾದ ದಾಖಲೆ ಅಥವಾ ಪುರಾವೆಗಳು ಸಿಗುವುದಿಲ್ಲ. ಆದರೂ ನಮ್ಮ ನಂಬಿಕೆಗಳು ಇಂದಿಗೂ ಜೀವಂತವಾಗಿವೆ. ಅದರಂತೆಯೇ ದೊಡ್ಡದ್ಯಾವರ ಉತ್ಸವ ಎಂದಿನಿಂದ? ಹೇಗೆ? ಆಚರಣೆಯಾಗಿ ಬೆಳೆದು ಬಂದಿತು ಎಂಬುದಕ್ಕೆ ಅಲ್ಲಿನ ಹಿರಿಯರು ಪುರಾಣದ ಕಥೆಯೊಂದನ್ನು ಹೇಳುವರು. ಅದು ಹೀಗಿದೆ. ಕೋಲಾರ ಭಾಗದಲ್ಲಿನ ಕುರುಬ ಸಮುದಾಯವು ಪ್ರತಿ ಮೂರು, ಐದು, ಏಳು, ಒಂಬತ್ತು ವರ್ಷಗಳಿಗೊಮ್ಮೆ ದೊಡ್ಡದ್ಯಾವರ ಉತ್ಸವ ನಡೆಸಲು ಕಾರಣೀಕರ್ತ ಶ್ರೀ ವೀರಭದ್ರೇಶ್ವರ ಸ್ವಾಮಿ. ಆತ ಕುರುಬ ಸಮುದಾಯದವರಿಗೆ ಅನುಗ್ರಹ ನೀಡಿ ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸುವುದೇ ಆಗಿದೆ. ಹಿಂದೊಮ್ಮೆ ದಕ್ಷಬ್ರಹ್ಮನು ವೀರಭದ್ರ ತಪಸ್ಸು ಮಾಡುವುದನ್ನು ಭಂಗಗೊಳಿಸಿದನು. ಇದರಿಂದ ಕೋಪಗೊಂಡ ವೀರಭದ್ರನು ದಕ್ಷಬ್ರಹ್ಮನನ್ನು ಸಂಹಾರ ಮಾಡಿದನು. ಆಗ ದಕ್ಷಬ್ರಹ್ಮನ ಪತ್ನಿ ವೀರಭದ್ರನ ಬಳಿ ಬಂದು 'ಅಯ್ಯಾ ನನ್ನ ಗಂಡ ನಮಗೆ ಒಳಿತಾಗಲೆಂದು ಯಾಗವನ್ನು ಮಾಡುತ್ತಿದ್ದನೇ ಹೊರತು ನಿನ್ನ ತಪಸ್ಸಿಗೆ ಭಂಗ ತರಬೇಕೆಂಬ ಉದ್ದೇಶದಿಂದ ಅಲ್ಲ. ಹಾಗಾಗಿ ನಿನಗೆ ಯಾವುದೇ ಕೆಡುಕನ್ನು ಬಯಸದ ನನ್ನ ಗಂಡನ ಪ್ರಾಣವನ್ನು ಉಳಿಸಬೇಕೆಂದು' ಬೇಡಿಕೊಂಡಳು. ಆ ಮಾತೆಯ ಮಾತಿನಿಂದ ಸಂತೃಪ್ತನಾದ ವೀರಭದ್ರನು ದಕ್ಷಬ್ರಹ್ಮನ ತಪ್ಪನ್ನು ಮನ್ನಿಸಿ 'ತಾಯಿ ನಿನ್ನ ಗಂಡನ ಪ್ರಾಣ ಉಳಿಯಬೇಕಾದರೆ ಬೇರೆ ಯಾವುದಾದರೂ ಒಂದು ಪ್ರಾಣಿಯ ಶಿರವನ್ನು ತಂದುಕೊಡಬೇಕೆಂದು' ಹೇಳಿದ. ಆಗ ದಕ್ಷಬ್ರಹ್ಮನ ಪತ್ನಿಯು ಅಲ್ಲಿಯೇ ಮೇಯುತ್ತಿದ್ದ ಕುರಿಯೊಂದರ ತಲೆ ಕಡಿದು ತಂದುಕೊಟ್ಟು ತನ್ನ ಪತಿಯ ಪ್ರಾಣವನ್ನು ಕಾಪಾಡಿಕೊಂಡಳು. ಆದರೆ ಯಾವುದೇ ಕಾರಣವಿಲ್ಲದೆ ತನ್ನ ಕುರಿಯನ್ನು ಕೊಂದದ್ದರಿಂದ ನೊಂದ

ಕುರಿಕಾಯುತ್ತಿದ್ದ ವ್ಯಕ್ತಿ 'ಬೇರೊಬ್ಬರ ಪ್ರಾಣ ಉಳಿಸಲು ನಿಷ್ಕರುಣೆಯಿಂದ ನನ್ನ ಕುರಿ ಬಲಿಯನ್ನು ಪಡೆದಿದ್ದು ಎಷ್ಟರಮಟ್ಟಿಗೆ ಸರಿ' ಎಂದು ವೀರಭದ್ರನನ್ನು ಪ್ರಶ್ನಿಸುತ್ತಾನೆ. ವೀರಭದ್ರನು ಆ ವ್ಯಕ್ತಿಯನ್ನು ಸಮಾಧಾನಗೊಳಿಸಿ ಕುರಿಹಿಂಡು ಹೆಚ್ಚುವಂತೆ ವರವನ್ನು ನೀಡಿ, ಇಂದಿನಿಂದ ನಿನ್ನ ಮನೆದೇವರಾಗಿ ಕಾಪಾಡುತ್ತೇನೆಂದು ಭರವಸೆ ನೀಡಿದನು. ಹೀಗೆ ಕುರುಬ ಸಮುದಾಯದ ರಕ್ಷಕನಾಗಿ ನೆಲೆನಿಂತ ವೀರಭದ್ರನನ್ನು ಸಂತೃಪ್ತಿಗೊಳಿಸಲು ದೊಡ್ಡದ್ಯಾವರ ಉತ್ಸವವನ್ನು ನಡೆಸಲಾಗುತ್ತದೆ.

ಕುರಿತಲೆಯನ್ನು ಪಡೆದು ಕುರುಬ ಸಮುದಾಯಕ್ಕೆ ದೈವವಾಗಿ ದೊರೆತಿದ್ದರಿಂದ ಉತ್ಸವದಲ್ಲಿ ತಲೆಯ ಮೇಲೆ ತೆಂಗಿನಕಾಯಿ ಒಡೆಯುವುದರ ಮೂಲಕ ಭಕ್ತಿ ಸಮರ್ಪಿಸಲಾಗುತ್ತದೆ. ಈ ರೀತಿಯಾಗಿ ಅಂದಿನಿಂದ ಆಚರಣೆಯಾಗಿ ಜಾರಿಗೆ ಬಂದಿರಬಹುದು ಎಂದು ಈರಗಾರರ ಪೂಜಾರಿಯಾದ ಮುನಿವೆಂಕಟಪ್ಪ ಅವರು ಹೇಳುವರು. ಈ ಕಥೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಬೀರಪ್ಪನ ಧಾರ್ಮಿಕ ನೆಲೆಯತ್ತ ವೀರಭದ್ರ ಬರುತ್ತಿರುವಂತೆ ಅಥವಾ ಸಮುದಾಯದವರೆ ಬೀರಪ್ಪ ವೀರಭದ್ರ ಒಂದೆ ಎಂದು, ಇಲ್ಲವೆ ಬೀರಪ್ಪನೇ ವೀರಭದ್ರನಾದನೆಂದು ಗ್ರಹಿಸಿರಬಹುದು. ಬೀರಪ್ಪನೇ ಕಾಲಾಂತರದಲ್ಲಿ ವೀರಭದ್ರನಾಗಿ ಪರಿವರ್ತನೆಯಾಗಿದ್ದನ್ನು ಎಂ.ಎಂ. ಕಲಬುರ್ಗಿ ಅವರು 'ಕುರುಬ ಸಮುದಾಯ ಮತ್ತು ಲಿಂಗಾಯಿತ ಸಮುದಾಯ' ಎಂಬ ಲೇಖನದಲ್ಲಿ 'ಕುರುಬರ ಬೀರಲಿಂಗನೇ ಇತಿಹಾಸದ ಇನ್ನೊಂದು ಘಟ್ಟದಲ್ಲಿ ಲಿಂಗಾಯಿತರ ವೀರಭದ್ರನಾಗಿ ಪರಿವರ್ತನೆಗೊಂಡಿದ್ದಾನೆ. ವೀರಭದ್ರನ ಯಾವುದೇ ವಿಗ್ರಹದ ಮಗ್ಗಲು ಕುರುಬರ ಟಗರಿನ ತಲೆಯು, ದಕ್ಷಬ್ರಹ್ಮನ ತಲೆಯ ರೂಪದಲ್ಲಿ ಉಳಿದುಬಂದುದು ಗಮನಾರ್ಹವೆನಿಸುತ್ತದೆ. ಹಳೆಯ ವೀರಭದ್ರನ ದೇವಾಲಯಗಳ ವಿಗ್ರಹದ ಕೈಯಲ್ಲಿ ಖಡ್ಗದ ಬದಲು ಮಗ್ಗುಲಲ್ಲಿ ಕೋಲು ಇರುತ್ತಿದ್ದು, ಇದನ್ನು ದೋಟಿಯೆಂದು ಕರೆಯುತ್ತಾರೆ. ದೋಟಿಯೆಂದರೆ ಕುರಿಗಳಿಗಾಗಿ ಗಿಡದ ತಪ್ಪಲು ಕೀಳಲಿಕ್ಕೆ ಬಳಸುವ ಕೋಲು. ಇವೇ ಮೊದಲಾದ ಅಂಶಗಳು ಬೀರಪ್ಪನೇ ವೀರಭದ್ರನಾಗಿ ಬೆಳೆದುದನ್ನು ಸೂಚಿಸುತ್ತವೆ' ಎಂದು ಅಭಿಪ್ರಾಯಪಟ್ಟಿದ್ದಾರೆ. ಇದನ್ನು ಗಮನಿಸಿದರೆ ವೀರಭದ್ರ ಮೂಲತಃ ಕುರುಬರ ದೇವತೆಯಾಗಿರುವುದಕ್ಕೆ ಇರಬಹುದಾದ ಸಂಬಂಧದ ಕಡೆಗೆ ಇದು ಬೆರಳುಮಾಡಿ ತೋರಿಸುತ್ತದೆ. ಅಂದರೆ ಕುರುಬರ ಬೀರಪ್ಪನು ಶೈವ ವೀರಭದ್ರನಾದರೂ ಕುರುಬರ ಕುರಿಯ ಅಂಶ ದಕ್ಷಬ್ರಹ್ಮನ ತಲೆಯ ರೂಪದಿಂದ ಅಲ್ಲಿ ಉಳಿದುಕೊಂಡಿದೆ. ಹಾಗಾಗಿ ದೊಡ್ಡದೇವರ ಉತ್ಸವದ ಹಿನ್ನೆಲೆಗೆ ಈ ಪುರಾಣದ ಸ್ಪರ್ಶವನ್ನು ನೀಡಿರುವರೆಂದು ಗ್ರಹಿಸಬಹುದು.

**ಜಾತ್ರಾ ಸಿದ್ಧತೆ:** ಬ್ಯಾಲಹಳ್ಳಿಯಲ್ಲಿ ಒಂಭತ್ತು ವರ್ಷಗಳಿಗೆ ಒಮ್ಮೆ ಬೀರಪ್ಪ(ಭತ್ತೇಶ್ವರ)ನ ದೊಡ್ಡದ್ಯಾವರ ಉತ್ಸವ ನಡೆಯುತ್ತದೆ. ತಪ್ಪಿದರೇ ಹನ್ನೊಂದು ವರ್ಷಗಳು ತುಂಬುವುದರ ಒಳಗಾಗಿ ಮಾಡಲೇಬೇಕು ಎಂಬ ಕಟ್ಟುಪಾಡಿದೆ. ಜಾತ್ರೆ ಮಾಡುವ ಒಂದು ವರ್ಷ ಮುಂಚಿನಿಂದಲೇ ಸಿದ್ಧತೆಯನ್ನು ಮಾಡಲಾಗುತ್ತದೆ ಎಂದು ಊರ ಹಿರಿಯರಾದ ಆರ್. ಶ್ರೀನಾಥ ಅವರು ಹೇಳುವರು. ಜಾತ್ರೆ

ಪ್ರಾರಂಭವಾಗುವ ನಾಲ್ಕೈದು ತಿಂಗಳ ಮುಂಚೆಯೇ ರೇವಣಾರಾಧ್ಯ(ಗುರು ಒಡೆಯರು) ಗುರುಗಳಿಂದ ದೀಕ್ಷೆಯನ್ನು ಪಡೆದು, ದೇವರ ಸೇವೆಗಾಗಿಯೇ ನೇಮಿಸಲ್ಪಟ್ಟ ನಂದಿ(ದೇವರ ಎತ್ತಿನ ಬೆನ್ನಿನ ಮೇಲೆ ದೇವರ ಭಂಡಾರದ ಪೆಟ್ಟಿಗೆ ಮತ್ತು ನಗಾರಿಯನ್ನು ಕಟ್ಟಿಕೊಂಡು)ಯ ಜೊತೆಗೆ ಅದನ್ನು ನೋಡಿಕೊಳ್ಳಲು ಒಕ್ಕಲಿನವರು ನೇಮಿಸಿದ ಪೂಜಾರಿ ಮತ್ತು ದೇವರ ಸೇವೆಗಾಗಿಯೇ ಇರುವ ಈರ(ವೀರ)ಗಾರರು ದೈವಕ್ಕೆ ಸಂಬಂಧಿಸಿದ ಒಕ್ಕಲಿನ ಅಣ್ಣ-ತಮ್ಮಂದಿರು ನೆಲೆಸಿದ ಪ್ರತಿಹಳ್ಳಿಗೂ ದ್ಯಾವರ ನಡೆಯುವ ವಿಷಯ ಮುಟ್ಟಿಸಲು ತೆರಳುವರು. ಹೀಗೆ ಸುದ್ದಿ ತಿಳಿಸಲು ಬಂದ ಅವರು ಒಕ್ಕಲಿನವರು ಇರುವ ಪ್ರತಿಹಳ್ಳಿಯ ಅಗಸಿ ಬಾಗಿಲ(ಊರ ಹೊರಗೆ)ಲ್ಲಿ ನಿಂತು ನಗಾರಿಯನ್ನು ಬಾರಿಸುತ್ತಾರೆ. ಇದು 'ದ್ಯಾವರ' ಸುದ್ದಿ ಮುಟ್ಟಿಸಲು ದೈವದವರು ಬಂದಿರುವರೆಂದು ಸೂಚಿಸುವ ಕ್ರಮ. ಆಗ ಒಕ್ಕಲಿನ ಅಣ್ಣ-ತಮ್ಮಂದಿರು ಅವರನ್ನು ಮೆರವಣಿಗೆಯ ಮೂಲಕ ಊರೊಳಗೆ ಬರಮಾಡಿಕೊಂಡು ಮನೆಗಳ ಹತ್ತಿರ ನಂದಿ(ಬಸವಣ್ಣ)ಗೆ ಪೂಜೆಯನ್ನು ಸಲ್ಲಿಸಿ, ದೇವರ ಭಂಡಾರವನ್ನು ಪಡೆದುಕೊಂಡು, ಬಂದವರನ್ನು ಮುಂದಿನ ಊರುಗಳಿಗೆ ಕಳುಹಿಸಿಕೊಡುವರು. ಹೀಗೆ ಪ್ರತ್ಯಕ್ಷ ದೈವದ ಪ್ರತೀಕವಾದ ನಂದಿ ಮತ್ತು ಭಂಡಾರ ಪೆಟ್ಟಿಗೆಯೊಂದಿಗೆ ಪೂಜಾರಿ, ಈರಗಾರರು ಸುದ್ದಿ ತಲುಪಿಸುತ್ತ ಒಕ್ಕಲಿನವರು ಇರುವ ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು ರಾಜ್ಯಗಳ ಹಳ್ಳಿಗಳೆಲ್ಲ ಸಂಚರಿಸುವರು. ಎಲ್ಲ ಕಡೆಯೂ ಸುದ್ದಿ ತಲುಪಿಸಲು ಮೂರ್‍ನಾಲ್ಕು ತಿಂಗಳ ಕಾಲಾವಧಿಯಾಗುತ್ತದೆ. ಜಾತ್ರೆ ಪ್ರಾರಂಭವಾಗುವ ಮುಂಚೆ ಸ್ವಸ್ಥಾನಕ್ಕೆ ಮರಳಿ ಬರುವ ನಂದಿ, ಪೂಜಾರಿ, ಈರಗಾರರು ದ್ಯಾವರದವರೆಗೆ ವಿಶ್ರಾಂತಿ ಪಡೆದುಕೊಳ್ಳುವರು. ಹಿಂದೆ ಸುದ್ದಿ ಮುಟ್ಟಿಸಲು ಯಾವುದೇ ಸಂಪರ್ಕ ಸಾಧನ(ಮಾಧ್ಯಮ)ಗಳು (ವಾಹನ, ಫೋನು) ಇಲ್ಲದ್ದರಿಂದ ಜಾತ್ರೆ ಪ್ರಾರಂಭವಾಗುವ ನಾಲ್ಕೈದು ತಿಂಗಳ ಮುಂಚೆನಿಂದಲೇ ಕಾಲ್ನಡಿಗೆಯಲ್ಲಿ ಸಂಚರಿಸುತ್ತ ಪ್ರತಿಹಳ್ಳಿಗೂ ಸುದ್ದಿ ತಲುಪಿಸುತ್ತಿದ್ದರು. ದೈವಕ್ಕೆ ಸಂಬಂಧಿಸಿದ ಒಕ್ಕಲು ಹೆಚ್ಚಾಗಿ ವಿವಿಡೆಡೆ (ಕರ್ನಾಟಕವಲ್ಲದೇ, ಆಂಧ್ರಪ್ರದೇಶ, ತಮಿಳುನಾಡು, ವಿದೇಶಗಳಲ್ಲಿಯೂ)ಗಳಲ್ಲಿ ನೆಲೆಸಿರುವುದರಿಂದ ಪ್ರಸ್ತುತ ಸಂದರ್ಭದಲ್ಲಿ ವಾಹನ(ಮಿನಿಲಾರಿ)ವೊಂದರಲ್ಲಿ ಹೋಗಿ ಸುದ್ದಿ ಮುಟ್ಟಿಸುವರು. ಆದಾಗ್ಯೂ ಎಲ್ಲರಿಗೂ ಸುದ್ದಿ ತಲುಪಿಸಲು ಎರಡ್ಮೂರು ತಿಂಗಳ ಕಾಲಾವಧಿಯಾಗುತ್ತದೆ. ಇಂದಿಗೂ ನಂದಿಯನ್ನು ಜೊತೆಗೆ ಕರೆದುಕೊಂಡು ಹೋಗುವ ಅಂದಿನ ಪರಂಪರೆಯು ಜೀವಂತವಾಗಿದೆ. ಹೀಗೆ ಜಾತ್ರೆಯಲ್ಲಿ ಸಕ್ರಿಯವಾಗಿರುವ ನಂದಿಯು ಬೀರಪ್ಪ (ಭತ್ತೇಶ್ವರ)ನಂತೆಯೇ ಭಕ್ತರಿಂದ ಪೂಜೆಗೊಳ್ಳುತ್ತ, ದ್ಯಾವರ ಅವಿಭಾಜ್ಯ ಅಂಗವಾಗಿ ಕಾರ್ಯ ನಿರ್ವಹಿಸುತ್ತದೆ. ದ್ಯಾವರದಲ್ಲಿ ನಂದಿ(ಬಸವಣ್ಣ)ಗೆ ಕೊಟ್ಟ ಪ್ರಾಶಸ್ತ್ಯವು ಸಮುದಾಯದ ಹಿಂದಿನ ಪಶುಪಾಲನ ಸಂಸ್ಕೃತಿಯ ಚಹರೆಗಳನ್ನು ನೆನಪಿಸುತ್ತದೆ.

**ಗಂಗಾಪೂಜೆ:** ಹಿಂದಿನಿಂದಲೂ ಕೂಟದ ಲೆಕ್ಕದಲ್ಲಿ ನಿರ್ದಿಷ್ಟವಾಗಿ ಐದು ದಿನಗಳವರೆಗೆ ಉತ್ಸವದ ಧಾರ್ಮಿಕ ಕಾರ್ಯಕ್ರಮಗಳು ನಡೆಯುತ್ತವೆ. ಬ್ಯಾಲಹಳ್ಳಿಯ ಭತ್ತೇಶ್ವರ(ಬೀರೇಶ್ವರ) ಸೋದರ

ಸಿದ್ಧೇಶ್ವರ(ವೀರೇಶ್ವರ), ಸೋದರಿಯರಾದ ಭಕ್ತೇ(ತ್ತೆ)ಶ್ವರಿ, ಚೌಡೇಶ್ವರಿ ದೈವಗಳು ತಮ್ಮ ಪರಿವಾರವಾದ ಪೂಜಾರಿಗಳು, ಈರಗಾರರು, ನಂದಿ, ಒಕ್ಕಲಿನ ಕುಲಸ್ಥರೊಂದಿಗೆ ಗಂಗಾಸ್ನಾನಕ್ಕೆ ಕೋಲಾರದ ಅಂತರಗಂಗೆ ಬೆಟ್ಟಕ್ಕೆ ಬರಲಾಗುತ್ತದೆ. ಅಲ್ಲಿ ಹಾಲುಮತ ಸಮುದಾಯದ ಗುರುಗಳಾದ ರೇವಣಾರಾಧ್ಯ(ರೇವಣ್ಣಯ್ಯ ಆರಾಧ್ಯ, ಸಿದ್ಧಲಿಂಗಯ್ಯ ಆರಾಧ್ಯ)ರು ಗಂಗಾಮಾತೆಯನ್ನು ಪೂಜಿಸಿ, ದೈವಗಳಿಗೆ ಗಂಗಾಸ್ನಾನವನ್ನು ಮಾಡಿಸುವರು. ನಂತರ ನೇಮ-ನಿಷ್ಠೆಗಳಿಂದ ವ್ರತವಿರುವ ಈರಗಾರರು ಸ್ನಾನಾದಿಗಳನ್ನು ಮುಗಿಸಿಕೊಂಡು ದೈವಗಳೊಂದಿಗೆ ಮೆರವಣಿಗೆಯ ಮೂಲಕ ಕೋಲಾರ ಪಟ್ಟಣವನ್ನು ಹಾದು ಬ್ಯಾಲಹಳ್ಳಿಗೆ ಬರುವಾಗ ಈರಗಾರರು ಈರಿಕೆ ಮಾಡುತ್ತ ದೇವರ ಬಿರುದು-ಬಾವಲಿಗಳನ್ನು ಸ್ತುತಿಸಿ, ಭಕ್ತಿಯಿಂದ ಕರೆಯುತ್ತ ಉತ್ಸವ ಜರುಗುವ ಮುಖ್ಯ ದೇವಾಲಯದವರೆಗೂ ಕರೆತರುವರು. ಮೆರವಣಿಗೆ ಮೂಲಕ ವಿಜೃಂಭಣೆಯಿಂದ ಬಂದಂಥ ದೈವಗಳ ಕೂಟವನ್ನು ದೇವಾಲಯದಲ್ಲಿ ಪಟ್ಟಕ್ಕೆ ಕೂರಿಸಲಾಗುತ್ತದೆ. ದ್ಯಾವರಕ್ಕಾಗಿ ಬಂದಂತಹ ಒಕ್ಕಲಿನವರು ದೇವಾಲಯದ ಸುತ್ತಲೂ ಇರುವ ಬಯಲಿನಲ್ಲಿ ಕೃತಕವಾಗಿ ನಿರ್ಮಿಸಿಕೊಂಡಿರುವ ಬಿಡದಿ(ವಸತಿ)ಗಳಲ್ಲಿ ದ್ಯಾವರ ಮುಗಿಯುವ ತನಕವೂ ಇರುವರು. ಇದಕ್ಕೆ 'ಒಕ್ಕಲಿನವರು ಕೂಟ ಸೇರುವುದು' ಎಂದು ಕರೆಯುವರು. ಉತ್ಸವ ಮುಗಿಯುವವರೆಗೂ ದೇವಾಲಯದಲ್ಲಿ ದೈವಗಳೆಲ್ಲ ಜೊತೆಯಲ್ಲಿಯೇ ಪಟ್ಟಕ್ಕೆ ಕೂರಿಸುವುದಕ್ಕೆ 'ದೈವಗಳ ಕೂಟ' ಸೇರುವುದು ಎನ್ನುವರು. ಬಿಡದಿಗಳಲ್ಲಿ ತಂಗುವ ಭಕ್ತರು ಅನಂತರದಲ್ಲಿ ಬರುವ ಸಂಬಂಧಿಕರು ಗುರುತಿಸಲಿಕ್ಕಾಗಿ ಕುಲ, ಗೋತ್ರ, ಮನೆತನದ ಫ್ಲೆಕ್ಸ್‌ಗಳನ್ನು ಬಿಡದಿಯ ಮುಂದೆ ಹಾಕಿರುವರು. ಹೀಗೆ ಒಂದೆಡೆ ಸೇರಿದ ಒಕ್ಕಲಿನವರು ತಾವು ಕಟ್ಟಿಕೊಂಡ ಹರಕೆ, ತನಿ ಎರಿಯುವುದು, ಹಿರಿಯರಿಗೆ ಹೊಸಬಟ್ಟೆ ಇಡುವುದು, ದೀಪಾರಾಧನೆ, ಹೊಳೆದ್ಯಾವರ ಮುಂತಾದ ಧಾರ್ಮಿಕ ಕಾರ್ಯಗಳಲ್ಲಿ ತಲ್ಲೀನರಾಗಿ ದೈವಕೃಪೆಗೆ ಪಾತ್ರರಾಗುತ್ತಾರೆ.

**ನಾಗದೇವರಿಗೆ ತನಿ ಎರೆಯುವುದು:** ಬೀರೇಶ್ವರ(ಭತ್ತೇಶ್ವರ)ನ ಮುಖ್ಯ ದೇವಾಲಯದ ಪಕ್ಕದಲ್ಲಿರುವ ನಾಗದೇವರ ಚಿಕ್ಕ ಗುಡಿಯನ್ನು ಹಂದರ ಹಾಕಿ ಸಿದ್ಧಮಾಡಿರುತ್ತಾರೆ. ಮುಂಜಾನೆಯಿಂದಲೇ ಸ್ತ್ರೀಯರು ಪೂಜೆ ಸಾಮಾಗ್ರಿಗಳೊಂದಿಗೆ ಬಿಳಿದಾರದ ಉಂಡೆ, ಹಾಲು-ತುಪ್ಪವನ್ನು ತಂದು ನಾಗರಕಟ್ಟೆಯ ಚಿಕ್ಕಗುಡಿಗೂ ಮತ್ತು ಚಪ್ಪರದ ಕಂಬಗಳಿಗೂ ಬಿಳಿದಾರವನ್ನು ಸುರಿಗೆ ರೀತಿಯಲ್ಲಿ ಸುತ್ತಿ, ಹಾಲು-ತುಪ್ಪವನ್ನು ನಾಗದೇವರಿಗೆ ಎರೆದು ಪೂಜೆ ಮಾಡುವರು. ಹೀಗೆ ಪೂಜಿಸುವುದರಿಂದ ಮಕ್ಕಳಿಲ್ಲದ ಸ್ತ್ರೀಯರಿಗೆ ಮಕ್ಕಳ ಫಲ ದೊರೆಯುತ್ತದೆ ಹಾಗೂ ಮನೆಗೆ ಯಾವುದೇ ಕೆಡಕುಗಳು ಸಂಭವಿಸುವುದಿಲ್ಲ ಎಂಬ ನಂಬಿಕೆ. ನಾಗದೇವರನ್ನು ಪೂಜಿಸಿಯಾದ ಮೇಲೆ ಅಲ್ಲಿಯೇ ಇರುವ ನಂದಿಗೆ ಪೂಜೆಯನ್ನು ಸಲ್ಲಿಸಿ ಆಶೀರ್ವಾದವನ್ನು ಪಡೆಯುವರು. ನಂತರ ಮುಖ್ಯ ದೇವಾಲಯದ ಎದುರಿನ ಬಯಲಿನಲ್ಲಿರುವ ವೀರ(ಈರ)ಗಾರರ ಸುಮಾರು ೪೪ ಗುಡಿಗಳಿಗೆ ಪೂಜೆಯನ್ನು ಸಲ್ಲಿಸುವರು. ಆ ಚಿಕ್ಕ ಗುಡಿಗಳಲ್ಲಿನ ಕೆಲವುಗಳಲ್ಲಿ ಬಲಗೈಯನ್ನು ಮೇಲೆತ್ತಿ ಖಡ್ಗವನ್ನು ಹಿಡಿದು ನಿಂತಿರುವ

ವೀರನ ಚಿತ್ರವಿದ್ದರೆ ಆತನ ಪಕ್ಕದಲ್ಲಿಯೇ ಮನೆ ಬಳಕೆ ಪರಿಕರ(ಕೊಡ, ಬಿಂದಿಗೆ)ಗಳನ್ನು ಹಿಡಿದು ನಿಂತ ಸ್ತ್ರೀ ಚಿತ್ರಣಗಳಿವೆ. ಇನ್ನೂ ಕೆಲ ಗುಡಿಗಳಲ್ಲಿ ಸ್ತ್ರೀ-ಪುರುಷರಿಬ್ಬರೂ ಆಯುಧಗಳನ್ನು ಹಿಡಿದು ನಿಂತಿರುವ ಚಿತ್ರಣಗಳಿದ್ದರೆ, ಕೆಲ ಗುಡಿಗಳಲ್ಲಿ ಒಬ್ಬ ಪುರುಷ ಆಯುಧ ಹಿಡಿದಿದ್ದು, ಎಡಬಲದಲ್ಲಿ ಸ್ತ್ರೀಯರು ನಿಂತಿದ್ದಾರೆ. ಮತ್ತೆ ಕೆಲ ಗುಡಿಗಳಲ್ಲಿ ಪುರುಷರಿಬ್ಬರೂ ಆಯುಧಗಳನ್ನು ಹಿಡಿದು ನಿಂತ ಚಿತ್ರಣವಿದ್ದರೆ, ಕೆಲವುಗಳಲ್ಲಿ ಆಯುಧ ಹಿಡಿದ ಏಕಾಂಗಿ ವೀರನ ಚಿತ್ರಣವಿದೆ. ಇವುಗಳನ್ನು ಗಮನಿಸಿದರೆ ದ್ಯಾವರಕ್ಕೆ ಸಂಬಂಧಿಸಿದ ಈರಗಾರರು ಮತ್ತು ಒಕ್ಕಲಿನವರಿಗೆ ಚಾರಿತ್ರಿಕ ಪರಂಪರೆ ಇದ್ದಂತೆ ಹೊರನೋಟಕ್ಕೆ ಕಂಡುಬರುತ್ತದೆ. ಇದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಹೆಚ್ಚಿನ ಅಧ್ಯಯನದಿಂದ ಅಂದರೆ ಸ್ಥಳೀಯ ಇತಿಹಾಸ, ಐತಿಹ್ಯ, ಸೋಬಾನ ಪದ, ಡೊಳ್ಳಿನಹಾಡುಗಳಂಥ ವಸ್ತುವಿಷಯಗಳಿಂದ ಹೆಕ್ಕಿ ತೆಗೆಯಬೇಕಿದೆ. ಅದೇನೆ ಇರಲಿ ಈ ಗುಡಿಗಳಿಗೆ ಯಾರು, ಯಾವ ಗುಡಿಗೆ ಸಂಬಂಧಿಸಿದ್ದಾರೋ ಆಯಾ ಒಕ್ಕಲಿನವರು ಗುಡಿಯಲ್ಲಿ ಹೊಸ ಬಟ್ಟೆಯನ್ನು ಇಟ್ಟು, ಹಾಲು-ತುಪ್ಪವನ್ನು ಎರೆದು, ಹೂವು ಹಣ್ಣುಗಳಿಂದ ಪೂಜಿಸುವರು. ಆ ಮೂಲಕ ತಮ್ಮ ಪೂರ್ವಿಕರನ್ನು ನೆನಪಿಸಿಕೊಳ್ಳುತ್ತಾರೆ. ಇಂದಿಗೂ ೧೨ ವರ್ಷ ಮೇಲ್ಪಟ್ಟ ಹುಡುಗನಿಗೆ ರೇವಣಾರಾಧ್ಯ ಗುರುಗಳಿಂದ ದೀಕ್ಷೆಯನ್ನು ಕೊಡಿಸಿ, ಈರಗಾರನಾಗಿಸಬಹುದು. ಆತ ಅಂದಿನಿಂದ ದಂಡಕ, ತ್ರಿಶೂಲ, ಖಡ್ಗಗಳಂಥ ಆಯುಧಗಳನ್ನು ಹೊಂದಿರುತ್ತಾನೆ. ಸಾವಿನ ವರೆವಿಗೂ ಈರಗಾರನಾಗಿಯೇ ಇರುತ್ತಾನೆ.

**ತೆಂಗಿನಕಾಯಿ ಪವಾಡ:** ದೊಡ್ಡದ್ಯಾವರ ಉತ್ಸವದಲ್ಲಿನ ಪ್ರಮುಖ ಆಚರಣೆ ತೆಂಗಿನಕಾಯಿ ಪವಾಡ. ಇದನ್ನು ತಲೆ ಮೇಲೆ ತೆಂಗಿನಕಾಯಿ ನಡೆಸುವುದು, ತೆಂಗಿನಕಾಯಿ ಒಡೆಯುವುದು ಎಂದು ಕರೆಯುತ್ತಾರೆ. ದ್ಯಾವರದಲ್ಲಿ ನೇಮನಿಷ್ಠೆಗಳಿಂದ ವ್ರತವಿದ್ದು, ಪವಾಡಕ್ಕೆ ತಯಾರಾದ ಈರ(ಗಾರ)ಗಾರರು ಮುಖ್ಯ ದೇವಾಲಯ ಪಕ್ಕದ ಮೈದಾನದಲ್ಲಿ ದೈವಗಳು, ನಂದಿ, ಭಕ್ತಜನ ಸಮೂಹದ ಎದುರು ಪವಾಡಕ್ಕೆ ಸಿದ್ಧರಾಗುವರು. ಹಾಗೆ ಸಿದ್ಧನಾಗುವ ಪ್ರತಿಯೊಬ್ಬ ಈರಗಾರನು ಕೈಯಲ್ಲಿ ತ್ರಿಶೂಲ ಹಿಡಿದು ದ್ಯಾವರ ಮುಂದೆ ಈರಿಕೆ ಮಾಡುತ್ತ ದೇವರನ್ನು ಸ್ತುತಿಸುತ್ತ, ಬಂದು ಭಕ್ತಿಯನ್ನು ಒಪ್ಪಿಸಿಕೊ ಎಂಬಂತೆ ಕರೆದು ತೆಂಗಿನಕಾಯಿ ಪವಾಡಕ್ಕೆ ಅಣಿಯಾಗುತ್ತಾನೆ. ಅಣಿಯಾದ ಈರಗಾರನ ತಲೆಯ ಮೇಲೆ ಈರಗಾರರ ಮುಖ್ಯ ಪೂಜಾರಿಯಾದ ಮುನವೆಂಕಟಪ್ಪ ಅವರು ತೆಂಗಿನಕಾಯಿಗಳನ್ನು ನಡೆಸು(ಒಡೆ)ವರು. ಪ್ರತಿಯೊಂದು ತೆಂಗಿನಕಾಯಿ ಒಡೆದಾದ ನಂತರ ಪಕ್ಕದಲ್ಲಿರುವ ಕಿರಿಯ ಪೂಜಾರಿಯು ಈರಗಾರರ ತಲೆಯ ಮೇಲೆ ದ್ಯಾವರ ಭಂಡಾರವನ್ನು ಹಾಕುತ್ತಿರುತ್ತಾನೆ. ಈ ಸಮಯದಲ್ಲಿಯೇ ಮತ್ತೊಬ್ಬ ಈರಗಾರನು ದೇವರನ್ನು ಕರೆಯುವುದನ್ನು ಮಾಡುತ್ತಿರುತ್ತಾನೆ. ಒಮ್ಮೆ ದೈವಗಳ ಎದುರುಮುಖವಾಗಿ ಪವಾಡ ನಡೆಸಿದರೇ ಮತ್ತೊಮ್ಮೆ ನಂದಿಯ ಎದುರುಮುಖವಾಗಿ ನಡೆಸಲಾಗುತ್ತದೆ. ಹೀಗೆ ೫೦-೬೦ ಜನ ಈರಗಾರರ ತಲೆಯ ಮೇಲೆ ಭಕ್ತಾಧಿಗಳು ತಂದಂತಹ ನೂರಾರು ತೆಂಗಿನಕಾಯಿಗಳನ್ನು ಒಡೆದು ಬೀರಪ್ಪ(ಭತ್ತೇಶ್ವರ)ನಿಗೆ ಭಕ್ತಿಯನ್ನು ಸಮರ್ಪಣಾ ಭಾವದಿಂದ ಅರ್ಪಿಸಲಾಗುತ್ತದೆ.

ಈ ಪವಾಡವನ್ನು ಮೆರವಣಿಗೆಯ ಮೂಲಕ ಕೋಲಾರದಿಂದ ಬ್ಯಾಲಹಳ್ಳಿ(೬-೮ ಕಿ.ಮೀ.)ಗೆ ಬರುವಂತಹ ಸಂದರ್ಭದಲ್ಲಿ ಕೋಲಾರದ ಕುರುಬರಪೇಟೆಯಲ್ಲಿ ಇರುವ ಬೀರಪ್ಪನ ತಳಗುಡಿ ಭಕ್ತೇಶ್ವರನ ಮೂಲಸ್ಥಾನ. ಇತ್ತೀಚೆಗೆ ಅಲ್ಲಿಂದ ಬ್ಯಾಲಹಳ್ಳಿಗೆ ಬಂದು ನೆಲೆಸಿದ್ದಾನೆ. ಹಾಗಾಗಿ ಬೀರಪ್ಪನ ಗುಡಿಯ ಹತ್ತಿರ ತೆಂಗಿನಕಾಯಿ ಪವಾಡವನ್ನು ನಡೆಸಲಾಗುತ್ತದೆ. ಹಾಗೆಯೇ ದ್ಯಾವರ ನಡೆಯುವ ಸುದ್ದಿ ತಲುಪಿಸಲು ನಂದಿ, ಭಂಡಾರದ ಪೆಟ್ಟಿಗೆ, ಪೂಜಾರಿ, ಈರಗಾರರು ಒಕ್ಕಲಿರುವ ಹಳ್ಳಿಗಳಿಗೆ ತೆರಳಿದಾಗ ಪ್ರತಿಹಳ್ಳಿಯಲ್ಲಿಯೂ ದೈವದ ಪ್ರತೀಕವಾದ ನಂದಿ ಮತ್ತು ಭಕ್ತರ ಎದುರಿನಲ್ಲಿಯೂ ತೆಂಗಿನಕಾಯಿ ಪವಾಡವನ್ನು ನೆರವೇರಿಸಲಾಗುತ್ತದೆ. ದ್ಯಾವರ ಪವಾಡವನ್ನು ಕಂಡ ಭಕ್ತರು ಪುನೀತರಾಗಿ, ಬಂದಿರುವ ದೈವದವರನ್ನು ಮುಂದಿನ ಹಳ್ಳಿಗಳಿಗೆ ಕಳುಹಿಸಿಕೊಡುವ ಪದ್ಧತಿಯಾಗಿದೆ. ತೆಂಗಿನಕಾಯಿ ಪವಾಡ ಉತ್ಸವದ ಪ್ರಮುಖ ಧಾರ್ಮಿಕ ಆಚರಣೆಯಾಗಿದ್ದು, ದೈವೀಕಲ್ಪನೆಯ ಅತಿಮಾನುಷ ಭಕ್ತಿಯ ದ್ಯೋತಕವೆಂದು ಪರಿಗಣಿಸಬಹುದು. ಪ್ರಮುಖವಾಗಿ ಹಿಂದುಳಿದ ಸಮುದಾಯಗಳ ದೈವಗಳಿಗೆ ಪ್ರಾಣಿಬಲಿ, ಗಾವುಜಿಗಿತ, ಸಿಡಿ, ಅಗ್ನಿಕುಂಡ ಹಾಯುವುದು, ಮುಳ್ಳಿನ ಬೇಲಿ ತುಳಿಯುವುದು, ಬಾಯಿಬೀಗ, ಪಂಜು ನುಂಗುವುದು ಮುಂತಾದ ಉಗ್ರ ಆಚರಣೆಗಳಿವೆ. ಈ ಸಮುದಾಯಗಳಲ್ಲಿಯೇ ಒಂದಾದ ಹಾಲುಮತ ಸಮುದಾಯದ ಆರಾಧ್ಯ ದೈವಗಳಾದ ಬೀರಪ್ಪ ಮತ್ತು ಮೈಲಾರಲಿಂಗನಿಗೆ ವಿವಿದೆಡೆಗಳಲ್ಲಿ ಉಗ್ರ ಆಚರಣೆಗಳು ನಡೆಯುತ್ತವೆ. ಮೈಲಾರಲಿಂಗನಿಗೆ ಸರಪಣಿ ಪವಾಡ, ಕೆಂಡಾರ್ಚನೆ, ಬಡಿಗೆಯಿಂದ ಹೊಡೆದಾಡುವಂಥ ಉಗ್ರ ಆಚರಣೆಗಳಿದ್ದು, ಅದರಲ್ಲಿ ಮೈಲಾರನ ಪ್ರತಿರೂಪದ ಗೊರವರ ಪಾತ್ರ ಹಿರಿದಾಗಿರುತ್ತದೆ. ಹಾಗೆಯೇ ಬೀರಪ್ಪನಿಗೆ ಈರಗಾರರು ಪಲ್ಮರಿ(ಹಾಲ್ಮರಿ ಜಿಗಿತ) ಸೇವೆ, ಅಲಗು ಪವಾಡ, ಅಗ್ನಿಸೇವೆಯಂಥ ಉಗ್ರ ಆಚರಣೆಗಳನ್ನು ನೆರವೇರಿಸುತ್ತಾರೆ. ಇಂಥ ಉಗ್ರ ಆಚರಣೆಗಳಲ್ಲಿ ಒಂದಾದ ತೆಂಗಿನಕಾಯಿ ಪವಾಡವು ಕೋಲಾರ ಭಾಗದಲ್ಲಿ ಬೀರಪ್ಪನಿಗೆ ಭಕ್ತಿ ಅರ್ಪಿಸುವ ಸೇವೆಯಾಗಿ ಜನಪ್ರಿಯವಾಗಿದೆ. ಒಟ್ಟಿನಲ್ಲಿ ಈ ರೀತಿಯ ಉಗ್ರ ಆಚರಣೆಯ ಮೂಲಕ ದೈವಿ ಶಕ್ತಿಯನ್ನು ಭಕ್ತರಿಗೆ ಮನದಟ್ಟಾಗಿಸುವುದು. ಅಂದರೆ ತೊಂದರೆ ತಾಪತ್ರಯಗಳು ಬಂದರೂ ದೈವದ ಮೇಲೆ ಅಚಲವಾದ ಭಕ್ತಿ ಶ್ರದ್ಧೆಗಳಿದ್ದರೆ ಒಳಿತಾಗುವುದು ಎಂದು ತಿಳಿಸಲು ಇಂತಹ ಆಚರಣೆಗಳು ಬೆಳೆದು ಬಂದಿರಬಹುದು. ಮತ್ತೊಂದು ಬಗೆಯಲ್ಲಿ ಹೇಳುವುದಾದರೆ ದೈವತ್ವದ ಉಗ್ರಸ್ವರೂಪ ತೋರಿಸುವ ಮುಖೇನ ಜನರಲ್ಲಿ ಭಯ ಭಕ್ತಿಯನ್ನು ಮೂಡಿಸುವ ದೃಷ್ಟಿಯಿಂದಾಗಿರಬಹುದು. ಆಚರಣೆಯಾಗಿ ನೋಡುವುದಾದರೆ ದೇವಾಲಯಗಳಲ್ಲಿ ತೆಂಗಿನಕಾಯಿ ಒಡೆಯಲು ಇಟ್ಟಿರುವ ಕಲ್ಲು ಹೇಗೆ ಯಾರ ಕಾಲಿಗೂ ತಾಕದಂತೆ ಪವಿತ್ರವಾಗಿರುತ್ತದೆಯೋ ಹಾಗೆಯೆ ಮಾನವನ ಶರೀರದಲ್ಲಿ ತಲೆ ಶ್ರೇಷ್ಠವಾದುದು, ಅದರ ಮೇಲೆ ತೆಂಗಿನಕಾಯಿಗಳನ್ನು ಒಡೆಯುವ ಮೂಲಕ ದೇವರಿಗೆ ಭಕ್ತಿ ಅರ್ಪಿಸಿದರೆ ದೇವರು ಒಲಿದು ತಮ್ಮ ಇಷ್ಟಾರ್ಥಗಳನ್ನು ಈಡೇರಿಸುವನು ಎಂಬ ನಂಬುಗೆಯಿಂದಾಗಿ ಈ ಆಚರಣೆ ರೂಢಿಗೆ ಬಂದಿದೆ ಎಂದು ಹೇಳುವರು.

**ದ್ಯಾವರಿಗೆ ಪೂಜೆ ಸಲ್ಲಿಸುವುದು:** ತೆಂಗಿನಕಾಯಿ ಪವಾಡದ ನಂತರ ದ್ಯಾವರಕ್ಕಾಗಿ ಬಂದಿರುವ ಅಣ್ಣ-ತಮ್ಮಂದಿರು, ಬಂದು-ಬಳಗ ಮತ್ತು ಭಕ್ತರು ದೇವಾಲಯದಲ್ಲಿ ಕೂಟಕ್ಕೆ ಕುಳಿತ ದೈವಗಳಿಗೆ ಮನೆಯಲ್ಲಿ ತಯಾರಿಸಿದ ತಂಬಿಟ್ಟು ದೀಪಗಳನ್ನು ಮಂಗಳಾರತಿ ತಟ್ಟೆಯಲ್ಲಿ ಇಟ್ಟುಕೊಂಡು ಕುಟುಂಬ ಸಮೇತರಾಗಿ ಬರುವರು. ಕುಟುಂಬದಲ್ಲಿನ ಒಬ್ಬ ಸ್ತ್ರೀಯು ಕೊರಳಿಗೆ ಹೂವಿನ ಹಾರವನ್ನು ಹಾಕಿಕೊಂಡು, ಆರತಿ ತಟ್ಟೆಯಲ್ಲಿ ತಂಬಿಟ್ಟಿನ ದೀಪಗಳನ್ನು ತಲೆಯ ಮೇಲೆ ಹೊತ್ತುಕೊಂಡು ಬರುವಳು. ಆಕೆಯೊಂದಿಗೆ ಕುಟುಂಬ ಸದಸ್ಯರೆಲ್ಲ ಇರುವರು. ಹಾಗೆ ದೇವಾಲಯಕ್ಕೆ ಬಂದು ದ್ಯಾವರಗಳ ಮುಂದೆ ತಂಬಿಟ್ಟಿನ ದೀಪಗಳನ್ನು ಇಟ್ಟು, ತುಪ್ಪವನ್ನು ಹಾಕಿ ಬೆಳಗಿಸುವರು. ಹೂವು-ಹಣ್ಣು-ಕಾಯಿಗಳಿಂದ ಪೂಜೆ-ಪುನಸ್ಕಾರಗಳನ್ನು ಶ್ರದ್ಧಾಭಕ್ತಿಯಿಂದ ಸಲ್ಲಿಸುವರು ಹಾಗೂ ಕಟ್ಟಿಕೊಂಡಿರುವ ಹರಕೆ, ಮುಡಿಪುಗಳನ್ನು ದೈವಗಳಿಗೆ ಸಮರ್ಪಿಸಿ ಪುನೀತರಾಗುವರು. ಹಾಗೆಯೆ ದೇವಾಲಯದಲ್ಲಿ ಇರುವ ಗುರುಗಳಾದ ದೇವಣಾರಾಧ್ಯ(ರೇವಣ್ಣಯ್ಯ ಆರಾಧ್ಯ)ರ ಪಾದಪೂಜೆಯನ್ನು ಮಾಡಿ, ಅವರಿಗೆ ಭಕ್ತಿಯಿಂದ ದಕ್ಷಿಣೆಯನ್ನು ನೀಡಿ ಪಾದಗಳಿಗೆ ನಮಸ್ಕರಿಸಿ ಆಶೀರ್ವಾದವನ್ನು ಪಡೆದು, ಗುರುಗಳ ಅನುಗ್ರಹಕ್ಕೆ ಪಾತ್ರರಾಗುವರು. ಜೊತೆಗೆ ದೇವಾಲಯದ ಮುಂದಿರುವ ಎರಡು ದೀಪಸ್ತಂಭ(ಗರುಡಗಂಬ)ಗಳಿಗೂ ತಂಬಿಟ್ಟು ದೀಪಗಳನ್ನು ಬೆಳಗಿಸಿ, ಪೂಜೆಯನ್ನು ಮಾಡುವುದು ಕಂಡುಬರುತ್ತದೆ.

**ದೀಪಾರಾಧನಾ ಕಾರ್ಯಕ್ರಮ:** ತೆಂಗಿನಕಾಯಿ ಪವಾಡ ನಡೆದ ದಿನದಂದು ಸಾಯಂಕಾಲ ಏಳು ಗಂಟೆ ಸುಮಾರಿಗೆ ದೀಪಾರಾಧನೆ ಕಾರ್ಯಕ್ರಮ ಪ್ರಾರಂಭವಾಗುತ್ತದೆ. ದೀಪಾರಾಧನೆ ನಡೆಯುವ ಒಂದು ದಿನ ಮುಂಚಿತವಾಗಿ ಅರಿಶಿಣ, ಮಜ್ಜಿಗೆ, ಗೌಡ ಮುಂತಾದ ಗೋತ್ರದವರು ತಮಗೆ ಸಂಬಂಧಿಸಿದ ಅಣ್ಣತಮ್ಮಂದಿರು ಜೊತೆಗೂಡಿ ಈ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾರೆ. ಅದರಂತೆ ಹಿರಿಯ ಸೋದರನ ಮನೆಯಲ್ಲಿ ದೊಡ್ಡದಾದ ತಂಬಿಟ್ಟಿನ ದೀಪವನ್ನು ಮಾಡಿಟ್ಟು, ಅದನ್ನು ನೋಡಿಕೊಳ್ಳಲು ಸೋದರಮಾವನನ್ನು ನೇಮಿಸಿರುತ್ತಾರೆ. ಏಕೆಂದರೆ ದೀಪ ಮಾಡಿದ ಸಮಯದಿಂದ ಮರುದಿನ ದೀಪಾರಾಧನೆ ನಡೆಯುವವರೆಗೂ ಆ ದೀಪ ನಂದದೇ ಉರಿಯಬೇಕು. ಹಚ್ಚಿದ ದೀಪ ನಂದಿಹೋದರೆ ಒಳಿತಾಗದು. ಹಾಗಾಗಿ ಅದನ್ನು ನೋಡಿಕೊಳ್ಳಲು ಇರುವ ಸೋದರಮಾವ ದೀಪಕ್ಕೆ ತುಪ್ಪವನ್ನು ಹಾಕುತ್ತ ಆರದಂತೆ ನೋಡಿಕೊಳ್ಳುತ್ತಿರುವನು. ಮರುದಿನ ದೀಪಾರಾಧನೆಯ ಸಮಯದಲ್ಲಿ ಪೂಜಾರಿಯು ದೇವರಿಗೆ, ಕಂಬಿದೀಪಕ್ಕೆ ಪೂಜಿಸಿ, ಕಂಬಿದೀಪ(ಕಾವಡಿ)ವನ್ನು ಕುಟುಂಬದ ಹಿರಿಯನ ಹೆಗಲಿಗೆ ಹೊರಿಸುವರು. ಆ ದೊಡ್ಡದಾದ ತಂಬಿಟ್ಟು ದೀಪವನ್ನು ಕಾವಡಿಯ ಒಂದೆಡೆಗಿಟ್ಟು ಅದಕ್ಕೆ ಕೆಂಪುಬಟ್ಟೆಯನ್ನು ಸುತ್ತಿದ್ದು, ಮತ್ತೊಂದೆಡೆ ಇರುವ ಬುಟ್ಟಿಯಲ್ಲಿ ನೀರು ತುಂಬಿದ ಮಣ್ಣಿನ ಮಡಿಕೆಯನ್ನು ಇಟ್ಟಿರುತ್ತಾರೆ. ಕಾವಡಿ ಎಂದರೆ ಹೆಗಲ ಮೇಲೆ ಎರಡು ವಸ್ತುಗಳನ್ನು ಹೊತ್ತು ತರಲು ಮಾಡಿಕೊಂಡಿರುವ ಬಿದಿರಿನ ದಬ್ಬೆ(ಅಡ್ಡೆ).

ಶ್ರವಣಕುಮಾರ ತನ್ನ ಕಣ್ಣಿಲ್ಲದ ತಂದೆ ತಾಯಿಗಳನ್ನು ಹೊತ್ತುಕೊಂಡು ಸಾಗಲು ಮಾಡಿಕೊಂಡಿದ್ದ ಪರಿಕರವಿರುವ ಮಾದರಿಯಲ್ಲಿಯೇ ಕಂಬಿದೀಪವು ಇರುತ್ತದೆ. ಆ ಕಂಬಿದೀಪವನ್ನು ಹಿರಿಯನ ನಂತರ ವಯಸ್ಸಿಗೆ ಅನುಗುಣವಾಗಿ ಮನೆಯ ಸ್ತ್ರೀ ಪುರುಷರೆಲ್ಲರ ಹೆಗಲಿಗೂ ಬಂದು ಕೊನೆಗೆ ಹೊಸದಾಗಿ ಮದುವೆಯಾದ ದಂಪತಿಗಳ ಹೆಗಲಿಗೆ ಬರುತ್ತದೆ. ಅಂದರೆ ಹಿರಿಯನಿಂದ ಆತನ ಹೆಂಡತಿಗೆ ನಂತರ ಹಿರಿಯ ಮಗನಿಗೆ, ಆತನ ಹೆಂಡತಿ, ಕಿರಿಯ ಮಗ, ಆತನ ಹೆಂಡತಿ, ಹಿರಿಯ ಮಗನ ಮಗ, ಆತನ ಹೆಂಡತಿ ಹೀಗೆ ಹೊಸದಾಗಿ ಮದುವೆಯಾದ ದಂಪತಿಗಳವರೆಗೂ ಬರುತ್ತದೆ.

ಹೊಸದಾಗಿ ಮದುವೆಯಾದ ದಂಪತಿಗಳು ಕಂಬಿದೀಪವನ್ನು ಹೊತ್ತು ದೇವಾಲಯದ ಸುತ್ತಲೂ ಮೂರು ಸುತ್ತು ಪ್ರದಕ್ಷಿಣೆ ಮಾಡಿ, ಪೂಜೆ ಸಲ್ಲಿಸುವರು. ಈ ಮಾದರಿಯಲ್ಲಿ ಎಲ್ಲ ಒಕ್ಕಲುಗಳ ಅಣ್ಣ–ತಮ್ಮಂದಿರ ಕುಟುಂಬಗಳಲ್ಲಿಯೂ ನಡೆಯುತ್ತದೆ. ಇದರಲ್ಲಿಯೂ ಕೆಲ ಕಟ್ಟುಪಾಡುಗಳಿವೆ. ಮದುವೆಯಾಗದ ಯುವಕ, ಗರ್ಭಿಣಿಯಾದ ಸ್ತ್ರೀ, ಅಂತರ್‌ಜಾತಿಯ ಮದುವೆಯಾದವರಿಗೆ ಈ ದೀಪವನ್ನು ಹೊರಲು ಅವಕಾಶವಿಲ್ಲ. ಈ ಕಾರ್ಯವಾದ ಮೇಲೆ ಪ್ರತಿ ಒಕ್ಕಲಿನ ಅಣ್ಣ–ತಮ್ಮಂದಿರು ತಾವು ತಯಾರಿಸಿದ ತಂಬಿಟ್ಟಿನ ದೀಪವನ್ನು ಮುರಿಯುವರು. ನಂತರ ಅದನ್ನು ಸಂಬಂಧಿಸಿದ ಎಲ್ಲ ಅಣ್ಣತಮ್ಮಂದಿರು ಪ್ರಸಾದದಂತೆ ಹಂಚಿಕೊಳ್ಳುವರು. ಆ ಪ್ರಸಾದವನ್ನು ತೆಗೆದುಕೊಂಡು ಮನೆಗೆ ಹೋದರೆ ದೇವರು ಅವರ ಹಿಂದೆಯೇ ಮನೆಗೆ ಬರುವನು ಎಂಬ ವಾಡಿಕೆಯಿದೆ.

ಹೊಸದಾಗಿ ಮದುವೆಯಾದ ದಂಪತಿಗಳಿಗೆ ದೀಪ ಹೊರಿಸುವುದರ ಸಂಕೇತ ಹೊಸಬದುಕು ಕಟ್ಟಿಕೊಂಡು ಅವರ ವಂಶವು ಭವಿಷ್ಯದಲ್ಲಿ ಸುಖಕರವಾಗಿ ನೂರುಕಾಲವೂ ಬಾಳಲಿ ಎಂಬುದರ ದ್ಯೋತಕ. ದ್ಯಾವರ ನಡೆದ ವರ್ಷವೇ ಮದುವೆಯಾಗಿ ದೀಪ ಹೊರುವ ಅವಕಾಶವನ್ನು ಪಡೆದವರನ್ನು 'ಅದೃಷ್ಟದ ಜೋಡಿ'ಗಳೆಂದು ಕರೆಯುವರು. ದ್ಯಾವರ ನಂತರದಲ್ಲಿ ಮದುವೆಯಾದವರು ಮುಂದಿನ ಸಾರಿ ಉತ್ಸವ ನಡೆಯುವವರೆಗೂ ಕಂಬಿದೀಪಕ್ಕಾಗಿ ಕಾಯಬೇಕಾಗುತ್ತದೆ. ದೀಪಾರಾಧನೆ ಕಾರ್ಯಕ್ರಮದಲ್ಲಿ ಭಾಗವಹಿಸಿದ ಪೂಜಾರಿಗಳಿಗೆ ಕುರಿಮರಿ, ಹಣ, ದವಸಧಾನ್ಯಗಳನ್ನು ಕಾಣಿಕೆಯಾಗಿ ನೀಡುವರು. ಹೊಸದಾಗಿ ಮದುವೆಯಾಗಿ ಗಂಡನ ಮನೆಯಲ್ಲಿ ದೀಪ ಹೊರುವ ವಧುವಿಗೆ ತವರು ಮನೆಯವರು ಕಾಣಿಕೆಯನ್ನು ಹಿಂದಿನಿಂದಲೂ ನೀಡುತ್ತ ಬಂದಿರುವ ಪದ್ಧತಿಯಿದೆ. ಪ್ರಮುಖ ಧಾರ್ಮಿಕ ಆಚರಣೆಗಳೆಲ್ಲ ಮುಗಿದ ಮೇಲೆ ಕೊನೆಯ ದಿನ ಈರಗಾರರು ಬ್ಯಾಲಹಳ್ಳಿಯಲ್ಲಿ ಕುಲದೇವರ ಬತ್ತಿ ಹಾಡುತ್ತಾರೆ. ಅಲ್ಲಿಂದ ಕಂಬಿದೀಪಗಳನ್ನು ತೆಗೆದುಕೊಂಡು ಕೋಲಾರದಲ್ಲಿರುವ ಬೀರಪ್ಪನ ಮೂಲ ದೇವಾಲಯಕ್ಕೆ ಬಂದು, ದ್ಯಾವರಿಗೆ ಪೂಜೆಯನ್ನು ಸಲ್ಲಿಸಿ, ಕಂಬಿದೀಪಗಳನ್ನು ಎತ್ತುವುದರೊಂದಿಗೆ ಉತ್ಸವ ಮುಕ್ತಾಯವಾಗುತ್ತದೆ.

**ಹೊಳೆದ್ಯಾವರ ಮಾಡುವುದು:** ದ್ಯಾವರಕ್ಕಾಗಿ ಬಂದ ಎಲ್ಲ ಒಕ್ಕಲಿನವರಾದ ಮಾಸ್ತಿ ಕುಟುಂಬದವರು, ಕೋಟೆ ಕುಟುಂಬದವರು, ಬೆಳೆರಾಯಸ್ವಾಮಿ ಕುಲಸ್ಥರು, ಹೊಸೂರು ಕುಲಸ್ಥರು, ದ್ಯಾವಂಡಹಳ್ಳಿ

ಕುಲಸ್ಥರು ಮೊದಲಾದವರು ತಮ್ಮ ಸಂಬಂಧಿಕರೊಂದಿಗೆ ಉತ್ಸವ ಮುಗಿಸಿ ತಮ್ಮ ಊರುಗಳಿಗೆ ಹಿಂತಿರುಗುವಾಗ ಮಾರ್ಗ ಮಧ್ಯೆ ತಮಗೆ ಅನುಕೂಲಕರವಾದ ಪ್ರದೇಶದಲ್ಲಿ ಕುರಿ, ಟಗರು, ಕೋಳಿ ಅವರ ಸಾಮರ್ಥ್ಯಕ್ಕೆ ತಕ್ಕಂತೆ ಯಾವುದನ್ನಾದರೂ ಕಡಿದು ಬಾಡೂಟವನ್ನು ಸೇವಿಸುವರು. ಏಕೆಂದರೆ ದ್ಯಾವರದಲ್ಲಿ ಕೇವಲ ಸಿಹಿ ಅಡುಗೆಯನ್ನು ಮಾತ್ರವೇ ಸ್ವೀಕರಿಸಬೇಕು. ಪ್ರಾಣಿಬಲಿ ನಿಷೇಧವಾಗಿರುವುದರಿಂದ ಊರಿಗೆ ಮರಳುವ ಸಮಯದಲ್ಲಿ 'ಬಾಡೂಟ'ವನ್ನು ಮಾಡುವುದನ್ನು ಕಾಣುತ್ತೇವೆ. ದೊಡ್ಡದ್ಯಾವರ ಉತ್ಸವ ಅಲ್ಲದೇ ಪ್ರತಿವರ್ಷ ದಸರ ಹಬ್ಬದ ಸಮಯದಲ್ಲಿ ದ್ಯಾವರಿಗೆ ವಿಶೇಷ ಪೂಜೆ–ಪುನಸ್ಕಾರಗಳನ್ನು ನಡೆಸಿ, ತಮ್ಮ ಹರಕೆಗಳನ್ನು ತೀರಿಸುವರು. ಅದರ ಜೊತೆಗೆ ಮಕ್ಕಳಿಗೆ ಜವಳ ತೆಗೆಯುವ ಶಾಸ್ತ್ರ, ಕಿವಿ ಚುಚ್ಚುವ ಶಾಸ್ತ್ರಗಳಂಥ ಕಾರ್ಯಕ್ರಮಗಳನ್ನು ನಡೆಸುತ್ತಾರೆ.

ಒಟ್ಟಾರೆಯಾಗಿ ದೊಡ್ಡದ್ಯಾವರ ಉತ್ಸವವೂ ಕೋಲಾರ ಗಡಿ ಭಾಗದಲ್ಲಿ ಹಾಲುಮತ ಸಮುದಾಯ ಮಾಡುವ ಕುಲಸಂಬಂಧಿ ಹಬ್ಬಗಳಲ್ಲಿ ಪ್ರಮುಖವಾಗಿದ್ದು, ಇದರ ಆಶಯ ಅಣ್ಣ–ತಮ್ಮಂದಿರನ್ನು ಒಂದೆಡೆ ಸೇರಿಸುವುದಾಗಿದೆ. ಏಕೆಂದರೆ ಬ್ಯಾಲಹಳ್ಳಿಯ ಬೀರಪ್ಪ(ಭಕ್ತೇಶ್ವರ)ನ ಒಕ್ಕಲು ಕರ್ನಾಟಕವಲ್ಲದೆ ಆಂಧ್ರಪ್ರದೇಶ, ತಮಿಳುನಾಡು, ಹೊರದೇಶಗಳಲ್ಲಿಯೂ ಜೀವಿಸುತ್ತಿದ್ದಾರೆ. ಅವರೆಲ್ಲ ಒಂಭತ್ತು ವರ್ಷಗಳಿಗೆ ಒಮ್ಮೆಯಾದರೂ ಒಂದೆಡೆ ಸೇರಿ ನಾವೆಲ್ಲರೂ ಒಂದೇ ದೈವ, ಪರಂಪರೆಗೆ ಸೇರಿದವರು ಎಂಬ ಬ್ರಾತೃತ್ವ ಭಾವನೆಯನ್ನು ಬೆಳೆಸುತ್ತದೆ.

ಇವುಗಳಲ್ಲದೇ ಬೀರಪ್ಪನ ಕಾರ್ಯಕ್ಷೇತ್ರ ಕುರುಬರು ನೆಲೆಸಿದ ಪ್ರತಿ ಗ್ರಾಮಗಳಲ್ಲಿ ದೊರೆಯುತ್ತದೆ. ಅಲ್ಲಿನ ಆಚರಣೆಗೆ ಮತ್ತು ನಂಬುಗೆಗಳು ಅಲ್ಪ–ಸ್ವಲ್ಪ ಬದಲಾವಣೆಗಳೊಂದಿಗೆ ಮೇಲೆ ವಿವರಿಸಿದ ರೀತಿಯಲ್ಲಿಯೇ ಇರುತ್ತವೆ. ಹಾಗಾಗಿ ಅಲ್ಲಿನ ನಂಬುಗೆ, ಧಾರ್ಮಿಕ ಅಂಶಗಳ ವಿಶ್ಲೇಷಣೆಗೆ ಹೋಗದೇ ಬೀರಪ್ಪನ ನೆಲೆ ಮತ್ತು ಆತನ ವಿವಿಧ ಹೆಸರುಗಳನ್ನು ಮಾತ್ರ ಈ ಕೆಳಗೆ ಕೊಡಲಾಗಿದೆ.

| **ಗ್ರಾಮ** | **ದೈವ** |
|---|---|
| ಕಲ್ಡಿಪಲ್ಲಿ | ಗ್ವಾಡ್ಲಪ್ಪಸ್ವಾಮಿ |
| ಅಂತಾಪುರಂ | ಗಡ್ಡದಯ್ಯಸ್ವಾಮಿ |
| ಕಾಡು ಸಿದ್ಧಾಪುರ(ಅಶೋಕ ಸಿದ್ಧಾಪುರ) | ಕಾಡು ಸಿದ್ಧಪ್ಪಸ್ವಾಮಿ |
| ಸೀರ್ಪಿ | ವೀರೇಶ್ವರಸ್ವಾಮಿ |
| ತಗರಕುಂಟೆ | ಪೆದ್ದಯ್ಯ |
| ಪುಟಪರ್ತಿ | ತಲಮಾರಪ್ಪ |
| ಬಂಡಟ್ಟಿ | ಬೈರಸಿದ್ಧಪ್ಪ |
| ಕೊರ್ಲುಕುಂಟ | ಈರಣ್ಣಸ್ವಾಮಿ |

| | |
|---|---|
| ಸಿರಿಗೇರಿ | ಸಿರಿಗೇರಪ್ಪ |
| ಗಂಜಿಕುಂಟೆ | ಐಯ್ಯಾಳಪ್ಪ |
| ಎಮ್ಮಿಗನೂರು | ಮೊಂಡುರಾಮಪ್ಪ |
| ಯರ್ರಗುಂಟ | ರಾಕೆಟ್ಲಪ್ಪ |
| ಆಗದ್ವಾಟಲಪಲ್ಲಿ | ಆಗದ್ವಾಟಲಯ್ಯ |
| ಮಾಲೂರು | ಮಾಲೂರಪ್ಪ |
| ನೇತ್ರಂಪಲ್ಲಿ | ಸೋಮಲಿಂಗೇಶ್ವರ |
| ಮದ್ದಿಕೇರಿ | ಮದ್ದಿಕೇರಪ್ಪ |
| ಚಿಲುಮೆಪಲ್ಲಿ | ಕಾರಮಂಚೇಶ್ವರ |
| ಹರ್ತಿಕೋಟೆ | ಕೆಂಚಲಿಂಗೇಶ್ವರ |
| ಸಿಡಂಪಲ್ಲಿ | ರಾಯಪ್ಪ |
| ಹೊಸಗುಡ್ಡ | ಬಂಗಾರ ಗುಂಡಯ್ಯ |
| ಮಲ್ಲಾಪುರ | ಮಲ್ಲಾಪುರದಯ್ಯ |
| ಉತ್ತನೂರು | ಷಾಗಪ್ಪ |
| ನಾಗಲಪುರಂ | ನಾಗಲಪುರದಯ್ಯ |
| ಕಂದಾಳ್ | ಬೀರಪ್ಪ |
| ಹಲಕುಂದಿ | ಕರಿಸಿದ್ದೇಶ್ವರ |
| ಬಾಗಡೆ | ಬಾಗಾಡಪ್ಪ |
| ಆಗಲೂರು | ಆಗಲೂರಪ್ಪ |
| ಮುದ್ದಟಮಗಿ | ನೆಣಿಕಪ್ಪ ತಾತ |
| ವಿಠಲಾಪುರ | ಹಾಲುಮರದಪ್ಪ |
| ರುದ್ರಯ್ಯನರೊಪ್ಪ | ಮುದ್ದಣ್ಣಸ್ವಾಮಿ |

ಈ ರೀತಿಯಾಗಿ ಸಾಕಷ್ಟು ದೈವಗಳು ಈ ಭಾಗದಲ್ಲಿವೆ. ಇವೆಲ್ಲವು ಬೀರಪ್ಪನ ಪರ್ಯಾಯ ಹೆಸರುಗಳೇ ಆಗಿದ್ದು ಹೆಚ್ಚಿನದಾಗಿ ಊರ ಹೆಸರಿನೊಂದಿಗೆ ಕರೆಯುವ ಪದ್ಧತಿಯು ಹೆಚ್ಚಾಗಿ ಕಂಡುಬರುತ್ತದೆ. ಪ್ರತಿಯೊಂದು ದೈವಕ್ಕೂ ಸಂಬಂಧಿಸಿದಂತೆ ವಿಭಿನ್ನವಾದ ಕಥೆಗಳಿವೆ. ಅವುಗಳಲ್ಲಿ ವಿಭಿನ್ನವೆನಿಸಿದವನ್ನು ಮಾತ್ರ ವಿಶ್ಲೇಷಣೆಗೆ ಒಳಪಡಿಸುವ ಕೆಲಸವನ್ನು ಈ ಬರೆಹದಲ್ಲಿ ಮಾಡಲಾಗಿದೆ.

ಅದು ಈ ಅಧ್ಯಯನದ ಮಿತಿಯೂ ಆಗಿದೆ. ಮುಖ್ಯವಾದ ಸಂಗತಿಗಳನ್ನು ಗುರುತಿಸುವುದಾದರೇ ಈ ಪರಿಸರದಲ್ಲಿ ಎಲ್ಲ ಕಡೆಯ ಪಟ್ಟದ ದೇವರು ಪೂಜಾರಿಯ ಪಟ್ಟ, ಬೀರಪ್ಪನ ಪರಿವಾರದ ಪಟ್ಟ ಅಂದರೇ ಗೌಡ, ಯಜಮಾನ, ಕೋಲ್ಕಾರ, ಕೆಲವೆಡೆ ಜೋಗಿಕಟ್ಟಗಳನ್ನು ಕಟ್ಟುವುದನ್ನು ಗಮನಿಸಬಹುದು. ಅವರು ದೈವಕ್ಕೆ ಸಂಬಂಧಿಸಿದ ಸಮುದಾಯಕ್ಕೆ ಒಳಿತಾಗುವ ರೀತಿಯಲ್ಲಿ ಕಾರ್ಯ ನಿರ್ವಹಸಿಕೊಂಡು ಬರುತ್ತಿರುವುದು ಎಲ್ಲ ಕಡೆಯೂ ಕಂಡುಬರುತ್ತದೆ.

### ೪.೧.೨. ಮೈಲಾರಲಿಂಗ

ದಕ್ಷಿಣ ಭಾರತದ ದೇಸಿ ದೈವಗಳಲ್ಲಿ ಮೈಲಾರಲಿಂಗನು ಒಬ್ಬ. ಭವ್ಯ ಸಾಂಸ್ಕೃತಿಕ ಪರಂಪರೆ ಹೊಂದಿರುವ ಮೈಲಾರನನ್ನು ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶಗಳಲ್ಲಿ ವಿವಿಧ ಹೆಸರುಗಳಿಂದ ಕರೆಯುವ, ಆರಾಧಿಸುವ ಸಂಪ್ರದಾಯವಿದೆ. "ಮಹಾರಾಷ್ಟ್ರದಲ್ಲಿ ಖಂಡೋಬಾ, ಖಂಡೆರಾಯ, ಮೈರಾಳ, ಮೈಳಾರ, ಮೇಂಗನಾಥ, ಹಯಪತಿ, ಮಾರ್ತಾಂಡ, ಬೈರವ, ಮಲ್ಹಾರ(ರಿ), ಮಲುದೇವ, ಮಲ್ಲೇಶ್ವರ, ಮಲ್ಲುಖಾನ, ಅಜಮತಖಾನ ಎಂಬಿತ್ಯಾದಿಯಾಗಿ ಕರೆಯುವರು. ಅದರಲ್ಲಿಯೂ ಖಂಡೋಬಾ ಅಥವಾ ಖಂಡೇರಾಯ ಎಂಬ ಹೆಸರೇ ಹೆಚ್ಚು ಜನಪ್ರಿಯವಾಗಿದೆ."[೩] ಕರ್ನಾಟಕದಲ್ಲಿ ಮೈಲಾರಲಿಂಗ, ವರವಿನ ಮಲ್ಲಯ್ಯ, ಗುಡ್ಡದ ಮಲ್ಲಯ್ಯ, ಮಲ್ಲಿಕಾರ್ಜುನ, ಮಾರ್ತಾಂಡೇಶ್ವರ, ಮುದಿಮಲ್ಲಯ್ಯ ಎಂಬುದಾಗಿ ಹೆಸರಿಸುತ್ತಾರೆ. ಆಂಧ್ರಪ್ರದೇಶದಲ್ಲಿ ಮಲ್ಲನ್ನ, ಕೊಮಿರೆಲ್ಲಿ ಮಲ್ಲನ್ನ, ಕಟ್ಟಮಲ್ಲನ್ನ, ಮಾಳಚಿ ಪ್ರಿಯ ಪತಿ, ಮಾಡಚಿರಮಣ, ಸಜ್ಜನ ಪಾರಿಜಾತ, ಮಾಯಕಾರಿ ಮಲ್ಲನ್ನ, ಮಾಯ ವಿನೋದಿ, ಬೈರವ, ಮಲ್ಲಿಕಾರ್ಜುನ ಎಂಬಿತ್ಯಾದಿಯಾಗಿ ಗುರುತಿಸುವರು.

ಹೀಗೆ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನನಾಮಗಳಿರುವಂತೆಯೇ ಆತನ ಚರಿತ್ರೆ, ನಂಬುಗೆ, ಆಚರಣೆಗಳಂಥ ವಿಷಯಗಳಲ್ಲಿಯೂ ಭಿನ್ನ ಪಠ್ಯಗಳು ದೊರೆಯುತ್ತವೆ. ಪ್ರಸ್ತುತ ಈ ಅಧ್ಯಯನದ ಬರಹದಲ್ಲಿ ಕರ್ನಾಟಕ ಆಂಧ್ರಪ್ರದೇಶದ ಗಡಿಭಾಗದಲ್ಲಿ ಅಂದರೆ ವೇದಾವತಿ ಮತ್ತು ತುಂಗಭದ್ರ ನದಿಗಳ ನಡುವಿನ ಗಡಿ ಪ್ರದೇಶದಲ್ಲಿ ಆತನ ನೆಲೆಗಳು, ಅಲ್ಲಿನ ನಂಬುಗೆ, ಐತಿಹ್ಯ, ಧಾರ್ಮಿಕ ಆಚರಣೆಗಳಂಥ ವಿಷಯಗಳನ್ನು ಚರ್ಚಿಸಲಾಗಿದೆ. ಅದಕ್ಕಿಂತಲೂ ಪೂರ್ವದಲ್ಲಿ ಕರ್ನಾಟಕ-ಆಂಧ್ರಪ್ರದೇಶದಲ್ಲಿ ಮೈಲಾರ ಪರಂಪರೆಯು ಬೆಳೆದು ಬಂದಿರುವ ಕುರಿತಾಗಿ ದೊರೆಯುವ ಶಾಸನೋಕ್ತ ಮತ್ತು ಸಾಹಿತ್ಯಿಕ ಅದರಲ್ಲಿ ಶಿಷ್ಟ-ತೋಂಡಿ ಎರಡು ಆಕರಗಳಲ್ಲಿ ಲಭ್ಯವಾಗುವ ಮಾಹಿತಿಗಳ ಸಂಕ್ಷಿಪ್ತ ಪರಿಚಯವನ್ನು ತಿಳಿಯುವುದು ಮುಖ್ಯವೆನಿಸುತ್ತದೆ.

**ಶಾಸನಗಳು:** 'ಬುಡಮನಾರಾಯಲ ಪಾಡು' ಗ್ರಾಮದಲ್ಲಿ ೪ಳನೆಯ ಶತಮಾನ ಕಾಲದ ಶಾಸನದಲ್ಲಿ 'ಗೊರಪಲ್' ಎಂಬ ಪದ ಕಂಡುಬರುತ್ತದೆ. ಈ ಗೊರಪಲ್ ಎಂದರೆ ಮೈಲಾರನ ಪರಿವಾರದಲ್ಲಿ ಪ್ರಮುಖನಾದ ಗೊರವ, ಒಗ್ಗಯ್ಯ, ಗೊಗ್ಗಯ್ಯ, ವಗ್ಗಯ್ಯನ ಒಂದು ಹೆಸರು ಎಂದು ಹೇಳಬಹುದು. ಪೆನುಗೊಂಡ ಕೋಟೆಯ ಪೂರ್ವದ ಬಾಗಿಲಿಗೆ ಹೋಗುವ ಬೀದಿಯಲ್ಲಿ ನಿಂತಿರುವ ಕಲ್ಲಿನ

ಮೇಲಿರುವ ಶಾಸನದಲ್ಲಿ 'ಸರ್ವಧಾರಿ ಸಂವತ್ಸರ ಕಾರ್ತಿಕ ಶುದ್ಧ ೧೦ ಗುರುವಾರ ಎಂದಿದೆ. ಅದರಲ್ಲಿ ಜಾಯನಾಯಕನ ಮಗ ಕೊಮರನಾಯಕ ಎಂಬುವವನು ಪೆನುಗೊಂಡಕ್ಕೆ ಬಂದು ಬೊಮ್ಮರಸ ಎಂಬುವವನನ್ನು ಓಲೈಸಿ, ಮೈಲಾರ ದೇವನ ಮಾಳಿಗೆಯನ್ನು ಮಾಡಿಸಿದನೆಂದೂ, ಹಲವರಿಗೆ ಭಿನ್ನಹ ಮಾಡಿ ದೇವರಿಗೆ ಧತ್ತಿಗಳನ್ನು ಪಡೆದನೆಂದು ದಾಖಲಾಗಿದೆ. ಶಾಸನದ ಕೆಳಭಾಗದಲ್ಲಿ ನೆಟ್ಟಿರುವ ಖಡ್ಗದ ಎದುರು ನಿಂತಿರುವ ಕುದುರೆಯ ಚಿತ್ರವಿದೆ. ಈ ಶಾಸನ ೧೩ ಸಾಲುಗಳನ್ನು ಹೊಂದಿದೆ. ಮೈಲಾರನನ್ನು ಬೇಟೆಗಾರರ ಅರಸ, ದೇವತೆಗಳ ರಾಜ, ಪಲ್ಲೆಮನಾಯಕ ಎಂಬ ನಾಮಾಂಕಿತಗಳು ಇಲ್ಲಿ ಕಾಣಸಿಗುತ್ತವೆ. ಅದರಂತೆ ಆ ಕೋಟೆಯಲ್ಲಿಯೇ ಮರಿಯಮ್ಮ ದೇವಾಲಯದಲ್ಲಿ ಬಿದ್ದಿರುವ ಒಂದು ಒಡೆದ ಕಂಬದ ಮೇಲಿರುವ ಶಾಸನ ಕಂಬದ ಕೆಳಭಾಗದಲ್ಲಿ ಅಳಿಸಿ ಹೋಗಿರುವುದರಿಂದ ವಿವರ ಅಸ್ಪಷ್ಟವಾಗಿದೆ. 'ಶಕ ೮೦೦ ವಿಳಂಬಿ ಸಂವತ್ಸರ' ಎಂದಿದ್ದು, ಅದು ಕ್ರಿ.ಶ. ೮೭೮ಕ್ಕೆ ಸರಿ ಹೊಂದುತ್ತದೆ. ಇದರಲ್ಲಿ ನಾಲ್ಕು ಮುಖಗಳಿದ್ದು, ಮರಂದನೇರಿಯ ಊರಿನಲ್ಲಿದ್ದ ಪೊನ್ನೇರ ಗೊರವಪ್ಪನು ಮಹೇಂದ್ರ ನೊಳಂಬ ಎಂಬಾತನಿಂದ ಭೂಮಿಯನ್ನು ದಾನವಾಗಿ ಪಡೆದು ಕೆರೆಯನ್ನು ಕಟ್ಟಿಸಿದನೆಂದು ಹೇಳುತ್ತದೆ. ಈ ಶಾಸನವು ೩೪ ಸಾಲುಗಳನ್ನು ಹೊಂದಿದೆ.

> "ಮರಂದ ನೇರಿ(ಯ) ಮಹೇಂದ್ರ
> ನೊಳಂಬನಲ್ಲಿ ಪೊನ್ನೇರ ಗೊರವಪ್ಪ
> ಪಡೆದಾರ್ಕ್ಕೆರೆಯಂ ಕಟ್ಟಿಸಿ ಸಯಿಗಳ್ಗೆ"[೪]

ಈ ಶಾಸನಗಳಲ್ಲದೇ ಆದೋನಿ ತಾಲೂಕಿನ ಕರಕಾಂತಪುರ ಗ್ರಾಮದಲ್ಲಿನ ಒಂದು ಶಾಸನದಲ್ಲಿ ಮೈಲಾರ ಭಟ್ಟೋಪಾಧ್ಯಾಯ, ಕಪ್ಪಗಲ್ಲ ಮೈಲಾರ ಭಟರು ಎಂಬ ಹೆಸರಿನ ಉಲ್ಲೇಖಗಳು ದೊರೆಯುತ್ತವೆ. ಕ್ರಿ.ಶ. ೧೧೪೮ರ ಶಾಸನವಿದು. ಇವುಗಳಲ್ಲದೇ ಗೊರವ, ಮಲ್ಲಯ್ಯ, ಗೊರವನಪಳ್ಳಿ ಎಂಬಿತ್ಯಾದಿ ಸ್ಥಳನಾಮ ಉಲ್ಲೇಖಗಳು ಶಾಸನಗಳಲ್ಲಿವೆ. ಹೀಗೆ ಮೈಲಾರಲಿಂಗನ ಪರಂಪರೆ ಮತ್ತು ಆತನ ಪರಿವಾರದ ಉಲ್ಲೇಖಗಳು ಆತನನ್ನು ಪ್ರಾಚೀನ ಕಾಲದಿಂದಲೂ ಕರ್ನಾಟಕ-ಆಂಧ್ರಪ್ರದೇಶದಲ್ಲಿ ಹಿಂದುಳಿದ ಸಮುದಾಯಗಳ ದೈವವಾಗಿದ್ದನೆಂದು ತಿಳಿಸುತ್ತವೆ.

**ಸಾಹಿತ್ಯಿಕ ಆಕರಗಳು:** ವಲ್ಲಭರಾಯನು ಬರೆದ 'ಕ್ರೀಡಾಭಿರಾಮಮು' ಕೃತಿಯ ಕಾಲ ೧೫ನೆಯ ಶತಮಾನ. ಈ ಗ್ರಂಥಕ್ಕೆ 'ಪ್ರೇಮಾಭಿರಾಮ'ವೆಂಬ ಸಂಸ್ಕೃತ ಗ್ರಂಥ ಮೂಲವಾಗಿದೆ. ಇದರಲ್ಲಿ ಮೈಲಾರನ ವೀರಭಟರ(ಗೊರವರ) ಸಾಹಸ ಕೃತ್ಯಗಳು ವರ್ಣಿತವಾಗಿವೆ. ಉರಿಯುವ ಕೆಂಡದ ಕುಂಡ ಹಾರುವವರು, ಚರ್ಮಕ್ಕೆ ಗಾಳ ಚುಚ್ಚಿಕೊಂಡು ಗಗನದಲ್ಲಿ ಉಯ್ಯಾಲೆಯಂತೆ ತೂಗಾಡುವವರು, ಲೋಹದ ಗುಂಡುಗಳನ್ನು ನುಂಗುವವರು, ಎಡಗೈಯಿಂದ ಬಲಗೈಯಿಂದ ಆರತಿ ಕೊಡುವವರು

ಆದ ವೀರಭಟರು ಹಾಗೆಯೇ ಹೆಂಗಸರಿಂದ ಗೊಂಡ್ಲಿ ಎಂಬ ನೃತ್ಯವನ್ನು ಆಡಿಸುವುದು ಕೂಡ ವರ್ಣಿತವಾಗಿದೆ. “ಗೊಂಡ್ಲಿಯೆಂಬುದು ಡೊಂಬರಾಟದಂತೆ ಕೆಲವು ಸಾಹಸ ಕೃತ್ಯಗಳಿಂದ ಕೂಡಿದ ಆಟವೆಂದು ತೋರುತ್ತದೆ. ಇದು ಕುಂಡಲಾಕಾರದ ನೃತ್ಯವೆಂದು, ಗೊಂಥಲ್ ಅಥವಾ ಗೊಂದಲಕ್ಕೆ ಸಂಬಂಧಿಸಿದ್ದೆಂದು ಕಂಡುಬರುತ್ತದೆ.”[೫]

**ಕಾಶಿಖಂಡ:** ಶ್ರೀನಾಥ ಕವಿಯು ೧೫ನೆಯ ಶತಮಾನದಲ್ಲಿ ಬರೆದ ಈ ಕೃತಿಯಲ್ಲಿ ಗೊರವರು ಮೈಲಾರ ದೇವನನ್ನು ಸ್ತುತಿಸುತ್ತಾ ಫಾಲ ಭಾಗದಲ್ಲಿ ಅರಿಶಿನ ಧರಿಸುವ ವಿಷಯ ಹೇಳಲ್ಪಟ್ಟಿದೆ. ಇನ್ನೂ ಕೆಲವು ಕಾವ್ಯಗಳಲ್ಲಿ ಮೈಲಾರನನ್ನು ಒಂದು ಕ್ಷುದ್ರದೇವತೆ ಎಂದು ನಿರೂಪಿಸಲಾಗಿದೆ. ತೆಲುಗು ನಿಘಂಟುಗಳು ಮೈಲಾರು ಎಂಬುದಕ್ಕೆ ಒಂದು ಕ್ಷುದ್ರದೇವತೆ ಎಂಬ ಅರ್ಥವನ್ನು ಕೊಡುತ್ತವೆ. ಮೈಲ(ಮೈಲಿಗೆ) ಮೈಲಾರ ಪದಕ್ಕೆ ಮೂಲವೆಂದು ನಿಘಂಟುಕಾರರು ಊಹಿಸಿದ್ದಾರೆ.

“ಪಾಲ್ಕುರಿಕೆ ಸೋಮನಾಥನ ಬಸವಪುರಾಣದಲ್ಲಿ ಗಬ್ಬು ಮೈಲಾರ ಎಂಬ ಪದವಿದೆ.”[೬] ಆಂಧ್ರದಲ್ಲಿರುವ ಪೆರಿಕೆ ಎಂಬ ಕುಲದವರು ಅಂದರೆ ಎರಡು ಚೀಲಗಳನ್ನು ಹೊತ್ತುಕೊಂಡು ವ್ಯಾಪಾರ ಮಾಡುತ್ತಿದ್ದ ಕುಲವನ್ನು ಪೆರಿಕೆ ಕುಲ ಎನ್ನುವರು. ಇವರ ಆರಾಧ್ಯದೈವ ಮೈಲಾರದೇವ. ೧೨೮೦ರಲ್ಲಿ ಬರೆದಿರುವ ಮಲ್ಲಾರಿ ಚರಿತ್ರೆ ಅಥವಾ ಕರ್ಣ ಕುಲೀನುಲ ಚರಿತ್ರ ಎಂಬ ಕಾವ್ಯದಲ್ಲಿ ಮೈಲಾರ ಸಂಪ್ರದಾಯವನ್ನು ಕುರಿತು ಕೆಲವು ವಿಷಯಗಳನ್ನು ಹೇಳಿದೆ. ಓಘವತಿ ಪರಿಣಯ ಎಂಬ ಮತ್ತೊಂದು ಕಾವ್ಯವು ೧೭೪೫ರಲ್ಲಿ ಬಂದಿದ್ದು, ಅದರ ಕೃತಿಕಾರ ಗೋಡೇ ಸೂರ್ಯ ಪ್ರಕಾಶರಾವ್. ಪೆರಿಕೆ ಕುಲದ ವಂಶ ವರ್ಣನೆಯ ಜೊತೆಗೆ ಮೈಲಾರನ ಪರಂಪರೆಯನ್ನು ತಿಳಿಸುವ ಕಾವ್ಯ. ಮೈಲಾರಮಂತ್ರ ಎಂಬ ಕೃತಿಯಲ್ಲಿ ಮೈಲಾರನ ರೂಪವರ್ಣನೆ, ಅವನನ್ನು ಏಕೆ ಪೂಜಿಸಬೇಕು ಎಂಬ ವಿಷಯ ಮತ್ತು ಅವನ ಹೆಂಡತಿ ಮಾಳವಿ ವಿಚಾರವಿದೆ. ತ್ರಿಶೂಲ, ಡಮರುಕಂ, ಖಡ್ಗ, ಪಾನಪಾತ್ರೆಯಂಥ ಆಯುಧಗಳ ವರ್ಣನೆಯಿದೆ.

> “ನೀಲ ಜೀಮೂತ ವರ್ಣನಂ ಸಕಲ ಮೋಹನ
> ಮಯಂ ತ್ರಿಶೂಲ ಡಮರುಕಂ ಖಡ್ಗಂ ಪಾನ
> ಪಾತ್ರಂ ತ್ರಿಲೋಚನಂ”[೭]

ಎಂದು ಹೇಳಿದೆ. ಶಿಷ್ಟ ಸಾಹಿತ್ಯದಲ್ಲಿ ಸಿಗುವ ಆಕರಗಳಿಗಿಂತ ಭಿನ್ನವಾದ ಮೈಲಾರನ ಕಥೆಗಳು ತೋಂಡಿ ಅಂದರೆ ಜನಪದ ಸಾಹಿತ್ಯದಲ್ಲಿ ದೊರೆಯುತ್ತವೆ. ತೆಲುಗು ಜನಪದ ಕಲೆಗಳಲ್ಲಿ ಒಂದಾದ ಒಗ್ಗುಕಥೆಯಲ್ಲಿ ಬರುವ ಮಲ್ಲಣ್ಣನ ಕಥೆಯು ಈ ರೀತಿಯಲ್ಲಿದೆ.

ಗೊರವರು ವಾಸಿಸುತ್ತಿದ್ದ ಕೊಲ್ಲಾಪುರ ಪಟ್ಟಣವನ್ನು ಆದಿರೆಡ್ಡಿ ಪರಿಪಾಲಿಸುತ್ತಿರುತ್ತಾನೆ. ಆತನ ಪತ್ನಿಯು ನೀಲಮ್ಮ. ತುಂಬ ದಿನಗಳವರೆಗೆ ಆ ದಂಪತಿಗಳಿಗೆ ಮಕ್ಕಳಾಗಲಿಲ್ಲ. ಶಿವ ಕರುಣೆಯಿಂದ ಆರು ಜನ ಗಂಡುಮಕ್ಕಳು ಜನಿಸಿದರು. ಮಕ್ಕಳಾಗದ ಮೊದಲು ದಾನ-ಧರ್ಮಗಳನ್ನು ಮಾಡುತ್ತಿದ್ದ

ನೀಲಮ್ಮ ಮಕ್ಕಳಾದ ನಂತರ ಸ್ವಾರ್ಥಳಾಗುತ್ತ ಬಂದಳು. ಇದರಿಂದ ಕೋಪಗೊಂಡ ಶಿವ ಅವರನ್ನು ಅಷ್ಟ-ಕಷ್ಟಗಳಿಗೆ ಗುರಿ ಮಾಡಿದನು. ಕೊನೆಗೆ ಶಿವನ ಮೊರೆ ಹೋದರು. ಆಗ ಶಿವನು ನನ್ನ ಪ್ರತಿರೂಪ ಅಥವಾ ಅಂಶದ ಒಬ್ಬ ಮಗನನ್ನು ನಿಮಗೆ ಕರುಣಿಸುತ್ತೇನೆ. ಆತನಿಗೆ ಮಲ್ಲಯ್ಯನೆಂದು ಹೆಸರಿಟ್ಟು ಬೆಳೆಸಿರಿ. ಆತನಿಂದ ನಿಮಗೆ ಒಳಿತಾಗುತ್ತದೆಂದು ಹೇಳಿದನು. ಅವರಿಗೆ ಮಗನಾಗಿ ಜನಿಸಿದ ಮಲ್ಲಯ್ಯ ಬೆಳೆದು ದೊಡ್ಡವನಾಗಿ ಪುನಃ ಕೊಲ್ಲಾಪುರ ಪಟ್ಟಣವನ್ನು ಕಟ್ಟಿ ರಾಜ್ಯವನ್ನು ಪರಿಪಾಲನೆ ಮಾಡುತ್ತಿದ್ದನು.

ಪಾರ್ವತಿಯು ಮಲ್ಲಯ್ಯನಿಗೆ ಮದುವೆಯ ಆಸಕ್ತಿ ಬರುವಂತೆ ಮಾಡಲು ಶಂಕರನನ್ನು ಕೋರಿದಾಗ, ಜಂಗಮನ ವೇಷದಲ್ಲಿ ಬಂದ ಶಂಕರನು ಮಲ್ಲಯ್ಯನಿಂದ ಭಿಕ್ಷೆಯನ್ನು ಬೇಡುವನು. ಭಿಕ್ಷೆ ಸ್ವೀಕರಿಸುವಾಗ ಮದುವೆಯಾಗಿದೆಯಾ? ಎಂದು ಪ್ರಶ್ನಿಸುತ್ತಾನೆ. ಆಗಿಲ್ಲವೆಂದು ಹೇಳುತ್ತಾನೆ ಮಲ್ಲಯ್ಯ. ಮದುವೆಯಾಗದವನಿಗೆ ದಾನ ನೀಡುವ ಅರ್ಹತೆಯಿಲ್ಲ. ನೀನು ಮದುವೆಯಾದ ಬಳಿಕ ದಾನ ಸ್ವೀಕರಿಸುತ್ತೇನೆಂದು ಹೇಳಿ ತೆರಳುವನು. ಬೀರಪ್ಪನ ಕಥೆಯಲ್ಲೂ ಬೀರಪ್ಪನಿಗೆ ಮದುವೆ ಮೇಲೆ ಆಸಕ್ತಿ ಇಲ್ಲದಿರುವಾಗ ಶಿವನು ಇದೇ ಮಾದರಿಯಲ್ಲಿಯೇ ಪರೀಕ್ಷಿಸುವುದು ಕನ್ನಡ ಜನಪದ ಡೊಳ್ಳಿನ ಹಾಡುಗಳಲ್ಲಿ ದೊರೆಯುತ್ತದೆ. ಇವು ಒಂದಕ್ಕೊಂದು ಸಾದೃಶ್ಯಗಳಿರುವ ಕಥೆಗಳು. ಮಲ್ಲಯ್ಯ ದೇಶ ದೇಶಗಳನ್ನು ತಿರುಗಿ ದೇವಗಿರಿ ರಾಜನಾದ ಕಟ್ಟಾಲರೆಡ್ಡಿ-ಮಾಸಮ್ಮ ದಂಪತಿಗಳ ಮಗಳಾದ ಪದ್ಮಾಕ್ಷಿಯನ್ನು ಮೆಚ್ಚಿ, ಮದುವೆ ಮಾಡಿಕೊಡಬೇಕೆಂದು ಕೇಳಲು ಬಾಲ್ಯದ ಗೆಳೆಯ ಭೋವಿ ಸಂಗಯ್ಯನನ್ನು ಕಳುಹಿಸುವನು. ಅದಕ್ಕವರು ನಾವು ಕೇಳಿದಷ್ಟು ಧನ(ಹಣ) ನೀಡಿದರೆ ಮಗಳನ್ನು ಕೊಡುತ್ತೇವೆಂದು ಹೇಳುವರು. ಆ ಹಣಕ್ಕಾಗಿ ಮಲ್ಲಯ್ಯ ಸೋದರ ಮಾವಂದಿರ ಹತ್ತಿರ ಹೋದನು. ಅವರು ತಮ್ಮ ಮಗಳನ್ನೇ ಮದುವೆಯಾಗೆಂದು ಕೇಳಿದರು. ನಾನು ಆ ಹುಡುಗಿ(ಪದ್ಮಾಕ್ಷಿ)ಯನ್ನೇ ಮದುವೆಯಾಗುತ್ತೇನೆಂದು ಹೇಳಿದನು. ಇದರಿಂದ ಅವರು ಹಣ ನೀಡಲು ನಿರಾಕರಿಸಿದರು. ಇದರಿಂದ ಕುಪಿತನಾದ ಮಲ್ಲಯ್ಯ ಅವರೊಂದಿಗೆ ಯುದ್ಧ ಮಾಡಿ ಸೋಲಿಸಿ ಹಣವನ್ನೆಲ್ಲ ತಂದು ಪದ್ಮಾಕ್ಷಿಯನ್ನು ಮದುವೆಯಾಗುವನು. ಕೆಲ ಕಥೆಗಳಲ್ಲಿ ಪದ್ಮಾಕ್ಷಿಯನ್ನು ಭವುರಂಭ(ಬ್ರಮರಾಂಬ) ಎಂದು ಕೂಡ ಕರೆದಿರುವರು.

ಮಲ್ಲಯ್ಯ ಸಾಮ್ರಾಜ್ಯವನ್ನು ಸುಕ್ಷೇಮವಾಗಿ ಪರಿಪಾಲಿಸುತ್ತಿರುವಾಗ ಆತನ ಆರು ಜನ ಅತ್ತಿಗೆಯರಿಗೆ ಮತ್ಸರ ಹುಟ್ಟುತ್ತದೆ. ಹಿರಿಯ ಅತ್ತಿಗೆಯು ತನ್ನ ಕೋಣೆಗೆ ಹಾವು ಸೇರಿದೆ ಎಂದು ಕರೆದು, ಆತನ ಮೇಲೆ ಇಲ್ಲದ ಆಪಾದನೆ ಹೊರಿಸುವಳು. ಇದನ್ನು ಭರಿಸಲಾಗದೇ ತನ್ನ ಅಣ್ಣಂದಿರಿಗೆ ಮುಖ ತೋರಿಸಲಾಗದೇ ಆ ನಗರವನ್ನೆ ಬಿಟ್ಟು ಹೊರಟ. ಆಗ ಬಾಲ್ಯಸ್ನೇಹಿತ ಭೋವಿ ಸಂಗಯ್ಯ ಆತನನ್ನು ಬನ್ನಿಮರದ ಪೊಡ್ಡೆಯಲ್ಲೊಂದು ಕಿಂಡಿ ಕೊರೆದು ಅದರಲ್ಲಿ ಅಡಗಿಸಿಟ್ಟನು. ಮಗನನ್ನು

ಕಾಣದೇ ನೀಲಮ್ಮ ರೋಧಿಸುತ್ತಾಳೆ. ಸಂಗಯ್ಯ, ಮಲ್ಲಯ್ಯ ನಿರ್ದೋಷಿ ಎಂದು ವಾಸ್ತವ ಸಂಗತಿಯನ್ನು ಅರುಹಿದನು. ಸತ್ಯಾಸತ್ಯಗಳೇನು ಎಂಬುದು ಗೊತ್ತಾಗುತ್ತದೆ. ಆದರೆ ಆ ವೇಳೆಗಾಗಲೇ ಮಲ್ಲಯ್ಯನಿಗೆ ರಾಜ್ಯಾಧಿಕಾರದ ಮೇಲೆ ವಿರಕ್ತಿ ಮೂಡಿರುತ್ತದೆ. ಹಾಗಾಗಿ ರಾಜ್ಯ ಬಿಟ್ಟು ಅಡವಿಗೆ ಬಂದು ನೆಲೆಸಿದನು. ಸಂಗಯ್ಯನಿಂದ ನೇಗಿಲು ಮಾಡಿಸಿಕೊಂಡು ಅರಣ್ಯದಲ್ಲಿ ಜಮೀನನ್ನು ಉಳುಮೆ ಮಾಡುತ್ತ ಜೀವಿಸುತ್ತಿದ್ದನು. ಒಮ್ಮೆ ಉಳುಮೆ ಮಾಡುವಾಗ ನೇಗಿಲು ಏಳು ಹುತ್ತಗಳ ನಡುವೆ ಹೋಗುತ್ತಿದ್ದಾಗ ನೇಗಿಲಿನ ಕುಳ(ತುದಿ) ಹುತ್ತದ ಬಾಗಿಲಿಗೆ ತಗುಲಿ ಅಲ್ಲಿಂದ ಬಂಗಾರದ ಕುರಿಗಳು, ಬೆಳ್ಳಿಯ ಕುರಿಗಳು ಹೊರ ಬಂದವು. ಅವುಗಳಿಗೆ ಹೆದರಿದ ಮಲ್ಲಯ್ಯನಿಗೆ ಪಾರ್ವತಿಯು ಬಂದು ಹಿಂತಿರುಗಿ ನೋಡದೇ ಮುಂದೆ ಸಾಗೆಂದು ಹೇಳಿದಳು. ಹನ್ನೊಂದು ಪರ್ಲಾಂಗ್ ದೂರ ಹಿಂದೆ ನೋಡದೇ ಹೋಗುತ್ತಿರುವಾಗ ಬಂಗಾರ, ಬೆಳ್ಳಿ ಕುರಿಗಳೊಂದಿಗೆ ಅಸಂಖ್ಯಾತ ಕುರಿಗಳು ಹೊರಬಂದು ಸಾಲುಗಟ್ಟಿ ಹಿಂಬಾಲಿಸುತ್ತಿರುತ್ತವೆ. ಕೊನೆಗೆ ಮಲ್ಲಯ್ಯ ಹಿಂತಿರುಗಿ ನೋಡಲಾಗಿ ಹುತ್ತದಿಂದ ಕುರಿಗಳು ಹೊರಬರುವುದು ನಿಲ್ಲುವುದರ ಜೊತೆಗೆ ಹೊರಬಂದ ಸಾಕಷ್ಟು ಕುರಿಗಳು ಹುತ್ತದೊಳಗೆ ಹೋಗುತ್ತವೆ. ಕೆಲವೇ ಕುರಿಗಳು ಮಾತ್ರ ಉಳಿಯುತ್ತವೆ.

ಮಾತು ತಪ್ಪಿ ಹಿಂದೆ ನೋಡಿದ್ದಕ್ಕಾಗಿ ಪಾರ್ವತಿಯು ಮಲ್ಲಯ್ಯನ ಕಪಾಳಕ್ಕೆ ಹೊಡೆದು ಸಾಕಷ್ಟು ಕುರಿಗಳು ಹುತ್ತದೊಳಗೆ ಹೋದವು. ಇನ್ನು ಮೇಲಾದರೂ ನಾನು ಹೇಳಿದಂತೆ ಕೇಳು. ಈ ಕುರಿಗಳನ್ನು ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ನೋಡಿಕೋ. ಬೈಯಬಾರದು, ಒದೆಯಬಾರದು, ಹೊಡೆಯಬಾರದು, ಮಂದೆಯಲ್ಲಿರುವಾಗ ಪವಿತ್ರವಾಗಿರಬೇಕು. ಸ್ತ್ರೀಯರನ್ನು ಮಂದೆಯೊಳಗೆ ಬಿಡಿಸಿಕೊಳ್ಳಬಾರದು. ಮಂದೆಯಲ್ಲಿ ಯಾವಾಗಲೂ ಒಂದು ನಾಯಿ ಇರಬೇಕು. ಎಂದು ಕುಲಕ್ಕೆ ಸಂಬಂಧಿಸಿದ ನಿಯಮಗಳನ್ನು ತಿಳಿಸಿ, ಆದಿಬಯ್ಯಣ್ಣ ಎಂಬ ಹುಡುಗನನ್ನು ಸೃಷ್ಟಿಸಿ ಸಹಾಯಕನನ್ನಾಗಿ ಮಾಡಿ ಹೋದಳು. ಮಂದೆ (ಹಿಂಡು) ಮೇಯಿಸುವಾಗ ಸ್ತ್ರೀಯರು ಇರಬಾರದಲ್ಲ. ಹಾಗಾಗಿ ಹೆಂಡತಿ ಪದ್ಮಾಕ್ಷಿಯನ್ನು ತಾಯಿಯಿದ್ದ ಕೊಲ್ಲಾಪುರ ಪಟ್ಟಣದಲ್ಲಿ ಬಿಟ್ಟು ಬಂದನು. ಹೀಗೆ ಕುರಿಗಳನ್ನು ಮೇಯಿಸುವಾಗ ಒಬ್ಬ ರಾಕ್ಷಸಿ ಕಾಣಿಸಿದಳು. ಅವಳನ್ನು ಕೊಂದು ಸೆರೆಯಲ್ಲಿದ್ದ ಬ್ರಾಹ್ಮಣ ಕನ್ಯೆಯನ್ನು ರಕ್ಷಿಸಿ ಕರೆತಂದನು. ಆ ರಕ್ಕಸಿ ಸಾಯುವ ಮುನ್ನ ತನ್ನ ಮೃತ ಶರೀರವನ್ನು ತೆಗೆದುಕೊಂಡು ಇಂದಿನಿಂದ ಹುಟ್ಟುವ ಕುರುಬ ಕುಲದ ಕಸುಬಾಗುವ ಕಂಬಳಿ ನೇಯ್ಗೆಗೆ ಬೇಕಾದ ಪರಿಕರಗಳನ್ನು ತಯಾರಿಸಿಕೊಳ್ಳಲು ತಿಳಿಸಿರುತ್ತಾಳೆ. ಸ್ತ್ರೀಯೊಂದಿಗೆ ಮಂದೆ ಕಡೆಗೆ ಬರಬಾರದೆಂದು ಬೈಯಣ್ಣ ಮಲ್ಲಯ್ಯನತ್ತ ಕಲ್ಲ ಬೀಸಿ ಹೊಡೆಯುತ್ತಾನೆ. ಆಗ ಅಲ್ಲಿಗೆ ಬಂದ ಪಾರ್ವತಿ 'ಮಲ್ಲಯ್ಯ ಶಿವನ ಒಂದು ಅಂಶ, ರತ್ನಾಂಗಿ ತನ್ನ ಅಂಶದಿಂದ ಜನಿಸಿದವಳೆಂದು ಹೇಳಿದಳು. ಒಂದು ಬಿಳಿ ಕುರಿಮರಿಯ ಉಣ್ಣೆಯನ್ನು ಕತ್ತರಿಸಿ ಕಂಕಣವನ್ನು ಮಾಡಿ ಅವರಿಬ್ಬರಿಗೂ ಮದುವೆ ಮಾಡಿಸುವಳು.

ಮಲ್ಲಯ್ಯ ರತ್ನಾಂಗಿಯನ್ನು ಕೊಲ್ಲಾಪುರಕ್ಕೆ ಕರೆಬಂದಾಗ ಪದ್ಮಾಕ್ಷಿಯು ಸವತಿಯೆಂದು ಮತ್ಸರ ಪಡದೇ ತಂಗಿಯಂತೆ ಸಖ್ಯದಿಂದ ಕಂಡಳು. ಮಲ್ಲಯ್ಯ ಮಡದಿಯರಿಗಾಗಿ ವಿಹಾರದ ಅಂತಃಪುರಗಳನ್ನು ನಿರ್ಮಿಸುತ್ತಾನೆ. ಕಾಲ ಸರಿದಂತೆ ರತ್ನಾಂಗಿಗೆ ಇನ್ನೂರ ಇಬ್ಬರು ಮಕ್ಕಳು, ಪದ್ಮಾಕ್ಷಿಗೆ ಇನ್ನೂರ ಇಬ್ಬರು ಮಕ್ಕಳಾಗುವರು.

ಪದ್ಮಾಕ್ಷಿಗೆ ಹತ್ತಿಕಂಕಣ ಕಟ್ಟಿ ಮದುವೆಯಾದ್ದರಿಂದ ಆ ಮುಂದಿನ ಸಂತಾನವು 'ಹತ್ತಿಕಂಕಣ' ದವರಾದರು. ಅವರೇ ಗೊಲ್ಲರೆಂದು ಕರೆಯಿಸಿಕೊಳ್ಳುವರು. ರತ್ನಾಂಗಿಯನ್ನು ಉಣ್ಣೆಕಂಕಣ ಕಟ್ಟಿ ಮದುವೆಯಾದುದರಿಂದ ಆಕೆಯ ಮುಂದಿನ ಸಂತಾನ ಉಣ್ಣೆಕಂಕಣದವರಾಗಿ ಕುರುಬರಾದರು. ಮುಂದೆ ಕಾಲಸರಿದಂತೆ ಪದ್ಮಾಕ್ಷಿಯನ್ನು ಬಲಭಾಗದಲ್ಲಿ ರತ್ನಾಂಗಿಯನ್ನು ಎಡಭಾಗದಲ್ಲಿ ಕುಳ್ಳಿರಿಸಿಕೊಂಡು ಮೂವ್ವರು ಶಿಲೆಗಳಾಗಿ ಬದಲಾದರು. ಮಲ್ಲಯ್ಯನ ಸಂತಾನವಾದ ಕುರುಬ ಗೊಲ್ಲರು ಗುಡಿಕಟ್ಟಿ ಅವರನ್ನು ದೇವತೆಗಳಾಗಿ ಇಂದಿಗೂ ಪೂಜಿಸಿಕೊಂಡು ಬರುತ್ತಲಿದ್ದಾರೆ. ಮಲ್ಲಯ್ಯನ ಕಥೆಯು ಅನೇಕ ಪಾಠಬೇಧಗಳಿಂದ, ಹೆಸರುಗಳಿಂದ ಜಾನಪದ ಲಕ್ಷಣಗಳನ್ನು ಒಳಗೊಂಡಿದೆ. ಇದು ಒಂದು ಪಾಠಾಂತರ ಮಾತ್ರವೇ? ಈ ರೀತಿಯಲ್ಲಿ ಮಲ್ಲಯ್ಯನ ಕಥೆಯಿದೆ. ಮುಖ್ಯವಾದ ಸಂಗತಿಯೆಂದರೆ ಮೂರು ಕಾಲಘಟ್ಟಗಳನ್ನು ಈ ಕಥೆಯಲ್ಲಿ ತಂದಿರುವುದು ವಿಶಿಷ್ಟವಾದುದು. ಮೊದಲು ಬುಡಕಟ್ಟು ವೀರನಾಗಿದ್ದವನು ನಂತರ ಪಶುಪಾಲಕನಾಗಿ ಮುಂದೆ ಕೃಷಿಕನಾದ ರೀತಿಯನ್ನು ಹೇಳುವ ಮುಖೇನ ಸಂಸ್ಕೃತಿಯ ವಿಕಾಸದ ಚಹರೆಗಳು ಸಮುದಾಯವನ್ನು ಕಾಲದಿಂದ ಕಾಲಕ್ಕೆ ಹೇಗೆ ವಿಕಾಸಗೊಳ್ಳಿಸುತ್ತ ಬಂದವು ಎಂಬುದನ್ನು ಗ್ರಹಿಸಲು ಸಹಾಯಕವಾಗಿದೆ. ಶಿವನ ಬೆವರಿನ ಒಂದಂಶ ಬೀರಪ್ಪ, ಮತ್ತೊಂದಂಶದಿಂದ ಮಲ್ಲಯ್ಯ ಜನಿಸಿದನೆಂದು ಇಲ್ಲಿನ ಕುರುಬರ ಕಥೆಗಳು ಹೇಳುತ್ತವೆ.

ಈ ಆಕರಗಳಲ್ಲಿ ಇರುವಂತೆಯೇ ಕರ್ನಾಟಕ-ಆಂಧ್ರಪ್ರದೇಶದಲ್ಲಿ ಅದರಲ್ಲಿಯೂ ಚಿತ್ರದುರ್ಗ, ಬಳ್ಳಾರಿ ಮತ್ತು ಅನಂತಪುರಂ ಹಾಗೂ ಕರ್ನೂಲು ಜಿಲ್ಲೆಗಳಲ್ಲಿನ ಗಡಿಭಾಗದಲ್ಲಿ ಬರುವ ಮೈಲಾರನ ಪರಿವಾರವಾದ ಗೊರವರು ಈಗಲೂ ಹೇರಳವಾಗಿ ಕಂಡುಬರುತ್ತಾರೆ. ಈ ಭಾಗದಲ್ಲಿ ಹೆಚ್ಚಾಗಿ ಮೈಲಾರ ಸಂಪ್ರದಾಯವಿದೆ. ಆದರೆ ಇಲ್ಲಿನ ಸಂಪ್ರದಾಯ ವರಂಗಲ್ಲು ಜಿಲ್ಲೆಯ ಪ್ರಾಚೀನಾಂಧ್ರ ಸಂಪ್ರದಾಯದಂತಿರದೇ ಕರ್ನಾಟಕ ಸಂಪ್ರದಾಯದ ಪ್ರತಿಬಿಂಬದಂತಿದೆ. ಕರ್ನೂಲು ಮತ್ತು ಅನಂತಪುರಂ ಜಿಲ್ಲೆಗಳಲ್ಲಿರುವ ಭಕ್ತರು ಪೂಜಿಸುವ ಮೈಲಾರ ಮೂರ್ತಿಗಳಲ್ಲಿ ಒಂದು ಕರ್ನೂಲು ಜಿಲ್ಲೆಯ ಆಲೂರು ತಾಲೂಕಿನ ನೇರಣಿಕೆಯಲ್ಲಿದೆ. ಇನ್ನೊಂದು ಬಳ್ಳಾರಿ ಜಿಲ್ಲೆಯ ತೆಕ್ಕಲ ಕೋಟೆಯಲ್ಲಿದೆ. ಅದರಂತೆಯೇ ಮುದಿಮಲ್ಲೇಶ್ವರ(ಮೋಕಾ), ಮಲ್ಲೇಶ್ವರ ದೇವಾಲಯ ಬಳ್ಳಾರಿ, ಓರಂಗಲ್ಲುನ ಕಟ್ಟಮಲ್ಲನ್ನ, ನಲ್ಗೊಂಡ ಜಿಲ್ಲೆಯ ಕೋಮಿರೆಲ್ಲಿ ಮಲ್ಲನ್ನ, ಐನವೋಲು ಮಲ್ಲಯ್ಯ, ಗುಂಡಿಗೇನಪಲ್ಲಿ ಮೈಲಾರಲಿಂಗ ದೇವಾಲಯ, ಸೀರ್ಪಿ ಕೊಟ್ಟಾಲು-ಗಂಗಿಮಾಳಮ್ಮನ ದೇವಾಲಯ ಇವುಗಳ ಕುರಿತು ಅವಲೋಕಿಸಲಾಗಿದೆ.

**ಮೀನಗುಂದಿ ಮಲ್ಲಯ್ಯ:** ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಆಲೂರು ತಾಲೂಕು ಹೊಳಗುಂದಿ ಮಂಡಲಕ್ಕೆ ಸೇರಿದ ನೇರಣಿಕೆ ಎಂಬ ಗ್ರಾಮವು ಮಲ್ಲಯ್ಯನ ಪ್ರಾಚೀನ ನೆಲೆಯಾಗಿದೆ. ಅವರ ಹೆಸರಿನಲ್ಲಿಯೇ ಕಂಡುಬರುವ 'ಮಾಳ' ಪದವು ಬಯಲು ಪ್ರದೇಶ ಎಂಬ ಅರ್ಥವನ್ನು ಕೊಡುತ್ತದೆ. ಮಲ್ಲಯ್ಯನ ದೇವಾಲಯವು ನೇರಣಿಕೆ ಗ್ರಾಮದಲ್ಲಿದೆ. ಇನ್ನೊಂದು ಹೊರನೆಲೆಯು ಮೀನಗೊಂದಿಯ ಗುಡ್ಡದ ತುದಿಯಲ್ಲಿದೆ. ಆದ್ದರಿಂದ ಅವನಿಗೆ ಮೀನಗುಂದಿ ಮಲ್ಲಯ್ಯ ಎಂಬ ಹೆಸರೂ ಉಂಟು. ಇಂದು ಮೀನುಗುಂದಿ ಊರು ಇಲ್ಲ. ಅದರ ಅವಶೇಷಗಳು ಗುಡ್ಡದ ಕೆಳಗೆ ಅನತಿ ದೂರದಲ್ಲಿ ಕಂಡುಬರುತ್ತವೆ. ಇದು ಪ್ರಾಚೀನ ಮೈಲಾರನ ನೆಲೆಯಾಗಿದೆ. ಇಲ್ಲಿರುವ ದೇವರನ್ನು ಕೂರ್ಮಾವತಾರದ ಉದ್ಭವ ಲಿಂಗವೆಂದು ಪೂಜಾರಿಗಳು ಹೇಳುವರು.

ಈ ದೇವಸ್ಥಾನದ ಒಡೆಯರಾದ ಶ್ರೀ ಮಲ್ಲಪ್ಪ ಅವರಿಗೆ ಬ್ರಿಟೀಷ್ ಸರಕಾರವು ಈ ದೇವರ ಸಮಸ್ತ ಸಂಪ್ರದಾಯ ಆಚರಣೆಗಳನ್ನು ಯಥಾವತ್ತಾಗಿ ನಡೆಸಿಕೊಂಡು ಹೋಗಲು ಅಧಿಕಾರವನ್ನು ನೀಡಿರುತ್ತದೆ. ಅವರ ಹತ್ತಿರ ಇರುವ ದಾಖಲೆಯ ಪ್ರಕಾರ ಶ್ರೀಮದ್ ಕಪಿಲಮುನಿ ಸಿಂಹಾಸನ, ಆದಿಮೀನಗುಂದಿ ದೇವರಗುಡ್ಡದ ವಾಸಿ ಶ್ರೀ ಮಾರ್ತಾಂಡ ಭೈರವನ ಭಂಡಾರ ಕ್ರಮತಃ- ಶ್ರೀಮದ್ ಕಪಿಲಮುನಿ ವರಪುತ್ರರಾದ ಮಲ್ಲಪ್ಪನವರಿಗೆ ಕೊಟ್ಟುದು. ಬಳ್ಳಾರಿ ಜಿಲ್ಲಾ ಆದವಾನಿ, ಡಿವಿಜನ್ ಕಲೆಕ್ಟರ್ ದಿನಾಂಕ ೧೮೮೮, ಮಾರ್ಚ್ ೮, ನಂಬರ್ ೧೦೨೭ ಎಂದಿದೆ.

**ಆಚರಣೆಗಳು:** ಮೀನಗುಂದಿ ಮಲ್ಲಯ್ಯನ ಕೆಲವು ಆಚರಣೆಗಳಿಗೂ ಮತ್ತು ಹಿರೇಮೈಲಾರ, ದೇವರಗುಡ್ಡದ ಮೈಲಾರನ ಆಚರಣೆಗಳಿಗೂ ಕೆಲವು ವ್ಯತ್ಯಾಸಗಳಿವೆ. ಇಲ್ಲಿ ಹೆಗ್ಗಡೆಯ ದೇವಾಲಯದ ಬದಲಿಗೆ ಗೊರವಲಿಂಗನ ದೇವಾಲಯ ಕಂಡುಬರುತ್ತದೆ. ಆಯುಧವಾಗಿ ಬಡಿಗೆ- ಪಶುಪಾಲಕ ಸಮುದಾಯದ ದೈವವಾದ ಈತನ ಜಾತ್ರೆ ಪ್ರಾಮುಖ್ಯತೆಯನ್ನು ಪಡೆದಿರುವುದು ಕೋಲು ಅಥವಾ ಬಡಿಗೆಯೊಂದಿಗೆ ಹೊಡೆದಾಡುವ ವಿಶಿಷ್ಟ ಆಚರಣೆಯಿಂದ. ರಾತ್ರಿಯಿಂದ ಬೆಳಗಿನವರೆಗೂ ಸಾವಿರಾರು ಭಕ್ತರು ಕೈಯಲ್ಲಿ ಬಡಿಗೆ ಹಿಡಿದು ಹಲಗೆ ತಾಳಕ್ಕೆ ತಕ್ಕಂತೆ ಹೆಜ್ಜೆಹಾಕುತ್ತ ಹೊಡೆದಾಡುವ ಪ್ರಸಂಗ ನಡೆಯುತ್ತದೆ. ಇದನ್ನು ಕುರಿತಂತೆ ಎಂ.ಬಿ. ನೇಗಿನಹಾಳ ಅವರು 'ಮೈಲಾರನು ಮಡದಿ ಮಾಳವ್ವನೊಂದಿಗೆ ಮಣಿ-ಮಲ್ಲಾಸುರರನ್ನು ಕೊಲ್ಲಲು ತನ್ನ ಸೈನ್ಯ ಸಮೇತವಾಗಿ ಹೋಗುತ್ತಾನೆ. ಒಂಭತ್ತು ದಿನ ಕಾಡಿನಲ್ಲಿ ಕಾದು ಕುಳಿತು ಹತ್ತನೆಯ ದಿನ ಮಣಿ-ಮಲ್ಲಾಸುರನನ್ನು ಕೊಂದು, ವಿಜಯೋತ್ಸವ ಆಚರಿಸಿಕೊಂಡು, ದೇವರಗುಡ್ಡಕ್ಕೆ ಬರುತ್ತಾನೆ. ಇಂದು ನಡೆಯುವುದು ಆ ಯುದ್ಧದ ಅಣುಕು ದೃಶ್ಯ ಎಂದಿರುವರು. ಮತ್ತೊಂದು ಅಭಿಪ್ರಾಯದಂತೆ ಈ ಪ್ರದೇಶವು ವಿಜಯನಗರದ ಸಾಮ್ರಾಜ್ಯ ಕಾಲದ ಸೈನಿಕ ನೆಲೆಯಾಗಿದ್ದು, ಇಲ್ಲಿ ಸೈನಿಕ ತರಬೇತಿ ನೀಡಲಾಗುತ್ತಿತ್ತು. ಪ್ರತಿವರ್ಷವೂ ಸೈನಿಕರ ತರಬೇತಿ ಪಡೆದುದನ್ನು ದೇವರ ಎದುರು ಪರೀಕ್ಷಿಸಲಾಗುತ್ತಿತ್ತು. ಅದರ ಸಾಂಕೇತಿಕ ಆಚರಣೆಯಾಗಿ ಪ್ರತಿವರ್ಷ ದಸರೆಯಲ್ಲಿ ಈ ಯುದ್ಧದ ಅಣುಕು ಎಂದು ಹೇಳುವರು.

ಈ ಹೇಳಿಕೆಗಳನ್ನು ಅವಲೋಕಿಸಿದಾಗ ಕಂಡು ಬರುವ ಸಂಗತಿಯೆಂದರೆ ದಸರೆಯು ಐದು ದಿನಗಳಿರುವಂತೆಯೇ ಪೂಜಾರಿಗಳು ಮಲ್ಲಯ್ಯನನ್ನು ಮೆರವಣಿಗೆಯ ಮೂಲಕ ಕರೆತಂದು ಗುಡ್ಡದ ಕೆಳಗಿನ ಸಿಂಹಾಸನ ಮಂಟಪದಲ್ಲಿ ಕುಳ್ಳಿರಿಸುವರು. ಜಾತ್ರೆಯವರೆಗೂ ಪ್ರತಿದಿನ ಹೊನ್ನಾಕೆರೆಯವರೆಗೂ ಸ್ವಾಮಿಯನ್ನು ಮೆರವಣಿಗೆ ಮಾಡುವರು. ವಿಜಯದಶಮಿಯ ದಿನ ದೇವರನ್ನು ಗುಡ್ಡದ ದೇವಾಲಯಕ್ಕೆ ಒಯ್ದು ರಾತ್ರಿ ಬಲ್ಲೂರಿನಿಂದ ಒಡೆಯರು ಸಿದ್ಧಪಡಿಸಿ ತಂದ ಪವಿತ್ರ ಭಂಡಾರದ ಅರ್ಪಣೆಯ ಕಾರ್ಯ ಇರುತ್ತದೆ. ರಾತ್ರಿ ೧೨ ಗಂಟೆಯ ವೇಳೆಗೆ ದೇವರ ಸವಾರಿಯು ರಾಕ್ಷಸ ವಧೆಗೆ ಹೊರಡುತ್ತದೆ. ಆಗ ಮೂರು ಗುಂಪುಗಳಲ್ಲಿ ಮಲ್ಲಯ್ಯನ ಮೂರ್ತಿ, ಮಾಳವ್ವನ ಮೂರ್ತಿ ಮತ್ತು ಪಲ್ಲಕ್ಕಿಯನ್ನು ದೇವಾಲಯದಿಂದ ನೇರಣಿಕೆ ಗ್ರಾಮದ ಕುರುಬರು ಹೊತ್ತು ಹೊರಗೆ ತಂದು ಮೆಟ್ಟಿಲುಗಳನ್ನು ಇಳಿಯುವರು.

ದೇವರ ಮೂರ್ತಿಗಳನ್ನು ಒಂದು ಬುಟ್ಟಿಯಾಕಾರದ ಮಂಟಪದಲ್ಲಿಟ್ಟು, ಅದನ್ನು ಹೊತ್ತು ಕೆಲವರು ನಡೆದರೆ, ಸುತ್ತಲೂ ಅಕ್ಕಪಕ್ಕದ ನೂರಾರು ಜನರು ಕೋಲು ಬಡಿಗೆಗಳನ್ನು ಹಿಡಿದು ದೇವರನ್ನು ರಕ್ಷಿಸಲು ಸನ್ನದ್ಧರಾಗಿ ಬರುತ್ತಾರೆ. "ನೇರಣಿಕೆ, ಕೊತ್ತಪೇಟೆ, ಬಿಳಿಹಾಳ ಗ್ರಾಮಗಳ ಭಕ್ತರು ದೇವರನ್ನು ಹೊತ್ತು ನಡೆದರೆ, ಎಳ್ಳಾರ್ತಿ, ಸುಳಬಾವಿ, ಅರಕೇರಿ, ಆಲೂರು, ಇರುಪಾಪುರ, ಕರಡಿಗುಡ್ಡ ಮುಂತಾದ ಹನ್ನೆರಡು ಊರುಗಳ ನೂರಾರು ಯುವಕರು ದೇವರನ್ನು ವಶಕ್ಕೆ ಪಡೆಯಲು ಪ್ರಯತ್ನಿಸುವರು. ಹೀಗೆ ಪಂಜನ್ನು ಹಿಡಿದು, ಡೊಳ್ಳು ಹಲಗೆಗಳನ್ನು ಬಾರಿಸುತ್ತ ಹೋರಾಡುವುದು ಕಂಡುಬರುತ್ತದೆ. ಎರಡೂ ಬದಿಯಲ್ಲಿ ನಿಂತ ಲಕ್ಷಾಂತರ ಭಕ್ತ ಜನರು ಹೋರಾಟಗಾರರ ಮೇಲೆ ಭಂಡಾರವನ್ನು ಪ್ರೋಕ್ಷಿಸುತ್ತಿರುತ್ತಾರೆ."[೧೭] ಅಲ್ಲಿಂದ ದೇವರು ಪಾದಗಟ್ಟೆಯವರೆಗೆ ಬರುತ್ತದೆ. ಪೂಜೆಯ ನಂತರ ಮುಳ್ಳುಪಡೆಯ ಹತ್ತಿರ ಬರುತ್ತದೆ. ಅಲ್ಲಿ ಕಂಚಾಗಾರರು ಮೀನಖಂಡದಲ್ಲಿ ಮುಳ್ಳು ತೂರಿಸುವ ಪವಾಡ ಮಾಡುತ್ತಾರೆ. ಅದಕ್ಕೆ ಸಂಬಂಧಿಸಿದಂತೆ ಡೊಳ್ಳಿನ ಹಾಡೊಂದು ಸ್ಪಷ್ಟ ಮಾಹಿತಿಯನ್ನು ಒದಗಿಸುತ್ತದೆ.

"ನಡುವು ಬಾಜಾರದೊಳಗೆ ಒಡಿಯೋ ಮಲ್ಲಯ್ಯ
ಕುಣಿಕುಣಿದಾಡದು ಕಂಡೇನು ।
ಹೊನ್ನಾಕೆರೆ ಶೃಂಗಾರವು ನಾ ಕಂಡೆ ಚೆನ್ನಾಗೆ
ಮೀನಗೊಂದಿ ದ್ಯಾವರು ।
ಗಂಡಾ ಕೂಡಿ ಮಂಡೆ ಬೋಳಪರಾಗಿ
ಗುಂಡಿಗಾಯದ ಕಂಡೇನು ।
ದೊಡ್ಡಮಟ್ಟಿ ಗುಟ್ಟಿ ಗುಂಡಿನ ಕೆಳಗೆ
ಬಿಗೆದೆ ಬಿಲ್ಲಾನೆ ಹೂಡ್ಯಾರು ।

ಬಿಗಿದೆ ಬಿಲ್ಲಾನೆ ಹೂಡಿ ಮಲ್ಲಯ್ಯ
ಪಾದಗಟ್ಟಿಗೆ ಹೋದಾನು ।
ಪಾದಗಟ್ಟಿಗೆ ಹೋಗಿ ಮಲ್ಲಯ್ಯ
ಅಲ್ಲೊಂದು ಪವಾಡ ಮಾಡ್ಯಾನು ।
ಅಲ್ಲೊಂದು ಪವಾಡ ಮಾಡಿ ಮಲ್ಲಯ್ಯ
ರಾಕ್ಷಸ ಪಡಿಗೆ ಹೋದಾನು ।
ಅಲ್ಲೊಂದು ಪವಾಡ ಮಾಡಿ ಮಲ್ಲಯ್ಯ
ಬನ್ನಿಕಟ್ಟಿಗೆ ಹೋಗಿ ಕುಂತಾನು ।"[೭]

ರಕ್ಕಸಪಡೆಗೆ ಬಂದ ನಂತರ ಪೂಜಾರಿ ಮೂರು ಹನಿ ರಕ್ತವನ್ನು ನೀಡುತ್ತಾರೆ. ಇದರಿಂದ ಕಲ್ಲು-ಮುಳ್ಳುಗಳ ರಸ್ತೆಯಲ್ಲಿ ನಡೆದರೂ, ಓಡಿದರೂ ಯಾವುದೇ ಗಾಯಗಳಾಗುವುದಿಲ್ಲ ಎಂಬ ನಂಬುಗೆ. ಬೆಳಗಿನ ಜಾವ ಹೊಡೆದಾಟ ಮುಗಿದ ನಂತರ ಕಾರ್ಣೀಕ ನಡೆಯುತ್ತದೆ. ಮುಂದಿನ ದಿನಗಳಲ್ಲಿ ಮಲ್ಲಯ್ಯನ ರಥೋತ್ಸವ, ಗೊರವರ ದೋಣಿ ಸೇವೆ, ಬಸವಿಯರ ನೃತ್ಯ ಸೇವೆ, ಸರಪಣಿ ಪವಾಡಗಳಂಥ ಕಾರ್ಯಕ್ರಮಗಳು ನಡೆಯುತ್ತವೆ.

ಈ ಜಾತ್ರೆಗೆ ಕರ್ನೂಲು, ಅನಂತಪುರಂ, ಬಳ್ಳಾರಿ, ಕೊಪ್ಪಳ ಸೇರಿದಂತೆ ಲಕ್ಷಾಂತರ ಭಕ್ತರು ಜಾತಿಭೇದವಿಲ್ಲದೆ ಸೇರುವರು. ಒಡೆಯರು, ಗೊರವರು, ಗಣಾಚಾರಿಗಳು, ಕುದುರೆಕಾರರು, ವಗ್ಗರು, ಕಂಚಾವೀರರು, ಬಸವೇರು, ಜೀರರು, ಬ್ರಾಹ್ಮಣರು ಈ ದೈವದ ಆಚರಣೆಯಲ್ಲಿ ಪಾಲ್ಗೊಂಡು ಸೇವೆ ಮಾಡುವ ಸೇವಾಗಾರರು.

**ಹರವಿನ ಮಲ್ಲಯ್ಯ:** ಸಿರುಗುಪ್ಪ ತಾಲೂಕಿನ ತೆಕ್ಕಲಕೋಟೆಯ ಬೆಟ್ಟದಲ್ಲಿ ಮಲ್ಲಯ್ಯನ ದೇವಾಲಯವಿದೆ. ಇಲ್ಲಿ ದೊರೆತ ಶಾಸನಗಳು ಈ ದೇವಾಲಯ ೧೧ನೆಯ ಶತಮಾನದಿಂದಲೂ ಅಸ್ತಿತ್ವದಲ್ಲಿರುವುದನ್ನು ತಿಳಿಸುತ್ತವೆ. ಕ್ರಿ.ಶ. ೧೦೧೭ರಲ್ಲಿನ ಕಲ್ಯಾಣದ ಚಾಲುಕ್ಯ ಅರಸ ಜಗದೇಕಮಲ್ಲನ ಮಹಾಮಂಡಲೇಶ್ವರ ಇರುವ ನೊಳಂಬನು ನೊಳಬಂವಾಡಿ ೩೨ ಸಾವಿರವನ್ನು ಆಳುತ್ತಿರುವಾಗ, "ಬಲಕುಂದೆ ಮುನ್ನೂರರೊಳಗಿನ ಹಗರೆಯ ತಡಿಯ ಸಿರಿಯನೂರನ್ನು ಶ್ರೀಮತ್ ಮೈಲಾರದೇವರಿಗೆ ಕೊಟ್ಟಿದ್ದಾನೆ."[೮] ಅದರಂತೆಯೇ "ಕ್ರಿ.ಶ. ೧೫೩೯ರಲ್ಲಿ ವಿಜಯನಗರದ ಅರಸ ಅಚ್ಚುತರಾಯನಿಗೆ ಪುಣ್ಯವಾಗಲೆಂದು ಪಯಜರ್ಯೆಯನು ಹರವಿನ ದೇವರಿಗೆ ನೈವೇದ್ಯಕ್ಕೆ ಬಿಡಾರ ಸಹಿತ ಕೆಲವು ದಾನಗಳನ್ನು ನೀಡಿದ್ದಾನೆ."[೯] ಪ್ರಾಚೀನವಾದ ದೇವಾಲಯದಲ್ಲಿ ಮಲ್ಲಯ್ಯ, ಮಾಳವ್ವ, ಲಕ್ಷ್ಮಿಯ ಶಿಲ್ಪಗಳಿವೆ. ಲಕ್ಷ್ಮಿಯ ಶಿಲ್ಪವು ಕುರುಬತ್ತವ್ವಳದು ಎಂದು ಹೇಳುವರು.

ಪ್ರತಿವರ್ಷ ಶಿವರಾತ್ರಿಯಂದು ತುಂಗಭದ್ರ ನದಿಯಿಂದ ನೀರು ತಂದು ವಿಶೇಷ ಪೂಜೆ ಮಾಡಲಾಗುತ್ತದೆ. ಮೇ ತಿಂಗಳಲ್ಲಿ ಬರುವ ಹುಣ್ಣಿಮೆಯ ದಿನ ಜಾತ್ರೆ ನಡೆಯುತ್ತದೆ. ಜಾತ್ರೆಯಲ್ಲಿ

ತೇರನ್ನು ಎಳೆಯಲಾಗುತ್ತದೆ. ಜಾತ್ರೆಗೆ ೯ ದಿನ ಮೊದಲು ಮಲ್ಲಯ್ಯ ಮತ್ತು ಮಾಳವ್ವನಿಗೆ ಕಂಕಣ ಕಟ್ಟುತ್ತಾರೆ. ಹೊಳಗುಂದಿಯಿಂದ ಜನರು ಬಂದು ಕೊಂತಪ್ಪನ ಪೂಜೆ ಮಾಡಿದ ನಂತರ ತೇರನ್ನು ಎಳೆಯಲಾಗುತ್ತದೆ. ಹೊಳಗುಂದಿ ಬೇಡರು ಕುಂಬ ಸೇವೆ ಮಾಡುತ್ತಾರೆ. ಈ ದೇವಾಲಯದ ಅಧಿದೇವತೆ ಗಂಗಮಾಳವ್ವಳನ್ನು ತಮ್ಮ ಮನೆ ಮಗಳೆಂದು ಹೇಳುವರು. ಇಲ್ಲಿನ ಪೂಜಾರಿಗಳು ಲಿಂಗಾಯಿತರು. ಮೀನಗುಂದಿ ಮಲ್ಲಯ್ಯನಿಗೆ ನಡೆದುಕೊಳ್ಳುವ ಭಕ್ತರು ಇಲ್ಲಿಗೆ ಬಂದರೆ ಕೇಡಾಗುತ್ತದೆಂದು ಈ ಭಾಗದಲ್ಲಿನ ಕುರುಬರ ನಂಬುಗೆಯಾಗಿದೆ.

**ಬಲ್ಲೂರು:** ಕರ್ನೂಲು ಜಿಲ್ಲೆಯ ಹೊಳಗುಂದಿ ಮಂಡಲದ ಈ ಗ್ರಾಮದಲ್ಲಿ ಮೀನಗುಂದಿ ಮಲ್ಲಯ್ಯನ ಸಿಂಹಾಸನಕ್ಕೆ ಕಾರಣಕರ್ತರಾದ ಒಡೆಯರು ಇಲ್ಲಿದ್ದಾರೆ. ಮೊದಲು ಕಪ್ಪಲಮನೆ ಸ್ವಾಮಿ ಒಡೆಯರು ಅಲ್ಲಿನ ಸೇವಾ ಕಾರ್ಯಗಳನ್ನು ಮಾಡುತ್ತಿದ್ದರು. ಇಂದು ಶ್ರೀ ಎಂ.ಎಚ್. ಮಲ್ಲಪ್ಪಯ್ಯಸ್ವಾಮಿ ಅವರು ಆ ಕಾರ್ಯಗಳನ್ನು ಮಾಡುವವರು. ಅವರು ನೇರಣಿಕೆಯಲ್ಲಿ ಜಾತ್ರೆ ಪ್ರಾರಂಭವಾಗುವುದಕ್ಕಿಂತ ಐದು ದಿನಗಳ ಮುಂಚಿತವಾಗಿ ಕಂಕಣ ಕಟ್ಟಿಕೊಂಡು, ಕುದುರೆಯ ಮೇಲೆ ಒಬ್ಬಂಟಿಯಾಗಿಯೇ ಮೀನಗುಂದಿ ಗುಡ್ಡಕ್ಕೆ ತೆರಳುತ್ತಾರೆ. ಗುಡ್ಡವನ್ನು ಏರಿ ಹೋಗುವಾಗ ಸಾಕಷ್ಟು ತಿರುವುಗಳಿದ್ದರೂ, ಕುದುರೆ ಎಲ್ಲಿಯೂ ಆಯಾಸಗೊಳ್ಳದೇ ಹತ್ತುವುದು ಇಂದಿಗೂ ಸೋಜಿಗದ ಸಂಗತಿಯೆಂದು ಸ್ಥಳೀಯರು ಹೇಳುವರು. ಅಲ್ಲಿನ ಸರಪಣಿ ಪವಾಡ ನಡೆಸಿಕೊಡುವ ಕಂಚಾಬೀರ ತಾಳೂರು ಗ್ರಾಮದ ತಿಪ್ಪಣ್ಣ ಎಂಬ ಹೆಸರಿನ ಗೊರವ. ಇಂದು ಮೂರು ಹನಿ ರಕ್ತ ನೀಡುತ್ತಿರುವ ಆಚರಣೆಯ ಹಿಂದೆ ಪ್ರತಿವರ್ಷವೂ ಒಬ್ಬರಂತೆ ಬಲಿ ಕೊಡುವ ಪದ್ಧತಿ ಇತ್ತು. ಕಾಲಾಂತರದಲ್ಲಿ ಬಲಿಯ ಬದಲಿಯಾಗಿ ಈ ಪದ್ಧತಿ ಬೆಳೆದುಬಂದಿದೆ. ಇಲ್ಲಿನ ಮಲ್ಲಯ್ಯನ ಆಚರಣೆಗಳನ್ನು ಒಡೆಯರು ಹೇಳಿದಂತೆ ಗೊರವ, ವಗ್ಗರು ನಡೆಸಿಕೊಡುವರು.

**ಕೋಟೆ ಮಲ್ಲಯ್ಯ:** ಬಳ್ಳಾರಿ ಕೋಟೆಯ ಪೂರ್ವದ ಮುಖ್ಯ ಪ್ರವೇಶದ್ವಾರದ ಒಳಗೆ, ಬಲಬದಿಗೆ ಅನತಿ ದೂರದಲ್ಲಿ ಕಂಡುಬರುತ್ತದೆ. ದೇವಾಲಯದ ವಿನ್ಯಾಸವನ್ನು ಗಮನಿಸಿದಾಗ ಇದು ವಿಜಯನಗರ ಕಾಲದ ರಚನೆಯೆಂಬುದು ಸ್ಪಷ್ಟವಾಗುತ್ತದೆ. "ದೇವಾಲಯದ ಗೋಡೆಯ ಮೇಲಿರುವ ಮುಖ ಮಂಟಪ, ಬಿತ್ತಿಗಳು ತೆಕ್ಕಲಕೋಟೆಯಲ್ಲಿರುವ ವಿಜಯನಗರ ಕಾಲದ ಮಲ್ಲಯ್ಯನ ದೇವಾಲಯದ ರಚನೆಗಳನ್ನು ಹೋಲುತ್ತದೆ."[೧೦] ಪ್ರಸ್ತುತ ಈಶ್ವರ ದೇವಾಲಯವಾಗಿ ರೂಪು ತಳೆದಿರುವ ಇಲ್ಲಿನ ಅನೇಕ ಆಚರಣೆಗಳು ಹೀಗಿವೆ. ಭಾನುವಾರ ಮಲ್ಲಯ್ಯನ ವಾರವಾಗಿದ್ದು, ಅಂದು ವಿಶೇಷ ಪೂಜೆಗಳು ನಡೆಯುತ್ತವೆ. ಭಾರತ ಹುಣ್ಣಿಮೆಯ ದಿನದಂದು ರಥೋತ್ಸವ ಜರುಗುತ್ತದೆ. ಇಲ್ಲಿಗೆ ಕುರುಬರಲ್ಲದೇ ಲಿಂಗಾಯಿತರು, ಶೆಟ್ಟರು, ಬಣಜಿಗರಾದಿಯಾಗಿ ಸಾಕಷ್ಟು ಸಮುದಾಯಗಳವರು ನಡೆದುಕೊಳ್ಳುವರು. ದೇವಾಲಯಕ್ಕೆ ಸಂಬಂಧಿಸಿದಂತೆ ಸಾಕಷ್ಟು ಗೊಂದಲಗಳಿವೆ. ಅವುಗಳನ್ನು ಪಕ್ಕಕ್ಕಿಟ್ಟು ಕೇವಲ ಕುರುಬ ಸಮುದಾಯದ ಧಾರ್ಮಿಕ ಹಿನ್ನೆಲೆಯಲ್ಲಿ ಗಮನಿಸಿದಾಗ ಬಳ್ಳಾರಿಯ

ಸುತ್ತಮುತ್ತಲ ಗ್ರಾಮಗಳಲ್ಲಿನ ಸಮುದಾಯದ ಪಡಗುಗಳವರು ಈತನನ್ನು ಮನೆದೇವರಾಗಿ ಆರಾಧಿಸುವುದು ಕಂಡುಬರುತ್ತದೆ.

**ರುದ್ರಂಪಲ್ಲಿ:** ಅನಂತಪುರಂ ಜಿಲ್ಲೆಯ ಕಲ್ಯಾಣದುರ್ಗಂ ಮಂಡಲದಲ್ಲಿನ ಈ ಗ್ರಾಮದಲ್ಲಿ ಮೈಲಾರನ ಪ್ರಾಚೀನ ದೇವಾಲಯವಿದೆ. ಪ್ರತಿವಾರ, ದಸರದಲ್ಲಿ ವಿಶೇಷ ಪೂಜೆಗಳು, ಗೊರವರ ಪಟ್ಟ ಕಟ್ಟುವ ಆಚರಣೆಗಳು ನಡೆಯುತ್ತವೆ. ಈ ದೇವಾಲಯಕ್ಕೆ ನಡೆದುಕೊಳ್ಳುವ ಗೊರವರು ಓಬುಳಾಪುರ, ಕೋನಾಪುರಂ, ಕಪಟನಿಂಗಂಪಲ್ಲಿಯನ್ನೊಳಗೊಂಡಂತೆ ಚಳ್ಳಕೆರೆ ತಾಲೂಕಿನಲ್ಲಿಯೂ ಕಂಡುಬರುತ್ತಾರೆ. ಇಲ್ಲಿನ ದೋಣಿಸೇವೆ, ಗೊರವರ ಪಟ್ಟಗಳಂಥ ಕಾರ್ಯಗಳನ್ನು ಮಾಡುವವರು ಚನ್ನಮಲ್ಲಪ್ಪ ಎಂಬ ಪ್ರಧಾನ ಗೊರವರು.

**ಟಿ.ಎನ್. ಹೊಸಕೋಟೆ:** ಚಳ್ಳಕೆರೆ ತಾಲೂಕಿನ ಪರಶುರಾಮಪುರ ಹೋಬಳಿಯ ಈ ಗ್ರಾಮದಲ್ಲಿ ಮೈಲಾರಲಿಂಗೇಶ್ವರನ ಪುರಾತನ ಪರಂಪರೆಯಿದೆ. ಇಲ್ಲಿ ಪ್ರತಿ ವರ್ಷವು ಮೈಲಾರಲಿಂಗೇಶ್ವರನ ಕೆಂಡೋತ್ಸವ ಮತ್ತು ದೋಣಿಸೇವೆಯು ನಡೆಯುತ್ತದೆ. ಗುದ್ದಲಿ ಪೂಜೆಯೊಂದಿಗೆ ಪ್ರಾರಂಭವಾಗುವ ಈ ಜಾತ್ರೆಯು ಸಂಪ್ರದಾಯಬದ್ಧವಾಗಿ ನಡೆಯುತ್ತದೆ. ಗುದ್ದಲಿ ಪೂಜೆಯಿಂದ ಆರಂಭಗೊಳ್ಳುವ ಈ ಉತ್ಸವ ಮರು ದಿನದಲ್ಲಿ ದೇವರಿಗೆ ಕಂಕಣ ಕಟ್ಟುತ್ತಾರೆ. ಅನಂತರದಲ್ಲಿ ವೇದಾವತಿ ನದಿಗೆ ನಡೆ-ಮುಡಿಯೊಂದಿಗೆ ವಾಧ್ಯಗಳ ಸಮೇತ ಉತ್ಸವ ಮೂರ್ತಿಯನ್ನು ಗಂಗಾಸ್ನಾನಕ್ಕೆ ಕರೆದೊಯ್ಯಲಾಗುತ್ತದೆ. ಗಂಗೆ ಸ್ನಾನ ಮಾಡಿದ ನಂತರ ಮೆರವಣಿಗೆಯ ಮೂಲಕ ಪಟ್ಟಕ್ಕೆ ಕೂರಿಸುತ್ತಾರೆ. ಅಂದು ಸಾಯಂಕಾಲ ಗ್ರಾಮದಲ್ಲಿನ ಭಕ್ತರು ಮನೆಗಳಿಂದ ಅಗ್ಗಿಷ್ಟಿಕೆಯನ್ನು ಜೋಡಿಸುವರು. ರಾತ್ರಿ ಅಗ್ನಿ ಸ್ಪರ್ಶ ಮಾಡಿದ ನಂತರ 'ಮಣೇವು' ಇಡುವ ಆಚರಣೆಯು ನಡೆಯುತ್ತದೆ.

ಮರುದಿನ ಬೆಳಿಗ್ಗೆ ಗ್ರಾಮದ ದೈವಗಳಿಗೆ ಪೂಜೆ ಸಲ್ಲಿಸಿ, ದರ್ಶನ ಪಡೆದು ಬಂದ ನಂತರ ಕೆಂಡಾರ್ಚನೆಯ ಸ್ಥಳದಲ್ಲಿ ಕಾರ್ಣಿಕೋತ್ಸವ ನಡೆಯುತ್ತದೆ. ಪಟ್ಟದ ಗೊರವ ಈ ಕಾರ್ಣಿಕ ನುಡಿಯುವನು. ಅದಾದ ಮೇಲೆ ಕೆಂಡೋತ್ಸವ ಕಾರ್ಯಕ್ರಮ ಅಂದರೆ ಕೆಂಡದಲ್ಲಿ ನಡೆಯುವುದು. ಹರಕೆ ಕಟ್ಟಿಕೊಂಡ ಭಕ್ತರು ದೇವರ ಹಿಂದೆ ಕೊಂಡದಲ್ಲಿ ಸಾಗುವುದರಿಂದ ತಮ್ಮ ಕಷ್ಟಗಳು ಕಳೆದು ಒಳಿತಾಗುತ್ತದೆಂಬ ನಂಬುಗೆ ಈ ಭಾಗದಲ್ಲಿದೆ. ಆ ನಂತರ ಗೊರವರ ಕುಣಿತದೊಂದಿಗೆ ದೋಣಿ ಸೇವೆಯು ನಡೆಯುತ್ತದೆ. ಈ ಭಾಗದಲ್ಲಿನ ಮಳೆ-ಬೆಳೆ, ಅತಿವೃಷ್ಟಿ-ಅನಾವೃಷ್ಟಿಗಳೆರಡೂ ಇಲ್ಲಿನ ಕಾರ್ಣಿಕವನ್ನು ನೋಡಿ ನಿರ್ಧರಿಸುವರೆಂದು ಗೊರವರು ಹೇಳುವರು.

**ಗುಂಡಿಗೇನಪಲ್ಲಿ:** ಬ್ರಹ್ಮಸಮುದ್ರಂ ಮಂಡಲದ ಈ ಗ್ರಾಮದಲ್ಲಿ ಮೈಲಾರನ ಒಕ್ಕಲಾದ ರಾಯಲ ಕುರುಬರು ಅಧಿಕವಾಗಿದ್ದಾರೆ. ಪ್ರಸ್ತುತ ಹಳೆಯ ಗುಡಿಯನ್ನು ಕೆಡವಿ ಹೊಸದಾಗಿ ಕಟ್ಟಲಾಗಿದೆ. ವರ್ಷಕೊಮ್ಮೆ ಯುಗಾದಿಯ ನಂತರ ಜಾತ್ರೆ ಮಾಡುತ್ತಾರೆ. ಅಂದು ಗೊರವರ ಪಟ್ಟ ಕಟ್ಟುವ ಕಾರ್ಯಕ್ರಮ, ದೋಣಿಸೇವೆಯಂಥ ಕಾರ್ಯಕ್ರಮಗಳು ನಡೆಯುತ್ತವೆ. ಇಲ್ಲಿಗೆ ಸಮೀಪದಲ್ಲಿನ

ಗುರುಮನೆಯಾದ ಸೀರ್ಪಿಯು ಕುರುಬ ಸಮುದಾಯ ವಾಸಿಸುತ್ತಿದ್ದ ಪ್ರಾಚೀನ ಗ್ರಾಮ. ಇಲ್ಲಿ ಕುರುಬರ ಹೆಣ್ಣುಮಗಳು ವೀರ ಸಿದ್ಧಮ್ಮ ಎಂಬಾಕೆ ಕಟ್ಟಿಸಿದ ಕೆರೆಯಿದೆ. ಕೆರೆ ಏರಿಯ ಮೇಲೆ ವೀರಮಾಳಮ್ಮನ ಗುಡಿಯಿದ್ದು, ಅದು ಬಿದ್ದು ಹೋಗಿದೆ. ಶಿಲ್ಪವನ್ನು ಮಾತ್ರ ಇಂದು ಕಾಣಬಹುದು. ಈ ಗ್ರಾಮದ ಸುತ್ತಮುತ್ತಲ ಗ್ರಾಮಗಳಲ್ಲಿ ಮೈಲಾರನಿಗೆ ಗೊರವರಿರುವಂತೆ ವೀರಮಾಳಮ್ಮನ ಮುತ್ತು ಕಟ್ಟಿಸಿಕೊಳ್ಳುವ ಪದ್ಧತಿಯಿದೆ. ಈ ಪರಿಸರ ಅಂದರೆ ಕಲ್ಯಾಣದುರ್ಗಂ, ಬ್ರಹ್ಮಸಮುದ್ರಂ, ಬೆಳಗುಪ್ಪ ಮಂಡಲಗಳಲ್ಲಿ ಮಾತ್ರ ಈ ವೀರಮಾಳಮ್ಮನ ಮುತ್ತು ಕಟ್ಟಿಸಿಕೊಳ್ಳುವ ಮಹಿಳೆಯರಿದ್ದಾರೆ. ಕಾಣಬಹುದು. ಉಳಿದ ಭಾಗಗಳಲ್ಲಿ ಸವದತ್ತಿ ಮತ್ತು ಉಚ್ಚಂಗಿ ಎಲ್ಲಮ್ಮ, ಹುಲಿಗೆಮ್ಮನಿಗೆ ಮಾತ್ರ ಮುತ್ತು ಕಟ್ಟಿಸಿಕೊಳ್ಳುವುದು ಕಂಡುಬರುವುದು.

ಆಂಧ್ರಪ್ರದೇಶದ ಕರ್ನೂಲು, ಅನಂತಪುರಂ ಜಿಲ್ಲೆಯಲ್ಲಿನ ಆಚರಣೆಗಳಿಗೂ ಕರ್ನಾಟಕದ ಆಚರಣೆಗಳಲ್ಲಿ ಸಾಮ್ಯತೆಯಿದೆ. ಕಾರ್ಣಿಕ, ಸರಪಣಿ ಪವಾಡ, ದೋಣಿ ಸೇವೆ, ಗೊರವರ ಕುಣಿತ, ಕೆಂಡಾರ್ಚನೆಯಂತಹ ಧಾರ್ಮಿಕಾಚರಣೆಗಳು ಗಡಿ ಪರಿಸರದಲ್ಲಿ ಕಂಡುಬರುವ ಆಚರಣೆಗಳಾಗಿವೆ. ಅವು ಕೆಲ ಭಿನ್ನತೆಗಳನ್ನು, ಹೊಂದಿದ್ದರೂ ಸಾಮ್ಯತೆ ಇರುವುದರಿಂದ ಅವುಗಳನ್ನು ಚರ್ಚಿಸುವ ಬದಲು ಈ ಕೆಳಗೆ ಹೆಸರಿಸಲಾಗಿದೆ.

| **ಗ್ರಾಮ** | **ಮಂಡಲ/ತಾಲೂಕು** |
|---|---|
| ಮೋಕಾ(ಮುದಿ ಮಲ್ಲಯ್ಯ) | ಬಳ್ಳಾರಿ |
| ಕೋನಾಪುರಂ | ಶೆಟ್ಟೂರು |
| ಗೌಡಗೆರೆ | ಚಳ್ಳಕೆರೆ |
| ನೇರ್ಲಗುಂಟೆ | ಚಳ್ಳಕೆರೆ |
| ಹರ್ತಿಕೋಟೆ(ವೀರಮಾಳಪ್ಪ) | ಹಿರಿಯೂರು |
| ಮಧುರೈ(ಕೆಂಚಮಾಳಪ್ಪ) | ಹಿರಿಯೂರು |
| ಕಪಟ ನಿಂಗಂಪಲ್ಲಿ | ಬ್ರಹ್ಮಸಮುದ್ರಂ |
| ಪೋಲೆಪಲ್ಲಿ | ಬ್ರಹ್ಮಸಮುದ್ರಂ |
| ತಿಪ್ಪನಪಲ್ಲಿ | ಬ್ರಹ್ಮಸಮುದ್ರಂ |
| ಮೈಲಾರಪುರಂ | ಉರುವಕೊಂಡ |
| ಮಲಪನ ಗುಡಿ | ಡಿ. ಹಿರೇಹಾಳ |
| ಮಲ್ಲಾಪುರಂ | ರಾಯದುರ್ಗಂ |
| ಗುಮ್ಮಗಟ್ಟ | ಗುಮ್ಮಗಟ್ಟ |

ಮುಂತಾದ ಪ್ರದೇಶಗಳಲ್ಲಿ ಮೈಲಾರನ ಪರಂಪರೆಯಿದೆ. ಈ ಎಲ್ಲ ಹಳ್ಳಿಗಳಲ್ಲಿ ಕೆಲವೆಡೆ ದೇವಾಲಯಗಳು ಇದ್ದು, ಸಂಪ್ರದಾಯ ಆಚರಣೆಗಳು ಶ್ರೀಮಂತವಾಗಿದ್ದರೆ ಮತ್ತು ಕೆಲವು ಕಡೆ ಮೈಲಾರನ ದೇವಾಲಯಗಳಿಲ್ಲ. ಆದರೂ ಮೈಲಾರನ ಭಕ್ತರು, ಗೊರವರು ಹೆಚ್ಚಾಗಿದ್ದಾರೆ. ಅವರು ಹೂವಿನ ಹಡಗಲಿಯ ಮೈಲಾರ, ಹಾವೇರಿ ಜಿಲ್ಲೆಯ ದೇವರಗುಡ್ಡ ಮತ್ತು ಮೀನಗುಂದಿಯ ಮಲ್ಲಯ್ಯರನ್ನು ಮೂಲ ದೈವಗಳೆಂದು ನಂಬಿರುವರು.

ಮೊದಲೇ ಹೇಳಿದಂತೆ ಕರ್ನಾಟಕಾಂಧ್ರ ಗಡಿಯಲ್ಲಿನ ಆಚರಣೆಗಳು ಸಾಮ್ಯತೆಯಿಂದಿದ್ದರೆ, ತೆಲಂಗಾಣ ಪರಿಸರದಲ್ಲಿನ ಮಲ್ಲಯ್ಯನ ಆಚರಣೆಗಳು ಪೂರ್ಣ ಭಿನ್ನವಾಗಿವೆ. ಹಾಗಾಗಿ ಅಲ್ಲಿನ ಕೆಲ ಮಲ್ಲಯ್ಯನ ಮಾಹಿತಿಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಕೊಮುರೆಲ್ಲಿ ಮಲ್ಲನ್ನ:** ನಲ್ಗೊಂಡ ಜಿಲ್ಲೆಯ ಜನಗಾಮ ತಾಲೂಕಿನ ಗ್ರಾಮ ಕೊಮುರೆಲ್ಲಿ. ಇಲ್ಲಿ ನೆಲೆ ನಿಂತ ಮಲ್ಲಯ್ಯನನ್ನು ಕೊಮುರೆಲ್ಲಿ ಮಲ್ಲನ್ನನೆಂದು ಕರೆಯುವರು. ಪದ್ಮಾಕ್ಷಿ, ಮೇಡಾಲಮ್ಮ, ಗೊಲ್ಲಕೇತಮ್ಮರು ಮಲ್ಲಯ್ಯನ ಮೂವ್ವರು ಪತ್ನಿಯರು. ಇವರು ಮೂರು ಕಾಲಘಟ್ಟಗಳಿಗೆ ಅಂದರೆ ಬೇಟೆ, ಪಶುಪಾಲನೆ ಮತ್ತು ಕೃಷಿ ಸಂಸ್ಕೃತಿಗಳಿಗೆ ಸಂಬಂಧಿಸಿದವರೆಂಬಂತೆ ಒಗ್ಗುಕಥೆಗಳು ಹೇಳುತ್ತವೆ. ವರ್ಷಕ್ಕೊಮ್ಮೆ ಇಲ್ಲಿ ಜಾತ್ರೆ ನಡೆಯುತ್ತದೆ. ಈ ಸುತ್ತಮುತ್ತಲ ಪ್ರದೇಶಗಳಲ್ಲಿ ಉತ್ಸವ, ಮದುವೆಯಂಥ ಶುಭಕಾರ್ಯಗಳು ಇರುವಾಗ ಮಲ್ಲಯ್ಯನ ಒಗ್ಗುಕಥೆಯ ಪ್ರದರ್ಶನವನ್ನು ಏರ್ಪಡಿಸುತ್ತಾರೆ. ಅವು ಮಲ್ಲಯ್ಯನ ಜೀವನ ವೃತ್ತಾಂತ, ಸಮುದಾಯಕ್ಕೆ ದೈವವಾಗಿ ದೊರೆತ ಸಂಗತಿಗಳನ್ನು ತಿಳಿಸುತ್ತವೆ.

**ಹೈದರಾಬಾದ್:** ನಗರದ ಮುಸೀರಬಾದ್‌ನ ಸುಲ್ತಾನಬಜಾರ ಕಂದಸ್ವಾಮಿ ಮಾರ್ಕೆಟ್ ಹಿಂಭಾಗದಲ್ಲಿ ಖಂಡೋಬಾ ದೇವಳ ಬೀದಿಯಿದೆ. ಅಲ್ಲಿರುವ ಮರಾಠಿಗರು ಮತ್ತು ಪೆರಿಕೆ ಕುಲದವರು ಈ ದೈವಕ್ಕೆ ನಡೆದುಕೊಳ್ಳುವರು. ದೇವಾಲಯದಲ್ಲಿ ಚಿಕ್ಕ ಲಿಂಗವಿದೆ. ಪಕ್ಕದಲ್ಲಿಯೇ ಆಯುಧದಾರಿ ಯಾದ ಆಶ್ವಿಕ ವೀರನ ವಿಗ್ರಹವಿದೆ. ಅದನ್ನು ಮರಾಠಿಗರು ಖಂಡೋಬಾನೆಂದು, ಪೆರಿಕೆಯವರು ಮಲ್ಹಾರಿ ಎಂದು ಪೂಜಿಸುತ್ತಾರೆ. ಇದನ್ನು ಮಲ್ಲಿಕಾರ್ಜುನ ದೇವಾಲಯವೆಂದು ಕರೆಯುವರು.

**ಐನವೋಲು:** ಓರಂಗಲ್ಲು ಇಂದು ವರಂಗಲ್ಲು ಎಂದು ಕರೆಯಿಸಿಕೊಳ್ಳುವ ಜಿಲ್ಲಾ ಕೇಂದ್ರ. ನಗರಕ್ಕೆ ಹತ್ತು ಮೈಲಿ ದೂರದಲ್ಲಿರುವ ಗ್ರಾಮ ಐನವೋಲು. ಇಲ್ಲಿನ ಮಲ್ಲಯ್ಯನನ್ನು ಕಟ್ಟಮಲ್ಲನ್ನ ಎಂದು ಕರೆಯುವರು. ಇದು ಮಲ್ಲಯ್ಯನ ಪರಂಪರೆ ಜೀವಂತವಾಗಿರುವ ಪ್ರದೇಶಗಳಲ್ಲಿ ಒಂದು. ತೆಲಂಗಾಣದ ಪ್ರಾಚೀನ ಶಿಲಾಮುಖ ದ್ವಾರಗಳಲ್ಲಿ ೧೨ನೆಯ ಶತಮಾನದ ಮೈಲಾರನ ಆಲಯವೂ ಒಂದು. ದೇವಾಲಯದಲ್ಲಿ ಆಶ್ವಿಕ ಉತ್ಸವ ಮೂರ್ತಿಯಿದೆ. ಪಕ್ಕದಲ್ಲಿ ಇಬ್ಬರು ಸ್ತ್ರೀಯರು ಮುಂಭಾಗದಲ್ಲಿ ಎರಡು ನಾಯಿಗಳಿವೆ. ಇಲ್ಲಿನ ಆಚರಣೆ ಉತ್ಸವಗಳಲ್ಲಿ ಗೊಲ್ಲರು ಹೆಚ್ಚಾಗಿ ಪಾಲ್ಗೊಳ್ಳುವರು.

ವರಂಗಲ್ಲು ಪರಿಸರದ ಮಲ್ಲಯ್ಯನ ಸಂಪ್ರದಾಯವನ್ನು 'ಕ್ರೀಡಾಭಿರಾಮಮು' ಕೃತಿಯು ಸವಿಸ್ತಾರವಾಗಿ ಹೇಳುತ್ತದೆ. ಅದರಂತೆ ಈ ದೇವಾಲಯವು ೧೧ನೆಯ ಶತಮಾನದಲ್ಲಿ ನಿರ್ಮಿತವಾದುದು. ಈ ಗ್ರಾಮವು ಕಾಕತೀಯರ ಮಂತ್ರಿಯಾಗಿದ್ದ ಅಯ್ಯನನ ಹೆಸರಿನಲ್ಲಿ ಪ್ರಖ್ಯಾತವಾಗಿತ್ತು. ಈ ದೈವ ಕಾಕತೀಯರ ಆರಾಧ್ಯದೈವವಾಗಿದ್ದನೆಂದು, ರುದ್ರಮ್ಮದೇವಿ, ಪ್ರತಾಪರುದ್ರ ಮುಂತಾದವರು ಯುದ್ಧ ಸಮಾಲೋಚನೆಗಳನ್ನು ಈ ದೇವಾಲಯದಲ್ಲಿಯೇ ಮಾಡುತ್ತಿದ್ದರೆಂದು ಹೇಳುತ್ತಾರೆ. ಇತ್ತೀಚೆಗೆ ತೆಲುಗು ಭಾಷೆಯಲ್ಲಿ ರುದ್ರಮ್ಮದೇವಿ ಎಂಬ ಚಲನಚಿತ್ರವು ತೆರೆಕಂಡಿದೆ. ಇಲ್ಲಿನ ವಿಗ್ರಹ ಆರಡಿ ಎತ್ತರವಿದ್ದು, ಬಲಭಾಗದಲ್ಲಿ ಗೊಲ್ಲಕೇತಮ್ಮ, ಎಡಕ್ಕೆ ಮೇಡಾಲಮ್ಮನ ವಿಗ್ರಹಗಳಿವೆ. ಮೈಲಾರನು ಆಭರಣಧಾರಿಯಾಗಿದ್ದು ಆಯುಧಗಳನ್ನು ಹಿಡಿದಿದ್ದಾನೆ.

ಪ್ರತಿವರ್ಷ ಸಂಕ್ರಾಂತಿಯಿಂದ ಯುಗಾದಿಯವರೆಗೆ ಈ ಭಾಗಗಳಲ್ಲಿ ಉತ್ಸವಗಳು ನಡೆಯುತ್ತವೆ. ತೆಲಂಗಾಣ ಪ್ರದೇಶದಲ್ಲಿ ಕುರುಬರೊಂದಿಗೆ ಕೆಂಪುಗೊಲ್ಲರು, ಮರಾಠಿಗರು, ಪೆರಿಕೆಯವರು ಭಕ್ತರಾದರೆ, ಅಧ್ಯಯನದ ಈ ಪರಿಸರದಲ್ಲಿ ಉಪ್ಪಾರರು, ಕುಂಚಿಟಿಗರು, ಲಿಂಗಾಯಿತರು, ರೆಡ್ಡಿಗಳು, ಬೇಡರು, ನೇಕಾರರು ಮಾದಿಗರಂತಹ ಮುಂತಾದ ಹಿಂದುಳಿದ, ದಲಿತ ಸಮುದಾಯಗಳಿಗೆ ಆರಾಧ್ಯದೈವ ಮಲ್ಲಯ್ಯ.

ಒಟ್ಟಾರೆಯಾಗಿ ಮಲ್ಲಯ್ಯ ಕರ್ನಾಟಕ ಮತ್ತು ಆಂಧ್ರಪ್ರದೇಶದ ಹಿಂದುಳಿದ ಸಮುದಾಯಗಳ ಆರಾಧ್ಯ ದೈವ. ಆತನ ಚರಿತ್ರೆಯು ಕರ್ನಾಟಕದಲ್ಲಿನ ಬೀರಪ್ಪನ ಚರಿತ್ರೆಯ ಪಡಿಯಚ್ಚಿನಂತಿದೆ. ಮೊದಲು ಬೇಟೆಗಾರರ ಅರಸನಾಗಿ, ನಂತರ ಪಶುಪಾಲಕನಾಗಿ ಮುಂದುವರಿದು ಕೃಷಿಕನಾಗಿ ಬೆಳೆದು ಬಂದುದನ್ನು ತಿಳಿಸುತ್ತದೆ. ಅಂದರೆ ಸಂಸ್ಕೃತಿಯ ವಿಕಾಸದ ಮೂರು ಕಾಲಘಟ್ಟಗಳೊಂದಿಗೆ ಸಮೀಕರಿಸಿ ಆತನ ಕಥೆಗಳು ಹೇಳುತ್ತವೆ. ಒಂದೊಂದು ಕಾಲಘಟ್ಟಕ್ಕೆ ಒಬ್ಬೊಬ್ಬರಂತೆ ಮೂರು ಜನ ಪತ್ನಿಯರನ್ನು ಪಡೆದ ಬಗೆ ಮತ್ತು ಆ ಕಥೆಗಳನ್ನು ಸೋದಾಹರಣವಾಗಿ ಒಗ್ಗುಕಥೆಗಳು ಚಿತ್ರಿಸಿವೆ. ಅಲ್ಲಿನ ಡೊಳ್ಳಿನ ಹಾಡುಗಳು, ಆಚರಣೆ, ನಂಬುಗೆಗಳು ಮೂಲ ಪರಂಪರೆಯನ್ನು ಗಟ್ಟಿಗೊಳಿಸುವ ಸಾಧನಗಳಾಗಿವೆ.

### ೪.೧.೩. ರೇವಣಸಿದ್ಧ

ಭಾರತೀಯ ಸಿದ್ಧ ಪರಂಪರೆಯಲ್ಲಿ ರೇವಣಸಿದ್ಧನದು ಪ್ರಮುಖವಾದ ಹೆಸರು. ಕರ್ನಾಟಕದಲ್ಲಿಂದು ರೇವಣಸಿದ್ಧ ಹಾಲುಮತ ಮತ್ತು ಲಿಂಗಾಯಿತ ಸಮುದಾಯಗಳ ಸಾಂಸ್ಕೃತಿಕ ನಾಯಕನೆಂಬಂತೆ ಪ್ರಚಾರದಲ್ಲಿದ್ದಾನೆ. ಈ ಸಮಸ್ಯೆ ನಿರ್ಮಾಣವಾಗಿದುದು ಹೇಗೆ? ಎಂದು? ಎಂಬುದು ಮುಖ್ಯ ಪ್ರಶ್ನೆಯಾಗಿದ್ದು, ಅದನ್ನು ಹೀಗೆ ವಿವರಿಸಬಹುದು. "ಒಬ್ಬ ಮಹಾತ್ಮನ ಹೆಸರು ಮೇಲ್ಜಾತಿ, ಕೆಳಜಾತಿಗಳಲ್ಲಿ ಪರಿಗಣಿತವಾಗಿದ್ದರೆ, ಅದು ಮೂಲತಃ ಕೆಳಜಾತಿಗೆ ಸಂಬಂಧಿಸಿದುದೇ ಆಗಿರುತ್ತದೆ. ಈ ದೃಷ್ಟಿಯಿಂದ ನೋಡಿದರೆ ಇಂದು ವೀರಶೈವ ಜಾತಿಗೆ ಎಳೆಯಲ್ಪಟ್ಟಿದ್ದರೂ ರೇವಣಸಿದ್ಧ

ಮೂಲತಃ ಕುರುಬ ಜಾತಿಯವನಾಗಿರಬೇಕು. ಕುರುಬರ ಜನಪದ ಸಾಹಿತ್ಯ, ದೇವಾಲಯ, ಮಠ, ಆಚರಣೆಗಳು. ಇತ್ತೀಚೆಗೆ ಪ್ರಕಟವಾದ ತಗರ ಪವಾಡ, ತಾಮ್ರ ಪಟಗಳಂಥ ದಾಖಲೆಗಳು ಇವನು ಜಾತಿಯಿಂದ ಕುರುಬನೆಂದು ದೃಢಪಡಿಸಿವೆ."[೨]

ರೇವಣಸಿದ್ಧನ ಕುರಿತಾಗಿರುವ ಶಾಸನಗಳು ಆತನ ಜೀವಿತ ಕಾಲವನ್ನು, ಶಾಂತಮುತ್ತಯ್ಯನಿಗೆ ಗುರುಪಟ್ಟ ಕಟ್ಟಿದ ವಿಷಯ ಕುರುಬ ಕುಲವನ್ನು ಶಿಷ್ಯರನ್ನಾಗಿ ಪಡೆದ ಸಂಗತಿಗಳನ್ನು ಗ್ರಹಿಸಲು ಸಹಾಯಕವಾಗಿವೆ. ಕಕ್ಕೇರಿ ಶಾಸನ–೧೧೨೭, ಸಿರಿವಾಳ ಶಾಸನ–೧೧೭೦, ೧೧೭೮, ಹೋತಗಲ್ಲ ಶಾಸನ–೧೧೭೫, ೧೨೦೮ ಈ ಶಾಸನಗಳು ರೇವಣಸಿದ್ಧನ ಜೀವಿತದ ಉಲ್ಲೇಖ, ವರ್ಣನೆ, ಪವಾಡಗಳು ಮತ್ತು ಈತನ ದೀರ್ಘ ಜೀವಿತ ಕಾಲವನ್ನು ತಿಳಿಸುತ್ತವೆ. 'ಸಾಮಾನ್ಯ ವ್ಯಕ್ತಿಯಾಗಿ ಜನಿಸಿ, ಅಸಾಮಾನ್ಯವಾಗಿ ಬೆಳೆದು ಕುರುಬ ಕುಲವನ್ನು ಶಿಷ್ಯರನ್ನಾಗಿ ಸ್ವೀಕರಿಸಿ, ಅವರಿಗೆ ಸಾಮಾಜಿಕ ಸ್ಥಾನಮಾನ ತಂದುಕೊಟ್ಟನು. ಜೊತೆಗೆ ಶಾಂತಮುತ್ತಯ್ಯನೆಂಬ ಶಿಷ್ಯನಿಗೆ ಗುರುಪಟ್ಟವನ್ನು ಕಟ್ಟಿ ಕುರುಬ ಕುಲಕ್ಕೆ ಗುರುಪರಂಪರೆಯನ್ನು ನೀಡಿ, ಉದ್ಧರಿಸಿದ ಉಲ್ಲೇಖಗಳನ್ನು ಈ ಶಾಸನಗಳು ಚಿತ್ರಿಸಿವೆ.

ಇವುಗಳ ಆಧಾರದ ಮೇಲೆ ಆತನ ಜೀವಿತವನ್ನು ಚಾರಿತ್ರಿಕವಾಗಿ ೧೧ನೆಯ ಶತಮಾನದ ಕೊನೆಯ ದಶಕದಲ್ಲಿ ಹುಟ್ಟಿ, ೧೨ನೆಯ ಶತಮಾನದ ಕೊನೆಯ ದಶಕದವರೆಗೆ ಜೀವಿಸಿದ್ದನೆಂದು ಹೇಳಬಹುದು. ಅಂದರೆ ಬಸವಣ್ಣನಿಗೆ ಹಿರಿಯ ತಲೆಮಾರಿನವನಾಗಿ ಜನಿಸಿ, ಬಸವಣ್ಣ ಸಾಯುವವರೆಗೂ ಬದುಕಿದ ದೀರ್ಘಾಯುಷಿ ಎಂದು ಹೇಳಲಾಗಿದೆ. ಪುರಾಣಗಳು ಅರಿತು ೭೦೦ ವರ್ಷ, ಮರೆತು ೭೦೦ ವರ್ಷ ಬದುಕಿದನೆಂದು ಹೇಳುತ್ತವೆ. ಹಾಗಾಗಿಯೇ ಸಾಕಷ್ಟು ಪವಾಡಗಳು ಆತನ ಜೀವಿತದಲ್ಲಿ ಬೆರೆತು ಹೋಗಲು ಕಾರಣವಾಗಿವೆ.

ಈ ಚರ್ಚೆಯನ್ನು ಒತ್ತಟಿಗಿಟ್ಟು ಆತನ ಪಂಥ, ಚರಿತ್ರೆಯನ್ನು ತಿಳಿಯುವ ಪ್ರಾಚೀನತಮ ಆಕರಗಳೆಂದರೆ ಹರಿಹರನ ರೇವಣಸಿದ್ಧೇಶ್ವರ ರಗಳೆ, ರಾಘವಾಂಕನ ಸಿದ್ಧರಾಮ ಚಾರಿತ್ರ. "ಹರಿಹರನ ರಗಳೆಯಲ್ಲಿ 'ಸಿದ್ಧಸಮಯ ಚಕೋರ ಚಂದ್ರಿಕಾಯ ಮಾನ, ಸಿದ್ಧ ಕುಲ ಜಾತಕ ಸುಧಾಪುರುಷ' ಎಂಬ ವಿಶೇಷಣಗಳು ಈತನದು ವೀರಶೈವ ಸಂಪ್ರದಾಯವಲ್ಲ. ಸಿದ್ಧಸಂಪ್ರದಾಯವೆಂದು ಖಚಿತ ಪಡಿಸುತ್ತವೆ."[೩]

ನಿರುಪಮ ಸಿದ್ಧ ಪ್ರತಿಮಸಿದ್ಧನ ಚಿಂತಿತ ಸಿದ್ಧನುತ್ತಮಾ
ವರಣಶರೀರ ಸಿದ್ಧಪತಿ ಕಾರಣಸಿದ್ಧನಶೇಷಮಂ ಸಮು
ದ್ಧರಿಸುವ ಸಿದ್ಧನಾತ್ಮನಿಜ ಸಿದ್ಧನನೂನ ಪರಾಕ್ಷರೈಕ ವಿ
ಸ್ತರತರಸಿದ್ಧ ನೊಪ್ಪಿದ ನಿಳಾತಳದೊಳ್ ಸಲೆ ಸಿದ್ಧರೇವಣಂ ॥

ಎಂಬ ಪದ್ಯವಂತೂ ಈತ ಸಿದ್ಧ ಸಂಪ್ರದಾಯದವನೆಂದು ಇನ್ನೂ ಸ್ಪಷ್ಟಪಡಿಸುತ್ತದೆ. ಈ ಸಂಪ್ರದಾಯದ ಹೆಸರು 'ನಾಥಸಂಪ್ರದಾಯ' ಇದರ ಹಠಯೋಗಿ ಪ್ರದೀಪಿಕೆಯಲ್ಲಿ ರೇವಣನಾಥ ಎಂಬ ಹೆಸರು ಕಂಡುಬರುವುದು. ರಾಘವಾಂಕನ ಸಿದ್ಧರಾಮ ಚಾರಿತ್ರ್ಯ, ಸಿದ್ಧರಾಮನ ಶಾಸನಗಳು ಇದೇ ಸಂಪ್ರದಾಯದ ಸಿದ್ಧನಾಥನೆಂದು ಕರೆದುದೂ, ಸಿದ್ಧರಾಮ ನಿರ್ಮಿಸಿದ ಕಪಿಲಸಿದ್ಧ ಮಲ್ಲಿಕಾರ್ಜುನ ದೇವಾಲಯದ ಆವರಣಕ್ಕೆ ಇಟ್ಟ ಯೋಗ ರಮಣೀಯ ಕ್ಷೇತ್ರವೆಂಬುದು ನಾಥ ಸಂಪ್ರದಾಯ ದವನೆಂಬುದನ್ನು ಬೆಂಬಲಿಸುತ್ತದೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ 'ಪೂರ್ವದ ನಾಥಸಿದ್ಧರ ಮತೋಕ್ತವೆಂದು ಕಾಪಾಲಿಕಾಚರಣೆಯನ್ನಾಚರಿಸುವವರಲ್ಲ ನಮ್ಮ ಶರಣರು' ಎಂದು ಅಲ್ಲಮನು ಸೂಚಿಸುವುದು ಬಹುಶಃ ರೇವಣಸಿದ್ಧನು ಸಿದ್ಧಪಂಥದವನಲ್ಲ. ಅದಕ್ಕೂ ಹಿಂದಿನ ಉಗ್ರ ಆಚರಣೆಯ ಸಿದ್ಧ ಪಂಥದವನು ಎಂದು ತೋರುತ್ತದೆ ಎಂಬುದಾಗಿ ಎಂ.ಎಂ. ಕಲಬುರ್ಗಿ ಅವರು ಚರ್ಚಿಸಿದ್ದಾರೆ. ಈ ಚರ್ಚೆಯು ರೇವಣಸಿದ್ಧ ಮೂಲತಃ ಸಿದ್ಧ ಸಂಪ್ರದಾಯ ಅಪ್ಪಿಕೊಂಡ ಕುರುಬ ಸಮುದಾಯಕ್ಕೆ ಸೇರಿದವನೆಂದು ಗ್ರಹಿಸಲು ಮುಖ್ಯವಾಗುತ್ತದೆ.

ಸಿದ್ಧಮಂಕ ಚರಿತ್ರೆ, ತಗರ ಪವಾಡ ಕೃತಿಗಳು ಆತನ ಚರಿತ್ರೆಯ ಜೊತೆಗೆ ಕುರುಬ ಕುಲದ ಕುಲಗುರುವಾಗಿ ಮಾಡಿದ ಪವಾಡಗಳನ್ನು ಸೋದಾರಣವಾಗಿ ಚಿತ್ರಿಸಿವೆ. ಅದರಂತೆಯೇ ಮೌಖಿಕ ಸಾಹಿತ್ಯ ಆಕರಗಳಾದ ಜನಪದ ಹಾಲುಮತ ಮಹಾಕಾವ್ಯ, ಮಾಳಿಂಗರಾಯನ ಕಾವ್ಯ, ಡೊಳ್ಳಿನ ಹಾಡುಗಳು, ಗೊರವರ ಹಾಡುಗಳಲ್ಲಿ ರೇವಣಸಿದ್ಧನ ನೈಜ ಜೀವನ ಕಟ್ಟಿಕೊಡುವಲ್ಲಿ ಪ್ರಮುಖ ಪಾತ್ರ ವಹಿಸಿವೆ. ಹಾಗಾಗಿಯೇ ಜನಪದವು ಜನಸಾಮಾನ್ಯರ ದೇಸಿ ಸಾಹಿತ್ಯವೆಂದು ಅದು ವ್ಯಕ್ತಿಯ ವಾಸ್ತವ ಬದುಕನ್ನು ಕಟ್ಟಿಕೊಡುವ ಪ್ರಮುಖ ಆಕರಗಳೆಂದು ಹೇಳುವುದು.

'ಸ್ವಾಮಿ ನಮ್ಮಯ್ಯ ದೇವರು ಬಂದಾವೊ ಬನ್ನಿರೋ ಗುರುವೆ ರೇವಣಸಿದ್ಧರ ಶರಣೆಂಬೆವೋ' ಎಂದು ಆಯಾ ಪ್ರದೇಶಗಳಲ್ಲಿ ತಮ್ಮ ಕುಲದೈವಗಳ ಜೊತೆಗೆ ಗುರುವನ್ನು ನೆನೆಯುವುದು ಮತ್ತು ಆತನ ಚರಿತ್ರೆಯನ್ನು ಹಾಡಿನ ರೂಪದಲ್ಲಿ ಸ್ಮರಿಸುವುದು ಕಂಡುಬರುತ್ತದೆ. ಈ ಡೊಳ್ಳಿನ ಹಾಡುಗಳಲ್ಲಿ ಕುರುಬ ಕುಲವನ್ನು ಶಿಷ್ಯರನ್ನಾಗಿ ಪಡೆದ ವಿಷಯವನ್ನು ತಿಳಿಸುವ ಒಂದು ಉದಾಹರಣೆಯನ್ನು ನೋಡುವುದಾದರೆ

> ಅಬ್ಬಿದ ಜಡಿಯೊಳಗೆ ಗುಬ್ಬಿಗೂಡನಿಕ್ಕಿ
> ಗಬ್ಬದ ಗೌಜ ನಲುನಲುದು । ಅಡ್ಯಾವಲ್ಲೆ
> ದೊಡ್ಡೊರು ರೇವಣ್ಣೋರು ಜಡಿಯೊಳಗೆ

ರೇವಣಸಿದ್ಧರ ಈ ದೀರ್ಘ ತಪಸ್ಸನ್ನು ಪ್ರತ್ಯಕ್ಷರಾದ ಶಿವ-ನಾರಾಯಣರು ಏನು ಬೇಕೆಂದು ಕೇಳಿದರು. ಅದಕ್ಕೆ ರೇವಣಸಿದ್ಧ ಕುರುಬರನ್ನು ನನಗೆ ಶಿಷ್ಯರಾಗಿ ಕೊಟ್ಟರೆ ತಪಸ್ಸು ನಿಲ್ಲಿಸುತ್ತೇನೆಂದು ಹೇಳುತ್ತಾನೆ. ಅದಕ್ಕೆ ಶಿವ-ನಾರಾಯಣರು ಅವರನ್ನು ಏಕೆ ಪಡೆಯುತ್ತಿ ಜಿಡ್ಡಿನ ಜನರೆಂದು

ಹೇಳಿದರೂ ಕೇಳದೇ ಶಿಷ್ಯರನ್ನಾಗಿ ಪಡೆದನು. ಹೀಗೆ ಪ್ರೀತಿಯಿಂದ ತಮ್ಮನ್ನು ಅಪ್ಪಿಕೊಂಡಿದ್ದರಿಂದ ಗುರು ರೇವಣಸಿದ್ಧನನ್ನು ಸ್ಮರಿಸಿಯೇ ಡೊಳ್ಳಿನ ಹಾಡುಗಳನ್ನು ಪ್ರಾರಂಭಿಸುತ್ತಾರೆ. ಆ ಲೀಲೆಯ ಹಾಡುಗಳು ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ಪಠ್ಯಗಳಲ್ಲಿ ಭಿನ್ನವಾಗಿದ್ದರೂ ವಸ್ತುವಿಷಯ ಒಂದೇ ಆಗಿರುತ್ತದೆ. ಜನಪದ ಸಾಹಿತ್ಯದಲ್ಲಿ ಕೈಲಾಸದಿಂದ ಪ್ರಾರಂಭವಾಗುವ ರೇವಣಸಿದ್ಧನ ಜೀವಿತವು ಅಲ್ಲಿಂದ ಭೂಲೋಕಕ್ಕೆ ವರ್ಗಾಯಿಸಲ್ಪಡುತ್ತದೆ. ಸಾಮಾನ್ಯನಾಗಿದ್ದ ರೇವಣ ಅಸಾಮಾನ್ಯನಾಗಿ ಬೆಳೆದು ಪವಾಡಗಳನ್ನು ಮೆರೆದು, ಕುರುಬ ಕುಲವನ್ನು ಶಿಷ್ಯರನ್ನಾಗಿ ಪಡೆದು, ಅವರು ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೋತ್ಸಾಹಿಸುವವರೆಗೆ ಬೆಳೆಯುತ್ತಾ ಸಾಗುತ್ತದೆ.

ಶಿಷ್ಯರನ್ನು ತನ್ನ ನಂತರವೂ ಸನ್ಮಾರ್ಗದಲ್ಲಿ ನಡೆಯುವಂತೆ ದಾರಿ ತೋರಿಸಲೆಂಬ ಉದ್ದೇಶದಿಂದ ಶಾಂತಮುತ್ತಯ್ಯನೆಂಬಾತನಿಗೆ ಗುರು ಪಟ್ಟ ಕಟ್ಟಿ ವಂಶಪಾರಂಪರ್ಯವಾಗಿ ಗುರು ಪರಂಪರೆ ಬೆಳೆದು ಬರಲು ಕಾರಣನಾಗಿದ್ದಾನೆ. ಹೀಗಾಗಿ ಕುರುಬ ಕುಲವು ಸಾಮಾಜಿಕ ಮತ್ತು ಧಾರ್ಮಿಕವಾಗಿ ಸಂಸ್ಕಾರದಿಂದ ಬದುಕು ರೂಪಿಸಿಕೊಳ್ಳಲು ಸಾಧ್ಯವಾಯಿತು ಎಂದರೆ ಅತಿಶಯವಲ್ಲ. ಏಕೆಂದರೆ ಹಿಂದುಳಿದ ಸಮುದಾಯಗಳಲ್ಲಿ ಇಷ್ಟು ಪ್ರಾಚೀನವಾದ ಗುರು ಪರಂಪರೆಯನ್ನು ಹೊಂದಿರುವ ಕುಲಗಳು ದೊರೆಯುವುದಿಲ್ಲ. ಕುರುಬರಿಗೆ ಮಾತ್ರವೇ ಪ್ರಾಚೀನ ಮೂರು ಗುರು ಪರಂಪರೆಗಳಿವೆ. ಈ ಪರಂಪರೆಯ ಒಡೆಯರನ್ನು 'ಶಾಂತೊಡೆಯರು' ಎಂದು ಸಿದ್ಧರಾಮನ ಅನುಯಾಯಿಗಳನ್ನು 'ಮಂಕೊಡೆಯರೆಂದು', ಅಮೋಘಸಿದ್ಧ ಪರಂಪರೆಯವರನ್ನು 'ಅಮೋಗಿ ಒಡೆಯರು' ಎಂದು ಕರೆಯುವರು. ಅಂದಿನಿಂದಲೂ ಹಾಲುಮತ ಸಮುದಾಯದಲ್ಲಿ ರೇವಣಸಿದ್ಧನ ಹೆಸರಿನ ಮಠಗಳಿದ್ದು, ಶಾಂತೊಡೆಯರು ಪೂಜಾರಿಗಳಾಗಿ ಕುರುಬ ಕುಲಕ್ಕೆ ಗುರು ಒಡೆಯರಾಗಿ ಸನ್ಮಾರ್ಗದಲ್ಲಿ ನಡೆಸಿಕೊಂಡು ಬಂದಿದ್ದಾರೆ; ಬರುತ್ತಲಿದ್ದಾರೆ.

ರೇವಣಸಿದ್ಧ ಸರವೂರ ಶಾಂತಮುತ್ತಯ್ಯನಿಗೆ ಕುರುಬ ಕುಲದ ಗುರುಪಟ್ಟ ಕಟ್ಟಿದ್ದರಿಂದಾಗಿ ಈ ಪ್ರದೇಶವನ್ನು ರೇವಣಸಿದ್ಧನ ಕಾರ್ಯಕ್ಷೇತ್ರ ಎಂಬುದಾಗಿ ಕರೆಯಬಹುದು. ಆದರೆ ಈ ಪ್ರದೇಶದಲ್ಲಿಯೇ ಇಂದು ಆ ಮಠಗಳ ಸಂಖ್ಯೆ ಕಡಿಮೆಯಿದೆ. ಅದಕ್ಕೆ ಕಾರಣ ೧೨ನೆಯ ಶತಮಾನದ ಶಿವ ಶರಣ ಸಂಸ್ಕೃತಿಯ ಪ್ರಭಾವ ಅಲ್ಲಿ ನೆಲೆಸಿದ್ದ ಕುರುಬರ ಮೇಲೆ ದಟ್ಟವಾಗಿದೆ. ಹಾಗಾಗಿಯೇ ಕುರುಬ-ಲಿಂಗಾಯಿತರ ಸಂಪ್ರದಾಯ ಮತ್ತು ಆಚರಣೆಗಳು ಉತ್ತರ ಕರ್ನಾಟಕ ಪ್ರದೇಶದಲ್ಲಿ ಹೆಚ್ಚು ಸಾಮ್ಯತೆಯನ್ನು ಹೊಂದಿವೆ. "ರೇವಣಸಿದ್ಧ ಶರಣ ಸಂಸ್ಕೃತಿಗಿಂತಲೂ ಮೊದಲಿನವನಾಗಿದ್ದು, ಕಲ್ಯಾಣಕ್ಕೆ ಬಂದು ಬಸವಾದಿ ಪ್ರಮಥರೊಂದಿಗೆ ವೈಚಾರಿಕ ಕ್ರಾಂತಿಯಲ್ಲಿ ಭಾಗವಹಿಸಿದರೂ ಅದರ ಪ್ರಭಾವಕ್ಕೆ ಒಳಗಾಗದೇ ಹೋದ. ನಂತರದಲ್ಲಿ ಬಂದ ಸಿದ್ಧರಾಮ ಶಿವಯೋಗಿಯಾದ. ಹಾಗಾಗಿ ಉತ್ತರ ಕರ್ನಾಟಕದಲ್ಲಿ ಸಿದ್ಧರಾಮನ ಮಠಗಳು ಹೆಚ್ಚಾಗಿವೆ. ರೇವಣಸಿದ್ಧನ ಮಠಗಳು ಕಡಿಮೆಯಿವೆ ಎಂದು ಎಂ.ಎಂ. ಕಲಬುರ್ಗಿ ಅವರು ಚರ್ಚಿಸಿದ್ದಾರೆ."[೧೪] ಇದಕ್ಕೆ ನಿದರ್ಶನವೆಂಬಂತೆ

ಇಲ್ಲಿರುವ ಹಾಲುಮತ ಮತ್ತು ಲಿಂಗಾಯತ ಸಮುದಾಯಗಳ ಊಟೋಪಚಾರ, ಆಚಾರ-ವಿಚಾರ, ಸಾಮಾಜಿಕ, ಧಾರ್ಮಿಕ ಆಚರಣೆಗಳು ಸಾಮ್ಯತೆಯಿಂದ ಕೂಡಿರುವುದನ್ನು ಗಮನಿಸಬಹುದು.

ಶರಣ ಸಂಸ್ಕೃತಿಯ ರಾಜಕೀಯ, ಧಾರ್ಮಿಕ ಚಳುವಳಿಯ ಪ್ರಭಾವದಿಂದ ತಮ್ಮ ಅನನ್ಯತೆಯನ್ನು ಉಳಿಸಿಕೊಳ್ಳುವ ಸಲುವಾಗಿ ಈ ಸಮುದಾಯದ ಕೆಲವರು ಮಧ್ಯಕರ್ನಾಟಕದ ಕಡೆ ಚದುರಿ ಬಂದರು. ಮೂಲತಃ ಪಶುಪಾಲಕರಾದ ಇವರು ಅಲೆಮಾರಿಗಳಾಗಿದ್ದು, ಸಮೃದ್ಧವಾದ ಭೂಮಿ, ನಿಯಮಿತ ಮಳೆ ಬೀಳುವ ಪ್ರದೇಶವಾದ ಈ ಭಾಗಕ್ಕೆ ಮೇವು-ನೀರು ಹರಸಿ ವಲಸೆ ಬಂದು ನೆಲೆನಿಂತರು. ಮುಂದೆ ಪಶುಪಾಲನೆ ಅದರಲ್ಲಿಯೂ ಕುರಿಸಾಕಣೆಯ ಮೇಲಿನ ಅವಲಂಬನೆ ಕಡಿಮೆಯಾಗಿ ಕೃಷಿ, ಕಂಬಳಿ ನೇಯ್ಗೆ ಬೆಳೆದಂತೆಲ್ಲ ಇಲ್ಲಿಯೇ ನೆಲೆಸಿವೆ. ಈ ಕಾರಣಗಳಿಂದಾಗಿಯೇ ಮಧ್ಯಕರ್ನಾಟಕದ ಚಿತ್ರದುರ್ಗ, ಬಳ್ಳಾರಿ, ತುಮಕೂರು ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯ ರೇವಣಸಿದ್ಧನ ಮಠಗಳನ್ನು ಕಾಣಬಹುದು. ಅದರಂತೆಯೇ ಈ ಜಿಲ್ಲೆಗಳೊಂದಿಗೆ ಗಡಿ ಹಂಚಿಕೊಂಡಿರುವ ಆಂಧ್ರಪ್ರದೇಶದ ಅನಂತಪುರಂ ಜಿಲ್ಲೆಯಲ್ಲಿ ಅಧಿಕವಾಗಿಯೂ ಹಾಗೂ ಕರ್ನೂಲು ಜಿಲ್ಲೆಯ ಚಿಂತಕುಂಟದಲ್ಲಿ ಮಾತ್ರ ಒಂದು ಮಠವಿದೆ.

ಈ ಅಧ್ಯಯನವು ಕರ್ನಾಟಕ-ಆಂಧ್ರಪ್ರದೇಶದ ಗಡಿನಾಡಿನಲ್ಲಿ ವಾಸಿಸುವ ಕುರುಬ ಸಮುದಾಯದ ಸಾಂಸ್ಕೃತಿಕ ಚಹರೆಯನ್ನು ಗುರುತಿಸುವುದು. ಅದರಲ್ಲಿಯೂ ವೇದಾವತಿ-ತುಂಗಭದ್ರ ನದಿಗಳ ಮಧ್ಯದಲ್ಲಿ ಬರುವ ಬಯಲುಸೀಮೆಯ ರೇವಣಸಿದ್ಧನ ಗುರುಪರಂಪರೆಯು ಮಾತ್ರ ಕಂಡುಬರುತ್ತದೆ. ಸಿದ್ಧರಾಮ ಮತ್ತು ಅಮೋಘಸಿದ್ಧನ ಪರಂಪರೆ ಇಲ್ಲ. ಭಾಷಾವಾರು ಪ್ರಾಂತ್ಯಗಳಾಗಿ ವಿಭಜನೆಯಾಗುವ ಪೂರ್ವದಲ್ಲಿ ಕರ್ನಾಟಕದ ಪ್ರದೇಶಗಳಾಗಿದ್ದ ಆದೋನಿ, ರಾಯದುರ್ಗಂ, ಕಲ್ಯಾಣದುರ್ಗಂ, ಮಡಕಶಿರಾ ಪ್ರದೇಶಗಳಲ್ಲಿ ಈ ಮಠಗಳು ಕಂಡುಬರುತ್ತವೆ. ಇಲ್ಲಿ ನೆಲೆಸಿರುವ ಕುರುಬರ ಸಮುದಾಯದ ಮನೆ ಮಾತು ಕನ್ನಡ. ಜೊತೆಗೆ ಸಂಪ್ರದಾಯ-ಆಚರಣೆಗಳು ಸಾಮ್ಯತೆಯಿಂದ ಕೂಡಿವೆ. ಅದಕ್ಕೊಂದು ಉದಾಹರಣೆಯನ್ನು ನೋಡುವುದಾದರೆ,

> ಕಲಿ ಕಲಿಯಾಗಿ
> ಕರ್ಯಜ್ಜನಾಗಿ
> ಭೀಮಣ್ಣನಾಗಿ
> ಬಿಲ್ಲರಾಜ್ಯವನ್ನಾಳಿ
> ಗುರು ರೇವಣಸಿದ್ಧ ಕಟ್ಟಿದ
> ಸೇಸೆ ಸ್ಥಿರವಾಗಲಿ
> ಸರೂರು ಶಾಂತಮುತ್ತಯ್ಯ

ಕಟ್ಟಿದ ಕಲ್ಯಾಣ ಸ್ಥಿರವಾಗಲಿ
ಸೋಬತಿ ಸೋಬಾನ
ಸೋಬತಿ ಸೋಬಾನ

ಎಂದು ಮದುವೆಯ ಸಮಯದಲ್ಲಿ ಗುರು ಒಡೆಯರು ವಧುವರರಿಗೆ ಹೇಳಬೇಕು. ಅದರಂತೆಯೇ ಆಂಧ್ರಪ್ರದೇಶದಲ್ಲಿನ ಒಡೆಯರು ಹೇಳುವುದು ಈ ರೀತಿಯಲ್ಲಿವೆ.

ಆಕಾಶ ಆಲೋನೆ
ಭೂಮೀನ ಬಗದೋನೆ
ಬಾರಪ್ಪ ಮದಲಿಂಗ
ಬಲಗಾಲು ಮುಂದಿಟ್ಟು
ಬಲಕೇನು ಕಂಡೆ
ಬ್ರಹ್ಮದೇವನ ಕಂಡೆ
ಎಡಕೇನು ಕಂಡೆ
ಏಳಡಿ ಸರ್ಪವ ಕಂಡೆ
ಮತ್ತೇನು ಕಂಡೆ
ಮುತ್ತೈ(ತ್ತಿ)ನ ಹಾರವ ಕಂಡೆ
ಸರೂರು ಶಾಂತಮುತ್ತಯ್ಯ ಕಟ್ಟಿದ(ನ)
ಕಲ್ಯಾಣ ಜಯ ಜಯ(೦)
ಸೀರ್ಪಿಯ ರೇವಣಸಿದ್ಧ ಕಟ್ಟಿದ(ನ)
ಕಲ್ಯಾಣ ಜಯ ಜಯ[೧೫]

ಈ ಎರಡು ಪದ್ಯಗಳಲ್ಲಿ ಸರೂರು ಶಾಂತಮುತ್ತಯ್ಯ ಮತ್ತು ಗುರು ರೇವಣಸಿದ್ಧೇಶ್ವರರ ಆಶೀರ್ವಾದ ಬಲ ಬೇಕೆಂಬುದು ಸಾಮಾನ್ಯ ಸಂಗತಿಯಾಗಿದೆ. ಯಾವುದೇ ಪ್ರದೇಶದಲ್ಲಿಯಾದರೂ ಮೊದಲು ಬರುವ ಪಥ್ಯಗಳು ಭಿನ್ನವಾಗಿದ್ದರೂ ಶಾಂತಮುತ್ತಯ್ಯ ಮತ್ತು ರೇವಣಸಿದ್ಧ ಕಟ್ಟಿದ ಕಲ್ಯಾಣ ಎಂಬುದು ಎಲ್ಲಾ ಕಡೆಯೂ ಬರುವುದಾಗಿದೆ. ಹಾಗಾಗಿ ಈ ಮಠಗಳು ನಾಡಿನ ಯಾವುದೇ ಭಾಗದಲ್ಲಿದ್ದರೂ ಅವೆಲ್ಲ ಸರೂರು(ಸರವೂರು)ಗೆ ಸಂಬಂಧಿಸಿದವೆಂದು ಪುಷ್ಟೀಕರಿಸುತ್ತವೆ. ಪ್ರಸ್ತುತ ಕರ್ನಾಟಕ–ಆಂಧ್ರಪ್ರದೇಶದ ಗಡಿಭಾಗದಲ್ಲಿರುವ ರೇವಣಸಿದ್ಧೇಶ್ವರ ಮಠಗಳ ಇತಿಹಾಸ, ಪರಂಪರೆ, ಶಿಷ್ಯರ ಹಳ್ಳಿಗಳು, ಸಮುದಾಯಕ್ಕೆ ಒಡೆಯರು ಮಾಡುವ ಸಾಮಾಜಿಕ ಮತ್ತು ಧಾರ್ಮಿಕ ಸೇವೆ ಹಾಗೂ ರೇವಣಸಿದ್ಧನ ಜಾತ್ರೆ–ಉತ್ಸವಗಳನ್ನು ಕೂಲಂಕಷವಾಗಿ ಚರ್ಚೆಗೆ ಒಳಪಡಿಸಲಾಗಿದೆ.

**ಹರ್ತಿಕೋಟೆ:** ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲೂಕಿನಲ್ಲಿರುವ ಈ ಗ್ರಾಮ, ರಾಷ್ಟ್ರೀಯ ಹೆದ್ದಾರಿ ೬೩ರಲ್ಲಿನ ಚಳ್ಳಕೆರೆ–ಹಿರಿಯೂರಿನ ಮಾರ್ಗದ ಮಧ್ಯದಲ್ಲಿದೆ. ಒಟ್ಟು ೭೩೪ ಕುಟುಂಬಗಳನ್ನು ಹೊಂದಿರುವ ಈ ಗ್ರಾಮದಲ್ಲಿ ಕುರುಬ ಸಮುದಾಯದ ಸುಮಾರು ೨೫೦ಕ್ಕೂ ಹೆಚ್ಚು ಕುಟುಂಬಗಳು ನೆಲೆಸಿವೆ. ಗೊಲ್ಲ, ನಾಯಕ, ಕುರುಬರಂಥ ಪಶುಪಾಲಕ ಸಮುದಾಯಗಳ ಚಾರಿತ್ರಿಕ ಚಹರೆಗಳನ್ನು ತನ್ನ ಒಡಲಲ್ಲಿಟ್ಟುಕೊಂಡಿರುವ ಈ ಗ್ರಾಮದಲ್ಲಿ ಪ್ರಾಚೀನವಾದ ರೇವಣಸಿದ್ಧನ ದೇವಾಲಯವಿದೆ. ಅದರ ಪೀಠಾಧ್ಯಕ್ಷರು ಶ್ರೀ ಕೆ.ಎಸ್. ಶಿವಪ್ಪಯ್ಯ ಒಡೆಯರು. ನಾಗಯ್ಯ ಒಡೆಯರನ್ನು ಅರ್ಚಕರನ್ನಾಗಿ ನೇಮಿಸಲಾಗಿದೆ. ಹರ್ತಿಕೋಟೆ ಮತ್ತು ಕಣಜನಹಳ್ಳಿಯಲ್ಲಿರುವ ಒಡೆಯರು ಅಣ್ಣ–ತಮ್ಮಂದಿರು ಹಾಗಾಗಿ ವರ್ಷಕ್ಕೊಬ್ಬರಂತೆ ಪೂಜಾ ಕಾರ್ಯಗಳನ್ನು ಮಾಡುವರೆಂದು ಹೇಳುವರು.

ದಕ್ಷಿಣಾಭಿಮುಖವಾಗಿರುವ ಈ ದೇವಾಲಯದ ಗರ್ಭಗೃಹದಲ್ಲಿ ಕಪ್ಪುಶಿಲೆಯ ಲಿಂಗೋದ್ಭವದ ಮೇಲೆ ರೇವಣಸಿದ್ಧನ ಮೂರ್ತಿಯನ್ನು ಇಡಲಾಗಿದೆ. ಹಾಗೆಯೇ ಗದ್ದುಗೆಯ ಮೇಲಿರುವ ರೇವಣಸಿದ್ಧನ ಬೆಳ್ಳಿ ಪ್ರತಿಮೆಯನ್ನು ಛತ್ರ–ಚಾಮರಗಳಿಂದ ಅಲಂಕರಿಸಲಾಗಿದೆ. ಗರ್ಭಗೃಹದ ಮೇಲೆ ಪಿರಮಿಡ್ಡಿನಾಕಾರದ ಶಿಖರವಿದ್ದು, ಗೋಪುರಕ್ಕೆ ಲೋಹದ ಕಳಸವನ್ನು ಇಡಲಾಗಿದೆ. ಮರದ ನಾಲ್ಕು ಚಚ್ಚೌಕಾಕಾರದ ಕಂಬಗಳಿಂದ ಕೂಡಿದ ನವರಂಗ, ತೆರೆದ ಸಭಾಮಂಟಪವಿದೆ. "ಈ ದೇವಾಲಯವನ್ನು ೧೯೩೨ರಲ್ಲಿ ಕಟ್ಟಿರುವರೆಂದು ಬಿ.ಜಿ. ಬಿರಾದಾರ ಅವರು ಹೇಳಿರುವರು."[೧೬]

ದಿನಕ್ಕೆರಡು ಸಲ ಪೂಜೆ, ಸೋಮವಾರ ವಾರದ ಪೂಜೆ, ಹುಣ್ಣಿಮೆ–ಅಮಾವಾಸ್ಯೆಗೆ ವಿಶೇಷ ಪೂಜೆಗಳು ನಡೆಯುತ್ತವೆ. ದಸರದಲ್ಲಿ ರೇವಣಸಿದ್ಧನ ಪಾಲಕಿಯೊಂದಿಗೆ ಕೆಂಚಲಿಂಗೇಶ್ವರ, ಬೀರಪ್ಪ, ವೀರಮಾಳಪ್ಪ ದೈವಗಳು ಜೊತೆಗೂಡಿ ಬನ್ನಿ ಮುಡಿದು ನಂತರ ಮೆರವಣಿಗೆಯೊಂದಿಗೆ ಗ್ರಾಮಕ್ಕೆ ಮರಳುತ್ತವೆ. ಅಲ್ಲಿ ಮುಡಿಪು ಕಟ್ಟುವ, ಹರಕೆ ತೀರಿಸುವಂತಹ ವಿಶೇಷ ಪೂಜಾ ಕಾರ್ಯಕ್ರಮಗಳು ಒಂಬತ್ತು ದಿನಗಳವರೆಗೂ ಜರುಗುತ್ತವೆ. ಶಿವರಾತ್ರಿಯಲ್ಲಿ ರೇವಣಸಿದ್ಧೇಶ್ವರ ಸಾಂಗತ್ಯವನ್ನು ವಾಚನ ಮಾಡಲಾಗುತ್ತದೆ.

ಹರ್ತಿಕೋಟೆ ಶ್ರೀ ರೇವಣಸಿದ್ಧೇಶ್ವರ ಟ್ರಸ್ಟ್, ಉಣ್ಣೆ ರಗ್ಗು ಉತ್ಪಾದನಾ ಕೇಂದ್ರ, ಕುರಿ ಸಾಕಾಣಿಕೆ ಸಹಕಾರ ಸಂಘ, ಉಣ್ಣೆ ಕೈಮಗ್ಗದ ನೇಕಾರರ ಉತ್ಪಾದನಾ ಮತ್ತು ಮಾರಾಟಗಾರರ ಸಂಘಗಳ ಸಹಾಯದಿಂದ ಮಠವು ಸಮುದಾಯದ ಅಭಿವೃದ್ಧಿಗೆ ಸಹಕಾರಿಯಾಗುವ ಕೆಲಸಗಳನ್ನು ಮಾಡುತ್ತಿದೆ. ಯರಬಳ್ಳಿ, ಅಳುಮಗೆ, ಕೊಟ್ಟಿಗೆ, ಚನ್ನಮ್ಮನಹಳ್ಳಿ, ನಾಗಜ್ಜನ ಕೊಟ್ಟಿಗೆ, ಸಿದ್ಧಯ್ಯನಕೋಟೆ, ಸಂಗೇನಹಳ್ಳಿ, ಹೊಸಹಳ್ಳಿ, ಕಣಜನಹಳ್ಳಿ, ಬುರುಡುಕುಂಟೆ, ಬೇತೂರು, ಪರಶುರಾಮ ದೇವರಕೋಟೆ, ಮದ್ದಿಹಳ್ಳಿ, ಅರಿಯಜ್ಜೆ, ಸಕ್ರ, ಪಿ.ಕೆ. ಗುಡ್ಡ, ಕಿಲ್ಲಳ್ಳಿಯನ್ನು ಒಳಗೊಂಡಂತೆ ೩೦ಕ್ಕೂ ಅಧಿಕ ಹಳ್ಳಿಗಳು ಈ ಮಠದ ವ್ಯಾಪ್ತಿಗೆ ಬರುತ್ತವೆ. ಇಲ್ಲಿನ ಎಲ್ಲಾ ಪೂಜಾರಿ ನೇಮಕ (ಪಟ್ಟದ ಪೂಜಾರಿ, ಹೂಮಾಲೆ ಪೂಜಾರಿ), ಗಂಗೆ ಪೂಜೆ, ಬೀರಪ್ಪನ ಪರಿವಾರವಾದ ಈರಗಾರರ ಪಟ್ಟ, ದಳವಾಯಿ ಪಟ್ಟ,

ಜೋಗಿ ಪಟ್ಟ, ಗೌಡ ಮತ್ತು ಯಜಮಾನ ಪಟ್ಟಗಳನ್ನು ಕಟ್ಟುವಂತಹ ಧಾರ್ಮಿಕ ಕಾರ್ಯಗಳನ್ನು ರೇವಣಸಿದ್ಧನ ಪೂಜಾರಿಗಳಾದ ಒಡೆಯರ ಮುಂದಾಳತ್ವದಲ್ಲಿಯೇ ನಡೆಸಲಾಗುತ್ತದೆ.

**ಹಿರಿಯೂರು:** ಚಿತ್ರದುರ್ಗ ಜಿಲ್ಲೆಯ ತಾಲೂಕು ಕೇಂದ್ರ. ಪಟ್ಟಣದ ಬೊಂಬು ಬಜಾರು ರಸ್ತೆಯಲ್ಲಿ ರೇವಣಸಿದ್ಧೇಶ್ವರನ ಚಿಕ್ಕ ದೇವಾಲಯವಿತ್ತು. ಅದು ಶಿಥಿಲಾವಸ್ಥೆಯಲ್ಲಿದ್ದರಿಂದ ಅದನ್ನು ಕೆಡವಿ ಹೊಸದಾಗಿ ಕಟ್ಟಿಸುತ್ತಿದ್ದಾರೆ. ಅದಿನ್ನೂ ಪೂರ್ಣವಾಗಿಲ್ಲ. ಹಾಗಾಗಿ ರೇವಣಸಿದ್ಧೇಶ್ವರ ಪಾಲಕಿ ಮತ್ತು ಪರಿಕರಗಳನ್ನು ಪಕ್ಕದಲ್ಲಿರುವ ಲಿಂಗದ ಗುಡಿಯಲ್ಲಿಡಲಾಗಿದೆ. ಇದರ ಪೀಠಾಧ್ಯಕ್ಷರು ಚಂದ್ರಶೇಖರಯ್ಯ ಒಡೆಯರು. ಲಿಂಗದ ಗುಡಿಯಲ್ಲಿ ಪೂಜೆ ಮಾಡುತ್ತಿರುವವರು ಒಡೆಯರ ಅಣ್ಣ–ತಮ್ಮಂದಿರೆ. ಇಲ್ಲಿ ಮೈಲಾರಲಿಂಗೇಶ್ವರನ ದೇವಾಲಯವಿದ್ದು, ಪ್ರತಿವರ್ಷ ದಸರದಲ್ಲಿ ಸರಪಣಿ ಪವಾಡ ನಡೆಸಲಾಗುತ್ತದೆ. ಅದು ಸುತ್ತಮುತ್ತ ಹಳ್ಳಿಗಳಲ್ಲಿಯೇ ಪ್ರಸಿದ್ಧಿಯನ್ನು ಪಡೆದಿದೆ. ಜೊತೆಗೆ ಹೇಳಿಕೆಯು ನಡೆಯುತ್ತದೆ. ಆ ವರ್ಷದ ಅತಿವೃಷ್ಟಿ–ಅನಾವೃಷ್ಟಿಗಳನ್ನು ಈ ಹೇಳಿಕೆಯನ್ನು ಆಧರಿಸಿಯೇ ಇಲ್ಲಿನ ಭಕ್ತರು ನಿರ್ಧರಿಸುವರು.

ಪ್ರತಿದಿನ ಎರಡು ಪೂಜೆ, ವಾರ–ಹುಣ್ಣಿಮೆ–ಅಮಾವಾಸ್ಯೆಯಂದು ವಿಶೇಷ ಪೂಜೆಗಳು ಜರುಗುತ್ತವೆ. ಯುಗಾದಿ–ದಸರಾಗಳಲ್ಲಿ ಧಾರ್ಮಿಕ ಆಚರಣೆಗಳು ನಡೆಯುತ್ತವೆ. ಈ ಮಠದ ವ್ಯಾಪ್ತಿಗೆ ೨೦ಕ್ಕೂ ಅಧಿಕ ಭಕ್ತ(ಶಿಷ್ಯ)ರ ಹಳ್ಳಿಗಳಿದ್ದು, ಅಲ್ಲಿನ ಸಾಮಾಜಿಕ, ಧಾರ್ಮಿಕ ಕಾರ್ಯಕ್ರಮಗಳನ್ನು ಒಡೆಯರು ನಡೆಸಿಕೊಡುತ್ತಾರೆ.

**ದೊಡ್ಡೇರಿ:** ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನಿಂದ ಪಾವಗಡಕ್ಕೆ ಹೋಗುವ ರಸ್ತೆಯಲ್ಲಿ ೧೦ ಕಿ.ಮೀ. ಅಂತರದಲ್ಲಿರುವ ಚಾರಿತ್ರಿಕ ಗ್ರಾಮ. ಇದು ಐತಿಹಾಸಿಕ ಸ್ಥಳವಾಗಿದ್ದು, ಅನೇಕ ಪ್ರಾಚೀನ ದೇವಾಲಯ, ಕೋಟೆಯನ್ನು ಹೊಂದಿದೆ. ಊರ ಮಧ್ಯಭಾಗದಲ್ಲಿ ಮೂರು ಶತಮಾನಕ್ಕಿಂತಲೂ ಪ್ರಾಚೀನ ಇತಿಹಾಸ ಹೊಂದಿರುವ ರೇವಣಸಿದ್ಧನ ದೇವಾಲಯ(ಮಠ)ವಿದೆ. ಚಳ್ಳಕೆರೆ ನ್ಯಾಯಾಲಯದಲ್ಲಿ ವಕೀಲರಾಗಿರುವ ಪ್ರಕಾಶ ಒಡೆಯರು ಇದರ ಪೂಜಾರಿಗಳು. ಪಶ್ಚಿಮಾಭಿಮುಖವಾಗಿರುವ ಈ ದೇವಾಲಯವು ಗರ್ಭಗೃಹ, ನವರಂಗ, ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹದ ಗದ್ದುಗೆಯ ಮೇಲೆ ರೇವಣಸಿದ್ಧನ ಮುಖಚಿತ್ರದ ಬೆಳ್ಳಿಯ ಪ್ರತಿಮೆಯಿದ್ದು, ಮೀಸೆ, ರುಮಾಲು, ಹಣೆಯಲ್ಲಿ ವಿಭೂತಿ ಭಸ್ಮಗಳಿವೆ. ಕೆಳ ಭಾಗದಲ್ಲಿ ಪಾದುಕೆಗಳು, ಅಕ್ಕಪಕ್ಕದಲ್ಲಿ ಶಿವಲಿಂಗ, ನಂದಿ ಮೊದಲಾದ ಚಿಕ್ಕ ಚಿಕ್ಕ ಮೂರ್ತಿಗಳಿವೆ. ಮರದ ಬಾಗಿಲವಾಡವನ್ನು ಹೂ ಬಳ್ಳಿಗಳಿಂದ ಅಲಂಕಾರಿಕವಾಗಿ ಚಿತ್ರಿಸಲಾಗಿದೆ. ಗರ್ಭಗೃಹದ ಮೇಲೆ ಪಿರಾಮಿಡ್ಡಿನಾಕಾರದ ಗೋಪುರವಿದ್ದು, ಕಳಸವನ್ನು ಜೋಡಿಸಲಾಗಿದೆ. ನವರಂಗವು ಎರಡು ಕಲ್ಲಿನ ಕಂಬಗಳನ್ನು ಹೊಂದಿದ್ದು, ಎಡಭಾಗದ ಗೋಡೆಯಲ್ಲಿಯೇ ನಾಗರ ಶಿಲ್ಪಗಳನ್ನು ಖಂಡರಿಸಲಾಗಿದೆ. ಮೇಲ್ಭಾಗದಲ್ಲಿ ಹಿಂದಿನ ಒಡೆಯರ ಫೋಟೋಗಳನ್ನು ತೂಗು ಹಾಕಲಾಗಿದೆ. ಎಂಟು ಕಲ್ಲು ಕಂಬಗಳ

ಸಭಾಮಂಟಪವಿದೆ. ಮಠದ ಅಕ್ಕಪಕ್ಕಗಳಲ್ಲಿ ಗಿಡ ಮರಗಳನ್ನು ಬೆಳೆಯಲಾಗಿದೆ. ದೇವಾಲಯದ ಮುಂದೆ ಎಡ ಭಾಗದಲ್ಲಿ ಒಡೆಯರ ಮನೆಯಿದ್ದು ಸುತ್ತಲೂ ಕಾಂಪೌಂಡು ಕಟ್ಟಲಾಗಿದೆ.

ಸುಮಾರು ಮೂರು ಶತಮಾನಗಳಷ್ಟು ಪ್ರಾಚೀನ ಪರಂಪರೆ ಹೊಂದಿರುವ ಈ ಮಠದ ಕುರಿತಾಗಿ ಮಾಹಿತಿಗಳು ದೊರೆಯುವುದು ಮಾತ್ರ ಸಿದ್ಧಯ್ಯ ಒಡೆಯರಾಗಿದ್ದ ಕಾಲದಿಂದ. ಅವರ ಕುರಿತಾಗಿ ದೊರೆಯುವ ಸಂಗತಿ ಹೀಗಿದೆ. ಸಿದ್ಧಯ್ಯ ಒಡೆಯರು ಮತ್ತು ಹನುಮವ್ವ ದಂಪತಿಗಳಿಗೆ ಒಬ್ಬ ಮಗಳು ಜನಿಸಿದಳು. ಮುಂದೆ ಮಗಳ ಮದುವೆಯ ನಂತರ ಆಕೆಗೂ ಇಬ್ಬರು ಹೆಣ್ಣುಮಕ್ಕಳಾದರು. ಆ ವೇಳೆಗಾಗಲೇ ಒಡೆಯ ದಂಪತಿಗಳು ಮುಪ್ಪಿನವರಾಗಿದ್ದರಿಂದ ಮೊಮ್ಮಗಳನ್ನು ಬಿಳಿಚೋಡಿನ ಚನ್ನಯ್ಯ ಒಡೆಯರ ತಮ್ಮನಿಗೆ ಮದುವೆ ಮಾಡಿಕೊಟ್ಟರು. ಏಕೆಂದರೆ ತಮ್ಮ ನಿಧನದ ನಂತರ ರೇವಣಸಿದ್ಧನ ಪೂಜಾರಿಕೆಯನ್ನು ತಮ್ಮ ವಂಶದಲ್ಲಿಯೇ ಉಳಿಸಿಕೊಳ್ಳುವ ಸಲುವಾಗಿ. ಮದುವೆಯಾದ ಮೇಲೆ ಅವರನ್ನು ಇಲ್ಲಿಗೆ ಕರೆತಂದು ಪೂಜಾರಿಕೆಯನ್ನು ನೀಡಿದರು. ಅಂದಿನಿಂದ ಅವರು ದೊಡ್ಡೇರಿಯ ರೇವಣಸಿದ್ಧನ ಪೂಜಾರಿಗಳಾಗಿ, ಕುರುಬ ಸಮುದಾಯಕ್ಕೆ ಗುರುಗಳಾಗಿ ಧಾರ್ಮಿಕ ಕಾರ್ಯಗಳನ್ನು ಮಾಡುತ್ತಾ ಬಂದಿದ್ದಾರೆ; ಬರುತ್ತಲಿದ್ದಾರೆ.

ದೊಡ್ಡೇರಿಯು ೬೭೧ ಕುಟುಂಬಗಳನ್ನು ಹೊಂದಿರುವ ದೊಡ್ಡ ಗ್ರಾಮವಾಗಿದ್ದರೂ ಇಲ್ಲಿಂದು ಕುರುಬರ ನಾಲ್ಕು ಮನೆಗಳು, ಒಡೆಯರ ಒಂದು ಮನೆ ಮಾತ್ರವಿದೆ. ಅದಕ್ಕೆ ಕಾರಣ ದೊಡ್ಡೇರಿಯು ೧೮೮೫ರ ಸುಮಾರಿನಲ್ಲಿ ಮೈಸೂರು ರಾಜ್ಯದ ಪ್ರಮುಖ ತಾಲೂಕು ಕೇಂದ್ರವಾಗಿತ್ತು. ಆ ಕಾಲಕ್ಕೆ ಇಲ್ಲಿ ಆಳ್ವಿಕೆ ಮಾಡುತ್ತಿದ್ದ ಮುಸ್ಲಿಂ ಅಧಿಕಾರಿಯ ದಬ್ಬಾಳಿಕೆಯು ಮಿತಿಮೀರಿತ್ತು. ಇದರಿಂದ ರೋಸಿ ಹೋದ ಜನರೆಲ್ಲರೂ ಸೇರಿ ರಾಣಿಕೆರೆಯ ಹತ್ತಿರ ಅವನನ್ನು ಹೊಡೆದು ಸಾಯಿಸಿದರು. ಅವನ ಅನುಯಾಯಿಗಳಿಗೆ ಹೆದರಿ ಕುರುಬರನ್ನು ಒಳಗೊಂಡಂತೆ ಸಾಕಷ್ಟು ಜನ ಊರು ಬಿಟ್ಟು ಹೋದರು. ಇಲ್ಲಿಂದ ಹೋದ ಕುರುಬರು ಸೊಂಡೆಕೆರೆ, ಸೊಲ್ಲಾಪುರಗಳಲ್ಲಿರುವರು. ಅವರು ತಮ್ಮ ಮನೆತನದ ಹೆಸರು ಹೇಳುವಾಗ ದೊಡ್ಡೇರಿಯವರೆಂದು ಇಂದಿಗೂ ಹೇಳುವರು. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ವಿಚಲಿತರಾಗದೇ ಒಡೆಯರು ಮಠದ ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡು ಬಂದಿರುವುದು ಸಂತಸದ ಸಂಗತಿಯಾಗಿದೆ.

ದೊಡ್ಡೇರಿ ಮತ್ತು ಕಡದರಳ್ಳಿಯ ಒಡೆಯರು ಅಣ್ಣ-ತಮ್ಮಂದಿರಾಗಿದ್ದು, ಹಿಂದೆ ವರ್ಷಕ್ಕೊಬ್ಬರಂತೆ ಪೂಜೆಯನ್ನು ಮಾಡುವುದೆಂದು ಒಪ್ಪಂದ ಮಾಡಿಕೊಂಡಿದ್ದರು. ಕಾಲಾಂತರದಲ್ಲಿ ಅವರ ನಡುವೆ ಮನಸ್ತಾಪಗಳು ಬಂದವು. ಆ ವ್ಯಾಜ್ಯ ಬಗೆಹರಿಸಲು ಮತ್ತು ಹಕ್ಕು ಪತ್ರಗಳನ್ನು ತಮಗೆ ನೀಡುವಂತೆ ಜಿಲ್ಲಾ ಕಲೆಕ್ಟರ್‌ಗೆ ೧೯೨೯ರಲ್ಲಿ ದೊಡ್ಡೇರಿಯ ಒಡೆಯರು ಒಂದು ಮನವಿ ಸಲ್ಲಿಸಿದ್ದರು. ಅದು ಹೀಗಿದೆ.

ಚಿತ್ರದುರ್ಗದ ಡಿಷ್ಟ್ರಿಕ್ಟು ಡೆಪ್ಯೂಟಿ ಕಮೀಷನ್ ಸಾಹೇಬರವರ ಸನ್ನಿಧಾನಕ್ಕೆ ತಾ: ೫.೮.೨೯ ಮಹಾಸ್ವಾಮಿ ಚಳ್ಳಕೆರೆ ತಾಲೂಕು ಸಬಾಸ-ದೊಡ್ಡೇರಿ ಶ್ರೀ ರೇವಣಸಿದ್ಧೇಶ್ವರ ಮ. ಶ್ರೀ. ಕ. ಬಿಕ್ಷಾವರ್ತಿಸ್ವಾಮಿಗಳ ಶಾಭಕ್ತರಾದ ಮೇಲ್ಕಂಡ . . . . . . . . . . . . . . . . .

. . . . . . . . . . . . . . . . . . . . . . . . . . . . . . . . . . . . . . . . . . . .

. . . ವಪ್ಪಯ್ಯಸ್ವಾಮಿಗಳಾದ ನಾನು ಬರದುಕೊಂಡ ಲೈಸನ್‌ಸ . . ಅದಾಗಿ ಮಹಾಸ್ವಾಮಿ ಇದೇ ಡಿಷ್ಟ್ರಿಕ್ಟು ಚಳ್ಳಕೆರೆ ತಾಲೂಕು ಮೊಳಕಾಲ್ಮೂರು ತಾಲೂಕು ಹಿರಿಯೂರು ತಾಲೂಕು ಗ್ರಾಮಾಂತರಗಳಲ್ಲಿ ವಾಸವಾಗಿರುವ ಹಾಲುಮತದ ಕುರುಬರ ಜಾತಿ ಗುರುಗಳೆಂತಲೂ ಸರ್ವೂರು ಶಾಂತಮುತ್ತಯ್ಯ ಗುರುಗಳಾದ ನಾವುಗಳು ಮೇಲೆ ನಮೂದಾಗಿರುವ ಗ್ರಾಮಾಂತರಗಳಲ್ಲಿರುವ ನಮ್ಮ ಶಿಷ್ಯರಲ್ಲಿ ಕಾಣಿಕೆ ವಗ್ಯೆ(ರೆ) ವಸೂಲ್ ಬಗ್ಯೆ ಹೊರಡುವಾಗ ನಮ್ಮಗಳಿಗೆ ಸಲ್ಲಬಹುದಾದ ಮಾಮೂಲ್ ಬಿರುದಾವಳಿಗಳು ಅಂದರೆ ಛತ್ರಿ, ಚಾಮರ, ಪಾಲಕಿ ಹಗಲು ದೀವಟಿಗೆ, .............. ಬಾಜ, ಭಜಂತ್ರಿ ವಗ್ಯೆರೆ ಮತ್ತು ನಮ್ಮಗಳುಗಳಿಗೆ ವಾಸರ. ವಾಲಿಗಳನ್ನು ಧರಶಿ(ಸಿ)ಕೊಂಡು ನಮ್ಮಗೆ ಸಲ್ಲಬಹುದಾದ ಬಿರುದು ಬಿರುದಾವಳಿಗಳೊಂದಿಗೆ)ಗಳೊಡನೆ ಮೇಲ್ಕಂಡ ತಾಲೂಕುಗಳಲ್ಲಿ ಸಂಚಾರ ಮಾಡಲು ಯಾವ ವಿಧವಾದ ಅಡ್ಡಿ ಇಲ್ಲದಂತೆ ಲೈಸನ್ಸ್ ಕೊಡಿಸುವುದರ ಮೂಲಕ, ಈ ದೈವದ ಪೂರ್ವೀಕರಾದ ಶಾಂತಬಿಕ್ಷಾವರ್ತಿ ಮತ್ತು ರೇವಣ್ಣಯ್ಯ ವಗ್ಯೆರೇರಿಗೆ ಹೊಸದುರ್ಗ ತಾಲ್ಲೂ ಶ್ರೀರಾಮಪುರ ವಗ್ಯೆರೆ ಗ್ರಾಮಾಂತರಗಳಿಗೆ ಸ(ವ್ಯ)ಕೀಟ್ ಹೊರಟಾಗ್ಯೆ ಅಂದರೆ ೧೯೧೩-೧೪ನೇ ಸಾಲಿನಲ್ಲಿ ಕೊಡಿಸಿರುವ ಲೈಸನ್ಸು ಆರಡರನ್ನು(ಆರ್ಡರ್) ತಾವು ಮತ್ತು ನಮ್ಮಲ್ಲಿರುವ ವಿಜಯನಗರದ ಮಹಾರಾಜರು ಕೊಟ್ಟಿರುವ ಶಿಲಾಶಾಸನ ಚಳ್ಳಕೆರೆ ತಾಲೂಕು ಅಮಲ್ದಾರರವರು ಕೊಟ್ಟಿರುವ ದಾಖಲೆಗಳನ್ನು ತಾವು ಪರಾಂಬರಕೆಯಿಂದ ನೋಡಿ ನಮಗೆ ಮೇಲ್ಕಂಡ ತಾಲೂಕುಗಳಲ್ಲಿ ಸಂಚಾರ ಹೊರಡಲು ಲೈಸನ್ಸು ಕೊಡಿಸಿಕೊಡಬೇಕಾಗಿ ಬೇಡಿಕೊಳ್ಳುತ್ತೇವೆ ಮಹಾಸ್ವಾಮಿ. ಎಂಬ ಮನವಿಯನ್ನು ಕಲೆಕ್ಟರ್‌ಗೆ ಸಲ್ಲಿಸಿದ್ದರು. ನಂತರ ಸಹೋದರರಿಬ್ಬರೂ ಹಳ್ಳಿಗಳನ್ನು ಪರಸ್ಪರ ವಿಭಾಗಿಸಿಕೊಂಡರೆಂದು ತಿಳಿಸುತ್ತಾರೆ. ಹಾಗಾಗಿ ಕಡದರಹಳ್ಳಿಯ ಒಡೆಯರು ಅಲ್ಲಿಯೇ ಒಂದು ಚಿಕ್ಕ ಮಠವನ್ನು ಕಟ್ಟಿಕೊಂಡರು. ಹೀಗೆ ಬೇರೆಯಾಗುವಾಗ ಭಕ್ತ(ಶಿಷ್ಯ)ರ ಹಳ್ಳಿಗಳನ್ನು ಸಮಾನವಾಗಿ ಹಂಚಿಕೊಂಡಿರುವರು. ಪ್ರಸ್ತುತ ದೊಡ್ಡೇರಿ ಮಠಕ್ಕೆ ನಡೆದುಕೊಂಡು ಬರುವ ಭಕ್ತರ ಹಳ್ಳಿಗಳೆಂದರೇ ಗೊರ್ಲಕಟ್ಟೆ, ನನ್ನಿವಾಳ, ಗೊರ್ಲ್ಲೆತ್ತು, ಸಾಣಿಕೆರೆ, ಮರಿಕುಂಟೆ, ನೇರಲಗುಂಟೆ, ತೊರೆಕೋಲಮ್ಮನಹಳ್ಳಿ, ಓಬಯ್ಯನಹಟ್ಟಿ, ಗೋಪನಹಳ್ಳಿ, ಸೂರನಹಳ್ಳಿ, ನಾಯಕನಹಟ್ಟಿ, ಗೌಡಗೆರೆ, ಚಿಕ್ಕಮ್ಮನಹಳ್ಳಿ, ಕರಿಕೆರೆ, ಸಿದ್ಧಾಪುರ, ಲಕ್ಷ್ಮಿಪುರ, ನಗರಂಗೆರೆ, ಕರಮಲಹಳ್ಳಿ, ಮಧುರೆ, ಚಿಕ್ಕಳ್ಳಿ ಸೇರಿದಂತೆ ೩೨ ಹಳ್ಳಿಗಳು. ಇವುಗಳಲ್ಲಿನ ಭಕ್ತರ ಮದುವೆ-ಮರಣ, ಕುಲಕೆಟ್ಟವರ ಶುದ್ಧಿ ಮಾಡುವಂಥ ಸಾಮಾಜಿಕ ಕಾರ್ಯಗಳು, ದೇವಾಲಯಗಳ ಪ್ರಾರಂಭ, ದೇವರ ಪಟ್ಟ, ಹೊಳೆ ಪೂಜೆಗಳಂಥ ಧಾರ್ಮಿಕ ಆಚರಣೆಗಳು

ಒಡೆಯರ ಹಾಜರಾತಿಯಲ್ಲಿ ನಡೆಯುತ್ತವೆ. ಮಠದಲ್ಲಿ ದಿನಾಲು ಎರಡು ಪೂಜೆ, ದಸರೆಯಲ್ಲಿ ಬನ್ನಿ ಮುಡಿಯುವುದು, ಅಂಬೋಡೆಯುವುದು, ಯುಗಾದಿ, ಶಿವರಾತ್ರಿ, ಹುಣ್ಣಿಮೆ, ಅಮಾವಾಸ್ಯೆಯಲ್ಲಿ ವಿಶೇಷ ಪೂಜೆ ಪುನಸ್ಕಾರಗಳು ನಡೆಯುತ್ತವೆ.

**ಕಡದರಹಳ್ಳಿ:** ಚಳ್ಳಕೆರೆ ತಾಲೂಕಿಗೆ ಸೇರಿದ ಈ ಗ್ರಾಮ ತಾಲೂಕು ಕೇಂದ್ರದಿಂದ ೨೦ ಕಿ.ಮೀ. ದೂರದಲ್ಲಿದೆ. ಹಿಂದೆ ರಂಗವ್ವನಹಳ್ಳಿ ಎಂಬ ಹೆಸರಿನಿಂದ ಕರೆಯಿಸಿಕೊಳ್ಳುತ್ತಿದ್ದ ಈ ಹಳ್ಳಿಯಲ್ಲೊಮ್ಮೆ ಎರಡು ಕೋಮುಗಳ ಮಧ್ಯೆ ಜಗಳವಾಯಿತು. ಜಗಳವು ಒಬ್ಬನನ್ನು ಕಡಿದು ಸಾಯಿಸುವುದರೊಂದಿಗೆ ಮುಗಿಯಿತು. ಅಂದಿನಿಂದ ರಂಗಪ್ಪನಹಳ್ಳಿಯು ಕಡಿದೋರಹಳ್ಳಿ>ಕಡದೋರಹಳ್ಳಿ>ಕಡದರಹಳ್ಳಿಯಾಗಿ ಬದಲಾಗಿದೆ ಎಂದು ಊರ ಹಿರಿಯರೊಬ್ಬರು ಹೇಳುವರು. ದೊಡ್ಡೇರಿ ಒಡೆಯರ ಸೋದರರಾದ ಇವರು ದೊಡ್ಡೇರಿಯ ಮಠದ ಪೂಜೆಯನ್ನು ವರ್ಷಕ್ಕೊಬ್ಬರಂತೆ ಮಾಡುತ್ತಿದ್ದರು. ಅದಕ್ಕೆ ಸಂಬಂಧಿಸಿದ ತಾಮ್ರ ಪತ್ರವೊಂದು ಒಂದೇ ಮನೆತನಕ್ಕೆ ಸೇರಿದವರಾದ ಅವರಲ್ಲಿ ದೇವಾಲಯದ ಪೂಜೆ ಮತ್ತು ಭಾರಿ ವಿಷಯದಲ್ಲಿ ಮನಸ್ತಾಪ ಬಂದಿರುವುದರಿಂದ ವರ್ಷಕ್ಕೊಬ್ಬರಂತೆ ದೊಡ್ಡೇರಿ ರೇವಣಸಿದ್ಧೇಶ್ವರನ ಪೂಜೆಯನ್ನು ಮಾಡುವುದನ್ನು ನಂತರ ಶಿಷ್ಯರ ಹಳ್ಳಿಗಳನ್ನು ಹಂಚಿಕೆ ಮಾಡಿಕೊಂಡಿರುವುದನ್ನು ತಿಳಿಸುತ್ತದೆ. ಇದರಿಂದಾಗಿ ಸುಮಾರು ೫೦ ವರ್ಷಗಳ ಹಿಂದೆ ರೇವಣಸಿದ್ಧೇಶ್ವರನ ಚಿಕ್ಕ ಗುಡಿಯೊಂದನ್ನು ಕಟ್ಟಿಕೊಂಡಿದ್ದಾರೆ. ಸಿದ್ಧಯ್ಯ ಒಡೆಯರು ಅದರ ಪೂಜಾರಿಗಳು.

ಮಠದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಪಕ್ಕದಲ್ಲಿ ನಾಗರ ಗುಡಿಯಿದೆ. ಅದನ್ನು ರೆಡ್ಡಿ ಸಮುದಾಯದ ದಂಪತಿಗಳು ಕಟ್ಟಿಸಿದ್ದಾರೆ. ಸುಮಾರು ವರ್ಷಗಳ ಹಿಂದೆ ಅವರಿಗೆ ಮಕ್ಕಳಾಗಿರಲಿಲ್ಲ. ಅವರು ನಾಗದೇವನನ್ನು ಪೂಜಿಸಿದ್ದರಿಂದ ಮಕ್ಕಳಾದವು. ದಿನಾಲು ಪೂಜೆ ಮಾಡುವರೆಂಬ ಉದ್ದೇಶದಿಂದ ಇಲ್ಲಿ ಕಟ್ಟಿಸಿದ್ದಾರೆ. ಇತ್ತೀಚೆಗೆ ಹೊಸದಾಗಿ ಗುಡಿಯನ್ನು ಕಟ್ಟಿಸುತ್ತಿದ್ದಾರೆ. ಅದಿನ್ನೂ ಪೂರ್ಣಗೊಳ್ಳಬೇಕಿದೆ.

ಪ್ರತಿ ವರ್ಷ ದಸರದಲ್ಲಿ ರೇವಣಸಿದ್ಧನ ಪಾಲಕಿಯೊಂದಿಗೆ ಬನ್ನಿ ಮುಡಿಯಲು ಹೋಗುವರು. ಬನ್ನಿ ಮುಡಿದು ವಾಪಸು ಊರಿಗೆ ಮೆರವಣಿಗೆಯ ಮೂಲಕ ಬರುವಾಗ ಜಾತಿ ಭೇದವಿಲ್ಲದೆ ಭಕ್ತರು ಕುರುಹು ಕೇಳುವುದು, ಹರಕೆ ತೀರಿಸುವುದು ನಡೆಯುತ್ತದೆ. ನಂತರ ಸಕಲ ಬಿರುದಾವಳಿ ಗಳೊಂದಿಗೆ ಗುಡಿದುಂಬುವುದು. ಪ್ರತಿ ಭಾನುವಾರ ವಾರದ ಪೂಜೆ ನಡೆಯುತ್ತದೆ.

ಈ ಮಠದ ಒಡೆಯರು ಮಾಡುವ ಪ್ರಮುಖ ಸಾಮಾಜಿಕ ಕಾರ್ಯವೆಂದರೆ ಈ ಭಾಗದ ಸುತ್ತ–ಮುತ್ತಲ ಗ್ರಾಮಗಳಲ್ಲಿ ವಾಸಿಸುವ ಕುರುಬರಲ್ಲಿ ಯಾರಾದರೂ ಕುಲಕೆಟ್ಟರೆ ಅಂದರೆ ಚಪ್ಪಲಿಯಿಂದ ಹೊಡೆದಾಡಿದರೆ, ಪೋಲೀಸ್ ಸ್ಟೇಷನ್‌ಗೆ ಹೋಗಿ ಬಂದರೆ ಅವರು ಈ ಗುರುಮಠಕ್ಕೆ ಬಂದು ಶುದ್ಧಿಕಾರ್ಯ ಮಾಡಿಸಿಕೊಂಡು ಹೋಗುವ ಪದ್ಧತಿಯಿದೆ. ಇಲ್ಲಿಗೆ ಬರುವಾಗ ಅವರು ಆಯಾ

ಹಳ್ಳಿಯ ಸಮುದಾಯದ ಗೌಡ, ಯಜಮಾನರಿಂದ ಪತ್ರವೊಂದನ್ನು ಬರೆಯಿಸಿಕೊಂಡು ಬಂದರೆ ಮಾತ್ರ ಶುದ್ಧಿಕಾರ್ಯ ಮಾಡುವರು. ಬಂದವರನ್ನು ಮೊದಲು ಊರ ಪಕ್ಕದಲ್ಲಿರುವ ಕೆರೆ-ಬಾವಿ ಅಥವಾ ಹಳ್ಳದಲ್ಲಿ ಮೊದಲು ಸ್ನಾನ ಮಾಡಿಕೊಂಡು ಹೊಸಬಟ್ಟೆ ಧರಿಸಿ ಮಠದ ಹತ್ತಿರ ಬರಲು ಹೇಳುವರು. ಮಠದ ಹೊರಗೆ ಕುಳ್ಳಿರಿಸಿ, ಬೇವಿನ ಕಡ್ಡಿಯಿಂದ ನಾಲಿಗೆಯನ್ನು ಸುಟ್ಟು, ಅವರ ತಲೆಯ ಮೇಲೆ ಪಾದವನ್ನಿಟ್ಟು ಒಡೆಯರು ಆಶೀರ್ವದಿಸುವರು. ನಂತರ ತೀರ್ಥವನ್ನು ಕುಡಿಯಲು ಕೊಡುವರು. ರೇವಣಸಿದ್ಧನ ಪೂಜೆ ಮಾಡಿ ಭಂಡಾರ ಹಚ್ಚಿ ಕಳುಹಿಸುವರು. ಇದು ಶುದ್ಧಿಕಾರ್ಯ ಮಾಡುವ ವಿಧಾನ. ಚಪ್ಪಲಿಯಿಂದ ಹೊಡೆದವನಿಗೂ, ಹೊಡೆಸಿಕೊಂಡವನಿಗೂ, ಪೋಲೀಸ್ ಸ್ಟೇಷನ್, ಕೋರ್ಟ್ ಮೆಟ್ಟಿಲು ಹತ್ತಿಬಂದವರಿಗೂ ಈ ಕ್ರಮ ಮಾಡಲಾಗುತ್ತದೆ. ಇಂದಿನ ಜಾಗತೀಕರಣ ಸಂದರ್ಭದಲ್ಲಿ ನಿಂತು ಆಲೋಚಿಸುವಾಗ ಇದು ಚರ್ಚೆಯಾಗದ ವಿಷಯವಾಗಿದ್ದರೂ ಕುರುಬರಂತೆಯೇ ಗೊಲ್ಲ ಮತ್ತು ಮ್ಯಾಸಬೇಡರಲ್ಲಿಯೂ ಈ ಆಚರಣೆಯು ಇಂದಿಗೂ ಜೀವಂತವಿದೆ. ಮ್ಯಾಸಬೇಡರು ದೇವರ ಎತ್ತುಗಳ ಗುಡಿಯ ಹತ್ತಿರ ಒಂದು ಬ್ಯಾಟೆ ಕಡಿದು ಕುಲಸ್ಥರಿಗೆಲ್ಲ ಬಾಡೂಟ ಹಾಕಿ ಈ ಕಾರ್ಯ ಮಾಡಿದರೆ, ಗೊಲ್ಲರು ತಮ್ಮ ಮನೆದೇವರ ಹತ್ತಿರ ಮಾಡುವರು. ಈ ಶುದ್ಧಿಕಾರ್ಯವನ್ನು ಕುರುಬ ಸಮುದಾಯವು ಇಂದಿಗೂ ಜೀವಂತವಾಗಿಟ್ಟಿಕೊಂಡು ಬಂದಿದೆ. ಈ ಕಾರ್ಯವನ್ನು ಈ ಮಠದಲ್ಲಿ ಮಾಡುವುದು ಹೆಚ್ಚಾಗಿ ಕಂಡುಬರುತ್ತದೆ.

ಚೌಳೂರು, ಪರಶುರಾಮಪುರ, ತಿಮ್ಮಣ್ಣನಾಯಕನಕೋಟೆ, ಅಮರಾಪುರ, ವೀರಾಪುರ, ನಿಡುಗಲ್ಲು, ರುದ್ರಯ್ಯನಕೊಪ್ಪ, ಮದ್ದನಕುಂಟೆ, ಪಾವಗಡ, ಗುಡ್ಡಾರಹಳ್ಳಿ, ವಲಸೆ, ಕೊಂಡೆ ತಿಮ್ಮನಹಳ್ಳಿ, ಸೊಲ್ಲಾಪುರ, ಉಳ್ಳಾರ್ತಿ, ಘಟಪರ್ತಿ, ಹೊನ್ನೂರು, ಕಡೇಉಡೇವು, ಕೋನಸಾಗರ, ನಾಗ ಸಮುದ್ರ, ಖಾನಾಹೊಸಹಳ್ಳಿ, ಸೇರಿದಂತೆ ೩೩ ಹಳ್ಳಿಗಳು ಈ ಮಠದ ವ್ಯಾಪ್ತಿಯಲ್ಲಿ ಬರುತ್ತವೆ. ಇಲ್ಲಿನ ಸಾಮಾಜಿಕ, ಧಾರ್ಮಿಕ ಆಚರಣೆಗಳು ಒಡೆಯರ ಮುಂದಾಳತ್ವದಲ್ಲಿಯೇ ನಡೆಯುತ್ತವೆ.

**ವಿಠಲಾಪುರ**: ಬಳ್ಳಾರಿ ಜಿಲ್ಲೆಯ ಸಂಡೂರ ತಾಲೂಕಿನಲ್ಲಿ ಬರುವ ಗ್ರಾಮ. ಓಬುಳಾಪುರಂ ಗ್ರಾಮಕ್ಕೆ ಹತ್ತಿರವಿರುವ ಗಡಿ ಗ್ರಾಮವಿದು. ರೇವಣಸಿದ್ಧನ ಹಳೆಯ ದೇವಾಲಯವಿದ್ದು, ಅದನ್ನು ಕೆಡವಿ ಹೊಸದಾಗಿ ಗುಡಿಯನ್ನು ಕಟ್ಟಲಾಗಿದೆ. ಪಕ್ಕದಲ್ಲಿಯೇ ಹಿಂದಿನ ಒಡೆಯರ ಮೂರು ಸಮಾಧಿಗಳಿಗೆ ಭಕ್ತಾದಿಗಳು ಚಿಕ್ಕ ಗುಡಿಗಳನ್ನು ಕಟ್ಟಿಸಿದ್ದಾರೆ. ವಿಠಲಾಪುರ-ಓಬುಳಾಪುರಂ-ಗೋವಿಂದವಾಡದ ಒಡೆಯರು ಅಣ್ಣ-ತಮ್ಮಂದಿರು. ಪ್ರಸ್ತುತ ಶ್ರೀನಿವಾಸಸ್ವಾಮಿ ಒಡೆಯರು ಇದರ ಪೀಠಾಧ್ಯಕ್ಷರು. ಸಿದ್ಧಯ್ಯಸ್ವಾಮಿ ಅವರನ್ನು ಅರ್ಚಕರಾಗಿ ನೇಮಿಸಲಾಗಿದೆ. ರೇವಪ್ಪಯ್ಯಸ್ವಾಮಿ ಇಲ್ಲಿನ ಮೊದಲ ಒಡೆಯರಾಗಿದ್ದರು. ಅವರ ಅಣ್ಣ ಸಿದ್ಧಪ್ಪಯ್ಯಸ್ವಾಮಿ. ಅವರು ಸಂಕೋಚವಿಲ್ಲದೇ ಊಟ ಮಾಡುತ್ತಿದ್ದರಿಂದ ಹೆಸರಿನ ಮುಂದೆ ಹೊಟ್ಟೆ ಸೇರಿಕೊಂಡು ಹೊಟ್ಟೆಸಿದ್ಧಪ್ಪಯ್ಯಸ್ವಾಮಿ ಎಂದು ಕರೆಯುತ್ತಿದ್ದರು. ಊರ ಹೊರಗಿನ ಹಳ್ಳದ ಹತ್ತಿರ ಹೊಟ್ಟೆಸಿದ್ಧಪ್ಪಯ್ಯಸ್ವಾಮಿಯ ಸಮಾಧಿಯಿದೆ.

ಅದರ ಮೇಲೆ ಬನ್ನಿ ಮರವೊಂದು ಬೆಳೆದಿದೆ. ಊರಲ್ಲಿ ಮಳೆ ಬರದಿರುವ ಸಮಯದಲ್ಲಿ ಅಲ್ಲಿಗ್ಹೋಗಿ ಕರಿಕಂಬಳಿ ಹಾಸಿ ಪೂಜೆ ಸಲ್ಲಿಸಿ ನೈವೇದ್ಯ ಅರ್ಪಿಸಿ ಬಂದರೆ ಮಳೆ ಬರುತ್ತದೆ ಎಂಬ ನಂಬುಗೆ ಇಂದಿಗೂ ಈ ಗ್ರಾಮದಲ್ಲಿ ಜೀವಂತವಾಗಿದೆ.

ದೇವಾಲಯವು ಪೂರ್ವಾಭಿಮುಖವಾಗಿದ್ದು, ಗರ್ಭಗುಡಿಯಲ್ಲಿ ಎತ್ತರವಾದ ಗದ್ದುಗೆಯ ಮೇಲೆ ಶಿವಲಿಂಗ ಮತ್ತು ರೇವಣಸಿದ್ಧನ ಶಿಲ್ಪವಿದೆ. ಚಚ್ಚೌಕಾಕಾರದ ನಾಲ್ಕು ಕಲ್ಲು ಕಂಬಗಳನ್ನು ಹೊಂದಿರುವ ತೆರೆದ ಸಭಾಮಂಟಪವಿದೆ. ದಿನಕ್ಕೆರಡು ಬಾರಿ ಪೂಜೆ, ಸೋಮವಾರ ವಾರದ ಪೂಜೆ, ಪ್ರತಿ ಹುಣ್ಣಿಮೆ–ಅಮಾವಾಸ್ಯೆ, ಶಿವರಾತ್ರಿ, ಯುಗಾದಿ, ರಾಮನವಮಿ, ವಿಜಯದಶಮಿಗಳಂಥ ವಿಶೇಷ ದಿನಗಳಲ್ಲಿ ಭಕ್ತರು ಅನ್ನ ದಾಸೋಹವನ್ನು ಏರ್ಪಡಿಸುವರು. ಐದು ವರ್ಷಗಳ ಹಿಂದೆ ರೇವಣಸಿದ್ಧನ ತೇರು ಮಾಡಿಸಿದ್ದಾರೆ. ಪ್ರತಿವರ್ಷ ಯುಗಾದಿ ಅಮಾವಾಸ್ಯೆಯಾದ ೯ನೆಯ ದಿನಕ್ಕೆ ಅಂದರೆ ರಾಮನವಮಿ ದಿನದಂದು ರಥೋತ್ಸವವನ್ನು ವಿಜೃಂಭಣೆಯಿಂದ ನಡೆಸುವರು. ರೇವಣಸಿದ್ಧನ ಪ್ರತಿಮೆಯನ್ನು ತೇರಿನ ಮೇಲೆ ಇಟ್ಟುಕೊಂಡು ಊರ ಮುಂದಿರುವ ಬಸವಣ್ಣನ ಪಾದಗಟ್ಟೆಯವರೆಗೆ ತೇರನ್ನು ಎಳೆಯಲಾಗುತ್ತದೆ. ಅಲ್ಲಿ ಪೂಜೆ ಸಲ್ಲಿಸಿದ ನಂತರ ರೇವಣಸಿದ್ಧೇಶ್ವರ ಗುಡಿಗೆ ಹಿಂತಿರುಗಿ ಬರುತ್ತದೆ. ವಿಶೇಷತೆ ಎಂದರೆ ಗಡಿ ಪ್ರದೇಶದಲ್ಲಿ ರೇವಣಸಿದ್ಧೇಶ್ವರನ ರಥೋತ್ಸವ ಜರುಗಿಸುವ ಏಕೈಕ ಮಠವಿದಾಗಿದೆ.

ವಿಠಲಾಪುರವು ೫೪೬ ಕುಟುಂಬಗಳಿದ್ದು, ಅದರಲ್ಲಿ ಶೇ. ೭೦ರಷ್ಟು ಕುರುಬ ಸಮುದಾಯ ದವರಿದ್ದಾರೆ. ಇಲ್ಲಿ ಸೋಮಪ್ಪ, ವಸಕೇರಪ್ಪ, ಹಾಲುಮರದಪ್ಪ ದೈವಗಳ ದೇವಾಲಯಗಳಿವೆ. ಯಾವುದೇ ಶುಭಕಾರ್ಯ ಮಾಡುವ ಮೊದಲು ರೇವಣಸಿದ್ಧನಿಗೆ ಪೂಜೆ ಸಲ್ಲಿಸಿದರೆ ಒಳಿತಾಗುತ್ತದೆ ಎಂಬ ಪ್ರತೀತಿಯಿದೆ. ನಾಗಲಪುರ, ಕೆರೆಹಳ್ಳಿ, ಮೆಟ್ರಿಕಿ, ಡಿ. ಹಿರೇಹಾಳ, ಹಂಪನಹಳ್ಳಿ, ಮಲಪನಗುಡಿ, ಬಸಾಪುರ ಸೇರಿದಂತೆ ಒಟ್ಟು ೪೫ ಹಳ್ಳಿಗಳು ಈ ಮಠಕ್ಕೆ ಸೇರಿವೆ. ಆ ಭಕ್ತರ ಒಳಿತು ಕೆಡುಕುಗಳು ಅಂದರೆ ಮೈಲಿಗೆ–ಮುಟ್ಟು ಕಳೆಯುವಂತಹ ಕಾರ್ಯಗಳನ್ನು ಮತ್ತು ಸಾಮಾಜಿಕ ಹಾಗೂ ಧಾರ್ಮಿಕ ಕಾರ್ಯಗಳನ್ನು ಒಡೆಯರು ನೆರವೇರಿಸುತ್ತಾರೆ.

**ದೇವಲಾಪುರ:** ಕಂಪ್ಲಿ ಬಳ್ಳಾರಿ ಮುಖ್ಯ ರಸ್ತೆಯಲ್ಲಿ ಕಂಪ್ಲಿಯಿಂದ ೧೫ ಕಿ.ಮೀ. ದೂರದಲ್ಲಿದೆ. ಇಲ್ಲಿ ೧೯೯೯ರಲ್ಲಿ ರೇವಣಸಿದ್ಧೇಶ್ವರ ಮಠವನ್ನು ಸ್ಥಾಪಿಸಲಾಗಿದೆ. ಇದರ ಪೂಜಾರಿಗಳು ರೋಹಿತಸ್ವಾಮಿ. ೭೦೦ಕ್ಕೂ ಅಧಿಕ ಮನೆಗಳಿದ್ದು, ನೀಲಗಿರಿಸ್ವಾಮಿ ದೇವಾಲಯ ಮುಖ್ಯವಾಗಿದೆ. ದಿನಕ್ಕೆರಡು ಪೂಜೆ ಸೋಮವಾರ ವಾರದ ಪೂಜೆ, ಹುಣ್ಣಿಮೆ–ಅಮಾವಾಸ್ಯೆಯ ದಿನ ಭಕ್ತರು ಅಭಿಷೇಕ ಮಾಡಿಸುವರು. ಶಿವರಾತ್ರಿಯಿಂದ ಐದನೆಯ ದಿನಕ್ಕೆ ರೇವಣಸಿದ್ಧೇಶ್ವರ ಜಯಂತಿಯನ್ನು ವಿಜೃಂಭಣೆಯಿಂದ ಡೊಳ್ಳು, ಭಜನೆ, ನಂದಿಕೋಲುಗಳ ಮೆರವಣಿಗೆಯ ಮೂಲಕವಾಗಿ ಮಾಡುತ್ತಾರೆ. ಬಸವ ಜಯಂತಿ ದಿನ ಪುರಾಣವನ್ನು ವಾಚಿಸುತ್ತಾರೆ. ಇದು ೯ರಿಂದ ೧೦ ದಿನಗಳವರೆಗೆ ನಡೆಯುತ್ತದೆ.

ಈ ಊರಿನ ಶ್ರೀ ಸಿದ್ಧಯ್ಯಸ್ವಾಮಿ ಒಡೆಯರ ಮನೆಯಲ್ಲಿ ಮೂರು ತಾಮ್ರಪತ್ರ ಮತ್ತು ಎರಡು ತಾಮ್ರದ ಬಿಲ್ಲೆಗಳಿವೆ. ಅವು ಕುರುಬರ ಮಧ್ಯೆ ನಡೆದ ವಾದವಿವಾದಗಳ ವಿವರ, ಒಡೆಯರಿಗೆ ದಾನ ನೀಡಿದ ಬಗ್ಗೆ ಇಂತಿಷ್ಟು ಕಾಣಿಕೆಯನ್ನು ಸಲ್ಲಿಸಬೇಕೆಂಬ ಕರಾರುಗಳನ್ನು ಹಾಗೂ ಇನ್ನಿತರ ಅನೇಕ ವಿಷಯಗಳನ್ನು ಈ ತಾಮ್ರಪತ್ರದಲ್ಲಿ ದಾಖಲಿಸಲಾಗಿದೆ. ಈ ಮಠಕ್ಕೆ ಒಳಪಟ್ಟ ಶಿಷ್ಯರ ಹಳ್ಳಿಗಳಲ್ಲಿನ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಕ್ರಮಗಳು ಒಡೆಯರ ಮುಂದಾಳತ್ವದಲ್ಲಿ ನಡೆಯುತ್ತವೆ.

**ಬಳ್ಳಾರಿ:** ರೇವಣಸಿದ್ಧೇಶ್ವರ ಮಠ ಮಿಲ್ಲರ್ ಪೇಟೆಯಲ್ಲಿದೆ. ೧೯೬೯ರಲ್ಲಿ ಸ್ಥಾಪನೆಯಾದ ಈ ಮಠದ ಕಾರ್ಯಕ್ರಮಗಳನ್ನು ಶರಣಯ್ಯಸ್ವಾಮಿ ಒಡೆಯರು ನಡೆಸಿಕೊಂಡು ಬರುತ್ತಿದ್ದಾರೆ. ದಿನಕ್ಕೆರಡು ಸಲ ಪೂಜೆ, ಸೋಮವಾರ ವಾರದ ಪೂಜೆಯ ಜೊತೆಗೆ ಭಜನೆ ನಡೆಯುತ್ತದೆ. ಪ್ರತಿ ಶ್ರಾವಣ ಮಾಸದಲ್ಲಿ ದಿನನಿತ್ಯ ಅಭಿಷೇಕ ಕೊನೆಗೆ ಅಖಂಡ ಭಜನೆ ಅದು ಬೆಳಿಗ್ಗೆಯಿಂದ ಮರುದಿನ ಬೆಳಗಿನವರೆಗೆ ನಡೆದು ಮುಕ್ತಾಯವಾಗುತ್ತದೆ. ನಂತರ ಅನ್ನ ಸಂತರ್ಪಣೆ ನಡೆಯುತ್ತದೆ. ವಿಜಯದಶಮಿಯಂದು ಪಲ್ಲಕ್ಕಿ ಉತ್ಸವ, ಕಾರ್ತಿಕ ಮಾಸದ ಸೋಮವಾರ ಕಾರ್ತಿಕೋತ್ಸವ ನಡೆಸುವರು.

ಪಾಲ್ಗುಣ ಶುದ್ಧ ಮಾಸ ತ್ರಯೋದಶಿ ರೇವಣಸಿದ್ಧೇಶ್ವರ ಜನನ ದಿವಸ ಜಾತ್ರಾ ಉತ್ಸವ, ಪುರ ಬೀದಿಗಳಲ್ಲಿ ಮೆರವಣಿಗೆ ನಡೆಯುತ್ತದೆ. ಭಕ್ತರೆಲ್ಲರು ತಮ್ಮ ತಮ್ಮ ಕಳಸಗಳ ಸಮೇತ ಮೆರವಣಿಗೆ ಮಾಡುತ್ತ ಉತ್ಸವದಲ್ಲಿ ಪಾಲ್ಗೊಳ್ಳುವರು.

**ಸಿಂದ್ವಾಳ:** ಬಳ್ಳಾರಿ ಜಿಲ್ಲೆಯ ಗಡಿಗ್ರಾಮ. ಇದನ್ನು ೧೧ನೆಯ ಶತಮಾನದಲ್ಲಿ ಸಿಂಧುಪೊಳಂ ಎಂದು ಕರೆಯುತ್ತಿದ್ದರು. ಸ್ವಾತಂತ್ರ್ಯ ಪೂರ್ವದಲ್ಲಿ ಸಿಂಧ್ಯರ ಆಳ್ವಿಕೆಗೆ ಒಳಪಟ್ಟಿದ್ದರಿಂದ ಈ ಊರಿಗೆ ಸಿಂದ್ವಾಳ ಎಂದು ಬಂದಿದೆ ಎಂದು ಐತಿಹ್ಯವಿದೆ. ೭೬೪ ಕುಟುಂಬಗಳನ್ನು ಹೊಂದಿರುವ ಇಲ್ಲಿ ಕುರುಬ ಸಮುದಾಯದವರು ಶೇ. ೪೦ ಭಾಗವಿದ್ದಾರೆ. ಊರ ಹೊರಗಿನ ಬೆಟ್ಟದಲ್ಲಿ ವಿಜಯನಗರ ಕಾಲದಲ್ಲಿ ಕಟ್ಟಿರಬಹುದಾದ ಪುರಾತನ ದೇವಾಲಯವೆ ರೇವಣಸಿದ್ಧೇಶ್ವರನದು. ಎತ್ತರವಾದ ಬೆಟ್ಟದ ಮೇಲೆ ಇರುವುದರಿಂದ ರಾತ್ರಿ ಯಾರು ಅಲ್ಲಿರುವುದಿಲ್ಲ. ಹಾಗಾಗಿ ಐದು ವರ್ಷಗಳ ಹಿಂದೆ ದೇವಾಲಯದ ಗೋಪುರದಲ್ಲಿದ್ದ ಕಳಸವನ್ನು ಕಳ್ಳರು ಕದ್ದೊಯ್ದಿರುವರು. ಕಳುವಾದ ನಂತರ ಶಾಸ್ತ್ರ ಕೇಳಲಾಯಿತು. ಜ್ಯೋತಿಷಿಯು ಹಳೆ ದೇವಾಲಯ ಕೆಡವಿ ಹೊಸದಾಗಿ ಕಟ್ಟಬೇಕೆಂದು ಹೇಳಿದರು. ಅದರಂತೆ ಹೊಸದಾಗಿ ದೇವಾಲಯವನ್ನು ಕಟ್ಟಲಾಗುತ್ತಿದೆ ಅದಿನ್ನೂ ಪೂರ್ಣವಾಗಿಲ್ಲ.

ಉತ್ತರಾಭಿಮುಖವಾಗಿರುವ ಗರ್ಭಗೃಹದಲ್ಲಿ ಶಿವಲಿಂಗ, ರೇವಣಸಿದ್ಧನ ಮೂರ್ತಿ ಎದುರಿಗೆ ನಂದಿಯಿದೆ. ಕೆಡವಿದ ಕಲ್ಲಿನ ಕಂಬಗಳ ಮೇಲಿನ ಶಿಲ್ಪಗಳನ್ನು ಗಮನಿಸಿದರೆ ಇದು ವಿಜಯನಗರ

ಕಾಲದಲ್ಲಿ ಕಟ್ಟಿದ ದೇವಾಲಯವೆಂದು ನಿಖರವಾಗಿ ಹೇಳಬಹುದು. ಈ ಮಠದ ಒಡೆಯರಾದ ಸಿದ್ಧಲಿಂಗಯ್ಯಸ್ವಾಮಿ ಅವರು ಕೊಪ್ಪಲದೊಡ್ಡಿಯಲ್ಲಿದ್ದಾರೆ. ಅದರಿಂದ ರೇವಣಸಿದ್ಧನ ಪೂಜೆ ಮಾಡಲು ವರ್ಷಕ್ಕೆ ಇಂತಿಷ್ಟು ಎಂದು ದವಸ-ಧಾನ್ಯಗಳನ್ನು ಕೊಟ್ಟು ಲಿಂಗಾಯತ ಜಂಗಮನಾತನನ್ನು ಅರ್ಚಕರಾಗಿ ನೇಮಿಸಲಾಗಿದೆ. ಈ ದೇವಾಲಯಕ್ಕೂ ಹಂಪೆಗೂ ನೇರ ಸಂಬಂಧವಿದೆಯೆಂದು ಬೆಟ್ಟದ ಮೇಲಿರುವ ಪುರಾತನ ಅವಶೇಷ ಮತ್ತು ಹೆಜ್ಜೆ ಗುರುತುಗಳನ್ನು ತೋರಿಸಿ ಹೇಳುವರು.

ಪ್ರತಿ ಗುರುವಾರ, ಸೋಮವಾರ ವಾರದ ಪೂಜೆ, ಹುಣ್ಣಿಮೆ-ಅಮಾವಾಸ್ಯೆಗೆ ವಿಶೇಷ ಪೂಜೆ ನಡೆಯುತ್ತದೆ. ಚಿನ್ನಹಗರಿ ನದಿಯಿಂದ ಐದು ವರ್ತಿ ನೀರನ್ನು ತಂದು ಪೂಜಿಸಬೇಕೆಂಬುದು ಹಿಂದಿನಿಂದಲೂ ರೂಢಿಗತವಾಗಿ ನಡೆದುಕೊಂಡು ಬಂದಿರುವ ಸಂಪ್ರದಾಯ. ಹೆಣ್ಣುಮಕ್ಕಳು ಗುಡಿಯೊಳಗೆ ಬರುವಂತಿಲ್ಲ ಮತ್ತು ಎಡೆಯನ್ನು ದೇವರಿಗೆ ನೈವೇಧ್ಯಕ್ಕೆ ನೀಡುವಂತಿಲ್ಲ ಎಂಬ ನಿಬಂಧನೆಯಿದೆ. ದೇವರಿಗೆ ಶಿವರಾತ್ರಿಗೆ ಪ್ರಸ್ಥ, ಶ್ರಾವಣಮಾಸದಲ್ಲಿ ವಿಶೇಷ ಧಾರ್ಮಿಕ ಕಾರ್ಯಗಳು ನಡೆಯುತ್ತವೆ. ಈ ದೈವಕ್ಕೆ ಸಂಬಂಧಿಸಿದ್ದು ೨೦ ಎಕರೆ ಜಮೀನಿದೆ. ಅದನ್ನು ಒಡೆಯರು ನೋಡಿಕೊಳ್ಳುವರು. ಆದೋನಿ. ಗುಂತಕಲ್ಲು. ಗೂಳ್ಯಂ ಸುತ್ತಮುತ್ತಲ ಹಳ್ಳಿಗಳಲ್ಲಿ ಈ ಮಠದ ಭಕ್ತರಿದ್ದಾರೆ.

**ಗೋಸ್ಬಾಳ:** ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲೂಕಿನಲ್ಲಿ ಬರುವ ಗ್ರಾಮವಾದ ಇಲ್ಲಿ ರೇವಣಸಿದ್ಧನನ್ನು ಸಿದ್ಧಲಿಂಗತಾತ ಎಂದು ಕರೆಯುವರು. ಸಿದ್ಧೇಶ್ವರಸ್ವಾಮಿ ಇಲ್ಲಿ ಕುರುಬ ಸಮುದಾಯದ ೩೦೦ಕ್ಕೂ ಅಧಿಕ ಮನೆಗಳು, ೪ ಒಡೆಯರ ಮನೆಗಳಿವೆ. ಗುರುವಿನ ಚನ್ನಪ್ಪ ಅವರು ಪ್ರಸ್ತುತ ಈ ಮಠದ ಪೂಜಾರಿಗಳು. ಶತಮಾನದಷ್ಟು ಪ್ರಾಚೀನವಾದ ದೇವಾಲಯವು ಪೂರ್ವಾಭಿಮುಖವಾಗಿದ್ದು, ಗರ್ಭಗೃಹ, ನವರಂಗ ಮತ್ತು ತೆರೆದ ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದ ಎತ್ತರವಾದ ಗದ್ದುಗೆಯ ಮೇಲೆ ಶಿವಲಿಂಗ ಮತ್ತು ಶಿವನ ಬೆಳ್ಳಿಯ ಪ್ರತಿಮೆಯಿದೆ. ಗರ್ಭಗುಡಿಯ ಮೇಲೆ ಕುಂಭ ಮಾದರಿಯ ಶಿಖರವಿದೆ. ನವರಂಗವು ವಿಶಾಲವಾಗಿದ್ದು, ಒಂದೆಡೆ ಗದ್ದುಗೆಯ ಮೇಲೆ ಶಿವಪಾರ್ವತಿಯರ ಚಿತ್ರಪಟ, ಸುತ್ತಲೂ ಸಾಲುದೀಪಗಳನ್ನು ಜೋಡಿಸಲಾಗಿದೆ. ಮತ್ತೊಂದೆಡೆ ತೂಗುಮಂಚದಲ್ಲಿ ಶಿವಪಾರ್ವತಿಯರು ಒಟ್ಟಾಗಿರುವ ಬೆಳ್ಳಿ ಪ್ರತಿಮೆಯ ಜೊತೆಗೆ ವಿಭೂತಿ ಕಟ್ಟುಗಳನ್ನು ಇಡಲಾಗಿದೆ. ತೆರೆದ ಸಭಾಮಂಟಪವು ನಾಲ್ಕು ಕಲ್ಲು ಕಂಬಗಳನ್ನು ಹೊಂದಿದ್ದು, ಅವು ಚೌಕ, ಅಷ್ಟಾಮುಖ, ದಿಂಡು, ಚೌಕ, ಬೋದಿಗೆಯ ಆಕಾರದಲ್ಲಿವೆ.

ದೇವಾಲಯದ ಎದುರು ನವಗ್ರಹ ಮತ್ತು ಗಣಪತಿಯ ಗುಡಿಗಳಿವೆ. ಪಕ್ಕದಲ್ಲಿಯೇ ಮಠದ ಮೊದಲ ಗುರುವಿನವರಾಗಿದ್ದ ಸಿದ್ಧಲಿಂಗಯ್ಯ ತಾತನ ಸಮಾಧಿಯಿದೆ. ಇದು ಕುರುಬರಲ್ಲಿನ ಒಂದು ಒಳಪಂಗಡವಾದ ಗೋಸೆಲಾರು(ಗೋಸಾಲು) ಕುರುಬರಿಗೆ ಮಾತ್ರ ಗುರುಮಠವಾಗಿದ್ದು, ಇತರೆ

ರೇವಣಸಿದ್ಧನ ಮಠಗಳಂತೆ ಕುಲಕ್ಕೆಲ್ಲ ಗುರುಮಠವಲ್ಲ. ಗೋಸ್ಬಾಳದಲ್ಲಿ ನೆಲೆಸಿದ್ದ ಗೋಸೆಲಾರು ತಮ್ಮ ಕುಲದೈವವಾದ ಪಂಚಲಿಂಗೇಶ್ವರದ ಲಿಂಗವನ್ನು ಪ್ರತಿಷ್ಠಾಪನೆ ಮಾಡಿ ದೇವಾಲಯ ಕಟ್ಟಿದರು. ಆದರೆ ಲಿಂಗವು ದಿನಾಲು ಉರುಳಿಕೊಂಡು ಹೋಗುತ್ತಿತ್ತು. ಅದಕ್ಕೆ ಬಲಕುಂದಿಯ ಲಕ್ಕಬೀರಪ್ಪ, ಮಾರಬೀರಪ್ಪ ಅವರು ಈ ದೈವದ ಗುರುವನ್ನು ತಂದು ಪ್ರತಿಷ್ಠಾಪಿಸಿ ದೇವಾಲಯ ನಿರ್ಮಿಸಿ ಆ ನಂತರದಲ್ಲಿ ನಿಮ್ಮ ದೈವ ನಿಲ್ಲುತ್ತದೆ ಎಂದು ಹೇಳಿದರು. ಆ ಪ್ರಕಾರವಾಗಿ ಗುರು ರೇವಣಸಿದ್ಧನ ದೇವಾಲಯ ನಿರ್ಮಿಸಿ ಒಡೆಯರನ್ನು ಕರೆಯಿಸಿ ಒಡೆಯರಾಗಿರಲು ಕೇಳಿಕೊಂಡರು. ಅದರಿಂದಾಗಿ ಬಂದು ನೆಲೆಸಿದ ಗುರುಗಳು ಈ ಬೆಡಗಿಗೆ ಮಾತ್ರ ಗುರುಗಳಾದರು. ಅದಂತೆಯೇ ಪಂಚಲಿಂಗೇಶ್ವರನ ಲಿಂಗದ ಪ್ರತಿಷ್ಠಾಪನೆಯು ಸುಸೂತ್ರವಾಯಿತು.

ಗೋಸ್ಬಾಳ ಮತ್ತು ಚಿಂತಕುಂಟದ ಗುರುವಿನವರು ಅಣ್ಣ-ತಮ್ಮಂದಿರು. ಈ ಎರಡು ಮಠಗಳಿಗೂ ೨೪ ಜಗುಲಿಗಳು ಸೇರಿವೆ. ಸಿದ್ಧಲಿಂಗಸ್ವಾಮಿಯ ಉತ್ಸವವನ್ನು ಹಂಪೆ ಹುಣ್ಣಿಮೆಯಂದು ಮಾಡಲಾಗುತ್ತದೆ. ಅಂದು ಊರಲ್ಲಿರುವ ಕುರುಬರ ಎಲ್ಲ ದೈವಗಳು ಗುರುಮಠದ ಹತ್ತಿರ ಬಂದು ಗುರುಪೂಜೆ ಸಲ್ಲಿಸಿ ಕಾರ್ಯಕ್ರಮಗಳನ್ನು ಪೂರೈಸಿಕೊಂಡು ತಮ್ಮ ಸ್ವಸ್ಥಾನಕ್ಕೆ ಮರಳುತ್ತವೆ. ದೀಪಾವಳಿ ಹಬ್ಬದಲ್ಲಿ ಪಂಚಲಿಂಗೇಶ್ವರನ ಜಾತ್ರೆ ನಡೆಯುತ್ತದೆ. ಬಂದ ಎಲ್ಲ ದೈವಗಳು ಇಲ್ಲಿ ಮಂದೆ ಕಲೆಯುತ್ತವೆ. ಅಲ್ಲಿಗೆ ಸಿದ್ಧಲಿಂಗಸ್ವಾಮಿ ಬಂದು ಸೇರಿಕೊಳ್ಳುತ್ತದೆ. ಅಲ್ಲಿನ ನೇಮಗಳನ್ನು ಪೂರೈಸಿ ಭಕ್ತ ದೈವಗಳಿಗೆ ಆಶೀರ್ವದಿಸಿ ಹೋಗುವುದು ವಾಡಿಕೆ. ಈ ಸಾಂಸ್ಕೃತಿಕ ಬಾಂಧವ್ಯ ಗುರು-ಭಕ್ತರ ನಡುವಿನ ಸಾಮರಸ್ಯ ಬದುಕನ್ನು ನೆನಪಿಸುತ್ತದೆ. ರೇವಣಸಿದ್ಧನಿಗೆ ದಿನಾಲು ಎರಡು ಪೂಜೆ, ಸೋಮವಾರ ವಾರದ ಪೂಜೆ, ಹುಣ್ಣಿಮೆ ಅಮಾವಾಸ್ಯೆಗೆ ವಿಶೇಷ ಪೂಜಾ ಕಾರ್ಯಕ್ರಮಗಳು ಜರುಗುತ್ತವೆ. ಈ ಮಠದಲ್ಲಿ ಶ್ರೀಶೈಲಕ್ಕೆ ಪಾದಯಾತ್ರೆ ಮಾಡುವ ಭಕ್ತರು ಹೋಗುವ ದಿನದವರೆಗೆ ನೇಮ-ನಿಷ್ಠೆಯಿಂದ ಇರಲು ಈ ದೇವಾಲಯದಲ್ಲಿಯೇ ತಂಗಿರುತ್ತಾರೆ. ಜಮಾಪುರ, ರಾಮಸಾಗರ, ಕಂಪ್ಲಿ, ಕುರುಗೋಡು, ಕುಂಟೋಜಿ, ಎಚ್. ವೀರಾಪುರ, ಮಲಪನಗುಡಿ ಒಳಗೊಂಡಂತೆ ೨೪ ಜಗುಲಿಗಳು ಈ ಮಠದ ವ್ಯಾಪ್ತಿಯಲ್ಲಿ ಬರುತ್ತವೆ. ಅಲ್ಲಿನ ಎಲ್ಲ ಕಾರ್ಯಕ್ರಮಗಳು ಈ ಒಡೆಯರ ಮುಂದಾಳತ್ವದಲ್ಲಿ ನಡೆಯುವುದು ರೂಢಿಗತವಾದುದು.

**ತೆಕ್ಕಲಕೋಟೆ:** ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲೂಕಿನ ಉತ್ತರ ದಿಕ್ಕಿಗೆ ಇರುವ ಪಟ್ಟಣವಿದು. ಇದರ ಪ್ರಾಚೀನ ಹೆಸರು ತೆಂಕಣಕೋಟೆ. ತೆಂಕಣ ಎಂಬ ಅರಸ ಆಳ್ವಿಕೆ ಮಾಡಿದ ಪ್ರದೇಶವಿದು. ಹಾಗಾಗಿ ಈ ಹೆಸರು ಬಂತೆಂಬ ಪ್ರತೀತಿಯಿದೆ. ಈ ಪ್ರದೇಶದಲ್ಲಿ ದೊರೆಯುವ ಪುರಾತನ ಪಳಿಯುಳಿಕೆ ಅವಶೇಷಗಳು, ಕೋಟೆಗಳಿದ್ದರಿಂದ ಇದಕ್ಕೆ ತೆಂಗಣಕೋಟೆ ಕಾಲಾಂತರದಲ್ಲಿ ತೆಕ್ಕಲಕೋಟೆಯಾಗಿ ಪ್ರತಿವರ್ತನೆ ಆಗಿರಬಹುದು ಎಂದ್ಹೇಳಲಾಗುತ್ತದೆ. ಒಟ್ಟು ೨೦ ವಾರ್ಡ್‌ಗಳನ್ನು

ಹೊಂದಿರುವ ಪಟ್ಟಣ ಪಂಚಾಯ್ತಿಯನ್ನು ಹೊಂದಿರುವ ಪಟ್ಟಣದ ಮಧ್ಯದಲ್ಲಿ ಹಳೆಯದಾದ ಕಾಡು ಸಿದ್ಧಪ್ಪ ತಾತನ ಮಠವಿದೆ. ಈ ತಾತನ ಕುರಿತು ಚರಿತ್ರೆಯು ಕುತೂಹಲಕಾರಿಯಾಗಿದೆ. ಮದುವೆಯಾಗದ ಕಾಡುಸಿದ್ಧಪ್ಪ ಯೋಗಿಯು ಊರ ಹೊರವಲಯದ ಸುಡುಗಾಡಲ್ಲಿ ವಾಸವಾಗಿದ್ದನು. ಪವಾಡ ಪುರುಷನಾಗಿದ್ದ ಆತ ಜನರಿಗೆ ನೀಡುತ್ತಿದ್ದ ಉಪದೇಶ ಮತ್ತು ಹೇಳಿಕೆಗಳು ಹುಸಿ ಹೋಗುವುದಿಲ್ಲ ಎಂಬ ನಂಬುಗೆಯು ಸುತ್ತಮುತ್ತಲ ಪ್ರದೇಶದಲ್ಲೆಲ್ಲ ಹಬ್ಬಿತ್ತು. ಹಾಗಾಗಿ ಒಮ್ಮೆ ಮಕ್ಕಳಿಲ್ಲದ ದಂಪತಿಗಳು ಬಂದು ಮಕ್ಕಳ ಫಲಕ್ಕಾಗಿ ಕಾಡುಸಿದ್ಧಪ್ಪನನ್ನು ಬೇಡಿಕೊಂಡರು. ಅವರ ಭಕ್ತಿಗೆ ಮೆಚ್ಚಿ ಮಕ್ಕಳ ಫಲ ನೀಡಿದನು. ಜೊತೆಗೆ ಮೊದಲು ಹುಟ್ಟಿದ ಮಗುವನ್ನು ತನಗೆ ಶಿಷ್ಯನಾಗಿ ಕೊಡಬೇಕೆಂದು ಕೇಳಿದನು. ಅದರಂತೆಯೇ ಮೊದಲು ಜನಿಸಿದ ಮೂರು ತಿಂಗಳ ಹೆಣ್ಣುಮಗುವನ್ನು ಶಿಷ್ಯೆಯಾಗಿ ಕೊಡಲು ಬಂದರು. ಆಗ ಕಾಡುಸಿದ್ಧಪ್ಪ ಬಾಳೆದೆಲೆಯ ತೊಟ್ಟಿಲು ಕಟ್ಟಿ, ಅದರಲ್ಲಿ ಮಗುವನ್ನಿಟ್ಟು ಅಲ್ಲಿದ್ದ ಬಾವಿಯಲ್ಲಿ ಬಿಟ್ಟು ಹೋಗಲು ಹೇಳಿದನು. ಗುರುವಿನ ಮಾತಿಗೆ ಮರು ಮಾತನಾಡದೇ ಹಾಗೆಯೇ ಮಾಡಿದರು. ಅಲ್ಲಿದ್ದ ಜನರು ಬಾವಿಯಲ್ಲಿ ಮಗು ಹೇಗೆ ಬದುಕುತ್ತಿದೆ ಎಂದು ಕುತೂಹಲದಿಂದ ನೋಡಿದರೆ ಅವರಿಗೆ ಆಶ್ಚರ್ಯ ಕಾದಿತ್ತು. ಏಕೆಂದರೆ ಮಗುವಿನ ಬಾಯಿಗೆ ಜೇನುತುಪ್ಪ ಬೀಳುತ್ತಿತ್ತು. ಮಗುವು ನಡೆಯುವುದನ್ನು ಕಲೆತಾದ ಮೇಲೆ ಬಾವಿಯಿಂದ ಬಂದು ತಾತನ ಸೇವೆ ಮಾಡಿಕೊಂಡಿತ್ತು ಅಷ್ಟೊತ್ತಿಗಾಗಲೇ ದೇವಾಲಯವನ್ನು ಕಟ್ಟಲಾಗಿತ್ತು.

ಪ್ರಾಯಕ್ಕೆ ಬಂದ ಆಕೆಯು ಮದುವೆ ಮಾಡೆಂದು ಕಾಡುಸಿದ್ಧಪ್ಪ ತಾತನನ್ನು ಕೇಳಿದಳು. ಅದು ಬರಗಾಲ ಆವರಿಸಿದ್ದ ಸಮಯ. ಮಳೆಗಾಗಿ ಗುಡಿಯಲ್ಲಿ ಸಪ್ತಭಜನೆಗಳು ನಡೆಯುತ್ತಿದ್ದವು. ಆ ವೇಳೆಯಲ್ಲಿ ಹೊಲದಲ್ಲಿ ಬೆಳೆದಿದ್ದ ಸಜ್ಜೆತೆನೆಗಳನ್ನು ತಿನ್ನಬೇಡವೆಂದು ತಾತ ಹೇಳಿದರೂ ಕೇಳದೇ ತಿಂದಳು. ಭೀಕರವಾದ ಮಳೆ ಸುರಿಯಲಾರಂಭಿಸಿತು. ಗುಡುಗು-ಸಿಡಿಲು ಜೋರಾಗಿತ್ತು. ಇದಕ್ಕೆ ಹೆದರಿಕೊಳ್ಳಬೇಡವೆಂದು ತಾತ ಹೇಳಿದರೂ, ಹುಡುಗಿಯು ಹೆದರಿಕೊಂಡಳು. ಆಗ ಸಿಡಿಲು ಬಂದು ಆಕೆಯ ಗರ್ಭಕ್ಕೆ ಬಡಿದು, ಗರ್ಭವತಿಯಾದಳು. ನವಮಾಸಗಳು ತುಂಬಿ ಅವಳಿ ಗಂಡು ಮಕ್ಕಳಿಗೆ ಜನ್ಮ ನೀಡಿದಳು.

ಇಬ್ಬರು ಮಕ್ಕಳಲ್ಲಿ ಒಬ್ಬ ಪೋಲಿಯಾಗಿ ಅಲೆಯುತ್ತಿದ್ದ. ಹಣಕ್ಕಾಗಿ ತಾಯಿ ಮತ್ತು ತಾತನನ್ನು ಕಾಡಿಸುತ್ತಿದ್ದ. ಇದರಿಂದ ಕ್ರೋಧಗೊಂಡ ತಾತ ಒಂದು ಕಣ್ಣು ಬಿಟ್ಟು ನೋಡಿದಾಗ ಆ ಹುಡುಗ ಸತ್ತುಹೋದನು. ಮತ್ತೊಬ್ಬಾತನು ತುಂಬಾ ನಿಧಾನಸ್ಥನಾಗಿದ್ದನು. ಆ ಹುಡುಗ ಬೆಳೆದು ದೊಡ್ಡವನಾದಾಗ ತಾಯಿಗೆ ತನ್ನ ಮಗನಿಗೆ ಮದುವೆ ಮಾಡಬೇಕೆಂದು ಕೇಳಿದಳು. ಅದಕ್ಕೆ ತಾತ ಹುಡುಗನಿಗೆ ಮೊದಲು ಲಿಂಗಧಾರಣೆಯಾಗಲಿ ನಂತರ ಮದುವೆ ವಿಚಾರ ಎಂದು ಲಿಂಗಧಾರಣೆಯ ಸಿದ್ಧತೆಯಲ್ಲಿ ತೊಡಗಿದನು. ರಾಷ್ಟ್ರದ ವಿವಿಧ ಮೂಲೆಗಳಿಂದ ಸ್ವಾಮಿಗಳು ಈ ಕಾರ್ಯಕ್ರಮಕ್ಕೆ ಬಂದರು. ಆಗ ತಾತನು ಲಿಂಗಧಾರಣೆ ಮಾಡುವ ಸ್ವಾಮಿ ಮತ್ತು ಒಳಪಡುವ ವಟು ಇಬ್ಬರು ಕಾದ ಹಂಚಿನ

ಮೇಲೆ ಕುಳಿತುಕೊಂಡು ದೀಕ್ಷೆ ಕೊಡು–ತೆಗೆದುಕೊಳ್ಳುವುದಾಗಬೇಕು ಎಂದನು. ಹಾಲೇರಿ ಸ್ವಾಮಿಯು ಅದಕ್ಕೆ ಒಪ್ಪಿ ಈ ಲಿಂಗಧಾರಣೆ ಕಾರ್ಯ ಪೂರೈಸಿದರು.

ಲಿಂಗಧಾರಣೆಯ ನಂತರ ಆತನಿಗೆ ಮದುವೆ ಮಾಡಲು ತೀರ್ಮಾನಿಸಲಾಯಿತು. ಅದಕ್ಕಾಗಿ ತಾತ ಒಂದು ಗಾಡಿಯನ್ನು ಕಟ್ಟಿದನು. ಅದರಲ್ಲಿ ತಾಯಿ–ಮಗನನ್ನು ಕುಳ್ಳಿರಿಸಿ ಗಾಡಿಯನ್ನು ಹೊಡೆಯದೇ ಅದು ಎಲ್ಲಿಗೆ ಹೋಗಿ ನಿಲ್ಲುತ್ತದೆಯೋ ಆ ಊರಿನಲ್ಲಿ ನಿನಗಿಷ್ಟ ಬಂದ ಕನ್ಯೆಯ ಕೊರಳಿಗೆ ಮುತ್ತಿನ ಹಾರವೊಂದನ್ನು ಹಾಕಬೇಕೆಂದು ಕೊಟ್ಟು ಕಳುಹಿಸಿದ್ದರು. ಎತ್ತಿನಗಾಡಿ ತೆಕ್ಕಲಕೋಟೆಯಿಂದ ಹೊರಟು ಬಳ್ಳಾರಿಯ ಹಲಕುಂದಿಯ ಹತ್ತಿರ ನಿಂತಿತು. ಅಲ್ಲಿ ಆಟವಾಡುತ್ತಿದ್ದ ಹುಡುಗಿಯರಲ್ಲಿನ ಒಬ್ಬ ಹುಡುಗಿಯ ಕೊರಳಿಗೆ ಸರವನ್ನು ಹಾಕಿದಳು. ಇದರಿಂದ ಗಾಬರಿಯಾದ ಹುಡುಗಿ ಮನೆಗೆ ಓಡಿಹೋಗಿ, ತಾಯಿಗೆ ಅಲ್ಲಿ ನಡೆದ ವಿಷಯವನ್ನು ತಿಳಿಸಿದಳು. ಮಗಳ ಕೊರಳಲ್ಲಿದ್ದ ಸರವನ್ನು ಬಿಚ್ಚಿ ಹಾಕಿದಳು. ಅವರಿಗೆ ಸಾಕಷ್ಟು ತೊಂದರೆ ತಾಪತ್ರಯಗಳು ಜರುಗಿದವು. ಆ ಮಹಿಳೆಯು ಹಾಕಿದ ಹಾರವನ್ನು ತೆಗೆದದ್ದರಿಂದ ಈ ತೊಂದರೆಗಳು ಎಂದು ತಿಳಿದು ಅವರ ಹತ್ತಿರ ಹೋದರು. ತಾತನ ಅಣತಿಯಂತೆ ಆ ಹುಡುಗಿಯನ್ನು ಮದುವೆ ಮಾಡಿಕೊಡಲಾಯಿತು. ಅವರ ಸಂತತಿಯೇ ಇಂದಿಗೂ ತಾತನ ಪೂಜೆಯನ್ನು ಮಾಡಿಕೊಂಡು ಬರುತ್ತಲಿದೆ.

ತಾತನು ಬಳಸಿದ ಮಂಚ, ಧ್ಯಾನಕ್ಕೆ ಕುಳಿತುಕೊಳ್ಳುತ್ತಿದ್ದ ಗದ್ದಿಗೆಯ ಮೇಲೆ ತಾತನ ಪ್ರತಿಮೆಯಿದೆ. ಅಂದು ಮಗುವನ್ನು ಬೆಳೆಸಿದ, ಬಾವಿಯು ದೇವಾಲಯದ ಪಕ್ಕದಲ್ಲಿದೆ. ಕೋಟೆಗೋಡೆಯನ್ನು ನಡೆಸಿದಂತಹ ಪವಾಡಗಳನ್ನು ಮಾಡಿ ದೈವತ್ವಕ್ಕೇರಿದ ತಾತನಿಗೆ ಯುಗಾದಿ ಪಾಡ್ಯಕ್ಕೆ ಉಚ್ಛಾಯ ನಡೆಯುತ್ತದೆ. ಮರುದಿನ ರಥೋತ್ಸವ ಮಾಡುವರು. ಇಂದು ಎಲ್ಲಾ ಸಮುದಾಯಗಳಿಗೂ ದೈವವಾಗಿರುವ ಈತ ಎಲ್ಲರಿಂದಲೂ ಪೂಜೆಗೊಳ್ಳುತ್ತಿರುವನು. ಈ ಭಾಗದಲ್ಲಿಯೇ ಪ್ರಮುಖವಾದ ಜಾತ್ರೆ ಇದಾಗಿದೆ. ತಾಳೂರು, ಬಲಕುಂದಿ, ಮುದೇನೂರು ಗ್ರಾಮಗಳನ್ನು ಒಳಗೊಂಡಂತೆ ಸಿರುಗುಪ್ಪ ತಾಲೂಕಿನ ಸಾಕಷ್ಟು ಕುರುಬರಿಗೆ ಗುರುಗಳಿವರು. ಅಲ್ಲಿನ ಸಾಮಾಜಿಕ, ಧಾರ್ಮಿಕ ಕಾರ್ಯಕ್ರಮಗಳನ್ನು ಈ ಗುರುಗಳೇ ನಡೆಸಿಕೊಡುತ್ತಾರೆ.

**ಸೀರ್ಪಿ ಕೊಟ್ಟಾಲು:** ಬೆಳಗುಪ್ಪ ಮಂಡಲಕ್ಕೆ ಸೇರಿರುವ ಪ್ರಾಚೀನ ಗ್ರಾಮವಾದ ಇದು ಕಲ್ಯಾಣದುರ್ಗಂ–ಬೆಳಗುಪ್ಪ ರಾಜ್ಯರಸ್ತೆಯಲ್ಲಿ ಬರುವ ಗ್ರಾಮ. ಕುರುಬ ಸಮುದಾಯವೇ ವಾಸಿಸುತ್ತಿದ್ದ ಪ್ರಾಚೀನ ಗ್ರಾಮವಾದ ಇಲ್ಲಿಂದು ಕುರುಬ ಸಮುದಾಯದವರು ಇಲ್ಲ. ಈ ಊರಿನ ಪ್ರಾಚೀನ ಹೆಸರು ಕುರುವೋಳ ತೋಟ(ಕುರುಬರ ತೋಟ). ಊರಿನ ಬಲಭಾಗಕ್ಕೆ ಕುರುಬರು ವಾಸಿಸುತ್ತಿದ್ದ ಕಾಲದಲ್ಲಿ ಕುರುಬರ ವೀರಸಿದ್ಧಮ್ಮಳು ಒಂಬತ್ತು ವರಹಗಳನ್ನು ಖರ್ಚು ಮಾಡಿ ಕಟ್ಟಿಸಿದ ಕೆರೆಯಿದೆ. ಅದಕ್ಕೆ ಕುರುಬೋಳ ಕೆರುವು(ಕುರುಬರ ಕೆರೆ) ಎಂದು ಇಂದಿಗೂ ಕರೆಯುವರು. ಕೆರೆಯ ಪಕ್ಕದಲ್ಲಿ ವೀರಮಾಳಮ್ಮನ ಕಲ್ಲಿನ ಗುಡಿಯಿದ್ದು ಅದು ಬಿದ್ದು ಹೋಗಿದೆ. ವೀರಮಾಳಮ್ಮನ ಶಿಲ್ಪ, ಎದುರಿಗೆ

ದೀಪಸ್ತಂಭ ಹಾಗೂ ಬೇವಿನ ಮರವಿದೆ. ಅಲ್ಲಿನ ಕುರುಹುಗಳು ಹಿಂದೆ ದೇವಿಯು ಪೂಜೆ ಗೊಳ್ಳುತ್ತಿದ್ದುದ್ದನ್ನು ತಿಳಿಸುತ್ತವೆ.

ಊರ ಹೊರಗಿನ ಬಯಲಿನಲ್ಲಿ ರೇವಣಸಿದ್ಧನ ಪುರಾತನ ದೇವಾಲಯವಿದೆ. ಪೂರ್ವಾಭಿಮುಖ ವಾಗಿರುವ ದೇವಾಲಯವು ಗರ್ಭಗೃಹ, ನವರಂಗ ಮತ್ತು ಸಭಾಮಂಟಪವನ್ನು ಒಳಗೊಂಡಿದೆ. ಸುತ್ತಲೂ ಚೌಕಾಕಾರದಲ್ಲಿ ಕಾಂಪೌಂಡು ಕಟ್ಟಲಾಗಿದ್ದು, ಬಲಭಾಗದಲ್ಲಿ ಒಂದು ಅನ್ನ ಛತ್ರವಿದೆ. ಅದು ಶಿಥಿಲಾವಸ್ಥೆಯಲ್ಲಿದೆ. ನಾಗರ ಪಂಚಮಿಯಂದು ಬರುವ ಒಡೆಯ ಅಣ್ಣ-ತಮ್ಮಂದಿರು ಮತ್ತು ಭಕ್ತರು ಇಲ್ಲಿಯೇ ಮೂರು ದಿನಗಳಿದ್ದು, ರೇವಣಸಿದ್ಧನ ಉತ್ಸವ ಮಾಡಿಕೊಂಡು ಹೋಗುವರು. ಗುಡಿಯ ಎದುರಿಗೆ ೫ ಅಡಿಯಷ್ಟು ಎತ್ತರದ ದೀಪಸ್ತಂಭವಿದೆ. ಜೊತೆಗೆ ಇತ್ತೀಚೆಗೆ ೧೫ ಅಡಿ ಎತ್ತರದ ದೀಪಸ್ತಂಭವನ್ನು ನಿರ್ಮಿಸಲಾಗಿದೆ. ೨೦೦೬ರಲ್ಲಿ ದೇವಾಲಯವನ್ನು ನವೀಕರಿಸಲಾಗಿದೆ. ಹಾಗಾಗಿ ಗರ್ಭಗೃಹದಲ್ಲಿದ್ದ ಉದ್ಭವ ಲಿಂಗವನ್ನು ಹಂಪೆಯ ರಾಮಲಕ್ಷ್ಮಣ ದೇವಾಲಯದ ಹತ್ತಿರ ಹರಿಯುವ ತುಂಗಭದ್ರ ನದಿಯ ತಿರುಗು ಮಡುಗುವಿನಲ್ಲಿ ಬಿಟ್ಟು ಬರಲಾಗಿದೆ. ಅನಂತಪುರಂ ಹತ್ತಿರದ ಅರ್ಲಗಡ್ಡೆಯಲ್ಲಿ ಹೊಸದಾಗಿ ಮಾಡಿಸಿ ತಂದ ಶಿವಲಿಂಗ ಮತ್ತು ನಂದಿ ವಿಗ್ರಹಗಳನ್ನು ತಂದು ಜೀವಕಾಳು ತುಂಬಿಸಿಕೊಂಡು ಬಂದು ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಲಾಗಿದೆ. ಈ ಶಿವಲಿಂಗಕ್ಕೆ ಊರ ನಾಯಕ ಸಮುದಾಯದವರು ಕಂಚಿನ ಕಿರೀಟವನ್ನು ಮಾಡಿಸಿದ್ದಾರೆ. ವಿಶೇಷ ಪೂಜೆ ಮತ್ತು ಉತ್ಸವಗಳ ಸಂದರ್ಭದಲ್ಲಿ ಈ ಕಿರೀಟವನ್ನು ತೊಡಿಸುವರು.

ನವರಂಗದ ಬಲಭಾಗದಲ್ಲಿ ನಾಗರಹಾವಿನ ಶಿಲ್ಪ ಎಡಭಾಗದಲ್ಲಿ ಟಗರಿನ ಶಿಲ್ಪವನ್ನು ಗೋಡೆಯ ಕಲ್ಲಿಯಲ್ಲಿಯೇ ಖಂಡರಿಸಿದ್ದಾರೆ. ಎರಡು ಕಲ್ಲು ಕಂಬಗಳಿಂದ ಅಲಂಕೃತವಾದ ತೆರೆದ ಸಭಾಮಂಟಪವಿದೆ. ದೇವಾಲಯದ ಮುಂದಿನ ದೀಪಸ್ತಂಭದ ಪಕ್ಕದಲ್ಲಿ ದೊಡ್ಡ ಬೇವಿನಮರವಿದೆ. ಬುಡದಲ್ಲಿ ಮನುಷ್ಯರು ತೂರಿ ಬರಬಹುದಾದಷ್ಟು ಕಿಂಡಿಯಿದೆ. ಸಂತಾನವಿಲ್ಲದ ಸ್ತ್ರೀಯು ಭಕ್ತಿಯಿಂದ ಆ ಕಿಂಡಿಯಲ್ಲಿ ತೂರಿಬಂದು ರೇವಣಸಿದ್ಧನಿಗೆ ಪೂಜೆ ಸಲ್ಲಿಸಿ ಹರಕೆ ತೀರಿಸಿದರೆ ಮಕ್ಕಳಾಗುತ್ತದೆ ಎಂದು ಅದಕ್ಕೆ ಸಂಬಂಧಿಸಿದಂತೆ ಸಾಕಷ್ಟು ನಿದರ್ಶನಗಳನ್ನು ಹೇಳುವರು.

ಹುಣ್ಣಿಮೆ-ಅಮಾವಾಸ್ಯೆ, ನಾಗರ ಪಂಚಮಿ, ಶಿವರಾತ್ರಿಯಂಥ ವಿಶೇಷ ದಿನಗಳಲ್ಲಿ ರೇವಣನನ್ನು ಪೂಜಿಸಿದ ನಂತರ ಅಲ್ಲಿನ ನೀರು, ಹೂವು-ಹಣ್ಣು ಹೊರಹೋಗಲು ಗರ್ಭಗುಡಿಯಲ್ಲಿ ಒಂದು ದೋಣಿ(ಕಿಂಡಿ)ಯನ್ನು ಮಾಡಲಾಗಿದೆ. ಆ ಮಾರ್ಗವು ಊರಲ್ಲಿರುವ ವೀರಭದ್ರಸ್ವಾಮಿ ದೇವಾಲಯದ ಹತ್ತಿರದ ಬಾವಿಯವರೆಗೂ ಇತ್ತು. ಇಂದು ಮುಚ್ಚಿ ಹೋಗಿದೆ. ಮೊದಲು ಇಲ್ಲಿ ಪೂಜಿಸಿದ ವಸ್ತುಗಳೆಲ್ಲ ಅಲ್ಲಿಂದ ಊರಲ್ಲಿರುವ ದೇವರಬಾವಿಯಲ್ಲಿ ಬಂದು ತೇಲುತ್ತಿದ್ದವು. ಆ ನೀರನ್ನೆ ರೇವಣಸಿದ್ಧ ಮತ್ತು ವೀರಭದ್ರಸ್ವಾಮಿ ದೈವಗಳನ್ನು ಪೂಜಿಸಲು ಇಂದಿಗೂ ಬಳಸಲಾಗುತ್ತದೆ. ಆ

ಬಾವಿಯ ನೀರು ಇಂದಿಗೂ ಬತ್ತಿಲ್ಲ. ಅತೀ ಕಡಿಮೆ ಮಳೆ ಬೀಳುವ ಪ್ರದೇಶವಾದ ಇಲ್ಲಿ ಬೋರ್‌ವೆಲ್‌ಗಾಗಿ ೩೦೦-೪೦೦ ಅಡಿಯಷ್ಟು ಕೊರೆಯಿಸಿದರೂ ನೀರು ಸಿಗುವುದು ಕ್ಲಿಷ್ಟಕರವಾಗಿದೆ. ಆದರೂ ಈ ಬಾವಿಯಲ್ಲಿ ನೀರಿರುವುದು ಸೋಜಿಗದ ಸಂಗತಿಯಾಗಿದೆ. ದೇವರದೆಂಬ ಕಾರಣಕ್ಕೆ ಈ ಬಾವಿಯ ನೀರನ್ನು ಯಾರು ಬಳಸುವುದಿಲ್ಲ.

ಈ ಗ್ರಾಮದಲ್ಲಿ ಕುರುಬರ ಒಡೆಯರಾರು ಇಲ್ಲದಿರುವುದರಿಂದ ವೀರಭದ್ರಸ್ವಾಮಿ ದೇವಾಲಯದ ಪೂಜಾರಿ ಪ್ರಸಾದ ಸ್ವಾಮಿಯನ್ನೇ ರೇವಣಸಿದ್ಧ ದೇವಾಲಯಕ್ಕೂ ಅರ್ಚಕರನ್ನಾಗಿ ನೇಮಿಸಲಾಗಿದೆ. ಆತನಿಗೆ ವರ್ಷಕ್ಕೆ ಇಂತಿಷ್ಟು ಎಂದು ಹಣ, ದವಸ-ಧಾನ್ಯಗಳನ್ನು ನೀಡುವರು. ದೇವಾಲಯದ ಸುತ್ತಲೂ ದೈವಕ್ಕೆ ಸಂಬಂಧಿಸಿದ್ದು ಮೂರು ಎಕರೆ ಜಮೀನಿದೆ. ಆ ಜಮೀನನ್ನು ಬೆಳಗುಪ್ಪದ ಆಫೀಸರ್ ಒಬ್ಬರು ಈ ಊರಿಗೆ ಇನ್‌ಚಾರ್ಜ್‌ನಲ್ಲಿ ಬಂದಾಗ ಇಲ್ಲಿನ ಸರ್‌ಪಂಚ್(ಗ್ರಾಮ ಪಂಚಾಯ್ತಿ ಅಧ್ಯಕ್ಷ)ನೊಂದಿಗೆ ಸೇರಿ ಈ ಭೂಮಿಯನ್ನು ಮಾರೆಪ್ಪ ಎಂಬಾತನಿಗೆ ಪಹಣಿ ಮಾಡಿಸಿಕೊಟ್ಟಿದ್ದಾರೆ. ಆತ ಈ ಜಮೀನನ್ನು ಆಧಾರವಾಗಿಟ್ಟು, ಬ್ಯಾಂಕ್‌ನಲ್ಲಿ ಸಾಲ ತೆಗೆದುಕೊಂಡಿದ್ದಾನೆ. ಇದರ ಹಕ್ಕು-ಬಾಧ್ಯತೆಗಳನ್ನು ನಮಗೆ ಮರಳಿಸಿ ಕೊಡಬೇಕೆಂದು ಕುರುಬ ಜಂಗಮರು ೧೯೮೦ರಲ್ಲಿ ಧರ್ಮಾವರಂ ರೆವಿನ್ಯೂ ಡಿವಿಜನಲ್ ಆಫೀಸರ್ ಅವರಿಗೆ ಬರೆದ ಪತ್ರದ ಒಕ್ಕಣೆಯೊಂದು ಹೀಗಿದೆ:

ಮಹಾರಾಜ ರಾಜಶ್ರೀ ಧರ್ಮವರಂ ರೆವಿನ್ಯೂ ಡಿವಿಜನಲ್ ಆಫೀಸರು ಅವರು ಸಮಕ್ಷಮಕ್ಕೆ ಅನಂತಪುರ ಜಿಲ್ಲೆ ಕಲ್ಯಾಣದುರ್ಗ ಸಬ್‌ಡಿವಿಜನ್‌ಗೆ ಸೇರಿದ ವೇಪಲಪರ್ತಿ, ಲಕ್ಷ್ಮಂಪಲ್ಲಿ, ಕರ್ತನಪರ್ತಿ ಕರ್ನಾಟಕ ರಾಜ್ಯದ ಪಾವಗಡ, ಜಾಲೋಡು ಗ್ರಾಮಗಳಲ್ಲಿ ನೆಲೆಸಿರುವರು ಹಾಗೂ ಇಲ್ಲಿ ಮನೆತನಗಳನ್ನು ಹೊಂದಿರುವರು- ಸೀರ್ಪಿ ಗ್ರಾಮದಲ್ಲಿರುವ ಸಿದ್ಧೇಶ್ವರಸ್ವಾಮಿ ದೇವಾಲಯಕ್ಕೆ ಭಕ್ತರಾದ ನಾವು ವಿನಯಪೂರ್ವಕವಾಗಿ ಪ್ರಾರ್ಥಿಸುವ ಮನವಿ ಏನೆಂದರೆ...

ಸ್ವಾಮಿ

ಕಲ್ಯಾಣದುರ್ಗ ತಾಲೂಕು ಶೀರ್ಪಿ ಗ್ರಾಮದ ಪಶ್ಚಿಮ(ಪಡುವಣ) ದಿಕ್ಕಿನಲ್ಲಿ ಸರ್ವೇ ನಂಬರು ೧೯೪-೩ ನ-೨-೦೭ ಭೂಮಿ ಸರ್ಕಾರದ ಅಧೀನದಲ್ಲಿರುವ ಜಮೀನಿದೆ. ಸದರಿ ಜಮೀನಿನಲ್ಲಿ ನಮ್ಮೆಲ್ಲರಿಗೂ ಮನೆ ದೇವರಾದ ಸಿದ್ಧೇಶ್ವರಸ್ವಾಮಿಯವರ ದೇವಾಲಯವಿದೆ. ಸದರಿ ದೇವಾಲಯಕ್ಕೆ ೪೦(ನಲವತ್ತು) ವಿಸ್ತೀರಣವುಳ್ಳ ಕಾಂಪೌಂಡು ಪ್ರದೇಶವಿದೆ. ಇದೇ ಸರ್ವೇ ನಂಬರಿನ ಉಳಿದ ಭೂಮಿಯೂ ಕೂಡ ಈ ದೇವಾಲಯಕ್ಕೆ ಸೇರಿದ್ದಾಗಿದೆ. ಸದರಿ ದೇವಾಲಯವನ್ನು ಕಟ್ಟಿಸಿ ಸುಮಾರು ೮೦೦(ಎಂಟುನೂರು) ವರ್ಷಗಳಾಗಿದೆ. ಅಂದಿನಿಂದಲೂ ಕೂಡ ನಮ್ಮ ಹಿರಿಯರು ಮತ್ತು ನಾವು ಸಹಿತ ಸದರಿ ದೇವಾಲಯಕ್ಕೆ ಬೇರೆ ಬೇರೆ ಗ್ರಾಮಗಳಿಂದ ಪ್ರತಿ ವರ್ಷದ ಶ್ರಾವಣ ಮಾಸದಲ್ಲಿ ನಾಗರ ಪಂಚಮಿ ಹಬ್ಬವನ್ನು ಸದರಿ ಗುಡಿಯ ಹತ್ತಿರವೇ ಜರುಗಿಸಿಕೊಳ್ಳುತ್ತ ಬರುತ್ತಿದ್ದೇವೆ. ಪ್ರತಿ

ಮೂರು ವರ್ಷಗಳಿಗೊಮ್ಮೆ ಸಿದ್ಧೇಶ್ವರಸ್ವಾಮಿ ದೇವಾಲಯದಲ್ಲಿ ನಾವು ಸುಮಾರು ೬೦೦(ಆರುನೂರು) ಜನ ಭಕ್ತರು ಕಲೆತು ಲಿಂಗಧಾರಣೆ ಮಾಡುತ್ತೇವೆ. ಇದನ್ನು ನಮ್ಮ ಹಿರಿಯರು ನಿರ್ಣಯಿಸಿದ ಪ್ರಕಾರ ಅದ್ಭುತವಾಗಿ(ಶಾಸ್ತ್ರಬದ್ಧವಾಗಿ) ಜರುಗಿಸುತ್ತೇವೆ. ದೇವಾಲಯದ ಕಾಂಪೌಂಡು ಪಕ್ಕದಲ್ಲಿರುವ ಬಯಲು ಪ್ರದೇಶದಲ್ಲಿ ಎತ್ತು-ಗಾಡಿಗಳನ್ನು ಬಿಟ್ಟುಕೊಂಡು, ಸಾಮಾನು ಸರಂಜಾಮುಗಳ ಅಂಗಡಿಗಳನ್ನು, ಅಡುಗೆಯನ್ನು ಅಲ್ಲಿಯೇ ಮಾಡಿಕೊಂಡು ಮೂರು ದಿನಗಳು ದೇವರ ಕಾರ್ಯಗಳನ್ನು ಮಾಡಿಕೊಂಡಿರುತ್ತೇವೆ. ಸದರೀ ದೇವಾಲಯಕ್ಕೆ ನಮ್ಮ ಪೂರ್ವಿಕರಿಂದ ಹಿಡಿದು ನಮ್ಮ ವಂಶಪಾರಂಪರ್ಯವಾಗಿ ಪೂಜೆ ಮಾಡಿಕೊಂಡು ನೇಮನಿಷ್ಠೆಯಿಂದ ನಡೆದುಕೊಳ್ಳುತ್ತಿದ್ದೇವೆ. ನಾವೆಲ್ಲರು ಕುರುಬ ಜಂಗಮರು ಆಗಿದ್ದೇವೆ. ಈ ವಿಧವಾಗಿ ನಾವು ನಮ್ಮ ಮನೆದೇವರಿಗೆ ಭಕ್ತಿಯಿಂದ ನಡೆದುಕೊಳ್ಳುತ್ತಿರುವಾಗ ಒಮ್ಮೆ ಶೀರ್ಪಿ ಗ್ರಾಮಕ್ಕೆ ಬೆಳಗುಪ್ಪ ಗ್ರಾಮದಲ್ಲಿರುವ ಆಫೀಸರ್ ಒಬ್ಬರು ಇನ್‌ಚಾರ್ಜ್‌ನಲ್ಲಿ ಇರುವ ಸಮಯದಲ್ಲಿ ಸದರೀ ದೇವಾಲಯದ ಕಾಂಪೌಂಡು ಪ್ರದೇಶವನ್ನು ಹೊರತುಪಡಿಸಿ ಉಳಿದ ಭೂಮಿ ಅದರಲ್ಲಿ ಗಿಡಮರಗಳು ಸೇರಿ ಎಲ್ಲವು ನಮಗೆ ಸೇರಿದ್ದು. ಆದರೆ ನಮ್ಮ ಊಹೆಯ ಪ್ರಕಾರವಾಗಿ ಸುಮಾರು ರೂ. ೨೫,೦೦೦(ಇಪ್ಪತ್ತೈದು ಸಾವಿರಗಳು) ರೂಪಾಯಿಗಳಿಗೆ ಬೆಲೆಬಾಳುವ ಈ ಆಸ್ತಿಯನ್ನು ಹಿಂದಿನಿಂದಲೂ ವಂಶಪಾರಂಪರ್ಯವಾಗಿ ನಾವು ನಡೆದುಕೊಂಡು ಬಂದಿರುವ ಮನೆ ದೇವರನ್ನು ಒಳಗೊಂಡಂತೆ ಎಲ್ಲಾ ಜಮೀನನ್ನು ಶೀರ್ಪಿ ಗ್ರಾಮದಲ್ಲಿ ನೆಲೆಸಿರುವ ಹರಿಜನ ಮಾರೆಪ್ಪ ಎಂಬಾತನಿಗೆ ಪಟ್ಟ ಪಹಣೆ ಮಾಡಿಸಿ ಕೊಟ್ಟಿರುವರೆಂದು ನಮಗೆ ಸಮಾಚಾರ ಬಂದಿದೆ. ಸ್ವಾಮಿ ಇದು ತುಂಬಾ ಅನ್ಯಾಯವಾದ ಸಂಗತಿ. ನಾವು ಪೂರ್ವಕಾಲದಿಂದಲೂ ಇಂದಿನವರೆಗೆ ನಮ್ಮ ಸಿದ್ಧೇಶ್ವರ ದೇವರಿಗೆ ಭಕ್ತಿಯಿಂದ ನಡೆದುಕೊಳ್ಳುತ್ತೇವೆ. ಹಿಂದಿನಿಂದಲೂ ಸದರೀ ನಮ್ಮ ದೇವಾಲಯವು ಮತ್ತು ಸದರಿ ಸರ್ವೆ ನಂಬರು ೧೯೪-೩ ನಂ,-೨-೦೭ ಜಮೀನು ಸಹ ನಮ್ಮ ದೇವರಿಗೆ ಸೇರಿದ್ದು ಮತ್ತು ನಮ್ಮೆಲ್ಲರಿಗೆ ಸೇರಿದ್ದು. ಹಾಗಾಗಿ ಸ್ವಾಮಿ ನಮ್ಮ ದೇವಾಲಯದ ಸದರಿ ನಂ-೨-೦೭ ವಿಸ್ತೀರಣದ ಪ್ರದೇಶ(ಕಾಂಪೌಂಡು)ವನ್ನು ಮತ್ತೊಬ್ಬರಿಗೆ ಪಟ್ಟ-ಪಹಣೆ ಕೊಡಲಿಕ್ಕೆ ಯಾವುದೇ ಆಧಾರಗಳು ಇಲ್ಲ. ಹಾಗಾಗಿ ಸ್ವಾಮಿ ನಾವು ಎಲ್ಲರೂ ನಮ್ಮ ದೇವರ ಮೇಲಿರುವ ಭಕ್ತಿಯಿಂದ, ತಮ್ಮ ಮೇಲಿರುವ ಗೌರವದಿಂದ ನಮ್ಮ ಕಷ್ಟಗಳನ್ನು ಹೇಳಿಕೊಳ್ಳುತ್ತಿದ್ದೇವೆ. ಈಗ ಪಟ್ಟದಾರನಾದ ಹರಿಜನ ಮಾರೆಪ್ಪ ನಮ್ಮನ್ನು ದೇವಾಲಯದ ಹತ್ತಿರ ಪೂಜೆಗೆ ಹೋಗುವುದಕ್ಕೂ ಬಿಡುತ್ತಿಲ್ಲ. ಹಾಗಾಗಿ ನಮಗೆ ತುಂಬ ಅನ್ಯಾಯವಾಗಿದೆ. ಈ ವಿಷಯಗಳನ್ನು ಗಮನಿಸಿ ತಾವು ಹರಿಜನ ಮಾರೆಪ್ಪನಿಗೆ ಕೊಟ್ಟ ಪಟ್ಟ-ಪಹಣೆಯನ್ನು ಕ್ಯಾನ್ಸಲ್ ಮಾಡಿ ಈ ದೇವಾಲಯದ ಭೂಮಿಯು ನಮಗೆ ದೊರೆಯುವಂತೆ ಮಾಡಬೇಕೆಂದು ತಮ್ಮಲ್ಲಿ ಪ್ರಾರ್ಥಿಸುತ್ತೇವೆ.

**ದಿನಾಂಕ: ೨೦.೦೭.೧೯೮೦** **ಇಂತಿ ತಮ್ಮ ವಿಧೇಯರು**

ಈ ಪತ್ರದ ಕೊನೆಗೆ ೧೨ ಜನರ ಸಹಿ ಮತ್ತು ಇಬ್ಬರ ಹೆಬ್ಬೆಟ್ಟಿನ ಗುರುತುಗಳಿವೆ. ಇದು ತೆಲುಗು ಲಿಪಿ ಮತ್ತು ಭಾಷೆಯಲ್ಲಿದೆ. ಮೂಲ ಪತ್ರವನ್ನು ಕನ್ನಡಕ್ಕೆ ಅನುವಾದ ಮಾಡಿ ಕೊಡಲಾಗಿದೆ. ಇತ್ತೀಚೆಗೆ ನಾಲ್ಕೈದು ವರ್ಷಗಳ ಕೆಳಗೆ ಮಾರೆಪ್ಪ ಆ ಭೂಮಿಯನ್ನು ದೇವಾಲಯಕ್ಕೆ ಮರಳಿ ಕೊಡುತ್ತೇನೆ. ನನಗೆ ಅದರ ಬೆಲೆ ಕೊಡಿ ಎನ್ನುತ್ತಿದ್ದಾನೆ. ಏಕೆಂದರೆ ಆ ಭೂಮಿ ಪಡೆದಾಗಿನಿಂದಲೂ ಆತನಿಗೆ ಸಾಕಷ್ಟು ತೊಂದರೆ–ತಾಪತ್ರಯಗಳು ಆಗುತ್ತಲೇ ಇವೆ. ಇದನ್ನು ಯಾವ ರೀತಿಯಲ್ಲಾದರೂ ಆಸ್ಥೆವಹಿಸಿ ಬಿಡಿಸಿಕೊಳ್ಳುವತ್ತ ಶ್ರಮಿಸಬೇಕಿದೆ. ಆದರೆ ಈ ಮೂಲಮಠಕ್ಕೆ ಸೇರಿದ ಒಡೆಯರು ಈ ಗ್ರಾಮದಲ್ಲಿ ಇಲ್ಲದಿರುವುದೇ ಈ ಸಮಸ್ಯೆ ಪರಿಹರಿಸಿಕೊಳ್ಳಲು ಹಿನ್ನೆಡೆಯಾಗಿದೆ.

ಈ ಮಠವು ಅತೀ ಪ್ರಾಚೀನವಾದುದಾಗಿದ್ದು, ಇದಕ್ಕೆ ಸಂಬಂಧಿಸಿದ ಒಡೆಯ ಅಣ್ಣ–ತಮ್ಮಂದಿರು ವೇಪಲಪರ್ತಿ, ಲಕ್ಷ್ಮಂಪಲ್ಲಿ, ಕರ್ತನಪರ್ತಿ, ಚಾವಾಲ, ಕುಂದುರ್ಪಿ, ಮತ್ತು ಜಾಲೋಡು ಗ್ರಾಮಗಳಲ್ಲಿದ್ದಾರೆ. ದಿನಾಲು ಎರಡು ಪೂಜೆ, ಭಾನುವಾರ ವಾರದ ಪೂಜೆ, ಹುಣ್ಣಿಮೆ–ಅಮಾವಾಸ್ಯೆ, ಶಿವರಾತ್ರಿ ವಿಜಯದಶಮಿಯಲ್ಲಿ ವಿಶೇಷ ಪೂಜೆ ಪುನಸ್ಕಾರಗಳು ಮಾಡುವರು. ನಾಗರ ಪಂಚಮಿಯಂದು ಮೂರು ದಿನಗಳು ರೇವಣಸಿದ್ಧನ ಉತ್ಸವ ನಡೆಸುವರು. ಅದಕ್ಕೆ ಒಡೆಯರು ಮತ್ತು ಸಂಬಂಧಿಸಿದ ಭಕ್ತರೆಲ್ಲ ಎತ್ತಿನಗಾಡಿಗಳನ್ನು ಕಟ್ಟಿಕೊಂಡು ಬಂದು ವಿಜೃಂಭಣೆಯಿಂದ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ.

**ಲಕ್ಷ್ಮಂಪಲ್ಲಿ:** ಶೆಟ್ಟೂರು ಮಂಡಲದಿಂದ ೩೦ ಕಿ.ಮೀ. ದೂರದಲ್ಲಿ ಬರುವ ಗ್ರಾಮ. ಇಲ್ಲಿ ಒಡೆಯರ ಮೂರು ಮನೆಗಳು ಹಾಗೆಯೇ ಕುರುಬರು ಊರ ಜನಸಂಖ್ಯೆಯ ಶೇ. ೫೦ರಷ್ಟಿದ್ದಾರೆ. ಶತಮಾನದಷ್ಟು ಹಳೆಯದಾದ ದೇವಾಲಯವು ಪಶ್ಚಿಮಾಭಿಮುಖವಾಗಿದ್ದು, ಗರ್ಭಗೃಹದಲ್ಲಿ ಉದ್ಭವ ಲಿಂಗವಿದೆ. ಇತ್ತೀಚೆಗೆ ಲಿಂಗದ ಮೇಲೆ ಹುತ್ತ ಬೆಳೆದು ಅದು ಗರ್ಭಗೃಹವನ್ನೆಲ್ಲ ಆಕ್ರಮಿಸಿಕೊಂಡಿದೆ. ಹಾಗಾಗಿ ಇಂದು ಲಿಂಗ ನೋಡಲು ಕಾಣಿಸುವುದಿಲ್ಲ. ಪೂಜೆ ಮಾಡುವುದಕ್ಕೆ ತೊಂದರೆಯಾಗುತ್ತದೆ ಎಂದು ಹುತ್ತವನ್ನು ಕೆಡವಿದಂತೆಲ್ಲ ಅದು ಮತ್ತೆ ಮತ್ತೆ ಬೆಳೆದು ಬರುತ್ತಲಿದೆ. ಆದ್ದರಿಂದ ಹೊರಗೆ ನಿಂತೇ ದಿನಾಲು ಪೂಜೆ ಮಾಡಲಾಗುತ್ತದೆ. ಇದು ಹಳೆಯ ದೇವಾಲಯವಾಗಿರುವುದರಿಂದ ಶಿಥಿಲಾವಸ್ಥೆಯಲ್ಲಿದೆ. ಈ ಮಠದ ಎಡಗಡೆ ಹಿಂದಿನ ಒಡೆಯರ ಮೂರು ಸಮಾಧಿಗಳಿವೆ. ಚಿಕ್ಕಣ್ಣ ಒಡೆಯರು ಇದರ ಪೂಜಾರಿಗಳಾಗಿ, ಭಕ್ತರಿಗೆ ಗುರುಗಳಾಗಿ ಸೇವೆ ಸಲ್ಲಿಸುತ್ತಿರುವರು.

ಶೀರ್ಪಿ ಮಠದ ಅಣ್ಣ–ತಮ್ಮಂದಿರಾದ ಇವರು ತಮಗೆ ಸಂಬಂಧಿಸಿದ ರುದ್ರಮ್ಮಂಪಲ್ಲಿ, ಎನುಮುಲದೊಡ್ಡಿ, ಅಲ್ಲಾಪುರ, ಮೂರುಡಿಕಿ, ತಿಪ್ಪನಪಲ್ಲಿ, ಸಿರಿವಾಳ(ಓಬಳಾಪುರ), ಪಾತಪ್ಪನ ಗುಡಿ, ಪೆನಗಲ್ಲು, ಮಹಾಂತಪುರಂ, ಬಂಡಮೀದಪಲ್ಲಿ, ಚೆಂತರಪಲ್ಲಿ, ತುಮಕುಂಟ, ಯರಗುಂಟ, ಕಲ್ಲಿಪಲ್ಲಿಯನ್ನು ಒಳಗೊಂಡಂತೆ ತಮ್ಮ ವ್ಯಾಪ್ತಿಗೆ ಒಳಪಟ್ಟ ೩೦ಕ್ಕೂ ಅಧಿಕ ಭಕ್ತರ ಹಳ್ಳಿಗಳಿಗೆ

ಗುರುಗಳಾಗಿದ್ದಾರೆ. ಹಾಗಾಗಿ ಆ ಹಳ್ಳಿಗಳಲ್ಲಿ ನಡೆಯುವ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳನ್ನು ನೇಮದಿಂದ ಮಾಡಿ ಬರುತ್ತಾರೆ. ರೇವಣಸಿದ್ಧನಿಗೆ ದಿನಾಲು ಎರಡು ಪೂಜೆ, ವಾರದ ಪೂಜೆ, ಹುಣ್ಣಿಮೆ-ಅಮಾವಾಸ್ಯೆ, ಶಿವರಾತ್ರಿಯಂಥ ದಿನಗಳಲ್ಲಿ ವಿಶೇಷ ಪೂಜೆ ನಡೆಯುತ್ತದೆ. ವಿಜಯದಶಮಿಯಂದು ರೇವಣಸಿದ್ಧನ ಒಡೆಯರು ಊರ ದೈವಗಳನ್ನು ಕರೆದುಕೊಂಡು ಹೋಗಿ ಬನ್ನಿ ಮುಡಿಯುವುದು ಮತ್ತು ಅಂಬೊಡೆಯುವ ಕಾರ್ಯಕ್ರಮ ನಡೆಸುವರು.

**ಕರ್ತನಪರ್ತಿ:** ಕಲ್ಯಾಣದುರ್ಗಂ ಮಂಡಲದಿಂದ ೧೨ ಕಿ.ಮೀ. ದೂರದಲ್ಲಿರುವ ಗ್ರಾಮ. ರೇವಣಸಿದ್ಧನ ದೇವಾಲಯವನ್ನು ೧೦ ವರ್ಷಗಳ ಕೆಳಗೆ ಕಟ್ಟಿಸಲಾಗಿದೆ. ಇಲ್ಲಿನ ಒಡೆಯರು ಸೀರ್ಪಿ ಮಠಕ್ಕೆ ಸಂಬಂಧಿಸಿದ ಅಣ್ಣ-ತಮ್ಮಂದಿರೆ. ಶಾಂತಮುತ್ತಯ್ಯ ಮತ್ತು ಸಿದ್ಧಯ್ಯ ಒಡೆಯರು ಇದರ ಪೂಜಾರಿಗಳು. ೨೦೦೬ರಲ್ಲಿ ಸೀರ್ಪಿಯ ರೇವಣಸಿದ್ಧೇಶ್ವರ ದೈವಕ್ಕೆ ಹಂಪೆಯ ತುಂಗಭದ್ರ ನದಿಯಲ್ಲಿ ಜೀವಕಾಳು ತುಂಬಿಸಿಕೊಂಡು ಬರಲು ಹೋದ ಸಂದರ್ಭದಲ್ಲಿಯೇ ಇವರೂ ತಮ್ಮ ಊರಲ್ಲಿನ ರೇವಣಸಿದ್ಧನ ಪ್ರತಿಮೆ ಮತ್ತು ನಂದಿಯನ್ನು ಸಹ ಪೂಜಿಸಿಕೊಂಡು ಜೀವಕಾಳು ತುಂಬಿಸಿ ತಂದು ಗರ್ಭಗೃಹದ ಗದ್ದುಗೆಯ ಮೇಲೆ ರೇವಣಸಿದ್ಧನ ಪ್ರತಿಮೆಯನ್ನು ಮುಂದಕ್ಕೆ ನಂದಿಯನ್ನು ಪ್ರತಿಷ್ಠಾಪಿಸಿರುವರು.

ದಿನಕ್ಕೆರಡು ಪೂಜೆ, ಹುಣ್ಣಿಮೆ-ಅಮಾವಾಸ್ಯೆಗೆ ವಿಶೇಷ ಪೂಜಾ ಕಾರ್ಯಕ್ರಮಗಳು, ದಸರೆಯಲ್ಲಿ ಬನ್ನಿ ಮುಡಿಯುವುದು, ಅಂಬೊಡೆಯುವುದರ ಜೊತೆಗೆ ಹರಕೆಗಳನ್ನು ತೀರಿಸುವ ಕ್ರಮಗಳು ಜರುಗುತ್ತವೆ. ಪೆನುಗೊಂಡ, ಹಿಂದೂಪುರ ಕಡೆಗಳಲ್ಲಿಯೂ ಈ ಮಠಕ್ಕೆ ನಡೆದುಕೊಳ್ಳುವ ಶಿಷ್ಯರ ಹಳ್ಳಿಗಳಿವೆ.

**ವೇಪಲಪರ್ತಿ:** ಬ್ರಹ್ಮಸಮುದ್ರಂ ಮಂಡಲಕ್ಕೆ ಸೇರಿದ ಗ್ರಾಮವಾದ ಇದು ೮೨೫ ಕುಟುಂಬಗಳನ್ನು, ೩೯೬೨ ಜನಸಂಖ್ಯೆಯನ್ನು ಹೊಂದಿರುವ ದೊಡ್ಡ ಗ್ರಾಮ. ವೇದಾವತಿ ನದಿಯ ಎಡ ದಂಡೆಯಲ್ಲಿರುವ ಇಲ್ಲಿನ ಜನಸಂಖ್ಯೆಯಲ್ಲಿ ಶೇಕಡಾ ೫೦ಕ್ಕಿಂತಲೂ ಹೆಚ್ಚಿನ ಕುಟುಂಬಗಳು ಕುರುಬರದಿವೆ. ಒಡೆಯರ ಒಂದು ಮನೆಯಿದೆಯಾದರೂ ರೇವಣಸಿದ್ಧನ ದೇವಾಲಯವಿಲ್ಲ. ಒಡೆಯರು ಮನೆಯಲ್ಲಿಯೇ ಒಂದು ಕೋಣೆಯನ್ನೇ ಮಠವನ್ನಾಗಿಸಿಕೊಂಡಿದ್ದಾರೆ. ಸಿದ್ಧಲಿಂಗಯ್ಯಸ್ವಾಮಿ ಮತ್ತು ಅವರ ಮಗ ಯರ್ರಿಸ್ವಾಮಿ ಇಲ್ಲಿನ ಒಡೆಯರು. ಇಲ್ಲಿ ಕುರುಬರ ಸಿರಿವಾಳದಪ್ಪ, ಕ್ವಾಟೆಕರಿಯಣ್ಣ ಮತ್ತು ಎಲ್ಲಮ್ಮನ ಗುಡಿಗಳಿವೆ. ಇಲ್ಲಿನ ಗ್ರಾಮದೈವ ರಂಗನಾಥಸ್ವಾಮಿ. ಈ ಪ್ರಾಚೀನ ದೇವಾಲಯದ ಮುಂಭಾಗದಲ್ಲಿ ಒಂದು ಶಾಸನವಿದೆ. ಅದು ದೇವಾಲಯವು ನಿರ್ಮಾಣಗೊಂಡ ವಿಷಯವನ್ನು ತಿಳಿಸುತ್ತದೆ. ಮುಂಭಾಗದಲ್ಲಿ ಮೂರು ಗರುಡಗಂಬಗಳಿವೆ. ಪ್ರತಿ ವರ್ಷ ಯುಗಾದಿಯಲ್ಲಿ ಉತ್ಸವ ನಡೆಯುತ್ತದೆ. ವಿಶೇಷವಾಗಿ ಎತ್ತಿನ ಪರಿಸೆಯು ಒಂದು ತಿಂಗಳವರೆಗಿದ್ದು, ಅದು ಅನಂತಪುರಂ ಜಿಲ್ಲೆ ಚಳ್ಳಕೆರೆ, ಮೊಳಕಾಲ್ಮೂರು ತಾಲೂಕುಗಳಲ್ಲಿಯೇ ಪ್ರಸಿದ್ಧಿಯನ್ನು ಪಡೆದಿದೆ.

ರೇವಣಸಿದ್ಧನ ಪ್ರತಿಮೆಯಾಗಲಿ ಪಾಲಕಿಯಾಗಲಿ ಇಲ್ಲದಿರುವುದರಿಂದ ದಸರೆಯಲ್ಲಿ ಬನ್ನಿ ಮುಡಿಯಲು ಸಿರಿವಾಳದಪ್ಪ ಮತ್ತು ಕ್ವಾಟೆಕರಿಯಣ್ಣ ದೈವಗಳೊಂದಿಗೆ ಒಡೆಯರು ಹೋಗಿಬರುತ್ತಾರೆ. ಈ ಸುತ್ತಮುತ್ತಲ ಪ್ರದೇಶದಲ್ಲಿ ಎಲ್ಲಿಯೇ ಕುರುಬ ಸಮುದಾಯದ ದೊಡ್ಡದ್ಯಾವರ ಉತ್ಸವ ಮಾಡುವ ಸಂದರ್ಭದಲ್ಲಿ ಹಾಲುಮತ ದೈವಗಳ ಮಂದೆಯೊಂದಿಗೆ ಹಂಪೆಯ ತುಂಗಭದ್ರ ನದಿಯ ತಿರುಗುಮಡುಗು ಹತ್ತಿರ ಹೋಗಿ ದೈವಗಳಿಗೆ ಜೀವಕಾಳು ತುಂಬಿಸಿಕೊಂಡು ಬರುವ ಪದ್ಧತಿಯು ಹಿಂದಿನಿಂದಲೂ ನಡೆದುಕೊಂಡು ಬಂದಿದೆ; ಬರುತ್ತಲಿದೆ.

ಹಾಲು ಕುರುಬರ ಸಿರಿವಾಳದಪ್ಪ ದೇವರಿಗೆ ಸಂಡೂರಿನ ರಾಜನ ಮಗಳು ಪಾಲಕಿ ಮಾಡಿಸಿದಳೆಂದು ಅದಕ್ಕೆ ಸಂಬಂಧಿಸಿದ ತಾಮ್ರ ಶಾಸನವೊಂದು ಇದೆ ಎಂದು ಹೇಳುವರು. ಅದು ಪೂಜಾರಿಯ ಮನೆಯಲ್ಲಿದೆ ಎಂದು ಹೇಳಿದರು. ಹಾಗಾಗಿ ಪೂಜಾರಿಯ ಮನೆಗೆ ಹೋಗಿ ಹುಡುಕಲಾಯಿತು. ಆದರೂ ಅದು ಸಿಗಲಿಲ್ಲ. ಸಿಕ್ಕಿದ್ದರೆ ಈ ದೈವಕ್ಕೆ ಯಾವ ಉದ್ದೇಶದಿಂದ ಪಾಲಕಿ ಮಾಡಿಸಿದರು ಎಂಬಂತಹ ಮಾಹಿತಿಗಳು ದೊರೆಯುತ್ತಿದ್ದವು. ಕಪ್ಪನಪಲ್ಲಿ, ಭೈರವನ ತಿಪ್ಪ, ಗುಂಡಿಗೇನಪಲ್ಲಿ, ಪೋಲೆಪಲ್ಲಿ, ಗುಮ್ಮಗಟ್ಟ, ನಾಟಪಲ್ಲಿ, ಕೋನಾಪುರಂ, ಗೊಚ್ಚಿರೆಡ್ಡಿಪಲ್ಲಿ, ಸಿರಿವಾಳ, ತಾಯಕನಹಳ್ಳಿ, ಯರದಮ್ಮನಹಳ್ಳಿ ಸೇರಿದಂತೆ ೩೦ಕ್ಕೂ ಹೆಚ್ಚು ಹಳ್ಳಿಗಳಿಗೆ ಗುರುಗಳಿವರು. ಅಲ್ಲಿನ ಎಲ್ಲ ಸಾಮಾಜಿಕ ಮತ್ತು ಧಾರ್ಮಿಕ ಆಚರಣೆಗಳು ಇವರ ಮುಂದಾಳತ್ವದಲ್ಲಿಯೇ ನಡೆಯುತ್ತವೆ.

**ಚಾವಾಲ:** ಚಾವಾಲ ಅಥವಾ ಚಾಬಾಲ ಎಂದು ಕರೆಯಿಸಿಕೊಳ್ಳುವ ಈ ಗ್ರಾಮ ವಜ್ರಕರೂರು ಮಂಡಲದಲ್ಲಿದೆ. ಇಲ್ಲಿನ ರೇವಣಸಿದ್ಧನ ದೇವಾಲಯವು ೩೦ ವರ್ಷಗಳ ಹಿಂದೆ ನಿರ್ಮಿಸಿದ್ದಾಗಿದೆ. ಸಿದ್ಧಯ್ಯ ಮತ್ತು ಮಲ್ಲಿಕಾರ್ಜುನ ಒಡೆಯರು ಇದರ ಪೂಜಾರಿಗಳು. ಗರ್ಭಗೃಹದಲ್ಲಿ ಶಿವಲಿಂಗ ಎದುರಿಗೆ ನಂದಿ ವಿಗ್ರಹಗಳನ್ನು ದೇವಾಲಯದಲ್ಲಿ ಕಾಣಬಹುದು. ಈ ಒಡೆಯ ಸೋದರರು ಪ್ರಸ್ತುತ ಬಳ್ಳಾರಿ ಮತ್ತು ಸಿರುಗುಪ್ಪದಲ್ಲಿ ನೆಲೆಸಿರುವುದರಿಂದ ಬೇರೊಬ್ಬರನ್ನು ಪೂಜೆ ಮಾಡಲು ನೇಮಿಸಲಾಗಿದೆ. ದಸರಾ-ಯುಗಾದಿ-ಶಿವರಾತ್ರಿಗಳಂಥ ವಿಶೇಷ ದಿನಗಳಲ್ಲಿ ಹಾಗೆಯೇ ಹುಣ್ಣಿಮೆ-ಅಮಾವಾಸ್ಯೆಗೆ ವಿಶೇಷ ಪೂಜೆಗಳು ನಡೆಯುತ್ತವೆ. ಈ ವಿಶೇಷ ದಿನಗಳಲ್ಲಿ ಒಡೆಯರು ಇಲ್ಲಿಗೆ ಬಂದು ದೇವರ ಕಾರ್ಯಗಳನ್ನು ಸರಳವಾಗಿ ಮಾಡಿ ಹೋಗುತ್ತಾರೆ. ಒಡೆಯರು ಪರ ಊರಿನಲ್ಲಿ ಇರುವುದರಿಂದ ಭಕ್ತರ ಹಳ್ಳಿಗಳಲ್ಲಿ ನಡೆಯುವ ಸಾಮಾಜಿಕ ಮತ್ತು ಧಾರ್ಮಿಕ ಆಚರಣೆಗಳಲ್ಲಿ ಭಾಗವಹಿಸಲು ಸಾಧ್ಯವಾಗುತ್ತಿಲ್ಲವೆಂದು ಅಲ್ಲಿರುವವರು ಹೇಳುವರು.

**ಕುಂದುರ್ಪಿ:** ಚಳ್ಳಕೆರೆ ತಾಲೂಕು ಪರಶುರಾಮಪುರ ಹೋಬಳಿಯ ಗಡಿಗೆ ಹೊಂದಿಕೊಂಡಿರುವ ಮಂಡಲ ಗ್ರಾಮವಿದು. ಇಲ್ಲಿ ಒಟ್ಟು ೨,೫೬೪ ಕುಟುಂಬಗಳಿದ್ದು, ೩೫೦ಕ್ಕೂ ಅಧಿಕ ಕುರುಬರ ಕುಟುಂಬಗಳಿವೆ. ಒಡೆಯರ ಒಂದು ಮನೆಯಿದೆ. ಸೀಪರ್ಯ್ಯ, ರೇವಯ್ಯ, ಮುತ್ತಣ್ಣ ಸೋದರರ ಮಕ್ಕಳು ಲಕ್ಷ್ಮಂಪಲ್ಲಿ, ಕುಂದುರ್ಪಿ ಮತ್ತು ಪಾವಗಡ ತಾಲೂಕಿನ ಜಾಲೋಡಿನಲ್ಲಿ ನೆಲೆಸಿರುವ

ಅಣ್ಣ-ತಮ್ಮಂದಿರು. ರೇವಯ್ಯ ಅವರ ಮಗನಾದ ಎಂ. ಚಂದ್ರಶೇಖರಯ್ಯ ಅವರು ಇಲ್ಲಿನ ಗುರುವಲಯ್ಯ. ರೇವಣಸಿದ್ಧನ ಮಠವನ್ನು ಕಟ್ಟಿಸಿಲ್ಲವಾದರೂ ಮನೆಯಲ್ಲಿನ ಒಂದು ಕೋಣೆಯಲ್ಲಿಯೇ ರೇವಣಸಿದ್ಧ ದೈವವನ್ನು ಪೂಜೆ ಮಾಡುತ್ತಿದ್ದಾರೆ. ದೈವಕ್ಕೆ ಸಂಬಂಧಿಸಿದಂತೆ ಯಾವುದೇ ಆಚರಣೆಗಳು ಇಲ್ಲಿ ನಡೆಯುವುದಿಲ್ಲ. ಇವುಗಳಲ್ಲದೇ ಮೊದಲೇ ಹೇಳಿದಂತೆ ಜಾಲೋಡಿನಲ್ಲಿಯೂ ಒಡೆಯರಿದ್ದು, ಅಲ್ಲಿಯೂ ಮಠವಾಗಲಿ, ದೇವಾಲಯವಾಗಲಿ ಇಲ್ಲ. ಮನೆಯಲ್ಲಿಯೇ ಪೂಜೆ ಮಾಡುತ್ತಿದ್ದಾರೆ.

ಒಟ್ಟಾರೆಯಾಗಿ ಕರ್ತನಪರ್ತಿ, ಲಕ್ಷ್ಮಂಪಲ್ಲಿ, ಚಾಬಾಲ, ವೇಪಲಪರ್ತಿ, ಕುಂದುರ್ಪಿ, ಜಾಲೋಡುಗಳಲ್ಲಿನ ಮಠಗಳು ಮತ್ತು ಅಲ್ಲಿನ ಒಡೆಯರು ಸೀರ್ಪಿಯ ಗುರುಮಠಕ್ಕೆ ಸಂಬಂಧಿಸಿದ ಅಣ್ಣ ತಮ್ಮಂದಿರು. ಈ ಭಾಗದಲ್ಲಿನ ಪ್ರಾಚೀನ ರೇವಣಸಿದ್ಧನ ನೆಲೆ ಸೀರ್ಪಿಯಾಗಿದೆ.

**ರಾಯದುರ್ಗಂ:** ಅನಂತಪುರಂ ಜಿಲ್ಲೆಯಲ್ಲಿ ಚಾರಿತ್ರಿಕವಾಗಿ ಹೆಸರಾಗಿರುವ ಪ್ರಮುಖ ಮಂಡಲವಿದು. ಊರ ಮಧ್ಯೆ ಬಳ್ಳಾರಿಗೆ ಹೋಗುವ ರಸ್ತೆಯಲ್ಲಿ ರೇವಣಸಿದ್ಧೇಶ್ವರನ ಪ್ರಾಚೀನ ದೇವಾಲಯವಿದೆ. ಅದರ ಪಕ್ಕದ ಬೀದಿಯಲ್ಲಿ ಬೀರಪ್ಪನ ದೇವಾಲಯವಿದೆ. ಪೂರ್ವಾಭಿಮುಖವಾದ ಈ ದೇವಾಲಯದ ಗರ್ಭಗೃಹದಲ್ಲಿ ರೇವಣಸಿದ್ಧನ ಪುರಾತನವಾದ ಮೂರ್ತಿಶಿಲ್ಪವಿದೆ. ಎದುರಿಗೆ ನವರಂಗದಲ್ಲಿ ನಂದಿ ವಿಗ್ರಹವಿದೆ. ನವರಂಗದ ಮುಂದೆ ಶೀಟುಗಳನ್ನು ಹಾಕಲಾಗಿದೆ. ಎದುರಿಗೆ ಹೊರಗೆ ೨೦ ಅಡಿಯಷ್ಟು ಉದ್ದವಾದ ಗರುಡಗಂಬವಿದೆ. ಒಡೆಯರ ಮನೆ ದೇವಾಲಯದ ಆವರಣದಲ್ಲಿಯೇ ಇದೆ. ಸುತ್ತಲೂ ಕಾಂಪೌಂಡು ಕಟ್ಟಲಾಗಿದೆ. ದಿನ ಬೆಳಿಗ್ಗೆ ಐದಕ್ಕೆ ಮತ್ತು ರಾತ್ರಿ ಏಳಕ್ಕೆ ದಿನಾಲು ಪೂಜೆ ನಡೆಯುತ್ತದೆ. ಸೋಮವಾರ ವಾರದ ಪೂಜೆ ಮಾಡಲಾಗುತ್ತದೆ. ಈ ಮಠದಲ್ಲಿನ ರೇವಣಸಿದ್ಧನಿಗೆ ಯಾವುದೇ ಜಾತ್ರೆ-ಉತ್ಸವಗಳಂಥ ಧಾರ್ಮಿಕ ಕಾರ್ಯಕ್ರಮಗಳು ನಡೆಯುವುದಿಲ್ಲ. ಏಕೆಂದರೆ ಇಲ್ಲಿನ ಒಡೆಯರಿಗೆ ವಯಸ್ಸಾಗಿದ್ದು, ಮನೆಯಲ್ಲಿ ಒಬ್ಬರೇ ಇರುವುದರಿಂದ ಸಮುದಾಯದ ಯಾವುದೇ ಸಾಮಾಜಿಕ ಮತ್ತು ಧಾರ್ಮಿಕ ಆಚರಣೆಗಳಲ್ಲಿ ಭಾಗವಹಿಸಲು ಸಾಧ್ಯವಾಗುತ್ತಿಲ್ಲ.

ದೇವಾಲಯದ ಪಕ್ಕದಲ್ಲಿಯೇ ಕುರುಬರ ಉಣ್ಣೆ ನೇಕಾರರ ಸಂಘವಿದೆ. ಈ ದೇವಾಲಯದ ಒಳಗೆ 'ಶ್ರೀ ರೇವಣಸಿದ್ಧೇಶ್ವರ ದೇವಾಲಯಂ' ಎಂದು ಬರೆದಿರುವರು. ಆದರೆ ಇತ್ತೀಚೆಗೆ ಮುಂಭಾಗದ ಕಾಂಪೌಂಡು ಗೋಡೆಯ ಮೇಲೆ 'ಶ್ರೀ ಈಶ್ವರ ದೇವಾಲಯಂ' ಎಂದು ಬರೆಯಲಾಗಿದೆ. ಈ ಮಠಕ್ಕೆ ಸಂಬಂಧಿಸಿದ ಭಕ್ತರು ಇದರತ್ತ ಗಮನಹರಿಸಿ ಪ್ರಾಚೀನ ಗುರುಪರಂಪರೆ ಮತ್ತು ಮಠದ ಚರಿತ್ರೆಯನ್ನು ಉಳಿಸಿಕೊಳ್ಳಬೇಕಾದ ಜರೂರತ್ತಿದೆ. ಈ ಮಂಡಲದಲ್ಲಿ ಇತ್ತೀಚೆಗೆ ಕನಕದಾಸರ ದೇವಾಲಯವನ್ನು ಕಟ್ಟಿಸಲಾಗಿದೆ. ಸಮುದಾಯವು ಇಲ್ಲಿಗೆ ಕೊಡುವ ಪ್ರಾಮುಖ್ಯತೆಯನ್ನು ಪ್ರಾಚೀನ ಗುರುಪರಂಪರೆಯ ಮಠಗಳತ್ತ ತೋರಿಸದೇ ಇರುವುದು ಖೇಧಕರ ಸಂಗತಿ. ಕನಕದಾಸರನ್ನು ಪೂಜಿಸುವುದಾಗಲಿ, ಆರಾಧಿಸುವುದಾಗಲಿ, ಸಾಂಸ್ಕೃತಿಕ ನಾಯಕನೆಂಬಂತೆ ಬಿಂಬಿಸುವುದು ತಪ್ಪಲ್ಲ. ಆದರೆ ಅದರ ಜೊತೆಗೆ ಮೂಲ ಗುರುಪರಂಪರೆಯತ್ತಲೂ ಗಮನ ಹರಿಸಬೇಕಾದ ಜರೂರತ್ತಿದೆ.

ಇಲ್ಲವಾದಲ್ಲಿ ಈ ದೇವಾಲಯವು ಮುಂದೊಂದು ದಿನ ಈಶ್ವರ ದೇವಾಲಯವಾಗಿ ಮಾರ್ಪಟ್ಟು ಹೋಗುವ ಸಾಧ್ಯತೆಗಳು ಇಲ್ಲದಿಲ್ಲ. ಇದು ಒಂದು ಉದಾಹರಣೆಯಷ್ಟೆ. ಎಲ್ಲಾ ಭಾಗದಲ್ಲಿಯೂ ಈ ಸಮಸ್ಯೆಯನ್ನು ಮಠಗಳು ಎದುರಿಸುತ್ತಿರುವುದು ಕಂಡುಬರುತ್ತದೆ.

**ಓಬುಳಾಪುರಂ:** ಬಳ್ಳಾರಿಯಿಂದ ಚಳ್ಳಕೆರೆಗೆ ಹೋಗುವ ರಾಷ್ಟ್ರೀಯ ಹೆದ್ದಾರಿಯಲ್ಲಿ ಬರುವ ಗ್ರಾಮವಾಗಿದ್ದು, ಬಳ್ಳಾರಿಗೆ ೨೦ ಕಿ.ಮೀ. ದೂರದಲ್ಲಿದ್ದು, ಡಿ. ಹಿರೇಹಾಳ ಮಂಡಲಕ್ಕೆ ಸೇರಿದೆ. ಇದು ಬರೀ ಓಬುಳಾಪುರವಲ್ಲ ಹೊನ್ನಿನ ಓಬುಳಾಪುರ ಎಂಬುದಾಗಿ ಊರ ಪಕ್ಕದಲ್ಲಿನ ಗವಿಸಿದ್ಧ ಮಠದಲ್ಲಿದ್ದ ಚಿಕ್ಕೆರಕುಪ್ಪೆ ಶರಣರೊಬ್ಬರು ಹೇಳುತ್ತಿದ್ದರು. ಅಂದು ಆ ಮಾತನ್ನು ಕೇಳಿದ ಊರ ಜನರು ನಗಾಡುತ್ತಿದ್ದರು. ಏಕೆಂದರೆ ಬರಿ ಕೆಂಪುಮಣ್ಣು-ಕಲ್ಲುಗಳ ಬರಡು ನೆಲ. ಮರಗಳು ಬೆಳೆಯಲಾರದ ಬೋಳಾದ ಬೆಟ್ಟ-ಗುಡ್ಡಗಳು, ಮಳೆ ಬಂದರೆ ಮಾತ್ರ ಬೆಳೆ ಬೆಳೆಯುವ ಭೂಮಿ. ಇದು ಹೇಗೆ ಹೊನ್ನಿನ ಓಬುಳಾಪುರ ಆಗಲು ಸಾಧ್ಯ ಎಂದು. ದಶಕದಿಂದ ಈಚೆಗೆ ಮೈನಿಂಗ್ ಬಂದು ಯಾವಾಗ ಭೂಮಿಗೆ ಬಂಗಾರದ ಬೆಲೆ ಬಂತೋ ಆ ಹಿರಿಯ ಶರಣರ ಮಾತು ಜನರಿಗೆ ಅರಿವಾಗತೊಡಗಿತು. ಆದರೆ ಅದಾಗಲೇ ಕಾಲಮಿಂಚಿ ಹೋಗಿತ್ತು. ಏಕೆಂದರೆ ಅಷ್ಟೊತ್ತಿಗಾಗಲೇ ಜನರು ತಮ್ಮ ಭೂಮಿಗಳನ್ನು ಮಾರಿಕೊಂಡು ಅತಂತ್ರ ಸ್ಥಿತಿಯಲ್ಲಿದ್ದರು.

ಓಬುಳಾಪುರಂ ೭೧೪ ಕುಟುಂಬಗಳನ್ನು ಹೊಂದಿರುವ ಈ ಗ್ರಾಮದಲ್ಲಿ ಕುರುಬರ ೧೪೦ಕ್ಕೂ ಅಧಿಕ ಮನೆಗಳಿವೆ. ಒಡೆಯರ ೪೦ ಕುಟುಂಬಗಳು ಇಲ್ಲಿವೆ. ವಿಠಲಾಪುರ, ಗೋವಿಂದವಾಡದ ಒಡೆಯರು ಇವರ ಅಣ್ಣ-ತಮ್ಮಂದಿರು. ಹತ್ತು ವರ್ಷಗಳ ಹಿಂದೆ ರೇವಣಸಿದ್ಧೇಶ್ವರ ದೇವಾಲಯವನ್ನು ಕಟ್ಟಲಾಗಿದೆ. ಇದರ ಪೀಠಾಧ್ಯಕ್ಷರು ವಿರೂಪಾಕ್ಷಯ್ಯ ಒಡೆಯರು. ದಕ್ಷಿಣಾಭಿಮುಖವಾಗಿರುವ ಈ ದೇವಾಲಯದ ಗರ್ಭಗೃಹ ಕೆಳಭಾಗದಲ್ಲಿ ಲಿಂಗಾಕಾರವಾಗಿ ಮೇಲೆ ರೇವಣಸಿದ್ಧನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಎದುರಿಗೆ ನಂದಿಯಿದೆ. ಪಕ್ಕದಲ್ಲಿ ಶಿವಲಿಂಗವನ್ನೂ ಪ್ರತಿಷ್ಠಾಪಿಸಲಾಗಿದೆ.

ಈ ಮಠದ ವ್ಯಾಪ್ತಿಗೆ ೪೪ ಹಳ್ಳಿಗಳು ಬರುತ್ತವೆ. ಅವುಗಳಲ್ಲಿ ಕೆಲವನ್ನು ಹೆಸರಿಸುವುದಾದರೇ ಬೊಮ್ಮನಹಾಳ, ಗುಂತಕಲ್ಲು, ನೇಮಕಲ್ಲು, ಹೊಸಗುಡ್ಡ, ಪಕುರ್ತಿ, ವಲ್ಲಿಕೋಟೆ, ಹೊಸಕೋಟೆ, ಗುಗ್ಗರಹಟ್ಟಿ, ಸಿದ್ಧರಾಯನ ಕೋಟೆ, ಬಸಾಪುರ, ಡಿ.ಹಿರೇಹಾಳ. ಈ ಎಲ್ಲ ಶಿಷ್ಯರ ಹಳ್ಳಿಗಳಲ್ಲಿ ನಡೆಯುವ ಸಾಮಾಜಿಕ, ಧಾರ್ಮಿಕ ಕಾರ್ಯಕ್ರಮಗಳಿಗೆ ಒಡೆಯರ ಹಾಜರಾತಿ ಬಹುಮುಖ್ಯವಾದುದು. ಆದರೆ ಇಲ್ಲಿನ ಒಡೆಯ ಅಣ್ಣ-ತಮ್ಮಂದಿರಲ್ಲಿ ವೈಮನಸ್ಸುಗಳಿವೆ. ಹಾಗಾಗಿ ಶಿಷ್ಯರ ಕಾರ್ಯಗಳಲ್ಲಿ ಒಡೆಯರು ಹಾಜರಾಗುವುದು ಕಡಿಮೆಯಾಗಿದೆ. ಒಟ್ಟಿನಲ್ಲಿ ಒಡೆಯರು ಒಂದಾಗಿ ಸಮುದಾಯದ ಅಭಿವೃದ್ಧಿಗೆ ಶ್ರಮಿಸಿದರೆ ಸಮುದಾಯದ ಐಕ್ಯತೆ ಮತ್ತು ಮೂಲ ದ್ರಾವಿಡ ಸಂಸ್ಕೃತಿಯನ್ನು ಉಳಿಸಿ-ಬೆಳೆಸಲು ಸಾಧ್ಯವಾಗುವುದು. ಏಕೆಂದರೆ ಕುರುಬರಿಗೆ ಒಡೆಯರೆಂದರೆ ಸಾಕ್ಷಾತ್ ರೇವಣಸಿದ್ಧ ಗುರುಗಳ ಅವತಾರಿಗಳು ಎಂಬ ನಂಬುಗೆಯಿದೆ. ಹಾಗಾಗಿ ಒಡೆಯರಲ್ಲಿ ಐಕ್ಯತೆಯು ಮೂಡಬೇಕಾಗಿದೆ.

**ಗೋವಿಂದವಾಡ:** ಅನಂತಪುರಂ ಜಿಲ್ಲೆಯ ಬೊಮ್ಮನಹಾಳ್ ಮಂಡಲದಲ್ಲಿರುವ ಗ್ರಾಮ. ೧೦೦೭ ಕುಟುಂಬಗಳನ್ನು ಹೊಂದಿರುವ ಈ ಗ್ರಾಮದಲ್ಲಿ ಕುರುಬರವು ೩೦೦ಕ್ಕೂ ಅಧಿಕ ಕುಟುಂಬಗಳಿವೆ. ರೇವಣಸಿದ್ಧೇಶ್ವರ ದೇವಾಲಯವು ಪುರಾತನವಾಗಿದ್ದು, ಅದನ್ನು ತಮ್ಮ ಪೂರ್ವಿಕರಾದ ಸಿದ್ಧಯ್ಯಸ್ವಾಮಿ ಒಡೆಯರು ಕಟ್ಟಿಸಿದರೆಂದು ಹೇಳುವರು. ಪ್ರಸ್ತುತ ಈ ಮಠದ ಪೀಠಾಧಿಪತಿಗಳು ಪಂಪಾಪತಿಸ್ವಾಮಿ ಅವರು. ದೇವಾಲಯದ ಪಕ್ಕದಲ್ಲಿಯೇ ಒಡೆಯರ ಮನೆಯಿದೆ. ಗರ್ಭಗೃಹದಲ್ಲಿ ಇತ್ತೀಚೆಗೆ ಪ್ರತಿಷ್ಠಾಪಿಸಿದ ಶಿವಲಿಂಗ ಮತ್ತು ರೇವಣಸಿದ್ಧನ ಪ್ರತಿಮೆಯಿದೆ. ಪಕ್ಕದಲ್ಲಿ ಮುಳ್ಳಿನ ಪಾದುಕೆಗಳು, ವಿಭೂತಿ ಕಟ್ಟುಗಳನ್ನು ಇಡಲಾಗಿದೆ. ಎದುರಿಗೆ ನಂದಿ ವಿಗ್ರಹವಿದೆ. ಅಂತರಾಳದ ಬಲಭಾಗದಲ್ಲಿ ಗಣಪತಿಯ ಶಿಲ್ಪ, ಎಡಕ್ಕೆ ನಾಗರ ಶಿಲ್ಪವನ್ನು ಪ್ರತಿಷ್ಠಾಪಿಸಿರುವರು. ಚೌಕ, ಅಷ್ಟಚೌಕ, ಬೋದಿಗೆಗಳನ್ನು ಹೊಂದಿರುವ ನಾಲ್ಕು ಕಂಬಗಳ ತೆರೆದ ಅಂತರಾಳವಿದೆ.

ಭೂಲೋಕದಲ್ಲಿ ಎಲ್ಲ ದೈವಗಳಿಗೂ ಪೂಜೆಗೊಳ್ಳುವ ಅವಕಾಶವಿದೆ. ನನಗೆ ಮಾತ್ರ ಆ ಭಾಗ್ಯವಿಲ್ಲವೆಂದು ಬ್ರಹ್ಮನಿಗೆ ದುಃಖವಾಗಿತ್ತು. ಇದರಿಂದ ಬೇಸತ್ತ ಬ್ರಹ್ಮನು ಕೃಷ್ಣ(ವಿಷ್ಣು) ಮತ್ತು ರುದ್ರ(ಶಿವ)ರ ಹತ್ತಿರ ಹೋಗಿ ನನಗೂ ಭೂಲೋಕದಲ್ಲಿ ಪೂಜೆಗೊಳ್ಳಬೇಕೆಂಬ ಹಂಬಲವಿದೆ. ನೀವು ನನಗೆ ಸಹಾಯ ಮಾಡಬೇಕೆಂದು ಕೇಳಿದನು. ಅದಕ್ಕೆ ಕೃಷ್ಣ ಮತ್ತು ರುದ್ರರು ತಮ್ಮ ಹೆಸರಿನ ಮೊದಲ ಅಕ್ಷರಗಳನ್ನು ನೀಡಿದರು. ಅವರು ನೀಡಿದ ಕು+ರು ಅಕ್ಷರಗಳಿಗೆ ಬ್ರಹ್ಮ ತನ್ನ ಹೆಸರಿನ ಬ ಅಕ್ಷರ ಸೇರಿಸಿ ಕುರುಬ ಕುಲವನ್ನು ಸೃಷ್ಟಿಸಿದನು. ಹಾಗಾಗಿ ಕುರುಬ ಸಮುದಾಯವು ಬ್ರಹ್ಮದೇವನನ್ನು ಭರಮದೇವ ಎಂದು ಪೂಜೆ ಮಾಡುತ್ತಿದ್ದಾರೆ ಎಂದು ಪಂಪಾಪತಿ ಸ್ವಾಮಿ ಒಡೆಯರು ಹೇಳುವರು. ಹೀಗೆ ತ್ರಿಮೂರ್ತಿಗಳ ಅನುಗ್ರಹದಿಂದ ಜನಿಸಿದ ಕುರುಬರು ಆದುದರಿಂದ ರೇವಣಸಿದ್ಧ ಈ ಕುಲವನ್ನು ತನ್ನ ಶಿಷ್ಯರನ್ನಾಗಿ ಪಡೆದು ಅವರಿಗೆ ಗುರು ಪರಂಪರೆಯನ್ನು ಕೊಟ್ಟನೆಂದು ಹೇಳಲು ಸಹಕಾರಿಯಾಗಿದೆ. ಮ್ಯಾಸಬೇಡರು ಬ್ರಹ್ಮನನ್ನು ಬೊಮ್ಮದೇವರೆಂದು, ಗೊಂಡರು ಬೊಮ್ಮಗೊಂಡನೆಂದು ಪೂಜಿಸುವರು. ಇದು ಮೂಲ ದ್ರಾವಿಡ ಸಮುದಾಯಗಳಲ್ಲಿ ಬ್ರಹ್ಮನ ಪೂಜೆಯು ಹಿಂದಿನಿಂದಲೂ ನಡೆಯುತ್ತ ಬಂದಿದೆ ಎಂಬುದಕ್ಕೆ ನಿದರ್ಶನವಾಗಿದೆ.

ಓಬಳಾಪುರಂ-ವಿಠಲಾಪುರದ ಒಡೆಯರು ಇವರ ಸೋದರರು. ಚಿತ್ರದುರ್ಗ, ಬಳ್ಳಾರಿ, ಅನಂತಪುರಂ ಜಿಲ್ಲೆಗಳ ೧೫೦ಕ್ಕೂ ಹೆಚ್ಚಿನ ಹಳ್ಳಿಗಳು ಈ ಮಠದ ವ್ಯಾಪ್ತಿಯಲ್ಲಿ ಬರುತ್ತವೆ. ಈ ಹಳ್ಳಿಗಳಲ್ಲೆಲ್ಲ ನಡೆಯುವ ಎಲ್ಲಾ ಸಾಮಾಜಿಕ, ಧಾರ್ಮಿಕ ಆಚರಣೆಗಳಲ್ಲಿ ಒಡೆಯರು ಹಾಜರಾಗಿರಬೇಕು. ಭಕ್ತರು ಹೆಚ್ಚಾಗಿರುವುದರಿಂದ ಎಲ್ಲಾ ಕಾರ್ಯಕ್ರಮಗಳಿಗೆ ಹೋಗುವುದಕ್ಕೆ ಆಗುವುದಿಲ್ಲ. ಆದರೂ ದೊಡ್ಡ ದೇವರ ಉತ್ಸವದಂಥ ಧಾರ್ಮಿಕ ಆಚರಣೆಗಳಿಗೆ ತಪ್ಪದೇ ಹಾಜರಾಗುವರು.

ಪ್ರಸ್ತುತ ಒಡೆಯರಾದ ಪಂಪಾಪತಿಸ್ವಾಮಿ ಅವರು ಗದಗಿನ ಪುಟ್ಟರಾಜ ಗವಾಯಿಗಳ ಶಿಷ್ಯರಾಗಿ ಸಂಗೀತ ಅಭ್ಯಾಸ ಮಾಡಿ ಹಾಡುಗಾರಿಕೆ, ತಬಲವಾದನ, ಹಾರ್ಮೋನಿಯಂ ವಾದಕಗಳ ಅಧ್ಯಯನ ಮಾಡಿ ಪ್ರಮಾಣಪತ್ರ ಪಡೆದುಕೊಂಡಿರುವರು. ಅಂದಿನಿಂದಲೂ ಆಂಧ್ರಪ್ರದೇಶ ಮತ್ತು ಕರ್ನಾಟಕದ ವಿವಿದೆಡೆಗಳಲ್ಲಿ ಸಂಗೀತ ಕಾರ್ಯಕ್ರಮಗಳನ್ನು ನೀಡಿ ಸಾಕಷ್ಟು ಪ್ರಶಸ್ತಿಗಳನ್ನು ಪಡೆದುಕೊಂಡಿರುವರು. ಅವೆಂದರೆ ೧೯೮೮ರಲ್ಲಿ ಬಳ್ಳಾರಿ ಜಿಲ್ಲೆ ಕನ್ನಡ ಚಳುವಳಿ ಸಂಘ-ಬಳ್ಳಾರಿ ಅವರಿಂದ ಸನ್ಮಾನ ಪ್ರಮಾಣ ಪತ್ರ ಪಡೆದಿದ್ದಾರೆ. ಆ ಕಾರ್ಯಕ್ರಮಕ್ಕೆ ಚಿತ್ರನಟ ದಿ. ಶಂಕರ್‌ನಾಗ್ ಅವರು ಮುಖ್ಯ ಅತಿಥಿಯಾಗಿದ್ದರು. ಜಿಲ್ಲಾ ಪಂಚಾಯ್ತಿ-ಬಳ್ಳಾರಿ ಅವರಿಂದ ೧೯೯೮ರಲ್ಲಿ 'ದೇವರಾಜ ಅರಸು ಪ್ರಶಸ್ತಿ', ಶ್ರೀ ಮುರುಘಾರಾಜೇಂದ್ರ ಮಠ-ಚಿತ್ರದುರ್ಗ ೨೦೦೦ರಲ್ಲಿ 'ಕಲಾರತ್ನ' ಬಿರುದು ನೀಡಿದೆ. ೨೦೦೦-೦೧ನೆಯ ಸಾಲಿನಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಬೆಂಗಳೂರು ಅವರು 'ಕರ್ನಾಟಕ ಕಲಾಶ್ರೀ' ಎಂಬ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಇಂಥ ಸಾಕಷ್ಟು ಪ್ರಶಸ್ತಿ-ಪುರಸ್ಕಾರಗಳನ್ನು ಪಡೆದಿದ್ದಾರೆ.

ಸಂಗೀತ ಕ್ಷೇತ್ರದಲ್ಲಿ ಸಾಧನೆ ಮಾಡಿದ ೯೩ ವರ್ಷದ ಹಿರಿಯ ಜೀವ ಪಂಪಾಪತಿಸ್ವಾಮಿ ಒಡೆಯರು. ಅವರಿಗೆ ಕರ್ನಾಟಕದಲ್ಲಿ ಸಾಕಷ್ಟು ಪ್ರಶಸ್ತಿ-ಪುರಸ್ಕಾರಗಳು ಸಂದಿವೆ. ಸಮುದಾಯದಲ್ಲಿ ಅವರನ್ನು ಗುರುತಿಸಿ ಸನ್ಮಾನಿಸುವಂತಹ ಕೆಲಸ ಮಾಡಬೇಕಿದೆ. ನಮ್ಮ ನಡುವೆ ಇರುವ ಹಿರಿಯ ಜೀವಕ್ಕೆ ನಾವು ಋಣ ತೀರಿಸಬೇಕಾದ ಜರೂರತ್ತಿದೆ. ಏಕೆಂದರೆ ಮಠದ ಒಡೆಯರಾಗಿ ಭಕ್ತರಿಗೆ ಸನ್ಮಾರ್ಗದಲ್ಲಿ ನಡೆಯುವಂತೆ ನೀತಿಯನ್ನು ಹೇಳುತ್ತಲೇ ಸಂಗೀತ ಕ್ಷೇತ್ರದಲ್ಲಿ ಮಹಾನ್ ಸಾಧನೆ ಮಾಡಿದ ಸಾಧಕರಿವರು.

**ಚಿಂತಕುಂಟ:** ಕರ್ನೂಲು ಜಿಲ್ಲೆಯ ಹಾಲಹರವಿ ಮಂಡಲಕ್ಕೆ ಸೇರಿದ್ದು, ೮೭೭ ಕುಟುಂಬಗಳನ್ನು ಹೊಂದಿರುವ ದೊಡ್ಡ ಗ್ರಾಮವಿದು. ಇಲ್ಲಿ ಶತಮಾನಗಳಷ್ಟು ಹಳೆಯದಾದ ಸಿದ್ಧಲಿಂಗಸ್ವಾಮಿಯ ಹಳೆಯ ದೇವಾಲಯವಿತ್ತು. ಅದನ್ನು ಕೆಡವಿ ೨೫ ವರ್ಷಗಳ ಹಿಂದೆ ಹೊಸದಾಗಿ ದೇವಾಲಯವನ್ನು ಕಟ್ಟಿಸಲಾಗಿದೆ. ದೇವಾಲಯದ ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಅದಕ್ಕೆ ಶಿವಪ್ರತಿಮೆ ಮತ್ತು ನಾಗರ ಎಡೆಯನ್ನು ಜೋಡಿಸಲಾಗಿದೆ. ಮುಂದೆ ಚಿಕ್ಕ ಗದ್ದುಗೆಯ ಮೇಲೆ ಪಾದುಕೆಗಳಿವೆ. ಬಾಗಿಲ ಮೇಲಿನ ಲಲಾಟದ ಮಧ್ಯೆ ಶಿವಪಾರ್ವತಿಯರು ಸಿಂಹಾಸನದಲ್ಲಿ ಕುಳಿತುಕೊಂಡಿದ್ದರೆ, ಎಡ-ಬಲದಲ್ಲಿ ಕುದುರೆಯ ಮೇಲೆ ಕುಳಿತ ವೀರರ ಚಿತ್ರಗಳಿವೆ. ತೆರೆದ ಸಭಾಮಂಟಪವು ೬ ಕಂಬಗಳನ್ನು ಹೊಂದಿದ್ದು, ಕ್ರಮವಾಗಿ ಚೌಕ, ಅಷ್ಟಮುಖ, ದಿಂಡು, ಚೌಕ, ಬೋಧಿಗೆಗಳನ್ನು ಒಳಗೊಂಡಿವೆ. ಬಲ ಗೋಡೆಯ ಮೇಲೆ ಹಿಂದಿನ ಒಡೆಯರಾದ ಕಾರಣ್ಣ ಗುರುವಿನ, ಸಿದ್ಧಲಿಂಗಯ್ಯ ಗುರುವಿನ ಫೋಟೋಗಳು, ಎಡಗೋಡೆಯಲ್ಲಿ ಲಕ್ಷ್ಮೀದೇವಮ್ಮ ಗುರುವಿನ ಫೋಟೊ ತೂಗು ಹಾಕಲಾಗಿದೆ.

ಈ ಮಠದ ಒಡೆಯರಾಗಿ ಸಿದ್ಧಲಿಂಗಯ್ಯಸ್ವಾಮಿ ಗುರುವಿನವರಿಗೆ ಗುರುಪಟ್ಟವನ್ನು ಕಟ್ಟಲಾಗಿತ್ತು. ಅವರು ಇತ್ತೀಚೆಗೆ ಅಪಘಾತದಲ್ಲಿ ಮಡಿದಿರುವುದರಿಂದ ಪ್ರಸ್ತುತ ಅವರ ತಮ್ಮ ರೇವಣಸಿದ್ಧಯ್ಯ ಗುರುವಿನ ಅವರು ಪೂಜೆ ಮಾಡುತ್ತಿದ್ದಾರೆ. ಗುರುವಾಗುವಂತಹ ವ್ಯಕ್ತಿಗೆ ಗುರು ಪಟ್ಟವನ್ನು ಕಟ್ಟಲಾಗುತ್ತದೆ. ಗುರುವಾಗುವಾತನಿಗೆ ಶುದ್ಧಿಕಾರ್ಯ ಮಾಡಿ ಲಿಂಗದೀಕ್ಷೆ ನೀಡಲಾಗುತ್ತದೆ. ನಂತರ ಹಂಪೆಯ ತುಂಗಭದ್ರ ನದಿಯಲ್ಲಿ ಗುರುವಿನ ಬೆತ್ತವನ್ನು ಪೂಜೆ ಮಾಡಿಸಿಕೊಂಡು ಬಂದು ಗುರುವಿಗೆ ಕೊಡುತ್ತಾರೆ.

ಮೋಕಾವನ್ನು ಪಟ್ಟದ ಮನೆಯೆಂದು, ಪೆದ್ದವುಲ್ತಿಯನ್ನು ಲಿಂಗದ ಗುಡಿಯೆಂದು, ಚಿಂತಕುಂಟವನ್ನು ಗುರುಮನೆಯೆಂದು ಕರೆಯುತ್ತಾರೆ. ಮೋಕಾಕ್ಕೆ ಕಕ್ಕನಹಳ್ಳಿ, ಡೊಣೆಕಲ್ಲು, ಈಚಲಬೊಮ್ಮನಹಳ್ಳಿ, ರಾಮಸಾಗರ, ಸಂಡೂರು, ಮಲಪನಗುಡಿ, ಕೀರನಹಳ್ಳಿಯನ್ನು ಒಳಗೊಂಡಂತೆ ೧೨ ಜಗುಲಿಗಳು, ಪೆದ್ದವುಲ್ತಿಗೆ ವಿರುಪಾಪುರಂ, ಕೊತ್ತಪಲ್ಲಿ, ಅರಿಕೇರಿ, ಬಾಗೋಡಿ ನಾಣಾಪುರ, ಸಂಗಾಲ, ನೇಮಕಲ್ಲುಗಳನ್ನು ಒಳಗೊಂಡಂತೆ ೧೨ ಜಗುಲಿಗಳು ಒಟ್ಟು ೨೪ ಜಗುಲಿಗಳ ಗೋಸೆಲಾರು ಬೆಡಗಿನವರಿಗೆ ಗುರುಗಳು ಚಿಂತಕುಂಟ ಒಡೆಯರು.

ಹಂಪೆ ಹುಣ್ಣಿಮೆಯಂದು ಸಿದ್ಧೇಶ್ವರ ಸ್ವಾಮಿಯ ಉತ್ಸವ ನಡೆಯುತ್ತದೆ. ಪೆದ್ದವುಲ್ತಿ ಮತ್ತು ಮೋಕಾದ ಒಟ್ಟು ೨೪ ಜಗುಲಿಯ ಎಲ್ಲ ದೈವಗಳು ಮತ್ತು ಭಕ್ತರು ಗುರುಮನೆಗೆ ಬಂದು ಉತ್ಸವದಲ್ಲಿ ಪಾಲ್ಗೊಳ್ಳುತ್ತವೆ. ಅಲ್ಲಿ ಮೊದಲು ಗುರುವಿನ ಪೂಜೆ, ನಂತರ ದೈವಗಳ ಮಂದೆಪೂಜೆ, ಕರಿಕಂಬಳಿ ಪೂಜೆ, ಮುಳ್ಳಾವುಗೆ ಪೂಜೆ, ಪಂಜಿನಾಟ, ಗೊರವನ ಆಟಗಳು ನಡೆಯುತ್ತವೆ. ನಂತರ ಸಾಮೂಹಿಕ ವಿವಾಹಗಳನ್ನು ನಡೆಸುವರು. ಹೀಗೆ ಉತ್ಸವದ ಕಾರ್ಯಗಳನ್ನೆಲ್ಲ ಮುಗಿಸಿದ ನಂತರ ಗುರುವಿನ ಅಪ್ಪಣೆ ಪಡೆದು ಬಂದ ದೈವಗಳೆಲ್ಲ ತಮ್ಮ ಸ್ವಸ್ಥಾನಕ್ಕೆ ಮರಳುತ್ತವೆ. ದೇವಾಲಯಕ್ಕೆ ಸಂಬಂಧಿಸಿದ್ದು ೧೦ ಎಕರೆ ಜಮೀನಿದೆ. ಅದನ್ನು ಒಡೆಯರೇ ನೋಡಿಕೊಳ್ಳುತ್ತಾರೆ.

ರೇವಣಸಿದ್ಧನ ಪೂಜಾರಿಗಳಾದ ಒಡೆಯರು ಕುರುಬ ಸಮುದಾಯಕ್ಕೆ ಪುರೋಹಿತ (ಗುರು)ರಾಗಿದ್ದು, ಕುರುಬರ ಹುಟ್ಟು-ಸಾವು, ವಿವಾಹಗಳಂಥ ಜೀವನಾವರ್ತನ ಕಾರ್ಯಗಳಲ್ಲಿ ಪ್ರಮುಖ ಪಾತ್ರವಹಿಸುವರು. ಪ್ರತಿ ಒಡೆಯರು ಅವರ(ಮಠದ) ವ್ಯಾಪ್ತಿಗೆ ಬರುವ ಭಕ್ತ(ಶಿಷ್ಯ) ವರ್ಗದ ಕಾರ್ಯಗಳಲ್ಲಿ ಸಕ್ರಿಯವಾಗಿದ್ದು, ನಡೆಸಿಕೊಡುವರು. ವಿಶೇಷ ದಿನಗಳಲ್ಲಿ ಹಾಲುಮತ ಪುರಾಣಗಳನ್ನು ವಾಚಿಸುವುದು, ಸಮುದಾಯದಲ್ಲಿ ಜಾಗೃತಿಯನ್ನು ಮೂಡಿಸುವುದು, ಪಂಚಾಂಗ, ಅಂತ್ರ-ತಂತ್ರ ಬರೆಯುವುದು, ನಿವಾಳಿ ತೆಗೆಯುವುದು ಇಂಥ ಅನೇಕ ಕಾರ್ಯಗಳನ್ನು ಮಾಡುವರು.

ಹಾಲುಮತ ಸಮುದಾಯದ ಯಾವುದೇ ದೇವರ ಜಾತ್ರೆ-ಉತ್ಸವಗಳಿಗೆ ರೇವಣಸಿದ್ಧನ ಪಲ್ಲಕ್ಕಿ ಅದರ ಪೂಜಾರಿಯಾದ ಒಡೆಯರ ಹಾಜರಿ ಬಹುಮುಖ್ಯವಾದುದು. ಅವರಿಲ್ಲದೇ ಯಾವುದೇ ಧಾರ್ಮಿಕ ಕಾರ್ಯವೂ ನಡೆಯುವಂತಿಲ್ಲ. ಹಾಗಾಗಿ ರೇವಣಸಿದ್ಧನ ಪ್ರತಿನಿಧಿಯಾದ ಒಡೆಯರು

ಮುಂದೆ ನಿಂತು ದೇವರ ಆಚರಣೆಗಳನ್ನು ನಡೆಸುವರು. ಕೆಲವೇಳೆ ಕಾರಣಾಂತರಗಳಿಂದ ದೇವರ ಜಾತ್ರೆ–ಉತ್ಸವಗಳಂಥ ಧಾರ್ಮಿಕ ಕಾರ್ಯಗಳನ್ನು ಮೂರು–ನಾಲ್ಕು ವರ್ಷಗಳ ಕಾಲ ನಿಲ್ಲಿಸಿದರೆ ಮತ್ತೆ ಜಾತ್ರೆ–ಉತ್ಸವ ಪ್ರಾರಂಭಿಸಲು ದೇವರನ್ನು ಗಂಗೆಯಲ್ಲಿ ಪೂಜಿಸಿ ಜೀವಕಾಳು ತುಂಬಿ, ಪೂಜಾರಿಯನ್ನು ಶುದ್ಧೀಕರಿಸಿ ಮಂತ್ರದೀಕ್ಷೆ ನೀಡಿ ಜಾತ್ರೆಯನ್ನು ಆರಂಭಿಸಬೇಕು.

**ಹೊಸ ಪೂಜಾರಿಯ ನೇಮಕ:** ದೇವರನ್ನು ಪೂಜಿಸುತ್ತಿದ್ದ ಪೂಜಾರಿ ಸತ್ತ ನಂತರ ಹೊಸ ಪೂಜಾರಿಯನ್ನು ನೇಮಿಸುವರು. ದೈವದ ಒಕ್ಕಲು ಮತ್ತು ಒಡೆಯರು ಒಮ್ಮತ ಅಭಿಪ್ರಾಯದಿಂದ ಒಬ್ಬ ಕೋರೆ ಹುಡುಗನನ್ನು ಆಯ್ಕೆ ಮಾಡುವರು. ಶಿವರಾತ್ರಿ ಅಥವಾ ಯುಗಾದಿಯಂಥ ವಿಶೇಷ ದಿನಗಳಲ್ಲಿ ದೇವರನ್ನು ಊರ ಹತ್ತಿರದಲ್ಲಿರುವ ಕೆರೆ ಅಥವಾ ಹಳ್ಳದ ಹತ್ತಿರಕ್ಕೆ(ಕೆಲವೆಡೆಗಳಲ್ಲಿ ಹಂಪಿಯ ತುಂಗಭದ್ರಾನದಿಯ 'ತಿರುಗು ಮಡುಗು' ಹತ್ತಿರಕ್ಕೆ ಬರುವರು) ದೇವರನ್ನು ಹೊರಡಿಸುವರು. ಅಲ್ಲಿ ಮೊದಲು ದೇವರಿಗೆ ಗಂಗಾಸ್ನಾನ ಮಾಡಿಸಿ ಶಾಂತಿ ಮಂತ್ರಗಳಿಂದ ದೇವರನ್ನು ಸಂತೃಪ್ತಿಗೊಳಿಸುವರು. ಪೂಜಾರಿಯಾಗುವ ಕೋರೆ ಹುಡುಗನಗೆ ಸ್ನಾನ ಮಾಡಿಸಿ, ಒಡೆಯರು ಗೋಗಂಜು(ಗೋಮೂತ್ರ)ವನ್ನು ಚಿಮುಕಿಸಿ, ಬೇವಿನಕಡ್ಡಿಯಿಂದ ಅವನ ನಾಲಿಗೆ ಸುಟ್ಟು ಶುದ್ಧಿಗೊಳಿಸಿ, ಭುಜದ ಮೇಲೆ ದೇವರ ಮುದ್ರೆಯನ್ನು(ಕೆಲವೆಡೆ ಎದೆಯ ಮೇಲೆ) ಒತ್ತುವರು. ಕೊನೆಗೆ ಒಡೆಯರು ಪೂಜಾರಿಯಾಗುವ ಹುಡುಗನ ತಲೆಯ ಮೇಲೆ ಕಾಲಿಟ್ಟು ಮಂತ್ರಗಳನ್ನು ಬೋಧಿಸುವರು(ಕೆಲ ಕಡೆಗಳಲ್ಲಿ ಕಿವಿಯಲ್ಲಿಯೂ ಮಂತ್ರದೀಕ್ಷೆ ಬೋಧಿಸುವರು). ಅಂದಿನಿಂದ ಆ ಹುಡುಗ ಸಾಯುವವರೆಗೂ ದೇವರ ಪೂಜಾರಿಯಾಗುವನು. ಕೆಲವು ಕಡೆ ಪಟ್ಟದ ಪೂಜಾರಿ ಮತ್ತು ಹೊಳೆಪೂಜಾರಿ ಎಂದು ಇಬ್ಬರನ್ನು ನೇಮಿಸುವರು. ಪಟ್ಟದ ಪೂಜಾರಿಯ ಅನುಪಸ್ಥಿತಿಯಲ್ಲಿ ದೇವರ ಪೂಜೆ ಮಾಡಲು ಇದರಿಂದ ಅನುಕೂಲವಾಗುತ್ತದೆ (ವೇಪಲಪರ್ತಿಯಲ್ಲಿ ಇತ್ತೀಚೆಗೆ ಸಿರಿವಾಳದಪ್ಪ ದೇವರಿಗೆ ಈ ಮಾದರಿಯಲ್ಲಿಯೇ ಪೂಜಾರಿಗಳನ್ನು ನೇಮಿಸಿರುವರು). ಪೂಜಾರಿ ಇಲ್ಲದಿರುವ ಸಮಯದಲ್ಲಿ ಒಡೆಯರೇ ದೇವರ ಪೂಜಾಕಾರ್ಯಗಳನ್ನು ಮಾಡಬೇಕು. ಹೀಗೆ ಒಡೆಯರು ಧಾರ್ಮಿಕ ಚಟುವಟಿಕೆಗಳಲ್ಲಿ ಸಕ್ರಿಯರಾಗಿ ಪಾಲ್ಗೊಂಡು ಹಾಲುಮತ ಸಮುದಾಯದ ಸರ್ವಾಂಗೀಣ ಅಭಿವೃದ್ಧಿಗೆ ನೆರವಾಗುತ್ತ ಬಂದಿದ್ದಾರೆ.

ಒಟ್ಟಾರೆಯಾಗಿ ರೇವಣಸಿದ್ಧನ ಮಠಗಳು ಅದರ ಒಡೆಯರು ಕುರುಬ ಸಮುದಾಯದ ಸಾಮಾಜಿಕ ಸಂಸ್ಕಾರಗಳಿಗೆ ಧಾರ್ಮಿಕ ಕಾರ್ಯಗಳಿಗೆ ಪ್ರಮುಖವಾಗಿ ಬೇಕಾಗಿರುವವರು. ಮತ್ತೊಂದು ಗಮನಿಸಬೇಕಾದ ಅಂಶ ರೇವಣಸಿದ್ಧ ಮಠವಿರುವ ಗ್ರಾಮದಲ್ಲಿ ಬೀರಪ್ಪ ಇಲ್ಲವೇ ವೀರಭದ್ರ ದೇವರ ಗುಡಿಗಳನ್ನು ನೋಡಬಹುದು. ಬೀರಪ್ಪನ ಗುಡಿಗಳು ಶಿಥಿಲಾವ್ಯಸ್ಥೆಯಲ್ಲಿದ್ದರೆ, ವೀರಭದ್ರನ ಗುಡಿಗಳು ಸುಸ್ಥಿತಿಯಲ್ಲಿದ್ದು ಅಭಿವೃದ್ಧಿಯಾಗಿವೆ. ಅದಕ್ಕೆ ಕಾರಣಗಳು ಅನೇಕ. ಹಾಗೆಯೇ ಚಿತ್ರದುರ್ಗ,

ಬಳ್ಳಾರಿ, ಅನಂತಪುರಂ ಜಿಲ್ಲೆಗಳಲ್ಲಿನ ರೇವಣಸಿದ್ಧನ ಮಠಗಳು ಹರ್ತಿಕೋಟೆಯನ್ನು ಹೊರತುಪಡಿಸಿ ಉಳಿದವು ಇಂದು ಆರ್ಥಿಕವಾಗಿ ತುಂಬಾ ಹಿಂದುಳಿದಿವೆ. ದೇವಾಲಯಗಳು ಜೀರ್ಣಾವಸ್ಥೆಯಲ್ಲಿವೆ. ಸೀರ್ಪಿಕೊಟ್ಟಾಲು ಮಠಕ್ಕೆ ಸಂಬಂಧಿಸಿದ ಮೂರು ಎಕರೆ ಭೂಮಿಯಿದೆ. ಆದರೆ ಹಿಂದಿನ ಊರ ಗೌಡನೊಬ್ಬ ಊರಿನ ಮತ್ತೊಬ್ಬನಗೆ ಕ್ರಯ ಮಾಡಿಸಿರುವನು. ಅದನ್ನು ಬಿಡಿಸಿಕೊಳ್ಳಬೇಕಿದೆ. ಉಳಿದಂತೆ ವಿವಿದೆಡೆಯಲ್ಲಿನ ಒಡೆಯರು ಕೃಷಿಕರಾಗಿ, ಕಂಬಳಿ ವ್ಯಾಪಾರಿಗಳಾಗಿ ಜೀವನ ಸಾಗಿಸುತ್ತಿದ್ದಾರೆ. ಇಂದು ಆಧುನಿಕತೆ ಮತ್ತು ನಗರೀಕರಣ ಪ್ರಕ್ರಿಯೆಯಿಂದಾಗಿ ಸಮುದಾಯದ ಮೂಲ ಗುರುಪರಂಪರೆ ಮೂಲೆಗುಂಪಾಗುತ್ತಿದೆ. ಹಾಗಾಗಿ ನಾವಿಂದು ಮೂಲ ಗುರುಪರಂಪರೆಯನ್ನು ಉಳಿಸುವತ್ತ ಸಮಾಜದ ಗಮನ ಸೆಳೆಯಬೇಕಿದೆ. ಎಫ್.ಟಿ.ಹಳ್ಳಿಕೇರಿ ಅವರು ಇದಕ್ಕೆ ಕೆಲ ರಚನಾತ್ಮಕ ಕಾರ್ಯಗಳನ್ನು ಸೂಚಿಸಿದ್ದಾರೆ. ರೇವಣಸಿದ್ಧ ಮಠಗಳ ಜೀರ್ಣೋದ್ಧಾರ ಕಾರ್ಯವನ್ನು ಕೈಗೊಳ್ಳುವುದು. ಆಚಾರ-ವಿಚಾರ, ಸಂಪ್ರದಾಯಗಳನ್ನು ಸಮಾಜಕ್ಕೆ ಹೇಳಿಕೊಡಲು ಸಮರ್ಥರಾಗುವಂತೆ ಒಡೆಯರಿಗೆ ಸೂಕ್ತ ತರಬೇತಿ ಕೊಡುವುದು. ಕುರುಬರು ಕಡ್ಡಾಯವಾಗಿ ಈ ಮಠಗಳಿಗೆ ಪ್ರತಿವರ್ಷ ಕಾಣಿಕೆ ರೂಪದ ಹಣ, ದವಸಧಾನ್ಯ, ವಸ್ತ್ರ ಮುಂತಾದ ಸಾಮಗ್ರಿಗಳನ್ನು ನೀಡುವುದು. ವರ್ಷಕ್ಕೊಮ್ಮೆ ನಾಡಿನ ವಿವಿಧೆಡೆ ಒಡೆಯರ ಸಮಾವೇಶ, ಉಪನ್ಯಾಸ ಕಾರ್ಯಕ್ರಮ ಆಯೋಜಿಸುವುದು, ರೇವಣಸಿದ್ಧನಿಗೆ ಸಂಬಂಧಿಸಿದ ಲಿಖಿತ ಮತ್ತು ಮೌಖಿಕ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸುವುದು ಮುಂತಾದ ಅಂಶಗಳನ್ನು 'ಹಾಲುಮತ ಸಂಸ್ಕೃತಿ' ಕೃತಿಯಲ್ಲಿ ಹೇಳಿರುವರು. ಹೀಗೆ ನಾವಿಂದು ನಮ್ಮತನದ ಅನನ್ಯತೆಯನ್ನು ಉಳಿಸಿಕೊಳ್ಳುವತ್ತ ಸಮಾಜವನ್ನು ಕೊಂಡೊಯ್ದು ಮೂಲ ಗುರುಪರಂಪರೆಯನ್ನು ಉಳಿಸಿ-ಬೆಳೆಸುವತ್ತ ಸಾಗಬೇಕಾಗಿದೆ.

**೪.೧.೪. ಸ್ತ್ರೀ ದೈವಗಳು :** ಮಾನವನ ಪ್ರಥಮ ಆರ್ಥಿಕ ಚಟುವಟಿಕೆಯಾದ ಆಹಾರ ಸಂಗ್ರಹಣೆಯ ಹಂತದಲ್ಲಿ ಸ್ತ್ರೀಯ ಪಾತ್ರ ಪ್ರಧಾನವಾಗಿತ್ತು. ಮಕ್ಕಳನ್ನು ಹೆರುವುದಲ್ಲದೆ ಅವರನ್ನು ಪಾಲನೆ ಮಾಡುವ ಮತ್ತು ಬೆಳೆಸುವ ಹೊಣೆಗಾರಿಕೆ ಅವಳದ್ದಾಗಿತ್ತು. ಹಾಗಾಗಿ ಅಂದಿನ ಎಲ್ಲಾ ಪದ್ದತಿಗಳು ಮತ್ತು ಸಾಂಸ್ಕೃತಿಕ ಲಕ್ಷಣಗಳು ಹೆಣ್ಣಿನ ಮೂಲಕವೇ ಸಂವಹನಗೊಳ್ಳುತ್ತಿದ್ದವು. ಗಂಡು ಬೇಟೆಗೆ ಹೋಗಿದ್ದಾಗ ಆಹಾರ ಸಂಗ್ರಹಣೆಯನ್ನು, ಗೃಹಕೃತ್ಯ ನೋಡಿಕೊಳ್ಳುತ್ತಿದ್ದ ಹೆಣ್ಣು ಬೀಜವು ಗಿಡವಾಗುವ ಪವಾಡವನ್ನು ಮೊದಲು ಕಂಡಳು. ಕೈಗುದ್ದಲಿಯಿಂದ ಕೃಷಿಯನ್ನು ಆರಂಭಮಾಡಿದ ಹಿರಿಮೆ ಹೆಣ್ಣಿನದ್ದಾಯಿತು. ಹೆಣ್ಣಿನ ಗರ್ಭಧಾರಣೆ ಮತ್ತು ಭೂಮಿಯ ಸಸ್ಯಧಾರಣೆ ಇವೆರಡಕ್ಕೂ ಸಾಮ್ಯತೆಯನ್ನು ಕಂಡುಕೊಂಡ ಆದಿಮಾನವ ಹೆಣ್ಣು ಮತ್ತು ಭೂಮಿ ಇವೆರಡೂ ಪೂಜ್ಯ ವಸ್ತುಗಳೆಂದು ಭಾವಿಸಿದನು.

ಕೃಷಿ ಆರಂಭ ಚರಿತ್ರೆಯಲ್ಲಿ ಹೆಣ್ಣಿನ ಸ್ಥಾನಮಾನಗಳು ಗಮನಾರ್ಹವಾಗಿ ಬೆಳೆದು ಅನೇಕ ಸ್ತ್ರೀ ದೈವಗಳ ಹುಟ್ಟಿಗೆ ಕಾರಣವಾಯಿತು. ಮಾತೃದೇವತಾ ಆರಾಧನೆಯು ಪ್ರಾರಂಭವಾಗಿ ನಂತರ

ಗ್ರಾಮದೇವತೆಯಾಗಿ ಆರಾಧನೆಗೆ ಒಳಪಟ್ಟಿತು. ಮಾನವನ ಜೀವನ ವಿಧಾನಗಳು ಬದಲಾದಂತೆ, ಪುರುಷರು ಮಹತ್ವದ ಸ್ಥಾನಗಳನ್ನು ಗಳಿಸುತ್ತಾ, ಮೊದಲು ಸ್ತ್ರೀ ದೈವಗಳ ಪೂಜಾರಿಯಾಗುವ ಮುಖೇನ ಮಹಿಳೆಯರನ್ನು ಹಿಂದಕ್ಕೆ ತಳ್ಳುತ್ತಾ ಬಂದನು. ನಂತರದ ಕಾಲಘಟ್ಟಕ್ಕೆ ಪುರುಷ ದೈವಗಳನ್ನು ಮುನ್ನೆಲೆಗೆ ತರುವ ಮುಖೇನ ಸ್ತ್ರೀ ದೈವಗಳನ್ನು ಅಧೀನ ದೈವವಾಗಿಸುತ್ತಾ ಬಂದಿರುವುದು ಸಂಸ್ಕೃತಿಯ ವಿಕಾಸದಲ್ಲಿ ಕಂಡುಬರುವ ವಾಸ್ತವಿಕ ಅಂಶ. ಈ ಮಾತಿಗೆ ಕುರುಬ ಸಮುದಾಯವು ಹೊರತಾಗಿದ್ದರೂ ಗಡಿ ಪರಿಸರದಲ್ಲಿ ಪ್ರತ್ಯೇಕವಾಗಿ ಸ್ತ್ರೀ ದೇವಾಲಯಗಳಿದ್ದು ಆಚರಣೆಗೊಳ್ಳುವ ದೇವತೆಗಳ ಸಂಖ್ಯೆ ಪುರುಷ ದೈವಗಳಿಗೆ ಹೋಲಿಸಿದರೆ ತೀರಾ ಕಡಿಮೆ ಇದೆ. ಏಕೆಂದರೆ ಡಿ.ಹಿರೇಹಾಳದಲ್ಲಿ ಮಲೆಯಮ್ಮ, ಪಗಡಲಬಂಡೆಯಲ್ಲಿ ಬನಶಂಕರಿ, ಹರ್ತಿಕೋಟೆಯಲ್ಲಿ ಓರಂಗಲ್ಲಮ್ಮ, ಮುರುಡಿಯಲ್ಲಿ ಎಲ್ಲಮ್ಮಳಿಗೆ ಪ್ರತ್ಯೇಕ ದೇವಾಲಯಗಳಿರುವುದನ್ನು ಹೊರತುಪಡಿಸಿದರೆ ಉಳಿದೆಡೆಯಲ್ಲೆಲ್ಲಾ ಆಯಾ ಊರಿನಲ್ಲಿರುವ ಪುರುಷ ದೇವರ ಗುಡಿಯಲ್ಲಿಯೇ ಈ ಸ್ತ್ರೀ ದೈವಗಳನ್ನು ಪ್ರತಿಷ್ಠಾಪಿಸಿರುವುದು ಕಂಡುಬರುತ್ತದೆ.

**ಬನಶಂಕರಿ:** ಬಿಜ್ಜಳ ಕುರುಬರು ಆರಾಧಿಸುವ ದೇವತೆ ಬನಶಂಕರಿ. ಬಂದಮ್ಮ>ಬಂದಮ್ಮವ್ವಳು ಬನಶಂಕರಿಯಾಗಿ ರೂಪಾಂತರಗೊಂಡು ಆರಾಧಿಸಲ್ಪಡುತ್ತಿದ್ದಾಳೆ. ಮೂಲತಃ ವಿಜಯಪುರ ಕಡೆಯಿಂದ ಬಂದ ಬಿಜ್ಜಳ ಕುರುಬರು ಸಾಣಿಕೆರೆಗೆ ಬಂದು ನೆಲೆಸಿದರು. ಅಲ್ಲಿ ಆಳ್ವಿಕೆ ಮಾಡುತ್ತಿದ್ದ ಪಾಳೆಯಗಾರರಿಗೆ ಹಾಲು, ಮೊಸರು ಮಾರಿಕೊಂಡು ಜೀವಿಸುತ್ತಿದ್ದವರು, ಕಾಲಾಂತರದಲ್ಲಿ ವಿವಿದೆಡೆ ಚದುರಿ ಹೋಗಿದ್ದಾರೆ. ಸಾಣಿಕೆರೆಯಲ್ಲಿ ಬನಶಂಕರಿಯ ಪ್ರಾಚೀನ ದೇವಾಲಯವಿದ್ದು, ಇಂದು ಪಗಡಲಬಂಡೆಗೆ ಬಂದು ನೆಲೆಸಿದವರು ಬನಶಂಕರಿಯ ದೇವಾಲಯವನ್ನು ಕಟ್ಟಿಕೊಂಡು ಆರಾಧಿಸುತ್ತಿದ್ದಾರೆ.

ಪೂರ್ವಾಭಿಮುಖವಾಗಿರುವ ಈ ದೇವಾಲಯದ ಗರ್ಭಗುಡಿಯಲ್ಲಿ ಬಲಕ್ಕೆ ಬನಶಂಕರಿಯ ಮೂರ್ತಿಶಿಲ್ಪ, ಎಡಕ್ಕೆ ಬೀರಲಿಂಗನ ಮೂರ್ತಿಶಿಲ್ಪವನ್ನು ಪ್ರತಿಷ್ಠಾಪಿಸಿದ್ದಾರೆ. ದೇವಾಲಯದ ಎದುರಿಗೆ ಸುಮಾರು ೨೫ ಅಡಿ ಎತ್ತರದ ಗರುಡಗಂಬವಿದ್ದು ಅದರಲ್ಲಿ ದೇವಾಲಯ ಕಟ್ಟಿಸಿದವರ ವಿವರಗಳನ್ನು ಕೆತ್ತಿರುವರು. ಪ್ರತೀವರ್ಷ ಜಾತ್ರೆಯನ್ನು ಮಾಡುವಾಗ ಗುರು ಒಡೆಯರು ಬಂದು ದೇವಿಯ ಆಭರಣಗಳನ್ನು ಪೂಜಿಸಿ ಸಿದ್ಧಗೊಳಿಸುವರು. ಪ್ರಸ್ತುತ ಬನಶಂಕರಿ ದೇವಿಯ ದೊಡ್ಡ ದ್ಯಾವರ ಜಾತ್ರೆಯನ್ನು ೧೯೮೭ರಲ್ಲಿ ಆಚರಿಸಲಾಗಿದೆ. ಆವಾಗ ಚಿಕ್ಕಬಳ್ಳಾಪುರದಿಂದ ಹೊಸ ದೇವ-ದೇವಿಯ ವಿಗ್ರಹಗಳನ್ನು ಮಾಡಿಸಿಕೊಂಡು ಜೀವಕಾಳು ತುಂಬಿಸಿ ದೇವಾಲಯದಲ್ಲಿ ಪ್ರತಿಷ್ಠಾಪಿಸಿದ್ದಾರೆ. ಹೊಸ ಪೂಜಾರಿಯನ್ನು ನೇಮಿಸಿದ್ದಾರೆ. ಇಲ್ಲಿ ಪೂಜೆ ಮಾಡಲು ಪಟ್ಟದ ಪೂಜಾರಿ ಮತ್ತು ಹೂಮಾಲೆ ಪೂಜಾರಿ ಎಂದು ಇಬ್ಬರಿಗೆ ಪಟ್ಟ ಕಟ್ಟಲಾಗಿದೆ. ಉಳಿದಂತೆ ಆಚರಣೆಗಳೆಲ್ಲವೂ ಬೀರಪ್ಪನ ಆಚರಣೆಗಳ ಪ್ರತಿರೂಪದಂತೆಯೇ ಇಲ್ಲಿಯೂ ನಡೆಯುತ್ತವೆ. ಕಾರ್ತೀಕ ಮಾಸದಲ್ಲಿ ಕಾಳುಹಬ್ಬ, ಯುಗಾದಿಯಲ್ಲಿ

ಹಿರಿಯರ ಹಬ್ಬಗಳನ್ನು ಒಕ್ಕಲಿನ ಅಣ್ಣ ತಮ್ಮಂದಿರೆಲ್ಲಾ ಸೇರಿ ದೇವಾಲಯದ ಹತ್ತಿರವೇ ಮಾಡುವುದು ವಿಶೇಷವಾಗಿದೆ.

ಹಿರಿಯೂರು ತಾಲೂಕಿನ ಸುತ್ತಮುತ್ತಲ ಗ್ರಾಮಗಳಲ್ಲಿ ಅದರಲ್ಲಿಯೂ ಹೆಚ್ಚಾಗಿ ನಂದಿಹಳ್ಳಿಯಲ್ಲಿರುವ ಬಿಜ್ಜನ ಕುರುಬರು ವೀರ ಸಿದ್ಧಮ್ಮ (ಹಂಪಯ್ಯನ ಮಠ)ನ ಮಠಕ್ಕೆ ನಡೆದುಕೊಳುತ್ತಾರೆ. ಕೊಂಡ್ಲಹಳ್ಳಿಯಲ್ಲಿರುವ ಬಿಜ್ಜನ ಕುರುಬರು ಚಳ್ಳಕೇರಮ್ಮನಗೆ ಶಿಶು ಮಕ್ಕಳಾಗಿ ನಡೆದುಕೊಳ್ಳುತ್ತಾರೆ. ಉಳಿದ ಬೆಡಗುಗಳಿಗೆ ಹೋಲಿಸಿದರೆ ಅತೀ ಹೆಚ್ಚು ಸ್ತ್ರೀ ದೈವಗಳನ್ನು ಆರಾಧಿಸುವ ಒಕ್ಕಲಿನವರು ಇವರೆಂದು ಹೇಳಬಹುದು.

**ಯಲ್ಲಮ್ಮ:** ಸವದತ್ತಿಯ ಯಲ್ಲಮ್ಮಳನ್ನು ಗಡಿ ಪರಿಸರದಲ್ಲಿರುವ ಕುರುಬರು ಎಲ್ಲ ಕಡೆಯೂ ಆರಾಧಿಸುವುದು ಕಂಡುಬರುತ್ತಿದೆಯಾದರೂ ಪ್ರತ್ಯೇಕ ದೇವಾಲಯವನ್ನು ನಿರ್ಮಿಸಿರುವುದು ಮುರುಡಿ, ಕಮಲಾಪುರ, ಬೈರವನತಿಪ್ಪ ಗ್ರಾಮಗಳಲ್ಲಿ ಮಾತ್ರ. ಉಳಿದಂತೆ ಅತೀ ಹೆಚ್ಚು ಪುರುಷ ದೈವದ ದೇವಾಲಯದಲ್ಲಿಯೇ ಒಂದೆಡೆ ಜಗುಲಿಯಲ್ಲಿರುವುದರ ಜೊತಗೆ ಆಯಾ ದೇವಾಲಯದಲ್ಲಿರುವ ಪುರುಷ ದೈವದ ಧಾರ್ಮಿಕ ಆಚರಣೆಗಳಲ್ಲಿ ಭಾಗವಹಿಸುವುದರ ಮುಖೇನ ಆರಾಧನೆಗೊಳ್ಳುವುದಿದೆ. ಯಲ್ಲಮ್ಮನ ಅನನ್ಯತೆಯು ಕಂಡುಬರುವುದು 'ಯಲ್ಲಮ್ಮನ ಸಾಕಿ' ಎಂಬ ಧಾರ್ಮಿಕ ಆಚರಣೆಯಲ್ಲಿ ಮಾತ್ರ.

ಒಟ್ಟಾರೆಯಾಗಿ ಮೇಲಿನ ಸ್ತ್ರೀದೈವಗಳ ಧಾರ್ಮಿಕ ಆಚರಣೆಗಳನ್ನು ಹೊರತುಪಡಿಸಿದರೆ ಉಳಿದಂತೆ ಎಲ್ಲಿಯೂ ಪ್ರತ್ಯೇಕವಾಗಿ ದೊಡ್ಡದ್ಯಾವರ ಜಾತ್ರೆ, ಪೂಜಾರಿಯ ಪಟ್ಟ, ಗೌಡನಪಟ್ಟ, ಯಜಮಾನನ ಪಟ್ಟ, ಸೇವಾಗಾರರ ಪಟ್ಟ ಮುಂತಾದ ಧಾರ್ಮಿಕ ಆಚರಣೆಗಳು ನಡೆಯುವುದು ವಿರಳ. ಬದಲಾಗಿ ಸ್ತ್ರೀದೈವಗಳ ಆರಾಧನೆಯಿದೆ. ಕಣಜನಹಳ್ಳಿಯಲ್ಲಿ ಹೊಸೂರಮ್ಮಳನ್ನು, ಡಿ.ಹಿರೇಹಾಳದಲ್ಲಿ ಚೌಡಮ್ಮಳನ್ನು, ಸೀರ್ಪಿಯಲ್ಲಿ ವೀರ ಮಾಳಮ್ಮಳನ್ನು, ನಂದಿಹಳ್ಳಿಯಲ್ಲಿ ಉಂಬಲಾರದ ಕೆಂಚಮ್ಮಳಂತಹ ಹಲವು ದೇವತೆಗಳನ್ನು ಆರಾಧಿಸುವುದು ಕಂಡುಬರುತ್ತದೆ. ಈ ದೇವತೆಗಳಿಗೆ ಮೇಲಿನ ಪಟ್ಟಗಳನ್ನು ಕಟ್ಟುವುದು ಅಲ್ಲಿರುವ ಪುರುಷ ದೈವಕ್ಕೆ ದೊಡ್ಡದ್ಯಾವರ ಜಾತ್ರೆ ಮಾಡಿದ ಸಂದರ್ಭದಲ್ಲಿ ಮಾತ್ರವೇ.

### ೪.೧.೫. ಇತರೆ ದೈವಗಳು

**ಪಾತಪ್ಪ :** ಕಲ್ಯಾಣದುರ್ಗಂನ ಹತ್ತಿರದ ವರ್ಲಿ ಎಂಬುದು ಪಾತಪ್ಪನ ಮೂಲನೆಲೆ. ಪಾತಪ್ಪನನ್ನು ಪಾತಲಿಂಗಪ್ಪ, ಪೋತಪ್ಪ, ಪೋತುರಾಜರೆಂದು ಆರಾಧಿಸುತ್ತಾರೆ. ಬೇಡರು, ಗೊಲ್ಲರ ನಂತರದಲ್ಲಿ ಅತಿಹೆಚ್ಚು ಆರಾಧಿಸುವ ಸಮುದಾಯ ಈ ಭಾಗದಲ್ಲಿ ಕುರುಬರದು. ಪಾತಪ್ಪನ ಗುಡಿ, ಗುಂಡಿಗೇನಪಲ್ಲಿ ಮತ್ತು ಕಡೇಉಡೇವುಗಳಲ್ಲಿ ಈತನ ದೇವಾಲಯಗಳಿವೆ. ಗುಂಡಿಗೇನಪಲ್ಲಿಯ ದೇವಾಲಯವು ಪ್ರಾಚೀನವಾಗಿದ್ದು, ಅದರ ಪಕ್ಕದಲ್ಲಿ ಮೊದಲು ಪೋತುರಾಜನ ಸಮಾಧಿಯಿದೆ. ಕಡೇಉಡೇವು

ಗ್ರಾಮದಲ್ಲಿ ಬಯಲು ಪಾತಪ್ಪನ ದೇವಾಲಯವು ಚಿಕ್ಕದಾಗಿದ್ದು, ಅದರಲ್ಲಿ ಒಡಮೂಡಿದ ಲಿಂಗವಿತ್ತು ಕಾಲಾಂತರದಲ್ಲಿ ಆ ಲಿಂಗದ ಪಕ್ಕದಲ್ಲಿಯೇ ಇನ್ನೊಂದು ಲಿಂಗವು ಒಡಮೂಡಿದೆ. ಕೆಲಕಾಲಕ್ಕೆ ಮತ್ತೊಂದು ಲಿಂಗವು ಒಡಮೂಡಿದೆ. ಹೀಗೆ ಒಟ್ಟು ಮೂರು ಲಿಂಗಗಳು ಉದ್ಭವಿಸಿರುವುದರಿಂದ ಇಲ್ಲಿ ಶ್ರದ್ಧಾಭಕ್ತಿಯಿಂದ ನಡೆದುಕೊಳ್ಳುತ್ತಾರೆ.

ಪಾತಪ್ಪನ ಭಕ್ತನಾಗಿ, ಪೋತುರಾಜನಾಗಿ ಧೀಕ್ಷೆ ತೆಗೆದುಕೊಂಡವನು ಮಾಡುವ ಧಾರ್ಮಿಕ ಸೇವೆಯಲ್ಲಿ ಗಾವು ಸಿಗಿಯುವುದು ಪ್ರಮುಖವಾದುದು. ಗಾವು ಸಿಗಿಯುವುದೆಂದರೆ, ಬದುಕಿದ ಹೋತದ ಕರಿಮರಿಯನ್ನು ಬಾಯಿಯಿಂದ ಕುತ್ತಿಗೆ ಕಿತ್ತು ಸಾಯಿಸುವ ಮುಖೇನ ದೇವರಿಗೆ ಅರ್ಪಿಸುವುದು. ಈ ಆಚರಣೆ ಮಾಡುವುದರಿಂದ ದೇವರಿಗೆ ಸಂತೃಪ್ತಿಯಾಗಿ ಊರು ಸುಭೀಕ್ಷೆಯಾಗಿರುವುದೆಂಬ ನಂಬಿಕೆಯಿದೆ. ಇದೇ ತರಹದ ಧಾರ್ಮಿಕ ಆಚರಣೆಯು ಹೊಳಲ್ಕೆರೆ ತಾಲೂಕಿನ ತಾಳಿಕಟ್ಟೆಯ ಬೀರದೇವರ ತೋಪುಜಾತ್ರೆಯಲ್ಲಿಯೂ ನಡೆಯುತ್ತದೆ. ಇಲ್ಲಿ ಪೋತುರಾಜನ ಕಾಯಕವನ್ನು ಅಲ್ಲಿ ಈರಗಾರರು ಮಾಡುತ್ತಾರೆ. ಬೀರೆದೇವರ ಸುತ್ತಲೂ ಕುರಿಮಂದೆಯನ್ನು ಸುತ್ತಿಸುವಾಗ ಈರಗಾರರು ಎಷ್ಟು ಕುರಿಗಳನ್ನಾದರೂ ಗಾವು ಸಿಗಿಯಬಹುದು. ಅದಕ್ಕೆ ಹಲ್ಮರಿ(ಪಲ್ಮರಿ)ಸೇವೆ ಎಂದು ಕರೆಯುತ್ತಾರೆ. ಯಾರ ಹಿಂಡಿನ ಕುರಿಯನ್ನು ಈರಗಾರ ಗಾವು ಸಿಗಿಯುವನೋ ಅವರ ಹಿಂಡು ಹೆಚ್ಚುತ್ತದೆಂಬ ನಂಬಿಕೆ ಈ ಆಚರಣೆಯ ಹಿಂದಿದೆ. ಪಾತಪ್ಪನ ಒಕ್ಕಲಾಗಲು ಎಲ್ಲರಿಗೂ ಬರುವುದಿಲ್ಲ ಗರ್ಭವತಿಯಾದ ಸ್ತ್ರೀಯ ಕನಸಿನಲ್ಲಿ ಪಾತಪ್ಪ ಕಾಣಿಸಿಕೊಂಡಾಗ ಹುಟ್ಟಿದ ಮಗು ಪೋತುರಾಜನಾಗಿ ಧೀಕ್ಷೆ ತೆಗೆದುಕೊಳ್ಳಬೇಕು ಎಂಬ ಪ್ರತೀತಿ ಈ ಭಾಗದಲ್ಲಿದೆ. ಅದಕ್ಕೆ ಸಂಬಂಧಿಸಿದಂತೆ ಗುಂಡಿಗೇನಹಳ್ಳಿಯಲ್ಲಿ ಹೇಳಿದ ನಿದರ್ಶನವೊಂದು ಸಾಕ್ಷೀಕರಿಸುತ್ತದೆ. ಕುರುಬ ಸ್ತ್ರೀಯೊಬ್ಬಳು ಗರ್ಭವತಿಯಾಗಿದ್ದಳು ಆಕೆಯ ಕನಸಿನಲ್ಲಿ ಪಾತಪ್ಪ ಕಾಣಿಸಿಕೊಂಡನು. ಆಕೆಗೆ ಏಳು ತಿಂಗಳಿಗೆ ಗಂಡುಮಗು ಜನಿಸಿತು. ಹುಟ್ಟಿದ ಮಗುವಿಗೆ ಕಣ್ಣು ಕಾಣಿಸುತ್ತಿರಲಿಲ್ಲ ಅದಕ್ಕಾಗಿ ಆ ಮಗುವಿಗೆ ಹಾಲು ಕುಡಿಸಿ ಬುಟ್ಟಿಯಲ್ಲಿಟ್ಟುಕೊಂಡು ಔಡಲ ಎಲೆಗಳನ್ನು ಮುಚ್ಚುತ್ತಿದ್ದರು. ಒಂದು ವರ್ಷ ಹೀಗೆಯೇ ಜೋಪಾನ ಮಾಡುತ್ತಾ ಬಂದರು. ವಲ್ಲಿ ಪಾತಪ್ಪನ ಪೋತುರಾಜರು ಈ ಮನೆಯತ್ತಿರ ಬಂದು ನನ್ನ ಶಿಶುಮಗ ನಿಮ್ಮ ಮನೆಯಲ್ಲಿದೆ ಹೊರಗೆ ಕರೆದುಕೊಂಡು ಬನ್ನಿರೆಂದು ಹೇಳಿದರು. ಹೊರಗೆ ತರಲು ಒಪ್ಪದ ಅವರು ಒಳಗೆ ಯಾರೂ ಇಲ್ಲವೆಂದರು. ಮಗುವಿನ ಹತ್ತಿರ ಬಂದ ಪೋತುರಾಜು ಬುಟ್ಟಿಯಲ್ಲಿದ್ದ ಮಗುವಿನ ಹಣೆಗೆ ಬಂಡಾರ ಹಚ್ಚಿದ ಕೂಡಲೇ ಮಗು ಕಣ್ಣು ತೆರೆಯಿತು. ಮುಂದೆ ಆ ಮಗುವಿಗೆ ಧೀಕ್ಷೆ ಕೊಡಿಸಿದರು. ಇದು ಪೋತುರಾಜನಾಗಲು ಬೇಕಾದ ಅರ್ಹತೆ.

ಪಾತಪ್ಪನ ಗುಡಿಯಲ್ಲಿ ವರ್ಷಕ್ಕೆ ಒಂದು ಬಾರಿ, ಮೂರು ವರ್ಷಕ್ಕೊಮ್ಮೆ ಕಡೆಉಡೇವಿನಲ್ಲಿ ಗಾವು ಸಿಗಿಯುವ ಆಚರಣೆಯಿದೆ. ಇದರ ಜೊತೆಗೆ ಯಾವುದೇ ಗ್ರಾಮದಲ್ಲಿಯಾದರು ಗಾವು

ಸಿಗಿಯುವ ಆಚರಣೆ ನಡೆಸಿದರೆ ಸುತ್ತಮುತ್ತಲ ಗ್ರಾಮಗಳಲ್ಲಿರುವ ಪೋತುರಾಜರೆಲ್ಲಾ ಜಾತಿಬೇಧವಿಲ್ಲದೆ ಹೋಗಿ ಈ ಆಚರಣೆಯನ್ನು ಮಾಡಿ ಬರುತ್ತಾರೆ. ಗುಮ್ಮಗಟ್ಟ, ಪೋಲೆಪಲ್ಲಿ, ಬಾದನಪಲ್ಲಿ, ವೇಪಲಪರ್ತಿ, ಕೊಂಡ್ಲಹಳ್ಳಿ, ನಾಗಿರೆಡ್ಡಿಪಲ್ಲಿ ಮುಂತಾದ ಕಡೆಗಳಲ್ಲಿ ಕುರುಬ ಸಮುದಾಯದ ಪೋತುರಾಜರಿದ್ದಾರೆ. ಗಾವು ಸಿಗಿಯುವ ಪೋತುರಾಜರು ಊರಾಡಿದರೆ ಊರಿಗೆ ದುಷ್ಟಶಕ್ತಿಗಳ ಕಾಟವಿರುವುದಿಲ್ಲ ಎಂಬ ನಂಬಿಕೆಯಿದೆ. ಗಾವು ಸಿಗಿದರೆ ಉತ್ತಮ ಮಳೆಬೆಳೆಯಾಗುತ್ತದೆಂಬ ಪ್ರತೀತಿಯ ಹಿನ್ನೆಲೆಯಲ್ಲಿ ಈ ಆಚರಣೆ ಬಂದಿದೆ. ಗಾವು ಸಿಗಿಯುವ ಪೋತುರಾಜರು ಒಂದತ್ತು ಇದ್ದು ಹೊಳೆ/ಹಳ್ಳಕ್ಕೆ ಹೋಗಿ ಗಂಗಾಪೂಜೆ ಮಾಡಿ ಅಲ್ಲಿಯೇ ಪೋತುರಾಜರ ವೇಷ ಧರಿಸಿಕೊಳ್ಳುತ್ತಾರೆ. ಒಂಬತ್ತು ಸಂಖ್ಯೆ ಇರುವ ರುದ್ರಾಕ್ಷಿ ಸರ ಧರಿಸಿ ಕೊರಳನ್ನು ಅಲಂಕರಿಸಿಕೊಂಡಿರುತ್ತಾರೆ. ಕಾಲಿಗೆ ಸೆಲಿಗೆ, ಗಗ್ಗರ ಹಾಕಿ ಕಪ್ಪು ಬಣ್ಣದ ಕಾಸಿದಟ್ಟಿಯನ್ನು ಸೊಂಟದ ಮುಂಬಾಗಕ್ಕೆ ಇಳಿಬೀಳುವಂತೆ ಧರಿಸಿ ಸೊಂಟಕ್ಕೆ ಗಂಟೆಯ ಸರದ ಚರ್ಮ ಪಟ್ಟಿಯನ್ನು ಕಟ್ಟಿಕೊಂಡಿರುತ್ತಾರೆ. ಮೈತುಂಬಾ ಅರಿಸಿನವನ್ನು ಪೂಸಿಕೊಂಡು ಮುಖಕ್ಕೆ ಮಾತ್ರ ಹೋತನ ಆಕಾರದಲ್ಲಿ ಕಾಣುವ ರೀತಿಯಲ್ಲಿ ಅರಿಸಿನ ಬಳಿದುಕೊಂಡಿರುತ್ತಾರೆ. ಗಿರಜಾಮೀಸೆ, ಉದ್ದವಾದ ಕೂದಲು ಬೆನ್ನಿನ ಹಿಂದೆ ಇಳಿಬಿಟ್ಟಿರುತ್ತಾರೆ. ಉರಿಮೆ ವಾದ್ಯದವರೊಂದಿಗೆ ಕುಣಿಯುತ್ತಾ, ಕೇಕೆ ಹಾಕುತ್ತಾ, ವೀರನಾಟ್ಯವಾಡುತ್ತಾ ಎರಡು ಕೈಯಲ್ಲಿರುವ ಚಾವಟಿಗಳನ್ನು ಜಳಪಿಸುತ್ತಾ ಮತ್ತೇರಿದವರಂತೆ ಆರ್ಭಟಿಸುತ್ತಾ ದೇವರ ಗುಡಿಯತ್ತಿರದಲ್ಲಿ ಗಾವುಸಭೆ ನಡೆಸುತ್ತಾರೆ. ವೀಳ್ಯ ಕೊಟ್ಟು ಕರೆದಿರುವ ಪೋತುರಾಜನು ಮುಖಂಡನಾಗಿ ಉಳಿದ ಪೋತರಾಜರೊಂದಿಗೆ ಸೇರಿ ಅಲ್ಲಿ ನೆರೆದ ಜನರ ಅಪ್ಪಣೆ ಕೇಳುತ್ತಾರೆ. ಮುಖಂಡನ ಅಣತಿಯಂತೆ ಉಳಿದ ಪೋತುರಾಜ ಪಡೆ ಅನುಮತಿ ಕೊಡುವಂತೆ ಕೇಳುವರು.

ಜನ ಒಪ್ಪಿಗೆ ಕೊಟ್ಟ ನಂತರ ಗಾವು ಸಿಗಿಯುವ, ಗುಂಡಿ ತೆಗೆಸಿ ಅದಕ್ಕೆ ಶಾಸ್ತ್ರೋಕ್ತವಾದ ರೀತಿಯಲ್ಲಿ ಪೂಜೆ ಮಾಡುತ್ತಾರೆ. ಗಾವಿಗೆ ಬಲಿಯಾಗುವ ಹೋತವನ್ನು ಗಾವು ಗುಂಡಿಯ ಬಳಿ ತಂದು ಮಂತ್ರ ಹೇಳುವರು. ಅದು ಸತ್ತಹಾಗೆ ನಿಶ್ಚೇತವಾಗುತ್ತಿದ್ದಂತೆ ಜನರ ಸಿಳ್ಳು ಕೇಕೆ ಮುಗಿಲು ಮುಟ್ಟಿರುತ್ತದೆ. ಪೋತುರಾಜ ಗಾವಿನ ಮರಿಯನ್ನು ಎದೆಗವಚಿಕೊಂಡು ಗಾವು ಸಿಗಿಯಲು ಸಿದ್ದನಾಗುತ್ತಾನೆ. ಇನ್ನಿಬ್ಬರು ಸಹಾಯಕ ಪೋತುರಾಜರು ಆತನ ಪಕ್ಕದಲ್ಲಿಯೇ ನಿಂತಿರುತ್ತಾರೆ. ಉಳಿದ ಪೋತುರಾಜರು ವೀರ ನಾಟ್ಯಮಾಡುತ್ತಾ ಅಬ್ಬರಿಸುತ್ತಿರುವಂತೆ ಗಾವು ಸಿಗಿದು ಅದರ ರಕ್ತ ಮಾಂಸಗಳನ್ನು ಗಾವಿನ ಗುಂಡಿಗೆ ಉಗಿಯುವರು. ಕೊನೆಗೆ ಸತ್ತ ಗಾವಿನ ತಲೆ ಕತ್ತರಿಸಿ ಗುಂಡಿಗೆ ಹಾಕುತ್ತಾರೆ. ಗಾವು ಮರಿಯ ಉಳಿದ ದೇಹವನ್ನು ಉರಿಮೆ ಬಡಿಯುವ ಚಲುವಾದಿಗಳಿಗೆ ಕೊಡುವರು. ಕೆಲವೆಡೆ ತಳವಾರರಿಗೆ ಕೊಡುತ್ತಾರೆ. ತಮ್ಮ ಮೈಯಿಗೆ ಮೆತ್ತಿಕೊಂಡ ಅರಿಸಿನ ಕುಂಕುಮ ತೊಳೆದ ನೀರನ್ನು ಗಾವಿನ ಗುಂಡಿಗೆ ಹರಿಸಿ ಗುಂಡಿ ಮುಚ್ಚಿ ಅನ್ನ ಮೋಸರು ಎಡೆ ಹಾಕಿ ಶಾಂತಿ

ಮಾಡುತ್ತಾರೆ. ನಂತರ ಅವರಿಂದ ದಕ್ಷಿಣೆ ಪಡೆದು ಹೋಗುವರು. ಈ ಆಚರಣೆಯು ಈ ಭಾಗದಲ್ಲಿ ಹೆಚ್ಚಾಗಿ ಸ್ತ್ರೀ ದೈವಗಳಿಗೆ ಮಾತ್ರ ನಡೆಯುತ್ತದೆ. ಪುರುಷ ದೈವಗಳಲ್ಲಿ ಪೋತಪ್ಪನಿಗೆ ಮಾತ್ರ ಈ ಆಚರಣೆಯಿದೆ.

**ಗಾದಿಲಿಂಗಪ್ಪ:** ಕರ್ನಾಟಕ–ಆಂಧ್ರಪ್ರದೇಶದ ಗಡಿಯಲ್ಲಿರುವ ಗ್ರಾಮ ಗೂಳ್ಯಂ. ಕುರುಬ ಸಮುದಾಯದಲ್ಲಿ ಜನಿಸಿ, ಕುರಿಕಾಯ್ದು ಆಧ್ಯಾತ್ಮಿಕ ಶಕ್ತಿಯಿಂದ ದೈವತ್ವಕ್ಕೇರಿದ ಗಾದಿಲಿಂಗಪ್ಪ ಸುತ್ತಮುತ್ತಲ ಪ್ರದೇಶದಲ್ಲಿಲ್ಲ. ಜಾತಿ, ಮತ ಪಂಥಗಳ ಭೇದವಿಲ್ಲದೆ ಸಾರ್ವಜನಿಕರಿಂದ ಭಕ್ತಿ ಪೂರ್ವಕ ಗೌರವ ಪಡೆದ ಸಮಾಜಕ್ಕೆ ಕೋಮು ಸೌಹಾರ್ದತೆ ಮತ್ತು ಭಾವೈಕ್ಯತೆಯನ್ನು ಸಾರಿದವನು. ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಹೊಸಕೆರೆ ಎಂಬ ಪುಟ್ಟ ಹಳ್ಳಿಯಲ್ಲಿ ಶಂಕ್ರಪ್ಪ–ಶಾಂತಮ್ಮ ದಂಪತಿಗಳಿಗೆ ಜನಿಸಿದನು. ಲಿಂಗಪ್ಪ ಎಂದು ನಾಮಕರಣ ಮಾಡಿದ ಕೂಸು ಹಾಲು ಕುಡಿಯುತ್ತಿರಲಿಲ್ಲ. ಜಂಗಮನ ವೇಷದಲ್ಲಿ ಬಂದ ಶಿವ ಸತಿ–ಪತಿಗಳು ಲಿಂಗ ಪೂಜೆಯನ್ನು ತಪ್ಪದೇ ಮಾಡಿಕೊಂಡು ಹೋಗಿ, ನಿಮ್ಮ ಮಗ ಉತ್ತಮನಾಗಿ ಬೆಳೆಯುವನೆಂದು ಹೇಳಿದನು. ಲೌಖಿಕ ಜಗತ್ತಿನೊಂದಿಗೆ ತನಗೆ ಸಂಬಂಧವಿಲ್ಲ ಎಂಬಂತೆ ಶಿವ ಧ್ಯಾನದಲ್ಲಿ ಕುಳಿತಿರುತ್ತಿದ್ದ ಲಿಂಗಪ್ಪನಿಗೆ ಮದುವೆ ಮಾಡಿದರೆ ಸರಿಹೋಗುವನೆಂಬ ಕಾರಣಕ್ಕೆ ತಂದೆ–ತಾಯಿಗಳು ಸಿದ್ಧತೆ ನಡೆಸತೊಡಗಿದರು. ಇದನ್ನು ಮನಗಂಡ ಲಿಂಗಪ್ಪ ಲೌಕಿಕ ಜಗತ್ತಿಗೆ ಬರಬೇಕಾಗುತ್ತದೆ ಎಂಬ ಅಂಜಿಕೆಯಿಂದ ರಾತ್ರೋರಾತ್ರಿ ಮನೆಬಿಟ್ಟು ಪೂರ್ವದ ಕಡೆಗೆ ಪ್ರಯಾಣಿಸಿ ಚಿದಾನಂದ ಅವಧೂತರ ಅಂಭಾ ಕ್ಷೇತ್ರಕ್ಕೆ ಬರುತ್ತಾನೆ. ಅಲ್ಲಿ ಕಠಿಣ ತಪಗೈಯ್ದು ದೇವಿಯ ಅನುಗ್ರಹದಿಂದ ಜ್ಞಾನಿಯಾಗುತ್ತಾನೆ.

ಅಲ್ಲಿಂದ ಹೊರಟು ತುಂಗಭದ್ರೆಯನ್ನು ದಾಟಿ ಗೂಳ್ಯಂಗೆ ಬಂದು ನೆಲೆಸುತ್ತಾನೆ. ಅಲ್ಲಿ ಗಾದಿಬಸಪ್ಪ ಮತ್ತು ಲಿಂಗಮ್ಮ ಎಂಬುವರ ಮನೆಯಲ್ಲಿದ್ದು ಅವರ ಸೇವೆ ಮಾಡುತ್ತಾ ಮನೆಯ ಮಗನೆ ಅಗುತ್ತಾನೆ. ಹೀಗಿರುವಾಗ ಯಳ್ಳಾರ್ತಿಯ ಶೇಕ್ಷಾವಲಿ ಮತ್ತು ಬಳ್ಳಾರಿಯ ಮರಿಸ್ವಾಮಿಗಳ ಆಧ್ಯಾತ್ಮ ಚಿಂತನೆಗಳನ್ನು ಪಡೆದು ತನ್ನ ಬುದ್ಧಿಯನ್ನು ಸಾಣೆ ಹಿಡಿದುಕೊಳ್ಳುತ್ತಾನೆ. ಮರಿಸ್ವಾಮಿಗಳ ಆದೇಶದ ಮೇರೆಗೆ ಹಂಪ್ಪಮ್ಮ ಎಂಬಾಕೆಯನ್ನು ಮದುವೆಯಾದರೂ ಈ ಲೌಕಿಕ ಸಂಸಾರ ಒಂದಾಗದೆ ಹಂಪ್ಪಮ್ಮ ಸಾಯುತ್ತಾಳೆ. ಅಲ್ಲಿಂದ ಪೂರ್ಣವಾಗಿ ಆಧ್ಯಾತ್ಮಿಕತೆಯತ್ತ ಬಂದವನು ಜನರಿಗೆ ಉಪಯೋಗವಾಗುವ ಜನೋಪಕಾರಿ ಕೆಲಸಗಳನ್ನು ಮಾಡುತ್ತ ದೈವತ್ವಕ್ಕೆ ಏರುತ್ತಾನೆ. ಹೀಗೆ ಅನೇಕ ಪವಾಡಗಳನ್ನು ಮಾಡಿದ ಗಾದಿಲಿಂಗಪ್ಪನ ದೇವಾಲಯ ಗೂಳ್ಯಂನಲ್ಲಿದೆ. ಇಲ್ಲಿ ವರ್ಷಕ್ಕೊಮ್ಮೆ ಜೋಡು ರಥೋತ್ಸವ ನಡೆಸುವರು. ಗೂಳ್ಯಂ ಅಲ್ಲದೆ ತಾಳೂರಿನಲ್ಲಿಯೂ ಗಾದಿಲಿಂಗಪ್ಪನ ದೇವಾಲಯವಿದೆ. ಇಲ್ಲಿ ಗಾದಿಲಿಂಗಪ್ಪ ತಾತನ ಜಾತ್ರೆಗೆ ಬರುವ ಭಕ್ತರಿಗೆ ಅನ್ನ ಸಂತರ್ಪಣೆಯನ್ನು ಏರ್ಪಡಿಸುವರು. ಹಾಗೆಯೇ ಗಾದಿಗನೂರಿನಲ್ಲಿಯೂ ಗಾದಿಲಿಂಪ್ಪನ ಗುಡಿಯನ್ನು ಕಟ್ಟಿಕೊಂಡು ಆರಾಧಿಸುತ್ತಿದ್ದಾರೆ.

ಹೀಗೆ ತನ್ನ ಪವಾಡ ಮತ್ತು ಜನೋಪಕಾರಿ ಕಾರ್ಯಗಳಿಂದ ದೈವತ್ವಕ್ಕೇರಿದ ಗಾದಿಲಿಂಗಪ್ಪನ ಕುರಿತು ಸಾಕಷ್ಟು ಡೊಳ್ಳಿನ ಹಾಡುಗಳು ಹುಟ್ಟಿಕೊಂಡಿವೆ.

**ಜಾತ್ರೆ–ಆಚರಣೆಗಳು:** ಜಾತ್ರೆಯ ದಿನ ಚಿನ್ನೂರಪ್ಪನ ದೇವಾಲಯದಿಂದ ಒಂದು ಕುಂಬ, ಶಾಂತಮ್ಮನ ಮನೆಯಿಂದ ಮತ್ತೊಂದು ಕುಂಬ ಬರಬೇಕೆಂದು ಗಾದಿಲಿಂಗಪ್ಪನೇ ಹೇಳಿದ್ದನಂತೆ. ಏಕೆಂದರೆ ಗಾದಿಲಿಂಗಪ್ಪನ ಸೇವೆ ಮಾಡಿದವಳು ಶಾಂತಮ್ಮ. ಆತ ಸತ್ತ ನಂತರ ೨೦ ದಿನಗಳವರೆಗೆ ಸಮಾಧಿಯನ್ನು ಕಾಯ್ದು ಕುಳಿತವಳು. ಹೀಗೆ ಕಾಯುತ್ತಿರುವಾಗ ೨೦ ದಿನಗಳಾದ ಸಮಯಕ್ಕೆ ಮನೆಯವರು ೨೧ ದಿನಗಳಾಯಿತು ಎಂದು ಕರೆದುಕೊಂಡು ಹೋದರು. ಶಾಂತಮ್ಮ ನೀನು ನನ್ನ ಮಾತು ಕೇಳಲಿಲ್ಲ. ಹಾಗಾಗಿ ಮುಂದೆ ನಾಲ್ಕು ಜನ ಅಡ್ಡಾಡುವ ದಾರಿಯಲ್ಲಿ ನಿನ್ನ ಗುಡಿಯಿರಲೆಂದು ಶಾಂತಮ್ಮಳಿಗೆ ಶಪಿಸಿದ್ದರಿಂದ ಸಿದ್ಧಾಪುರಕ್ಕೆ ಹೋಗುವ ದಾರಿಯಲ್ಲಿ ಆಕೆಯ ಗುಡಿಯಿದೆ. ಪ್ರತಿವರ್ಷ ಶಿವರಾತ್ರಿ ಅಮಾವಾಸ್ಯೆ ಆದ ಐದನೆಯ ದಿನದಲ್ಲಿ ಜಾತ್ರೆ ಮತ್ತು ರಥೋತ್ಸವ ನಡೆಯುತ್ತದೆ. ರಥೋತ್ಸವಕ್ಕೆ ಬಂದ ಭಕ್ತರು ಶ್ರದ್ಧಾ ಭಕ್ತಿಯಿಂದ ದೇವರಿಗೆ ಕಟ್ಟಿಕೊಂಡ ಹರಕೆಗಳನ್ನು ತೀರಿಸಿ ರಥೋತ್ಸವದಲ್ಲಿ ಪಾಲ್ಗೊಳ್ಳುತ್ತಾರೆ. ರಥೋತ್ಸವದ ನಂತರ ತಿಂಗಳ ಪೂಜೆ ಮಾಡುತ್ತಾರೆ. ಇದು ರಥೋತ್ಸವ ನಡೆದ ತಿಂಗಳ ಒಳಗಾಗಿಯೇ ನಡೆಯುತ್ತದೆ. ಈ ಪೂಜೆಯಲ್ಲಿ ಮಾಂಸಾಹಾರ ನೈವೇಧ್ಯ ಮತ್ತು ಜ್ಯೋತಿಸೇವೆ ನಡೆಯುತ್ತದೆ. ಅಂಗದರೆ ಜ್ಯೋತಿ(ಹೆಂಡ/ಸಾರಾಯಿ)ಯಿಂದ ಮಂಗಳಾರತಿ ಮಾಡುತ್ತಾರೆ. ರಥೋತ್ಸವದಲ್ಲಿ ಕೇವಲ ಸಿಹಿ ಅಡುಗೆಯನ್ನು ಮಾತ್ರ ಸೇವಿಸಬೇಕೆಂಬ ನಿಯಮವಿದೆ. ಹಾಗಾಗಿ ತಿಂಗಳ ಪೂಜೆಯಲ್ಲಿ ಬ್ಯಾಟೆಯನ್ನು ಕಡಿದು ಮಾಂಸಾಹಾರ ನೈವೇದ್ಯ ನೀಡಿ ಜ್ಯೋತಿಯನ್ನು ಮಂಗಳಾರತಿ ಮಾಡುವುದಾಗಿದೆ.

**ಚನ್ನಕೇಶವಸ್ವಾಮಿ:** ಚಳ್ಳಕೆರೆ ತಾಲೂಕಿನ ನಾಯಕನಹಟ್ಟಿಯಲ್ಲಿ ಗೌಡ ಕುರುಬರು ಆರಾಧಿಸುವ ಚನ್ನಕೇಶವಸ್ವಾಮಿ ದೇವರಿದೆ. ಐತಿಹಾಸಿಕವಾಗಿ ತನ್ನದೆ ಆದ ಚರಿತ್ರೆಯನ್ನು ಹೊಂದಿರುವ ನಾಯಕನಹಟ್ಟಿಯಲ್ಲಿ ನೆಲೆಸಿ, ಮೊದಲು ಆಳ್ವಿಕೆ ಮಾಡಿದವರು ನಾಯಕರಾದುದರಿಂದ ಇದು ನಾಯಕನಹಟ್ಟಿ ಎಂದು, ಆಳ್ವಿಕೆ ನಡೆಸಿದವರನ್ನು ಹಟ್ಟಿ ಪಾಳೆಯಗಾರರು ಅಥವಾ ಹಟ್ಟಿ ದೊರೆಗಳೆಂದು ಗುರುತಿಸುವರು. ಈ ನಾಯಕರಿಗೆ ಗುರುವಾಗಿ ದೊರೆತವರು ಅವಧೂತ ಸಂತ ತಿಪ್ಪಯ್ಯ. ಇಲ್ಲಿ ನೆಲೆಸಿದ ಈತನನ್ನು ಹಟ್ಟಿ ತಿಪ್ಪಯ್ಯ, ತಿಪ್ಪೇಸ್ವಾಮಿ ಎಂದು ಕರೆದು ದೈವತ್ವಕ್ಕೇರಿದ ನಂತರ ವೀರಶೈವೀಕರಣಗೊಳಿಸಿ ಶ್ರೀಗುರು ತಿಪ್ಪೇರುದ್ರಸ್ವಾಮಿ ಎಂದು ಕರೆಯುತ್ತಾರೆ. ಆದರೆ ಜನಪದ ಸಾಹಿತ್ಯದಲ್ಲಿ ಆತನು ನಮಗೆ ಕಾಣಸಿಗುವುದು ಹಟ್ಟಿ ತಿಪ್ಪಯ್ಯ, ತಿಪ್ಪಣ್ಣ, ತಿಪ್ಪಜ್ಜನಾಗಿ ಮಾತ್ರವೆ. ಈ ತಿಪ್ಪಯ್ಯನ ದೊಡ್ಡ ಜಾತ್ರೆಯು ಪ್ರತಿ ವರ್ಷ ಪಾಲ್ಗುಣ ಬಹುಳ ಚಿತ್ತಾನಕ್ಷತ್ರದಂದು ನಡೆಯುತ್ತದೆ. ಸುತ್ತಮುತ್ತಲ ಗ್ರಾಮಗಳ ಎಲ್ಲಾ ಜನ ಸಮುದಾಯಗಳಿಗೂ ಈತ ಆರಾಧ್ಯ ದೈವವಾಗಿದ್ದಾನೆ.

ಈ ಗ್ರಾಮದಲ್ಲಿಯೇ ಗೌಡ ಕುರುಬರು ಆರಾಧಿಸುವ ಚನ್ನಕೇಶವ ದೇವಾಲಯವು ದಕ್ಷಿಣಾಭಿಮುಖವಾಗಿದ್ದು, ದೇವಾಲಯದ ಗರ್ಭಗುಡಿಯಲ್ಲಿ ದೇವರ ಶಿಲ್ಪವಿದ್ದು, ಸುತ್ತಲೂ ಆತನ ಪರಿಕರಗಳಿವೆ. ದೇವಾಲಯದ ಮತ್ತೊಂದೆಡೆಯಲ್ಲಿ ಯಲ್ಲಮ್ಮನನ್ನು ಪ್ರತಿಷ್ಠಾಪಿಸಲಾಗಿದೆ. ಊರ ಹೊರವಲಯದಲ್ಲಿ ಮತ್ತೊಂದು ದೇವಾಲಯವಿದ್ದು, ಅದನ್ನು ಮರಡಿ ರಂಗಪ್ಪನ ಗುಡಿ ಎನ್ನುವರು. ಗೌಡ ಕುರುಬರಿಗೆ ಮೊದಲು ದೇವರು ದೊರೆತ ಸ್ಥಳವೇ ಮರಡಿಯಲ್ಲಿರುವುದು. ಅದಕ್ಕೆ ಸಂಬಂಧಿಸಿದಂತೆ ಐತಿಹ್ಯವೊಂದು ಹೀಗಿದೆ; ಸಂದು-ಸಂದ್ವಾರ ಪ್ರದೇಶದಿಂದ ಕುರಿದನಗಳನ್ನು ಮೇಯಿಸುತ್ತಾ ವಲಸೆ ಬಂದ ಕುಟುಂಬವೊಂದು ಇಂದು ಮರಡಿ ರಂಗಪ್ಪ ಗುಡಿಯಿರುವ ತೋಪಿನಲ್ಲಿ ರಪ್ಪ ( ಕುರಿದೊಡ್ಡಿ) ಕಟ್ಟಿಕೊಂಡು ಹಾಲು ಮೊಸರು ಮಾರಿಕೊಂಡು ಬದುಕುತ್ತಿದ್ದರು. ರಪ್ಪದಲ್ಲಿದ್ದ ಒಂದು ಕರಿಯ ಕಲ್ಲಿನ ಹತ್ತಿರ ಈ ಹಾಲಿನ ಉತ್ಪನ್ನಗಳನ್ನಿಟ್ಟರೆ ಅವು ಕರಿಯ ಬಣ್ಣಕ್ಕೆ ತಿರುಗುತ್ತಿದ್ದವು. ಈ ಜಾಗದಲ್ಲಿ ಯಾಕೆ ಹೀಗಾಗುತ್ತಿದೆ ಎಂಬುದನ್ನು ಕೇಳಲಾಗಿ ಶಾಸ್ತ್ರಿಯೊಬ್ಬನು ನಿಮಗೆ ರಂಗಪ್ಪ ಒಲಿದು ಬಂದಿದ್ದಾನೆ ಅಲ್ಲಿ ಗುಡಿಯೊಂದನ್ನು ಕಟ್ಟಿ ಆತನನ್ನು ಆರಾಧಿಸಿ ಎಂದು ತಿಳಿಸಿದನು. ಕಾಲ ಸರಿದಂತೆ ಆ ದಂಪತಿಗಳಿಗೆ ನಾಲ್ಕುಜನ ಮಕ್ಕಳಾದರು. ಅವರಿಗೆ ಕ್ರಮವಾಗಿ ದೊಡ್ಡಚನ್ನಪ್ಪ, ಸಣ್ಣಚನ್ನಪ್ಪ, ರಂಗಪ್ಪ, ಮರಿಡಪ್ಪ ಎಂದು ಹೆಸರಿಟ್ಟರು. ಅಂದಿನಿಂದ ಬೆಳೆಯುತ್ತಾ ಬಂದ ಈ ಒಕ್ಕಲಿನವರು ನಾಯಕನಹಟ್ಟಿಯನ್ನು ಒಳಗೊಂಡಂತೆ ಗೌಡಗೆರೆ, ನೇರಲಗುಂಟೆ, ಕೊಂಡ್ಲಹಳ್ಳಿ ಮುಂತಾದೆಡೆ ಸಾಂದ್ರವಾಗಿದ್ದಾರೆ.

ಈ ಮೇಲಿನ ಐತಿಹ್ಯವು ಇತರೆಡೆಯಲ್ಲಿ ಬೀರಪ್ಪನ ಕುರಿತಂತೆ ದೊರೆತ ಕಥೆಯಂತಿದ್ದರೂ, ಇಲ್ಲಿನ ದೈವ ವೈಷ್ಣವ ಪರಂಪರೆಯ ಚನ್ನಕೇಶವನಾಗಿರುವುದು ವಿಶಿಷ್ಟವಾಗಿದೆ. ಮೂಲತಃ ಶೈವ ಪಂಥೀಯ ಬೀರಪ್ಪ, ಮೈಲಾರಲಿಂಗ, ರೇವಣಸಿದ್ಧ, ಸಿದ್ಧರಾಮರನ್ನು ಆರಾಧಿಸುವ ಕುರುಬರು ವೈಷ್ಣವ ಆರಾಧನೆಯ ದಾಸ ಪಂಥದತ್ತ ಸಾಗಿ ಬಂದುದು ಹೇಗೆ ಎಂಬುದನ್ನು ಗಮನಿಸಿದರೆ ಹದಿನೈದನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಬೆಳೆದುಬಂದ ಭಕ್ತಿಪಂಥದ ಪ್ರೇರಣೆ ಕಾರಣವೆನ್ನುವುದು ಗೊತ್ತಾಗುತ್ತದೆ. ಹಾಗಾಗಿಯೇ ಈ ಭಾಗದಲ್ಲಿರುವ ಬೇಡರು, ಗೊಲ್ಲರು ಸಹ ವೈಷ್ಣವ ಆರಾಧನೆಯಲ್ಲಿ ತೊಡಗಿರುವರು. ಬೇಡರು ಶೈವಪಂಥೀಯ ಶ್ರೀಶೈಲವನ್ನು ತಮ್ಮ ಮೂಲ ನೆಲೆಯೆಂದು ಹೇಳಿಕೊಳ್ಳುತ್ತಾರಾದರೂ ಅವರ ಆರಾಧನೆಗಳೆಲ್ಲಾ ಇಂದು ಹೆಚ್ಚಾಗಿ ವೈಷ್ಣವ ಪರಂಪರೆಯನ್ನು ಒಳಗೊಂಡಿರುವುದು ಕಂಡುಬರುತ್ತದೆ. ಉದಾಹರಣೆಗೆ ಕಂಪಳ ದೇವರು>ಕಂಪಳ ರಂಗಸ್ವಾಮಿಯಾಗಿ, ಜೋಸಯ್ಯ> ಜೋಸೆರಂಗಸ್ವಾಮಿಯಾಗಿ, ಓಬುಳಾ ದೇವರು>ಅಹೋಬಲ ನರಸಿಂಹಸ್ವಾಮಿಯಾಗಿ ಬದಲಾಗಿರುವುದನ್ನು ಕಾಣಬಹುದು. ಇದರಂತೆಯೇ ನಲಗೇತನ ಹಟ್ಟಿಯಲ್ಲಿ ಚನ್ನಕೇಶವ ಸ್ವಾಮಿಯನ್ನು ಬೇಡರು ಆರಾಧಿಸುತ್ತಾರೆ.

ಚನ್ನಕೇಶವಸ್ವಾಮಿಯು ವೈಷ್ಣವ ದೇವರಾದರೂ, ಇಲ್ಲಿನ ಧಾರ್ಮಿಕ ಆಚರಣೆಗಳೆಲ್ಲವೂ ಬೀರಪ್ಪನ ಧಾರ್ಮಿಕ ಆಚರಣೆಗಳಂತೆಯೇ ಇವೆ. ಉದಾಹರಣೆಗೆ ಬನ್ನಿ ಮುಡಿಯುವುದು, ಗಂಗಾಪೂಜೆ, ಪೂಜಾರಿಯ ಪಟ್ಟ ಮುಂತಾದವು. ಇಲ್ಲಿನ ಮತ್ತೊಂದು ವಿಶೇಷತೆಯೆಂದರೆ ಈ ಗುಡಿಕಟ್ಟಿನ ಅಣ್ಣತಮ್ಮಂದಿರು ಮದುವೆಯಾಗುವ ಸಂದರ್ಭದಲ್ಲಿ ಚನ್ನಕೇಶವ ದೇವಾಲಯಕ್ಕೆ ಬಂದು ವರನ ಮತ್ತು ವಧುವಿನ ವಿವರಗಳನ್ನು ಬರೆದು, ಗುಡಿಕಟ್ಟಿನವರಿಂದ ಮದುವೆಯಾಗಲು ಅನುಮತಿಯನ್ನು ಪಡೆಯಬೇಕು.

**ಚನ್ನಿಗದೇವರು :** ಸೇಜಲ ಕುರುಬ ಎಂಬ ಬೆಡಗಿನವು ಆರಾಧಿಸುವ ದೈವ. ನಾಗಿರೆಡ್ಡಿಪಲ್ಲಿಯಲ್ಲಿ ಚನ್ನಿಗದೇವರ ಪುರಾತನ ದೇವಾಲಯವಿದೆ. ಈ ದೇವರು ಅವರಿಗೆ ದೊರೆತ ಸಂಗತಿಯನ್ನು ತಿಳಿಸುವ ಕಥೆಯೊಂದು ಈ ರೀತಿಯಲ್ಲಿದೆ. ಹಿಂದೊಮ್ಮೆ ಬೇಡರು ತಮ್ಮ ದೈವಗಳೊಂದಿಗೆ ದನಕುರಿಗಳನ್ನು ಮೇಯಿಸುತ್ತಾ ಬಂದಿದ್ದರು. ಆ ಸಮಯದಲ್ಲಿ ಮುಸ್ಲಿಂರಿಗೂ ಮತ್ತು ಬೇಡರಿಗೂ ಯುದ್ಧ ಪ್ರಾರಂಭವಾಯಿತು. ಒಂದುವೇಳೆ ಯುದ್ಧದಲ್ಲಿ ತಾವು ಸೋತರೆ ತಮ್ಮ ದೈವಗಳು ಮುಸ್ಲಿಂರಿಗೆ ಸಿಕ್ಕು ಅಪವಿತ್ರವಾಗಬಾರದೆಂಬ ಉದ್ದೇಶದಿಂದ ಅಲ್ಲಿನ ಬಾವಿಯೊಂದರಲ್ಲಿ ಅಡಗಿಸಿಟ್ಟಿದ್ದರು. ಯುದ್ಧಮುಗಿಸಿ ಬಂದವರು ದೈವಗಳನ್ನು ತೆಗೆದುಕೊಂಡು ಹೋಗುವಾಗ ಒಂದು ದೈವವನ್ನು ಮರೆತು ಹೋದರು. ಆ ದೇವರು ಸೇಜಲ ಕುರುಬರಿಗೆ ಒಲಿದು ಬಂದಿತು. ಆ ದೈವವನ್ನೇ ಚನ್ನಿಗ ದೇವರೆಂದು ಆರಾಧಿಸುತ್ತಾರೆ. ಹಾಗಾಗಿಯೇ ಈ ದೈವಕ್ಕೆ ಸಂಬಂಧಿಸಿದ ಆಚರಣೆಗಳೆಲ್ಲವೂ ಬೇಡರು ಆಚರಿಸುವ ಮಾದರಿಯಲ್ಲಿರುತ್ತವೆಯೆಂದು ಶಿಕ್ಷಕರಾದ ಮೋಹನ್‌ಕುಮಾರ್ ಅವರು ಹೇಳುವರು.

ಕಾಂಸಿ ಹುಲ್ಲಿನ ಹೊದಿಕೆ ಹೊಂದಿರುವ ಈ ದೇವಾಲಯವು ಪೂಜಾರಿ ಮಾತ್ರ ಒಳಗೆ ಇರುವಷ್ಟು ಚಿಕ್ಕದು. ಇತ್ತೀಚೆಗೆ ದೇವಾಲಯವನ್ನು ಕಟ್ಟಿಸುತ್ತಿದ್ದಾರೆ, ಅದಿನ್ನು ಪೂರ್ಣವಾಗಿಲ್ಲ. ಈ ದೈವಕ್ಕೆ ಸಂಬಂಧಿಸಿದ ಒಕ್ಕಲಿನ ಅಣ್ಣ ತಮ್ಮಂದಿರು ನಾಗಿರೆಡ್ಡಿಪಲ್ಲಿಯನ್ನು ಒಳಗೊಂಡಂತೆ ಕೋನಸಾಗರ, ಕೊಂಡ್ಲಹಳ್ಳಿ, ಕಡೇಉಡೇವು, ಮಲ್ಲಸಮುದ್ರ ಮುಂತಾದೆಡೆ ಹೆಚ್ಚಾಗಿದ್ದಾರೆ.

**ನವಣೆ ಹಬ್ಬ :** ಚನ್ನಿಗ ದೇವರಿಗೆ ಐದು ವರ್ಷಗಳಿಗೊಮ್ಮೆ ನಾಗಿರೆಡ್ಡಿಪಲ್ಲಿಯಲ್ಲಿ ನವಣೆ ಹಬ್ಬವನ್ನು ಆಚರಿಸುತ್ತಾರೆ. ದೇವರಿಗೆ ದೀಪಾರಾಧನೆ ಮಾಡುವುದಕ್ಕಾಗಿ ಕಟ್ಟುನಿಟ್ಟು ನೇಮ ನಿಷ್ಠೆಯಿಂದಿರುವವರು ಒನಕೆಯ ಒಳ್ಳಿನಲ್ಲಿ ನವಣೆಯನ್ನು ಹಾಕಿ, ಬಾಯಿಗೆ ಬಟ್ಟೆ ಕಟ್ಟಿಕೊಂಡು ಜಿಗುಟಾದ ತಮಟಿ(ಸಿಗಣಿ)ಯಾಗುವವರೆಗೂ ಕುಟ್ಟುವರು. ಕುಟ್ಟುವುದನ್ನು ಯಾರೂ ನೋಡಬಾರದೆಂಬ ಪ್ರತೀತಿ ಇರುವುದರಿಂದ ಬಾಗಿಲು ಹಾಕಿಕೊಂಡು ಮನೆಯೊಂದರಲ್ಲಿ ಅದನ್ನು ತಯಾರಿಸುತ್ತಾರೆ. ಹೀಗೆ ತಯಾರಾದ ತಮಟಿಯನ್ನು ನೂರಕ್ಕೂ ಅಧಿಕ ದೀಪಗಳನ್ನಾಗಿ ಮಾಡಿ ಎಣ್ಣೆಹಾಕಿ ಬತ್ತಿಗಳನ್ನಿಟ್ಟು ಗರ್ಭಗುಡಿಯ ದೇವರ ಮುಂದೆ ಹಚ್ಚಿಡುತ್ತಾರೆ. ಅನಂತರದಲ್ಲಿ ಊರ ಪಕ್ಕದಲ್ಲಿರುವ ಹಳ್ಳಕ್ಕೆ

ಹೋಗಿ ತಣ್ಣೀರು ಬಿಂದಿಗೆಗಳನ್ನು ಹೊತ್ತು ತಂದು ದೇವರನ್ನು ಪೂಜಿಸುವರು. ಈ ತಣ್ಣೀರ ಬಿಂದಿಗೆಗಳೊಂದಿಗೆಯೇ ತಂದ ಹೆಂಡದ ಬಿಂದಿಗೆಯನ್ನಿಟ್ಟು, ಎಲ್ಲಮ್ಮಳಿಗೆ ಸಾಕಿ ಹಾಕುವರು. ಅದಾದ ನಂತರ ಚನ್ನಿಗದೇವರಿಗೆ ಬ್ಯಾಟೆ ಕೊಯ್ಯುವರು. ಅದಕ್ಕೆ ವಾಸ್ಯೆ ಕೊಯ್ಯುವುದು ಎಂದು ಹೆಸರು. ಅದನ್ನು ದೇವರಿಗೆ ನೈವೇದ್ಯವಾಗಿಟ್ಟು, ಆ ರಾತ್ರಿ ಅಡುಗೆ ಮಾಡಿ ಅಣ್ಣ ತಮ್ಮಂದಿರು ಮತ್ತವರ ಪತ್ನಿಯರು ಹಾಗೂ ಅವರ ಗಂಡು ಮಕ್ಕಳು ಒಂದೆಡೆಯೇ ಸೇರಿ ದೇವರ ಪ್ರಸಾದವಾಗಿ ಸ್ವೀಕರಿಸುವರು. ಆ ಒಕ್ಕಲಿನ ಮನೆತನಗಳಲ್ಲಿ ಜನಿಸಿದ ಹೆಣ್ಣುಮಕ್ಕಳು ಮದುವೆಯಾಗಿ ಬೇರೆ ಬೆಡಗಿಗೆ ಸೇರಿ ಹೋಗುವರೆಂಬ ಕಾರಣಕ್ಕಾಗಿ ಈ ನೈವೇದ್ಯವನ್ನು ಅವರಿಗೆ ನೀಡಬಾರದೆಂಬ ನಿಬಂಧನೆಯಿದೆ. ಉಳಿದ ಪ್ರಸಾದವನ್ನು ಚೆಲ್ಲಿದರೆ ಪ್ರಾಣಿ–ಪಕ್ಷಿಗಳು ತಿನ್ನುತ್ತವೆ ಎಂಬ ಕಾರಣಕ್ಕಾಗಿ ದೊಡ್ಡ ಕುಣಿಯೊಂದನ್ನು ತೆಗೆದು ಮುಚ್ಚುತ್ತಾರೆ. ಇಲ್ಲಿ ಪ್ರತೀ ವಾರ ಮತ್ತು ಯುಗಾದಿ, ದಸರೆಯಂತಹ ದಿನಗಳಂದು ವಿಶೇಷ ಪೂಜೆ ಮತ್ತು ಆಚರಣೆಗಳು ನಡೆಯುತ್ತವೆ.

**ತಿರುಪತಿ ತಿಮ್ಮಪ್ಪ:** ಪಾವಗಡ ತಾಲೂಕಿನ ನಿಡುಗಲ್ಲು ಹತ್ತಿರದ ಸಾಸಲ ಕುಂಟೆಯಲ್ಲಿ ತಿರುಪತಿ ತಿಮ್ಮಪ್ಪನ ದೇವಾಲಯವಿದೆ. ಈ ದೈವಕ್ಕೆ ನಡೆದುಕೊಳ್ಳುವ ಒಕ್ಕಲಿನ ಅಣ್ಣ ತಮ್ಮಂದಿರು ಸಾಸಲ ಕುಂಟೆಯನ್ನು ಒಳಗೊಂಡಂತೆ ಓಬುಳಾಪುರ, ಚೌಳೂರು, ಪಿ.ಮಹದೇವಪುರ, ಕನಕೂರು ಮುಂತಾದ ಗ್ರಾಮಗಳಲ್ಲಿ ಹೆಚ್ಚಾಗಿದ್ದಾರೆ. ತಮ್ಮ ಕುಲದೈವವಾದ ತಿಮ್ಮಪ್ಪನಿಗೆ ಪೂಜೆ ಸಲ್ಲಿಸಲು ಪ್ರತೀ ವರ್ಷ ಯುಗಾದಿಗೆ ತಿರುಪತಿಗೆ ಹೋಗಬೇಕಾಗಿತ್ತು. ಹಿಂದೆ ವಾಹನ ಸೌಕರ್ಯಗಳು ಇಲ್ಲದ್ದರಿಂದ ನಡೆದುಕೊಂಡೇ ಹೋಗಿ ಬರುತ್ತಿದ್ದರು. ಹಾಗಾಗಿ ಇವರ ಹಿರಿಯನೊಬ್ಬಾತ ತಿರುಪತಿಗೆ ಹೋಗಿದ್ದಾಗ ದೇವರ ಒಂದು ವಸ್ತುವನ್ನು ಕದ್ದುತಂದು ಸಾಸಲಕುಂಟೆಯಲ್ಲಿ ದೇವಾಲಯ ಕಟ್ಟಿಸಿ ಪ್ರತಿಷ್ಠಾಪಿಸಿದರು. ತಿರುಪತಿಯಲ್ಲಿ ದೇವರ ವಸ್ತು ಕದ್ದು ತಂದಿರುವುದರಿಂದ ಇಂದಿಗೂ ನೆಂಟರು ಕುಚೋದ್ಯಕ್ಕೆ ಕಳ್ಳ ಒಕ್ಕಲೆಂದು ಕರೆಯುವರು. ಹಾಗಾಗಿ ಈ ಒಕ್ಕಲಿನವರು ತಿರುಪತಿಗೆ ಹೋಗುವಂತಿಲ್ಲ. ಒಂದುವೇಳೆ ಹೋದರೂ ಅಲ್ಲಿಂದ ಯಾವುದಾದರೂ ವಸ್ತುವೊಂದನ್ನು ಕದ್ದು ತರಲೇಬೇಕು ಇಲ್ಲವಾದರೆ ಕೇಡಾಗುತ್ತದೆ ಎಂಬ ನಂಬುಗೆ ಇದೆ.

ಇಲ್ಲಿರುವಂತೆಯೇ ಕೋನಸಾಗರದಲ್ಲಿನ ಬೆಳ್ಳನ ಕುರುಬರು ತಿರುಪತಿ ತಿಮ್ಮಪ್ಪನ ಒಕ್ಕಲಾಗಿ ನಡೆದುಕೊಳ್ಳುತ್ತಿದ್ದಾರೆ. ಅವರು ತಿರುಪತಿಗೆ ಹೋಗಿ ಲಿಂಗವೊಂದನ್ನು ತಂದು ಹಂಪಿಯ ತಿರುಗು ಮಡುಗುವಿನ ಹತ್ತಿರ ಜೀವಕಾಳು ತುಂಬಿಸಿಕೊಂಡು ಬಂದು ದೇವಾಲಯದಲ್ಲಿ ಪ್ರತಿಷ್ಠಾಪಿಸಿ ಆರಾಧಿಸುತ್ತಿದ್ದಾರೆ.

ಮೂಲತಃ ಶೈವ ಪಂಥೀಯರಾದ ಕುರುಬರು ಈ ಭಾಗದಲ್ಲಿ ವೈಷ್ಣವ ಪರಂಪರೆಯ ಚನ್ನಕೇಶವ, ತಿರುಪತಿ ತಿಮ್ಮಪ್ಪ, ಓಬುಳೇಶ, ಚನ್ನಿಗದೇವರನ್ನು ಆರಾಧಿಸುವುದರ ಜೊತೆಗೆ ಶೈವ ಪಂಥೀಯ

ಪಾತಲಿಂಗಪ್ಪನನ್ನು, ಅವಧೂತ ಪರಂಪರೆಯ ಗಾದಿಲಿಂಗಪ್ಪ ತಾತನನ್ನು, ಬೊಮ್ಮಕ್ಕನ ಹಳ್ಳಿಯಲ್ಲಿ ಬೇಡರ ದೇವರಾದ ಸಿದ್ದಲಿಂಗಪ್ಪನ ಶಿಶು ಮಕ್ಕಳಾಗಿ ನಡೆದುಕೊಳ್ಳುವುದು ಕಂಡುಬರುತ್ತದೆ.

### ೪.೨. ಸಾಹಿತ್ಯ-ಭಾಷೆ, ಜಾನಪದ

ಭಾರತದ ಮೂಲನಿವಾಸಿಗಳಲ್ಲಿ ಒಂದಾದ ಕುರುಬ ಸಮುದಾಯಕ್ಕೆ ತನ್ನದೇ ಆದ ಇತಿಹಾಸವಿರುವಂತೆ ಪ್ರಾಚೀನವಾದ ಜನಪದ ಸಾಹಿತ್ಯವಿದೆ. ಜನಪದವು ಸಮುದಾಯಗಳ ಜೀವಂತ ನಾಡಿಮಿಡಿತವಾಗಿದ್ದು ಅದೊಂದು ಬದುಕಿನ ಕ್ರಮ. ಸಮುದಾಯಕ್ಕೆ ಸಂಬಂಧಿಸಿ ಇತಿಹಾಸ ಮರೆತ ಎಷ್ಟೋ ಸಂಗತಿಗಳು ಜನಪದದ ಒಡಲಲ್ಲಿ ದೊರೆಯುತ್ತವೆ. ಅಕ್ಷರ ಸಂಸ್ಕೃತಿಯ ಶಿಷ್ಟಸಾಹಿತ್ಯ ರೂಪುಗೊಳ್ಳುವುದಕ್ಕಿಂತ ಮುಂಚಿನಿಂದಲೇ ಮೌಖಿಕ ಪರಂಪರೆಯ ಜನಪದ ಸಾಹಿತ್ಯವು ಜನರೊಂದಿಗೆ ಜೀವಿಸುತ್ತ ಬಂದಿದೆ; ಬರುತ್ತಲಿದೆ. ಕನ್ನಡದ ಪ್ರಥಮ ಕೃತಿಯಾದ ಕವಿರಾಜ ಮಾರ್ಗವು 'ಪದನರಿದು ನುಡಿಯಲುಂ ನುಡಿದುದನರಿದಾರೆಯಲು ಮಾರ್ಪರ ನಾಡವರ್ಗಳ್ ನಿಜವಿಂಚದುರರ್ ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತಮತಿಗಳ್' ಎಂದು ಜನಪದರ ಕಾವ್ಯ ರಚನಾ ಪರಿಣತಿಯನ್ನು ಕುರಿತು ಬಣ್ಣಿಸಿರುವುದು ಮೇಲಿನ ಮಾತಿಗೆ ಪುಷ್ಟಿ ನೀಡುತ್ತದೆ.

ತಗರ ಪವಾಡ, ಸಿದ್ಧಮಂಕಚರಿತ್ರೆ, ಮಾಲಿಂಗರಾಯನ ಕಾವ್ಯ, ಹಾಲುಮತೋತ್ತೇಜಕ ಪುರಾಣ, ಹಾಲುಮತ ಪುರಾಣವು, ಬೀರೇಶ್ವರ ಚರಿತ್ರೆಯಂಥ ಸಾಹಿತ್ಯಿಕ ಕೃತಿಗಳು ಕುರುಬ ಸಮುದಾಯದ ಹುಟ್ಟು, ಇತಿಹಾಸ ಪರಂಪರೆ, ಸಾಂಸ್ಕೃತಿಕ ವೀರರು, ಆಚರಣೆಗಳಂಥ ನಡಾವಳಿ ವಿಷಯಗಳನ್ನು ಸಮಗ್ರವಾಗಿ ಕಟ್ಟಿಕೊಟ್ಟಿವೆ. ಅದರಂತೆಯೇ ಮೌಖಿಕ ಸಾಹಿತ್ಯವನ್ನು ಆಧುನಿಕ ವಿದ್ವಾಂಸರು ಆ ಸಮುದಾಯದ ಹಾಡುಗಾರರಿಂದ ಹಾಡಿಸಿ ಸಂಗ್ರಹಿಸಿ ಪ್ರಕಟಿಸಿದ್ದಾರೆ. ಅದರಲ್ಲಿ ವೀರಣ್ಣದಂಡೆ ಅವರು ಸಂಪಾದಿಸಿದ 'ಜನಪದ ಹಾಲುಮತ ಮಹಾಕಾವ್ಯ'ವು ಬೃಹತ್ ಕಾವ್ಯವಾಗಿದೆ. ಜೊತೆಜೊತೆಗೆ ಕೆಲ ಪುಸ್ತಕಗಳು, ಬಿಡಿಬಿಡಿಯಾಗಿಯೂ ಡೊಳ್ಳಿನ ಹಾಡುಗಳು ಪ್ರಕಟವಾಗಿವೆ. ಇನ್ನೂ ಮೌಖಿಕವಾಗಿರುವ ಡೊಳ್ಳಿನ ಹಾಡುಗಳನ್ನು ಸಂಗ್ರಹಿಸಿದರೆ ಬೃಹತ್ ಗಾತ್ರದ ೧೦ ಸಂಪುಟ ಗಳಾಗಬಹುದು ಎಂದು ಎಫ್.ಟಿ. ಹಳ್ಳಿಕೇರಿ ಅವರು ಅಂದಾಜಿಸಿದ್ದಾರೆ. ಹಾಗಾಗಿ ಕುರುಬ ಸಮುದಾಯದ ಸಂಸ್ಕೃತಿಯ ಅಧ್ಯಯನಕ್ಕೆ ಈ ಮೌಖಿಕ ಪರಂಪರೆಯ ಸಾಹಿತ್ಯವು ಪ್ರಮುಖ ಆಕರಗಳೆಂದು ಹೇಳಬಹುದು. ಪ್ರಸ್ತುತ ಈ ಬರಹದಲ್ಲಿ ಮೇಲೆ ಉಲ್ಲೇಖಿಸಿರುವ ಸಾಹಿತ್ಯಿಕ ಮತ್ತು ಮೌಖಿಕ ಸಂಪಾದಿತ ಕೃತಿಗಳ ವಿಶ್ಲೇಷಣೆಗೆ ಹೋಗದೇ ಅಧ್ಯಯನಕ್ಕೆ ಆಯ್ದುಕೊಂಡ ಗಡಿನಾಡ ಪರಿಸರದಲ್ಲಿನ ಸಾಹಿತ್ಯ-ಭಾಷೆ, ಜನಪದ ಮತ್ತು ಕಲೆಗಳನ್ನು ಮುಖ್ಯವಾಗಿಟ್ಟುಕೊಂಡು ಚರ್ಚೆಗೊಳಪಡಿಸಲಾಗಿದೆ.

ಗಡಿಯಲ್ಲಿನ ಕುರುಬ ಸಮುದಾಯಕ್ಕೆ ಸಂಬಂಧಿಸಿದಂತೆ ಅಂದರೆ ಇವರ ಚರಿತ್ರೆ, ಸಂಸ್ಕೃತಿಯ ಕುರಿತಂತೆ ಲಿಖಿತವಾಗಿ ದೊರೆಯುವ ಸಾಹಿತ್ಯಿಕ ಆಕರಗಳು ತುಂಬಾ ಕಡಿಮೆಯಿವೆ. ಆದರೆ

ಮೌಖಿಕವಾಗಿ ಸಿಗುವ ಸಾಹಿತ್ಯ ಪರಂಪರೆಯು ಶ್ರೀಮಂತವಾಗಿದ್ದು, ಅದು ಕನ್ನಡ ಭಾಷೆಯಲ್ಲಿ ದೊರೆಯುತ್ತದೆ. ಏಕೆಂದರೆ ಆಂಧ್ರಗಡಿಯಲ್ಲಿನ ಸಮುದಾಯದ ಮನೆಮಾತು ಕನ್ನಡವಾಗಿದೆ. ಗುಂತಕಲ್ಲು, ಆಲೂರು, ಆದೋನಿಯ ಕೆಲವೆಡೆಗಳಲ್ಲಿನ ಹಳ್ಳಿಗಳಲ್ಲಿ ತೆಲುಗು ಭಾಷೆಯನ್ನೆ ಮಾತೃ ಭಾಷೆಯಾಗಿಸಿಕೊಂಡಿದ್ದಾರೆ. ಉಳಿದಂತೆ ಎಲ್ಲಾ ಕಡೆಯಲ್ಲಿಯೂ ತೆಲುಗು ಭಾಷೆಯನ್ನು ವ್ಯವಹಾರಿಕವಾಗಿ ಮಾತ್ರ ಅವಲಂಬಿಸಿದ್ದಾರೆ. ಕರ್ನಾಟಕದಲ್ಲಿಯೂ ತೆಲುಗು ಮನೆ ಮಾತಾಗಿ ಬಳಸುವ ಕೆಲ ಸಮುದಾಯಗಳ ಮೌಖಿಕ ಆಕರಗಳು ತೆಲುಗು ಭಾಷೆಯಲ್ಲಿ ದೊರೆಯುವುದು ಕಂಡುಬರುತ್ತವೆ. ಅದೇನೇ ಇರಲಿ; ಪ್ರಸ್ತುತ ಈ ಕರ್ನಾಟಕ-ಆಂಧ್ರ ಗಡಿಪರಿಸರದಲ್ಲಿ ದೊರೆಯುವ ಮೌಖಿಕ ಸಾಹಿತ್ಯವನ್ನು ಒಂದೊಂದಾಗಿ ಚರ್ಚಿಸೋಣ.

ಕುರುಬ ಸಮುದಾಯದ ಹುಟ್ಟು, ಸಂಸ್ಕೃತಿ, ಪರಂಪರೆ, ದೈವಗಳಿಗೆ ಸಂಬಂಧಿಸಿದ ಸಾಕಷ್ಟು ಕಥೆಗಳು ಈ ಪರಿಸರದಲ್ಲಿ ಸಿಗುತ್ತವೆ. ಅವುಗಳಲ್ಲಿ ಬೀರಪ್ಪನ ಕಥೆ, ಮಲ್ಲಯ್ಯನ ಕಥೆ, ರೇವಣಸಿದ್ಧನ ಕಥೆ, ಯಲ್ಲಮ್ಮನ ಕಥೆ, ಹೊಸೂರಮ್ಮನ ಕಥೆ, ವೀರಮಾಳಮ್ಮನ ಕಥೆ, ಬನಶಂಕರಿಯ ಕಥೆಗಳು ಮುಖ್ಯವಾದವು. ತೆಲಂಗಾಣ ಪರಿಸರದಲ್ಲಿ ಒಗ್ಗುಕಥಾ ರೂಪದಲ್ಲಿದ್ದರೆ, ಅಧ್ಯಯನಕ್ಕೆ ಆಯ್ದುಕೊಂಡ ಈ ಪರಿಸರದಲ್ಲಿ ಡೊಳ್ಳಿನ ಹಾಡುಗಳಲ್ಲಿವೆ. ಅದರಲ್ಲಿಯೂ ಬೀರಪ್ಪ ಮತ್ತು ಮಲ್ಲಯ್ಯನಿಗೆ ಸಂಬಂಧಿಸಿದ ಕಥೆಗಳು ಭಿನ್ನ ಪಾಠಾಂತರಗಳೊಂದಿಗೆ ಹೆಚ್ಚಾಗಿ ದೊರೆಯುತ್ತವೆ. ಆ ಕಥೆಗಳನ್ನು ಧಾರ್ಮಿಕ ಆಚರಣೆಗಳಲ್ಲಿಯೇ ಚರ್ಚಿಸಲಾಗಿದೆ. ಅಲ್ಲಿ ಉಲ್ಲೇಖಿಸದ ಎರಡು ಕಥೆಗಳನ್ನು ಈ ಕೆಳಗೆ ಸಂಗ್ರಹ ರೂಪದಲ್ಲಿ ಕೊಡಲಾಗಿದೆ.

ಆಂಧ್ರಪ್ರದೇಶದ ವರಂಗಲ್ಲು ಸಂಸ್ಥಾನದ ಸೈನ್ಯದಲ್ಲಿದ್ದವರು ಸಿಂಧುಲವಾರು. ಅಲ್ಲಿಂದ ಬಂದು ಕ್ವಾಣಿಗನೂರಿಗೆ ಬಂದು ನೆಲೆಸಿದರು. ಅಲ್ಲಿದ್ದ ಸಿಂಧುಲವಾರು ಬೆಡಗಿನ ನಾಗದೇವನಿಗೆ ಅಯ್ಯಾಳಿಯ ಐಗಳೋರು ಬೆಡಗಿನ ಹೆಣ್ಣುಮಗಳನ್ನು ಮದುವೆ ಮಾಡಿಕೊಡಲಾಗಿತ್ತು. ಪಶುಪಾಲನೆ ಮತ್ತು ಕೃಷಿಯನ್ನು ಮಾಡಿಕೊಂಡಿದ್ದ ಕುಟುಂಬವದು. ಒಮ್ಮೆ ದೇವರ ಕಾರ್ಯವಿದ್ದುದ್ದರಿಂದ ಆ ಹೆಣ್ಣುಮಗಳು ತವರುಮನೆಗೆ ಬಂದಿದ್ದಳು. ಅದು ಮುಂಗಾರು ಮಳೆಯ ಕಾಲವಾದ್ದರಿಂದ ಬಿತ್ತನೆಯ ಕೆಲಸಗಳು ಬಿರುಸಿನಿಂದ ನಡೆಯುತ್ತಿದ್ದವು. ಕಾರ್ಯ ಮುಗಿದರೂ ತವರಿನಲ್ಲಿದ್ದ ಹೆಂಡತಿಯನ್ನು ಕರೆತರಲು ನಾಗದೇವ ಅಯ್ಯಾಳಿಗೆ ಹೋದನು. ಗಂಡನ ಸಿಟ್ಟನ್ನು ಗಮನಿಸಿದ ಆಕೆ ಅವಸರದಲ್ಲಿ ಮನೆ ದೇವರಿಗೆ ನಮಸ್ಕರಿಸದೇ ಹೊರಟು ಬಂದಳು. ಬರುವ ದಾರಿಯಲ್ಲಿ ತವರಲ್ಲಿ ತುಂಬಿ ಕಳುಹಿಸಿದ ಉಡಿಅಕ್ಕಿ ಗಂಟು ಸಡಿಲವಾಯಿತು. ಬಿಗಿಯಾಗಿ ಕಟ್ಟಿಕೊಳ್ಳಲು ಹಾದಿಯ ಪಕ್ಕದಲ್ಲಿದ್ದ ಕಲ್ಲೊಂದನ್ನು ತೆಗೆದುಕೊಂಡು ಉಡಿಗೆ ಸಿಕ್ಕಿಸಿಕೊಂಡಳು.

ಕ್ವಾಣಿಗನೂರಿಗೆ ಬಂದ ನಂತರ ಆ ಕಲ್ಲನ್ನು ಬಿಸಾಕಿದಳು. ಕೃಷಿ ಕಾರ್ಯಗಳೆಲ್ಲ ಸುಸೂತ್ರವಾಗಿ ನಡೆದು ಹೋದವು. ಆದರೆ ಉಡಿಯಲ್ಲಿಟ್ಟುಕೊಂಡು ತಂದಿದ್ದ ಆ ಕಲ್ಲು ದಿನ ರಾತ್ರಿ ಆಕೆಯ ಕನಸಿನಲ್ಲಿ ಬಂದು 'ನಾನು ಎಲ್ಲಿದ್ದೇನೋ ಅಲ್ಲಿ ಸುಖವಾಗಿದ್ದೆ, ನೀನು ಉಡಿಯಲ್ಲಿಟ್ಟುಕೊಂಡು

ತಂದು ಬೀಸಾಕಿದ್ದೀಯಾ ನಾನು ನಿಮ್ಮ ಮನೆದೇವರೆಂದು ಕಾಡುತ್ತಿತ್ತು. ಮನೆದೇವರೆಂಬುದು ತಿಳಿದ ಆಕೆ ದಿನರಾತ್ರಿ ಪೂಜೆ–ಪುನಸ್ಕಾರಗಳನ್ನು ಮಾಡುತ್ತ ಬಂದಳು. ಹೀಗೆ ಕಾಲ ಸರಿಯುತ್ತಿರುವಾಗ ಭೀಕರ ಬರಗಾಲ ಬಂತು. ಹಾಗಾಗಿ ಅವರು ಕ್ವಾಣಿಗನೂರಿನಿಂದ ಕುಕನೂರಿಗೆ ವಲಸೆ ಬಂದರು. ಕುಕನೂರ ಗ್ರಾಮ ದೇವತೆ ದೇವಮ್ಮ(ಮಹಾಮಾಯಿ)ನ ಅನುಗ್ರಹದಿಂದ ಅವರ ಪಶು(ಕುರಿ) ಸಂಪತ್ತು ಮೂರು ಸಾವಿರಕ್ಕೆ ಬೆಳೆಯಿತು. ಅವನ್ನು ಬರಡು ಕುರಿ, ಹಾಲು ಕುರಿ, ಮರಿ ಕುರಿಗಳೆಂದು ಮೂರು ಹಿಂಡು ಮಾಡಿ ಕಾಯುತ್ತಿದ್ದರು. ಅಂದಿನಿಂದ ಸಿಂಧುಲವಾರು ಎಂಬುದು ಮೂರು ಹಿಂಡಿನವರು>ಮೂರುಣ್ಣೆಯವರೆಂದಾಯಿತು. ತಮ್ಮ ಪಶುಸಂಪತ್ತು ಸಮೃದ್ಧವಾಗಿ ಬೆಳೆಯಲು ಕಾರಣಳಾದ ದೇವಿಯ ಜಾತ್ರೆ ಮಾಡಲು ಸಿದ್ಧತೆ ನಡೆಸಿದರು.

ಕುಕನೂರ ದೇವಿಯ ಜಾತ್ರೆಯಲ್ಲಿ ಮುಖ್ಯವಾದ ಪದ್ಧತಿ ಹೊಲಮರಿ ತಿರುಗುವುದು ಆಗಿತ್ತು. ಅಂದರೆ ಊರ ಸುತ್ತ ದೇವಿಯನ್ನು ರಾತ್ರಿ ಮೆರವಣಿಗೆ ಮಾಡುವುದು. ಬರುವಾಗ ದೇವತೆ ಎಲ್ಲಿ ನಿಲ್ಲುತ್ತದೆಯೋ ಅಲ್ಲಿ ಒಂದು ಕುರಿಮರಿ ಬಲಿಕೊಡಲಾಗುತ್ತಿತ್ತು. ಹೀಗೆ ಬಲಿಕೊಡುತ್ತ ಬರುತ್ತಿರುವಾಗ ಕುರಿಮರಿಗಳೆಲ್ಲವೂ ಮುಗಿದವು. ಆ ಸಮಯದಲ್ಲಿ ದೇವಿಗೆ ಊರಲ್ಲಿ ಆಟವಾಡುತ್ತಿದ್ದ ಕುಕನೂರ ಗೌಡನ ಮಗನನ್ನು ಬಲಿ ಕೊಟ್ಟು, ತಲೆಯನ್ನು ದೊಡ್ಡ ಜಲ್ಲಿಪುಟ್ಟಿಯಲ್ಲಿ ಮುಚ್ಚಿಟ್ಟರು. ಮತ್ತೊಂದು ಕಥೆಯಲ್ಲಿ 'ದೇವಿಯು ಜಾತ್ರೆ ಮಾಡಿ ಒಬ್ಬ ಸುರದ್ರೂಪಿ ಯುವಕನನ್ನು ಬಲಿಕೊಟ್ಟರೆ ನಿಮ್ಮ ಪಶು ಸಂಪತ್ತು ವೃದ್ಧಿಸುತ್ತದೆಂದು, ಹೇಳಿದ್ದಕ್ಕಾಗಿ ಸುಲ್ತಾನನ ಮಗನನ್ನು ಬಲಿಕೊಟ್ಟಿದ್ದೆಂದು ತಿಳಿಸುತ್ತದೆ. ಆ ಸುದ್ಧಿ ಗೌಡ ಸುಲ್ತಾನನ ಕಿವಿಗೂ ಮುಟ್ಟಿತು. ಹುಡುಕುತ್ತಾ ಬಂದ ಅವರಿಗೆ ಜಲ್ಲಿಪುಟ್ಟಿಯಲ್ಲಿದ್ದ ಹುಡುಗನ ತಲೆ ಟಗರಿನ ತಲೆಯಾಗಿತ್ತು. ಇವರು ಗಿಡಗಂಟೆಯ ದೇಶದವರಿರಬೇಕು ಎಂದು ತಿಳಿದ ಗೌಡನ ಕಡೆಯವರು ಇವರನ್ನು ಕೊಲ್ಲಲು ಹಿಂಬಾಲಿಸಿಕೊಂಡು ಬಂದರು. ಹಾಗಾಗಿ ರಾತ್ರೋರಾತ್ರಿ ಕುರಿಮಂದೆಯೊಂದಿಗೆ ಕುಕನೂರು ಬಿಟ್ಟು ಬರುತ್ತಿರುವಾಗ ತುಂಗಭದ್ರ ನದಿಯು ದೇವಿಯ ಅನುಗ್ರಹದಿಂದ ದಾರಿ ಬಿಟ್ಟಳು. ಹೀಗೆ ಅವಸರವಾಗಿ ಬರುವಾಗ ಆ ದಂಡೆಯಲ್ಲಿಯೇ ಒಂದು ಮಗುವನ್ನು ತೊಟ್ಟಿಲಲ್ಲಿ ಬಿಟ್ಟು ಬಂದಿದ್ದರು. ಹಿಂಬಾಲಿಸಿ ಬಂದವರಿಗೆ ನದಿ ದಂಡೆಯಲ್ಲಿ ಸಿಕ್ಕ ಮಗುವನ್ನು ಮೇಲಕ್ಕೆ ಎಸೆದು ಕೆಳಗೆ ಖಡ್ಗವನ್ನು ಅಡ್ಡ ಹಿಡಿದು ಕೊಲ್ಲಲು ಅಣಿಯಾದರು. ಮಗುವಿನ ತಾಯಿಯ ಅಂತಃಕರಣ ಭಕ್ತಿಯಿಂದ ದೇವಿಯನ್ನು ಬೇಡಿಕೊಂಡಿದ್ದರಿಂದ ಹದ್ದಾಗಿ ಬಂದು ಕಾಪಾಡಿದಳು. ಅಲ್ಲಿಂದ ಬಂದು ಕುರುಗೋಡು ಪಟ್ಟಣದಲ್ಲಿ ನೆಲೆಸಿದರು.

ಶಿಶುಹತ್ಯೆ ಮಾಡಿದ ಪಾಪ ಯಾರನ್ನು ಬಿಡದು ಎಂಬಂತೆ ಕಾಲಾಂತರದಲ್ಲಿ ಇವರ ವಂಶ ಮತ್ತು ಪಶುಸಂಪತ್ತು ಅಳಿಯುತ್ತ ಬಂದು ಕೊನೆಗೆ ದೇವಮ್ಮ ಕಾಪಾಡಿದ ಮಗು ಮಾತ್ರ ಉಳಿಯಿತು. ಮಗು ಬೆಳೆದು ದೊಡ್ಡವನಾದನು. ಆತನೇ ನಾಗದೇವ. ದಿನಾಲು ಕುರಿ ಮೇಯಿಸಲು ಏಳುಬೆಂಚಿಯ ಕಪ್ಪೊಳ ಡೋಣೆಯ ಅಡವಿಗೆ ಹೋಗುತ್ತಿರುತ್ತಾನೆ. ಅಲ್ಲಿದ್ದ ಡೋಣೆಗೆ ನೀರಿನಾಟ ಆಡಲು ಏಳು

ಜನ ದೇವಕನ್ನಿಕೆಯರು, ಏಳು ಜನ ನಾಗಕನ್ನಿಕೆಯರು ಬರುತ್ತಿರುತ್ತಾರೆ. ಆಗ ಕುರಿಗಳಿಗೆ ನೀರು ಕುಡಿಸಲು ಬಂದ ನಾಗದೇವನು ಅವರ ಕಣ್ಣಿಗೆ ಕಂಡನು. ನಾವು ಸಾಕಷ್ಟು ವರ್ಷಗಳಿಂದ ಇಲ್ಲಿಗೆ ನೀರಿನಾಟವಾಡಲು ಬರುತ್ತೇವೆ. ನರ ಮನುಷ್ಯರು ಯಾರು ನಮ್ಮ ಕಣ್ಣಿಗೆ ಬಿದ್ದಿರಲಿಲ್ಲ. ಅವರ ಕಣ್ಣಿಗೆ ನಾವು ಕಾಣಿಸುತ್ತಿದ್ದಿಲ್ಲ. ನೀನು ಪವಾಡ ಪುರುಷನಾಗಿದ್ದೀಯಾ. ಹಾಗಾಗಿ ನಿನಗೆ ಪಟ್ಟ ಕಟ್ಟುತ್ತೀವಿ ಎಂದು ಹೇಳಿದರು. ಆ ಸನ್ನಿವೇಶವನ್ನು ಹೇಳುವ ಡೊಳ್ಳಿನ ಹಾಡೊಂದು–

ಏಳುಬೆಂಚೆ ಕಪ್ಪೊಳ ಡೋಣೆಯಲ್ಲಿ ।  
ಸತ್ತೇವು ಇರುವಂಥ ಸ್ಥಳದಲ್ಲಿ  
ಸತ್ತೇವು ಇರುವಂಥ ಸ್ಥಳದಲ್ಲಿ ಇವರು  
ಏಳುಮಂದಿ ದೇವಕನ್ಯೇರು  
ಏಳೇಮಂದಿ ದೇವಕನ್ಯವರು ।  
ಹಾಸಿದರೂ ಕರಿಯ ಜಾಡೀಯಾ  
ಹಾಸಿದರೂ ಕರಿಯ ಜಾಡೀಯಾ ।  
ಇವರು ಹಾಲೇ ಪಟ್ಟಾವ ಕಟ್ಯಾರು  
ಮುತ್ತೀನ ಸಾಸಿವೆನಿಟ್ಟಾರಯ್ಯಾ ಇವರು ।  
ಮೂರು ಹಿಂಡಿನ ನಾಗಪ್ಪಗೋ ಧರ್ಮದ ಹಸ್ತವಾನಿತ್ತಾರು  
ವರವಿನಿಂದಲಿ ಧರ್ಮ ಪಟ್ಟಗಳಾದವು  
ಗುರುವಿನ ಪಾದವನಿಡದೇ ।

ಎಂದು ಪಟ್ಟ ಕಟ್ಟುವ ರೀತಿಯನ್ನು ವರ್ಣಿಸಿದೆ. ಮತ್ತೊಂದು ಕಥೆಯಲ್ಲಿ ಕುರುಗೋಡಿಗೆ ಬಂದು ನೆಲೆಸಿದ ನಾಗದೇವ ಬೆಳೆದು ದೊಡ್ಡವನಾದವನಿಗೆ ಊರ ಹಿರಿಯರು ಗಿಡ್ಡಲಕ್ಕಮ್ಮ ಎಂಬಾಕೆಯನ್ನು ವಿವಾಹ ಮಾಡಿದರು. ಆ ದಂಪತಿಗಳಿಗೆ ದ್ಯಾಮವ್ವಳೆಂಬ ಮಗಳು ಜನಿಸಿದಳು. ಕಂಬಳಿ ನೇಯ್ಗೆ ಮಾಡಿದರೆ ಊಟಕ್ಕೆ, ಇಲ್ಲದಿದ್ದರೆ ಇಲ್ಲ. ಅಷ್ಟು ದರಿದ್ರ ಬಡತನ. ಅಂಥ ಸಮಯದಲ್ಲಿ ರೇವಣಸಿದ್ಧರ ಶಿಷ್ಯನಾದ ಕ್ಷೀರ(ಸೀರ) ಬೀರಪ್ಪನು ತನಗೊಬ್ಬ ಶಿಷ್ಯನನ್ನು ಹುಡುಕಲು ದೇಶ–ದೇಶಗಳನ್ನು ಸುತ್ತುತ್ತ ಕುರುಗೋಡು ಪಟ್ಟಣಕ್ಕೆ ಬಂದನು. ಅಲ್ಲಿ ಮಗ್ಗ ನೇಯುತ್ತಿದ್ದ ನಾಗದೇವನ ಕಂಡು ಶಿಷ್ಯನಾಗಲು ಯೋಗ್ಯ ವ್ಯಕ್ತಿ ದೊರೆತನೆಂದು ಹತ್ತಿರ ಬಂದು ನಿಂತನು. ಗುರುವಿನ ನೆರಳು ಮಗ್ಗದ ಮೇಲೆ ಬಿದ್ದು, ದಾರ ಪದೇ ಪದೇ ಹರಿದು ಹೋಗುತ್ತಿತ್ತು. ಇಂದೇಕೆ ಮಗ್ಗ ಹರಿಯುತ್ತಿದೆಯೋ ಎಂದು ಹಿಂತಿರುಗಿ ನೋಡಿದಾಗ ಕಂಡ ಹೊಸಬರನ್ನು 'ಸ್ವಾಮಿ ತಾವು ಯಾರು? ಏಕೆ ಇಲ್ಲಿಗೆ ಬಂದಿರುವಿರೀ

ಎಂದು ಕೇಳಿದನು. ಅದಕ್ಕೆ ಗುರುವು ನಾನು ನಿಮ್ಮ ವಂಶದ ಗುರು ಕ್ಷೀರ(ಸೀರ) ಬೀರಪ್ಪನೆಂದು ತಿಳಿಸಿದನು. ನಂತರ ಇವತ್ತು ಹೊಸಮಡಿಕೆ ತಂದು ಅಕ್ಕಿ-ಹಾಲು ಬೆರೆಸಿ ಅನ್ನ ಮಾಡು ಪ್ರಸಾದವನ್ನು ಸ್ವೀಕರಿಸುತ್ತೇನೆಂದು ಹೇಳಿದನು.

ಪ್ರಸಾದ ಸಿದ್ಧತೆಗಾಗಿ ನಾಗದೇವ ಕುಂಬಾರರ ಮನೆಯಲ್ಲಿ ಹೊಸಮಡಿಕೆಯನ್ನು, ಶೆಟ್ಟರ ಅಂಗಡಿಯಿಂದ ಅಕ್ಕಿಯನ್ನು ಕಡವಾಗಿ ತಂದನು. ಪ್ರಸಾದ ತಯಾರಾದ ಮೇಲೆ ಕುರುಗೋಡಿನಲ್ಲಿರುವ ಕುರುಬ ಕುಲವನ್ನೆಲ್ಲ ಪ್ರಸಾದ ಸೇವಿಸಲು ಕರೆ ಎಂದು ಆಜ್ಞಾಪಿಸಿದನು. ಮಾಡಿರುವುದು ಸ್ವಲ್ಪ ಮಾತ್ರ ಎಲ್ಲರನ್ನು ಕರೆಯಲು ಗುರುವಿನ ಆಜ್ಞೆ ಎಂದು ಅನುಮಾನಿಸಿದರೂ, ಕೊನೆಗೂ ಧೈರ್ಯಮಾಡಿ ಅಂದು ಕುರುಗೋಡಿನಲ್ಲಿದ್ದ ೩,೩೬೦ ಮಗ್ಗಗಳ ಮನೆಯವರನ್ನು ಆಹ್ವಾನಿಸಿದನು. ಅವರೆಲ್ಲರೂ ಬಂದು ಪ್ರಸಾದ ಸ್ವೀಕರಿಸಿದರೂ ಉಳಿಯಿತು. ಗುರು ಬಂದ ಮನೆ ಗುಡ್ಡ ಎಂಬುದನ್ನು ತೋರಿಸಿದ ಗುರು ನಿನ್ನನ್ನು ಶಿಷ್ಯನನ್ನಾಗಿ ಪಡೆಯುವುಧಕ್ಕಾಗಿಯೇ ನಾನು ಬಂದಿರುವುದೆಂದು ತಿಳಿಸಿ ಪಟ್ಟ ಕಟ್ಟಿದನು. ನಂತರ ಗುರುವು ಪೊದೆಯಲ್ಲಿದ್ದ ಕಲ್ಲುಗಿಡಿ ಲಿಂಗವನ್ನು ತೋರಿಸಿ, ಇಂದಿನಿಂದ ಪೂಜೆ ಮಾಡಿರೆಂದು ತಿಳಿಸಿ ಹೊರಟು ಹೋದರು.

ಗುರುದೀಕ್ಷೆ ಪಟ್ಟವಾದ ನಂತರ ನಾಗದೇವನು ಸಿದ್ಧವಂತಿಗೆ ಮಾಡಲು ದೇಶಾಂತರ ಹೊರಟನು. ಆತನೊಂದಿಗೆ ಮಂಟಿ ಮಲಿಯಪ್ಪ, ಹಾಸುಮಂಡೆ ನಾಗದೇವನು ಹೊರಟರು. ಕುರುಗೋಡಿನಿಂದ ವಿಜಯನಗರದ ಹೆಬ್ಬಾಗಿಲು ನಾಗಲಪುರಕ್ಕೆ ಬಂದರು. ಊರ ಅಗಸಿ ಬಾಗಿಲಲ್ಲಿ ಮಲಿಯಮ್ಮ ದೇವಿ ರಾಕ್ಷಸಿ ರೂಪದಲ್ಲಿ ಕಾವಲು ಕಾಯುತ್ತಿದ್ದಳು. ಆಕೆಯನ್ನು ಒಲಿಸಿಕೊಂಡ ಬಗೆಯನ್ನು ಡೊಳ್ಳಿನ ಹಾಡು ಹೀಗೆ ಹೇಳುತ್ತದೆ.

ವಿಜನಗರದ ಕಡಿಯ ಬಾಗಿಲಲಿ ।
ಮಾಯಿ ಮಲಿಯ ಚೌಡಿ ಕಾವಲಿಯೋ
ಮಾಯಿ ಮಲಿಯ ಚೌಡಿ ಕಾವಲಿಯೋ ನಾಗಪ್ಪ ।
ಮಾಯಿ ಕೂಡ ಮಾತಾನಾಡ್ಯಾನೋ
ಹರಿಹರನೆಂದಾರೆ ಹಾದಿಯ ಬಿಡೆನೋ
ಹಾರವಿದ್ದರೆ ದಾರಿವುಂಟಯ್ಯ
ಹುಗ್ಗೀಯ ಹೋಳಿಗೆ ಸೀರೆ ಕುಪ್ಪಾಸ
ಕೊಬ್ಬಿದ ಕುರಿ ನಿನಗೆ ಬೋಜನವೋ
ಕೊಬ್ಬಿದ ಕುರಿ ನಿನಗೆ ಬೋಜನವೋ ತಾಯಿ
ಸಿದ್ಧಾರಿಗೆ ವಶವಾಗಮ್ಮೋ ।

ಹೀಗೆ ಆಕೆಯೊಂದಿಗೆ ಮಾತುಕಥೆಯನ್ನಾಡಿ ಒಲಿಸಿಕೊಳ್ಳುತ್ತಾರೆ. ನಂತರ ಮುಂದಿನ ಪ್ರಯಾಣಕ್ಕೆ ಚಿನ್ನದ ಗುಬ್ಬಿಯಾಗಿ ಅವರೊಂದಿಗೆ ಹೊರಡುತ್ತಾಳೆ. ಅಲ್ಲಿಂದ ಕಾಮಸಮುದ್ರಕ್ಕೆ ಬರುತ್ತಾರೆ. ಹೋಗುತ್ತಿರುವಾಗ ಅಲ್ಲೊಂದು ಕಲ್ಲು ಉರುಳುತ್ತ ಇವರನ್ನು ಹಿಂಬಾಲಿಸಿತು. ಅದನ್ನು ತಂದು ಪ್ರತಿಷ್ಠಾಪಿಸಿದರು. ಅಲ್ಲಿ ಪವಾಡಗಳನ್ನು ಮಾಡಿದ ನಂತರ ಅಣಜಿ ಪಟ್ಟಣಕ್ಕೆ ಬಂದು ಪವಾಡಗಳನ್ನು ನಡೆಸಿ, ಸಂಜೀವನ ಪಟ್ಟಣಕ್ಕೆ ಬಂದರು. ಅಲ್ಲಿ ಮಕ್ಕಳಿಲ್ಲದ ಗೌಡ ದಂಪತಿಗಳಿದ್ದರು. ಆ ಗೌಡ ಮಕ್ಕಳಾಗಲೆಂಬ ಉದ್ದೇಶದಿಂದ ಪುರೋಹಿತರ ಸಲಹೆಯಂತೆ ಊರಲ್ಲಿ ಒಂದು ಬಾವಿಯನ್ನು ತೋಡಿಸಿದ್ದನು. ಆದರೆ ಬಾವಿಯ ಒಂದು ಮೂಲೆಯಲ್ಲಿ ವಿಷ ಇನ್ನೊಂದು ಮೂಲೆಯಲ್ಲಿ ಬೇವು, ಮತ್ತೊಂದೆಡೆ ಕೆಕ್ಕಟ್ಟುಕಾರ, ಇನ್ನೊಂದರಲ್ಲಿ ಉಪ್ಪಟ್ಟು ಉರುಲು ಹೀಗೆ ಕಹಿ ನೀರು ಇದ್ದವು. ಅದನ್ನು ಹೇಳುವ ಹಾಡೊಂದು

ವಸಿಗೇರಿ ದೇವಾರ ಪಾದಾವ ನೆನೆದು
ಗುರುವೇ ಸೀರಯ್ಯನ ಪಾದವು ನೆನೆದಾನು
ಗುರುವೇ ಸೀರಯ್ಯನ ಆಣೆ ಕಟ್ಟಿ ।
ಬಾವಿಗೆ ಭಂಡಾರದಳುದಾನು
ಮೂರಾಮಂದಿ ಆ ಮೋಡಿ ಸಿದ್ಧಾರು ।
ಅಗ್ಗಾಣಿ ಸಲ್ಲಿಸಿ ಕೊಂಡರು
ಅಗ್ಗಾಣಿ ಸಲ್ಲಿಸಿ ಗೊಂಡಾರಗ್ಗಾಣೀ ।
ಬೆಲ್ಲಾದ ಪಾನಾಕುಳಾದಾವು...

ಆ ನೀರಿಗೆ ಕರಿಯ ದೇವರನ್ನು, ವಸಿಕೇರಿ ದೇವರನ್ನು ನೆನೆದು ಭಂಡಾರ ಚೆಲ್ಲಿ ಸಿಹಿ ನೀರಾಗಿ ಮಾಡಿದರು. ನಂತರ ಗೌಡ ದಂಪತಿಗಳಿಗೆ ಸಂತಾನ ಫಲ ನೀಡಿ ಅಲ್ಲಿಂದ ಬಾದನೂರಿಗೆ ಬಂದು ಅಲ್ಲಿನ ಪೋತುಲಿಂಗರಾಜನ ಹತ್ತಿರ ಪವಾಡಗಳನ್ನು ಗೆದ್ದರು. ಪೆನುಗೊಂಡೆಗೆ ಹೋಗಿ ರಾಯಲ ಡೋಣೆಯಲ್ಲಿ ಪವಾಡ ಗೆದ್ದು, ನಂತರ ನಂದಿದುರ್ಗಕ್ಕೆ ಬಂದು, ದೇವರಿಗೆ ಬಿಟ್ಟ ಸತ್ತ ನಂದಿಗೆ ಜೀವಕೊಟ್ಟರು. ಹೀಗೆ ೧೨ ವರ್ಷಗಳ ಕಾಲ ಪವಾಡಗಳನ್ನು ಗೆಲ್ಲುತ್ತ ದೇಶಗಳನ್ನು ಸುತ್ತಿ, ಕುರುಗೋಡು ಪಟ್ಟಣಕ್ಕೆ ಮರಳಿ ಬಂದರು.

ಕುರುಗೋಡಿನಲ್ಲಿದ್ದ ತನ್ನ ಮಡದಿ ಗಿಡ್ಡಲಕ್ಕಮ್ಮನನ್ನು ತನ್ನೊಂದಿಗೆ ಕರೆದುಕೊಂಡು ಅಂತಾಪುರಕ್ಕೆ ಬಂದು ನೆಲೆಸಿದನು. ಕಲ್ಗುಡಿಲಿಂಗನನ್ನು ತನ್ನ ಮಗಳ ವಂಶಕ್ಕೆ ದೈವವಾಗಿ ನೀಡಿದ ನ್ಯಾಯ ತೀರ್ಮಾನ ಡೊಳ್ಳಿನ ಹಾಡಿನಲ್ಲಿದೆ. ಪ್ರಸ್ತುತ ಮೂರು ಹಿಂಡಿನವರ ಕುರಿತು ೧೪ ಜಗುಲಿಗಳು ಈ ಭಾಗದಲ್ಲಿವೆ.

ಮತ್ತೊಂದು ಕಥೆ ಅರಣ್ಯವೊಂದರಲ್ಲಿ ಆನೆ ಸತ್ತು ಬಿದ್ದಿತ್ತು. ಆ ಮಾಂಸವನ್ನು ತಿನ್ನುವ ಆಸೆಯಿಂದ ನರಿಯೊಂದು ಬಂದಿತು. ಹೊರಗಿನ ಚರ್ಮವನ್ನು ಕಡಿಯಲಾರದೇ ಮಲದ್ವಾರದಿಂದ ಹೊಟ್ಟೆಯ ಒಳಗೆ ತೂರಿಕೊಂಡಿತು. ಯಥೇಚ್ಛವಾದ ಮಾಂಸ ಸಿಕ್ಕಿದ್ದರಿಂದ ಅಲ್ಲಿಯೇ ತಿಂದು ಮಲಗುತ್ತಿತ್ತು. ದಿನ ಕಳೆದಂತೆ ಸತ್ತ ಆನೆಯ ಚರ್ಮ ಒಣಗುತ್ತಾ ಬಂದು ಮಲದ್ವಾರ ಮುಚ್ಚಿಹೋಯಿತು. ಇದರಿಂದಾಗಿ ನರಿಯು ಹೊರಬರಲಾರದೇ ಪರಿತಪಿಸುತ್ತಿತ್ತು. ಆ ಸಮಯದಲ್ಲಿ ಅತ್ತ ಕುರಿ ಮೇಯಿಸಲು ಬಂದಿದ್ದ ಕುರುಬರಾತನಿಗೆ ನಾನು ನಿನ್ನ ಮನೆದೇವರು. ಆನೆಯ ಹೊಟ್ಟೆಯಲ್ಲಿ ಸಿಕ್ಕಿಕೊಂಡಿದ್ದೇನೆ. ಅರಳೆಣ್ಣೆಯನ್ನು ತಂದು ಆನೆಯ ಮಲದ್ವಾರಕ್ಕೆ ಸವರು. ಹೊರಗೆ ಬಂದು ದರ್ಶನ ನೀಡುತ್ತೇನೆಂದು ಹೇಳಿತು. ದೇವರ ಮೇಲೆ ಅಪಾರ ಭಕ್ತಿಯಿದ್ದ ಮುಗ್ದನಾದ ಕುರುಬರಾತ ಸಾಕ್ಷಾತ್ ನನ್ನ ಮನೆದೇವರು ಆನೆಯ ಹೊಟ್ಟೆಯಲ್ಲಿ ಸಿಕ್ಕಾಕಿಕೊಂಡಿದ್ದಾನೆ ಎಂದು ತಿಳಿದು ನರಿ ಹೇಳಿದಂತೆಯೇ ಮಾಡಿದನು. ಆಗ ನರಿಯು ನೀನು ಕಣ್ಣು ಮುಚ್ಚಿಕೋ ನಾನು ಹೊರ ಬಂದು ದರ್ಶನ ನೀಡುತ್ತೇನೆ ಎಂದ್ಹೇಳಿ ಬಂದು ಅಡವಿಯಲ್ಲಿ ಮರೆಯಾಯಿತು. ಕಣ್ಣು ಬಿಟ್ಟಾತನಿಗೆ ಆನೆಯ ಸೊಂಡಿಲ ಹತ್ತರ ಒಂದು ಲಿಂಗ ಕಾಣಿಸಿತು. ಅದನ್ನೇ ಮನೆದೇವರೆಂದು ಪೂಜಿಸತೊಡಗಿದನು. ಹಾಗೆ ಹುಟ್ಟಿದ್ದೆ ಗೆಜ್ಜೆ ಬೀರಲಿಂಗ ಎಂದು ಹೇಳುವರು.

ಒಟ್ಟಿನಲ್ಲಿ ಸಮುದಾಯದ ಕಥೆ, ಕಾವ್ಯದ ಸಾಹಿತ್ಯ, ಮೌಖಿಕ ಪರಂಪರೆಯಲ್ಲಿ ಮೇಲ್ಪಂಕ್ತಿಯಲ್ಲಿದೆ. ಅವು ಅಸಾದೃಶ್ಯ ಸನ್ನಿವೇಶಗಳನ್ನು ಸೃಷ್ಟಿಸುವ ಜೊತೆಗೆ ಸಾಮಾನ್ಯ ಸಂಗತಿಗಳನ್ನು ಸೋದಾಹರಣವಾಗಿ ಚಿತ್ರಿಸಿವೆ. ಈ ಜಾನಪದ ಬರೆಹದಲ್ಲಿ ಮೊದಲು ವಿವರಿಸಲಾರದ ಎರಡು ಕಥೆಗಳನ್ನಷ್ಟೆ ಹೇಳಲಾಗಿದೆ. ಇವು ಸಮುದಾಯದ ಸಾಂಸ್ಕೃತಿಕ ಹಿನ್ನೆಲೆಯನ್ನು ಬಿಂಬಿಸುವಂಥವು.

**ಡೊಳ್ಳಿನ ಹಾಡುಗಳು**

ಡೊಳ್ಳು ಮಾನವನು ಅಲೆಮಾರಿಯಾಗಿ ಪಶುಪಾಲನೆ ಮಾಡುತ್ತಿದ್ದಾಗ ಕಾಡು ಪ್ರಾಣಿಗಳಿಂದ ಕುರಿ-ಮೇಕೆಗಳನ್ನು ಮತ್ತು ತಮ್ಮನ್ನು ರಕ್ಷಿಸಿಕೊಳ್ಳಲು ಬಳಕೆಗೆ ಬಂದುದು. ಭಾರತವಲ್ಲದೇ ಪ್ರಪಂಚದ ನಾನಾ ಭಾಗದಲ್ಲಿ ವಾಸಿಸುತ್ತಿರುವ ಪಶುಪಾಲಕ ಸಮುದಾಯಗಳು ತಮ್ಮದೇ ಧಾಟಿಯಲ್ಲಿ ಭಾರಿಸುತ್ತ ಲಯಬದ್ಧವಾಗಿ ಹಾಡಿ ಕುಣಿಯುತ್ತಿರುವುದನ್ನು ಕಾಣಬಹುದಾಗಿದೆ. ದೈಹಿಕ ಮತ್ತು ಮಾನಸಿಕ ದಣಿವನ್ನು ನಿವಾರಿಸಿಕೊಳ್ಳಲು ಪಶುಪಾಲಕರು ಇದನ್ನು ಬಳಸುತ್ತಿದ್ದರು; ಬಳಸುತ್ತಿದ್ದಾರೆ. "ಪ್ರದೇಶಗಳಿಂದ ಪ್ರದೇಶಕ್ಕೆ ಡೊಳ್ಳಿನ ಆಕಾರಗಳಲ್ಲಿ ವ್ಯತ್ಯಾಸ ಕಂಡುಬಂದರೂ, ಎಲ್ಲ ಕಡೆಯೂ ತಯಾರಿಕೆಗೆ ಆಡು-ಹೋತ, ಕುರಿ-ಟಗರಿನ ಚರ್ಮವನ್ನು ಬಳಸುತ್ತಾರೆ."[೧೭] ಈ ವಾದ್ಯದೊಂದಿಗೆ ಹಾಡುವ ಹಾಡುಗಳೇ ಡೊಳ್ಳಿನ ಹಾಡುಗಳು. ಡೊಳ್ಳು-ಡೊಳ್ಳಿನ ಹಾಡುಗಳು ಕುರುಬ ಸಮುದಾಯದೊಂದಿಗೆ ಜೀವಿಸುತ್ತ ಬೆಳೆದು ಬಂದವುಗಳು. ಇವು ಸಾಕಷ್ಟು ಪ್ರಮಾಣದಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ.

ಪ್ರಸ್ತುತ ಈ ಬರಹದಲ್ಲಿ ಅಧ್ಯಯನಕ್ಕೆ ಆಯ್ದುಕೊಂಡು ಗಡಿನಾಡ ಪರಿಸರದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ದೊರೆತ ಸುಮಾರು ೧೨೦ಕ್ಕೂ ಅಧಿಕ ಡೊಳ್ಳಿನ ಹಾಡುಗಳಲ್ಲಿ ಮುಖ್ಯವಾಗಿರುವ ಈ ಭಾಗದಲ್ಲಿನ ಸಮುದಾಯದ ದೈವಗಳು, ಶರಣರು, ಪವಾಡಗಳ ರೂಪದಲ್ಲಿವೆ. ಅವುಗಳಲ್ಲಿ ಕೆಲವನ್ನು ಈ ಕೆಳಗೆ ಕೊಡಲಾಗಿದೆ.

**ಕಲ್ಗುಡಿಯಪ್ಪನ ಪದ**

ಹಿರಿಯಾರೇಳಿದ ನಡತೆ ಕರೆದು ಹೇಳುತ ಬಂದ
ಕರಿಯಣ್ಣ ಕಲ್ಗುಡಿ ದ್ಯಾವರು ॥
ಸಿದ್ಧರೇಳಿದ ನಡತೆ ಎಬ್ಬಿಸಿ ಹೇಳುತ ಬಂದ
ಎದ್ದಾರೆ ಮರುಳೆಯ ದ್ಯಾವರು ॥
ಕಲ್ಲೊಳಗೆ ಇರವೋದು ಯಲ್ಲಾರು ಬಲ್ಲಾ ಹಾಲು ಸಕ್ಕರೆ
ಗ್ವಾನೆ ಬಾಳೆಹಣ್ಣು ಅಭಿಷೇಕ ॥
ಹಾಲು ಸಕ್ಕರೆ ಗೊನೆಯ ಬಾಳೆಹಣ್ಣು ಮಂದೇಲಿಟ್ಟ
ಮನಸು ಕಂಡೇನು ॥
ಬಿಲ್ಲ ಪತ್ತರಿ ಶಾಜ ಸಣ್ಣ ಮಲ್ಲಿಗೆ ಮಗ್ಗೆ
ಕಲ್ಲಿಗಿಟ್ಟ ಕಳೆಯ ಕಂಡೇನು ॥
ಹಾಗುರದಾಗುಳ ಗಜನಿಂಬೆ ಆಲದ ಮರದ ಕಟ್ಟೇಲಿ
ಹಾಡೆಂದರಿ ಪದಗಳು ॥
ಸಕ್ಕರಿ ಗ್ವಾನ ಮರದ ಕಟ್ಟೇಲಾಡಿದ ಪದವು
ಕ್ರಾವುಳಿಕೆ ಬೆಳದಿಂಗಾಳು ಕಾತಂತೆ ॥
ಕ್ರಾವುಳಿಕೆ ಬೆಳದಿಂಗಾಳು ಕಾತಂತೆ ಕುರುಗೋಡು
ಸಾಲ್ಯಾಗಾಡೆಂದರಿ ಪದಗಳು ॥
ಆತ ಕಲ್ಗುಡಿಯಪ್ಪ ಆತ್ಮದಲ್ಲೇಳಿದ
ಮಾತಿನ ಗಿಣಿಯೋ ಶೀಲಪ್ಪಾಂನು ॥
ಹಕ್ಕಿ ಹೇಳಲಿ ಮುನ್ನ ಚುಕ್ಕಿ ಮೂಡಿ ಬರುವಾಗ
ಪಕ್ಕೆಳಗೆ ಯನ್ನ ಗುರುವ ಹೇಳ್ಯಾನು ॥
ಕೋಳಿ ಕೂಗಲು ಮುನ್ನ ಬೆರಳ ಮಾಡಿ ಬರುವಾಗ

ಬೆಳಗಕ್ಕೆ ತಾಸುಗಳಿರುವಾಗ ॥

ಸೂರ್ಯನು ಮೂಡಿ ಬರುವಾಗ ನಾರಿಯಳು(ರು)

ನೀರು ತರುವಾಗ

ದ್ವಾರ ಪಾಲಕನಡ್ಡ ಸುಳಿದಾನು ॥

ದ್ವಾರ ಪಾಲಕ ನನ್ನ ಕಲ್ಗುಡಿಲಿಂಗೋ

ಸಾರಿ ಹಾಡೆಂದರಿ ಪದಗಳು ॥

ದ್ಯಾವರು ಬಂದಾವೋ ಬನ್ನಿರೋ

**ಮೂವರು ದೊರೆಗಳ ಪದ**

ಆತ ಹಲುಕುಂದೆಪ್ಪ ಈತ ವಸಿಕೇರಿ ದೊರೆಯೇ

ಮಾತಿನ ಸಭೆಗೆ ರಾಮಯ್ಯನು ॥

ಮೂವ್ವಾರು ದೊರೆಗಳು ಕೂಡಿರುವಲ್ಲಿ

ಅಮೃತ ವ್ಯಾಳ್ಯವು ಕಂಡೇವು ॥

ಕರಡಿ ಕೈತಾಳ ಸೌಮ್ಯಾಳ ಗಿಡಿಗಿಡಿತಾಳ

ಲಕ್ಷ್ಮನಾಯಬ ಜಂತೇರು ॥

ಔಷಗಳಂ ಔಷಗಳು ಗುರುವೇ ಕಾಮಾಕ್ಷಿಗಳು

ತಟವೇ ತಮ್ಮಟವೇರಿ ಸ್ಯೌಮ್ಯಾಳ ॥

ತಟವೇ ತಮ್ಮಟವೇರಿ ಸ್ಯೌಮ್ಯಾಳ ಪುಳ್ಳಿಂಗೋವಿ

ದಿಮ್ಮೆಂಬೋ ಪಾತುರದ ನೈಭೋಗಿ ॥

ದಿಮ್ಮೆಂಬೋ ಪಾತುರದ ನೈಭೋಗಿ ನುಡುದಾರೆ

ಸೊನ್ನಾರೆ ಸ್ವಾಮಿಗೆ ನವಿಲಾಡಿದಂತೆ ॥

ಮಂದಲ ಮರುಳೆ ಮಗ ಟಗರಿನ ಮರುಳೆ ಸಿದ್ಧ

ಮರಿಯಲೆ ಹಾಡೆಂದರಿ ಪದಗಳು ॥

ಗಡ್ಡದ ಮರುಳೆ ಕೂಡ ಮುದ್ದೆ ವಸಿಗೇರಿ ದೊರೆಯೇ

ಬದ್ದರಿಸಿ ಹಾಡೆಂದರಿ ಪದಗಳು ॥

ಜಗತ್ತು ನಾಳಂ ತುಕರ್ತು ನಿನ್ನಾಡಿದರೆ

ಜವಳಿ ಬೆಳವಿನ ಮರದಯೋ ॥

ದ್ಯಾವರು ಬಂದಾವೋ ಬನ್ನಿರೋ

## ಮಾಳಪ್ಪನ ಪದ

ಕ್ವಾಣಿಗೆನೂರು ಕೊಂಡಾದ ಮಡುಗು

ಹೊಕ್ಕೆ ನೆನೆದವರ್‍ಯಾರಯ್ಯ ॥

ಸಿರಿಬಾಳ ವಂತರ ಮಗನೆ ನೆನೆದವನು

ಹುಲಿಯ ಜಂತೇರು ಮಾಳಯ್ಯ ॥

ಹುಲಿಯಾ ಜಂತೇರು ಮಾಳ ನೀನಾದರೆ

ಹುಲಿಯ ಗಿಣ್ಣಾನೆ ತರಬೇಕು ॥

ಹುಲಿಯ ಗಿಣ್ಣಾನೆ ತರಬೇಕೆಂದರೆ ಸ್ವಾಮಿ

ನನಕೈಯ್ಯ ಲಾಗದಂದಾನು ॥

ನಿನ್ನಕೈಯ್ಯಲಾಗದಿದ್ದರೆ ಮಾಳೊ

ಮತ್ತಿನ್ನಾರ ಕೈಯ್ಯಲಾದೀತು ॥

ಅಂಗಭೋ ಸುದ್ದಿಗಳು ಕೇಳಿ ತಾ ಮಾಳಪ್ಪೊ

ತನ್ನೊಡೆಯಾನ ಗುಡಿಗೆ ತಾ ಬಂದಾನು ॥

ಒಡೆಯಾನ ಗುಡಿಗೆ ತಾ ಬಂದೆ ಮಾಳಪ್ಪೊ

ಮೂರಿಡಿ ಭಂಡಾರ ತಾಗೊಂಡು॥

ಮೂರಿಡಿ ಭಂಡಾರ ತಾಗೊಂಡೆ ಮಾಳಪ್ಪೊ

ಹುಡಲಲ್ಯಾದರೆ ಕಟ್ಯಾನು ॥

ಹುಡಲಲ್ಯಾದರೆ ಕಟ್ಟಿ ಮಾಳಪ್ಪೊ

ಮಿಂಚುಳ್ಳ ದಾಳಿಯ ಹಗ್ಗಾವು ॥

ಮಿಂಚುಳ್ಳ ದಾಳಿಯ ಹಗ್ಗಾವು ತಾಗೊಂಡು

ಕಂಚುಳ್ಳ ಕರಮಗಿಯನು ॥

ಕಂಚುಳ್ಳ ಕರಮಗಿಯನೆ ತಗೊಂಡು

ಹುಲಿ ಇದ್ದ ಗುಡ್ಡಕ್ಕೆ ಬಂದಾನು ॥

ಹುಲಿ ಇದ್ದ ಗುಡ್ಡಕ್ಕೆ ಹೋಗಿ ಮಾಳಪ್ಪೊ

ಒಂದೇ ಕೂಗಾನೆ ಕೂಗ್ಯಾನು ॥

ಒಂದೆ ಕೂಗಾನೆ ಕೂಗಿ ಮಾಳಪ್ಪೊ

ಎರಡೇ ಕೂಗಾನೆ ಕೂಗ್ಯಾನು ॥

ಯಕಡಂಬೋ ಮೂರು ಕೂಗೋ ಹೊತ್ತಿಗೆ

ನೂರೊಂದು ಹುಲಿಗಳು ಬಂದಾವು ॥

ನೂರೊಂದು ಹುಲಿಗಳು ಮಾತಾಡಿಕೊಂಡು

ತಿನಬೇಕೆನುತಲಿ ನಿಂತಾವು ॥

ಹುಡಲೊಳಗೆ ಕಟ್ಟಿರುವ ಮೂರಿಡಿ ಭಂಡಾರ

ನೂರೊಂದು ಹುಲಿಗಳಿಗೆ ಹುಗ್ಯಾನು ॥

ನೂರೊಂದು ಹುಲಿಗಳಿಗೆ ಹುಗ್ಗೋ ಹೊತ್ತಿಗೆ

ಎಮ್ಮೆ ಗೊಡ್ಡಾಗಿ ನಿಂತಾವು ॥

ಮಿಂಚುಳ್ಳ ದಾಳಿಯ ಹಗ್ಗಾವು ನಾಕಿ

ಕಂಚುಳ್ಳ ಕರಮಗಿಯನು ॥

ಕಂಚುಳ್ಳ ಕರಮಗಿಯನೆ ತಗೊಂಡು

ಹಾಲೊಂದು ಕಾವೇಡಿ ಕರುದಾನು ॥

ಹಾಲೊಂದು ಕಾವೇಡಿ ಕರದು ಮಾಳಪ್ಪೊ

ಗಿಣ್ಣೊಂದು ಕಾವೇಡಿ ಕರುದಾನು ॥

ಹುಲಿಗಳಿರಕ್ಕೊ ಹುಲಿಗಳಿರಮ್ಮೊ ನಾಮಗೊಂದು

ಹುಲಿಮರಿ ಕೊಡಿರಂದು ॥

ನೂರೊಂದು ಹುಲಿಗಳು ಮಾತಾಡಿಕೊಂಡೆ

ಒಂದುಲಿ ಮರಿಯನ್ನು ಕೊಟ್ಟಾವು ॥

ಹಾಲಿನ ಕಾವೇಡಿ ಹೆಗಲಲ್ಲಿ ಹೊತ್ತದೊಂಡು

ಹಿಂಗೊಪ್ತಿಲಿ ಹುಲಿಮರಿಯನು ॥

ಹಿಂಗೊಪ್ತಿಲಿ ಹುಲಿಮರಿಯಾನು ತಗೊಂಡು

ತನ್ನೊಡೆಯನ ಗುಡಿಗೆ ತಾ ಬಂದಾನು ॥

ಒಡೆಯಾನ ಗುಡಿಗೆ ಬಂದೆ ಮಾಳಪ್ಪೊ

ಒಡೆಯಾನು ಗುಡಿಯೊಳಗಿಲ್ಲಾವು ॥

ಒಡೆಯಾನು ಗುಡಿಯೊಳಗಿಲ್ಲವೊಂದೆ

ಗುಡಿ ಹತ್ತಿ ಹಾಯವು ನೋಡ್ಯಾನು ॥

ಗುಡಿ ಹಿಂದೆ ಮಾರು ಮಲಗಿದ್ದ ಸ್ವಾಮೀನ

ಏನಂತ ಎಬಿಸಲಿ ಗುರುವೆ ॥

ಹಾಲು ತಂದೀನಿ ಉಣ ಹೇಳು ಸ್ವಾಮಿ

ಗಿಣ್ಣ ತಂದೀನಿ ಉಣ ಹೇಳು ॥

ಹಾಳಕುರಿ ಹಾಲ ಒಲ್ಲೇನು ಮಾಳೋ

ಮಾಳ ಕುರಿಗಿಣ್ಣ ಒಲ್ಲೇನು ॥

ಅಂಗಂಭೋ ಸುದ್ದಿಗಳು ಕೇಳಿ ಮಾಳಪ್ಪೊ

ಹುಲಿಮರಿ ಮುಂದಕ್ಕೆ ಬಿಟ್ವಾನು ॥

ನಿನ್ನ ಭಾವಕ್ಕೆ ನಾನು ಮೆಚ್ಚಿದೆನು ಮಾಳೋ

ಏನು ಬೇಡುವಿಯೋ ಬೇಡಂದಾನು ॥

ನನ್ನ ಭಾವಕ್ಕೆ ನೀನು ಮೆಚ್ಚಿದರೆ ಪರಸಿವನೆ

ಕಾಲಿಲ್ಲದ ಕೈಲಾಸಕ್ಕೆ ಹೊಯ್ಯಂದೋ ॥

ದ್ಯಾವರು ಬಂದಾವೂ ಬನ್ನಿರೋ

**ಗುಡ್ಡದ ಮಲ್ಲಯ್ಯನ ಪದ**

ಗುಂಡೊಡೆದು ಮೂರು ತುಂಡೇನೆ ಮಾಡ್ಯಾನು

ದೊಡ್ಡಾತ ಗುಡ್ಡದ ಮಲ್ಲಯ್ಯ ॥

ವಾಲಿದ ಗುಂಡಿಗೆ ವರವಾದ ಮಲ್ಲಯ್ಯ

ಶೀಳಿದ ಗುಂಡಿದೆ ಶಿವನಾದ ॥

ಕಗ್ಗಾಳ ಕೆಂಚ ವೀರರೊಂದಗ್ಗಳ

ಸೊಂದಣ್ಣಾಗಳು ಜಗ್ಗಿನ ಗೊರವರ ಕಂಡೇನು ॥

ಕುದುರೆ ಕಾರರ ಮಳೆಹೊಯ್ದು ಶಬ್ದ

ಕೊನಲು ನಲುದಾಡದು ಕಂಡೇನು ॥

ನಡುವು ಬಾಜಾರದೊಳಗೆ ಒಡಿಯೋ ಮಲ್ಲಯ್ಯ

ಕುಣಿಕುಣಿದಾಡದು ಕಂಡೇನು ॥

ಹೊನ್ನಾಕೇರೆ ಶೃಂಗಾರವು ನಾ ಕಂಡೆ ಚೆನ್ನಾಗೆ

ಮೀನಗೊಂದಿ ದ್ಯಾವರು ॥

ಗಂಡಾ ಕೂಡಿ ಮಂಡೆ ಬೋಳಪರಾಗಿ
ಗುಂಡಿಗಾಯದ ಕಂಡೇನು ॥
ದೊಡ್ಡ ಮಟ್ಟಿ ಗುಟ್ಟಿ ಗುಂಡಿನ ಕೆಳಗೆ
ಬಿಗೆದೆ ಬಿಲ್ಲಾನೆ ಹೂಡ್ಯಾನು ॥
ಬಿಗಿದೆ ಬಿಲ್ಲಾನೆ ಹೂಡಿ ಮಲ್ಲಯ್ಯ
ಪಾದಗಟ್ಟಿಗೆ ಹೋದಾನು ॥
ಪಾದಗಟ್ಟಿಗೆ ಹೋಗಿ ಮಲ್ಲಯ್ಯ
ಅಲ್ಲೊಂದು ಪಾವಾಡ ಮಾಡ್ಯಾನು ॥
ಅಲ್ಲೊಂದು ಪಾವಾಡ ಮಾಡಿಮಲ್ಲಯ್ಯ
ರಾಕ್ಷಸ ಪಡಿಗೆ ಹೋದಾನು ॥
ಅಲ್ಲೊಂದು ಪಾವಾಡ ಮಾಡಿ ಮಲ್ಲಯ್ಯ
ಬನ್ನಿಕಟ್ಟಿಗೆ ಹೋಗಿ ಕುಂತಾನು ॥
ಬನ್ನಿಕಟ್ಟಿಗೆ ಹೋಗಿ ಮಲ್ಲಯ್ಯ
ಕಾಳಿಕಾ ಸ್ಮರಣೆಯ ಮಾಡ್ಯಾನು ॥
ಕಾಳಿಕಾ ಸ್ಮರಣೆಯ ಮಾಡಿ ಮಲ್ಲಯ್ಯ
ನಲುದಾಡುತಾ ಬಂದಾನು ॥
ನಲಿದಾಡುತ ಬಂದೆ ಮಲ್ಲಯ್ಯ
ಪಂಚಲಿಂಗನ ಗುಡಿಗೆ ಬಂದಾನು ॥
ಪಂಚಲಿಂಗನ ಗುಡಿಯ ಕಂಡೆ ಮಲ್ಲಯ್ಯ
ಉದಯವಾಗುವ ಸಮಯ ॥
ಉದಯವಾಗುವ ಸಮಯದಲ್ಲಿ
ಬಸವಣ್ಣನ ಗುಡಿಗೆ ತಾ ಬಂದಾನು ॥
ಬಸವಣ್ಣನ ಗುಡಿಗೆ ತಾ ಬಂದೆ ಮಲ್ಲಯ್ಯ
ಸಿಂಹಾಸನಕ್ಕೆ ತಾ ಬಂದಾನು ॥
ಸಿಂಹಾಸನಕ್ಕೆ ತಾ ಬಂದೆ ಮಲ್ಲಯ್ಯಗೆ
ಜಯಮಂಗಳಾರುತಿ ಮಾಡ್ಯಾರು ॥
ದ್ಯಾವರು ಬಂದಾವೋ ಬನ್ನಿರೋ

## ಅಮ್ಮವ್ವ ಶರಣೆಯ ಪದ

ಅಮ್ಮವ್ವ ಶರಣೆ ತನ್ನೂಮ್ಮಯ ದಿನದಲ್ಲಿ

ಬಾಲನಿಲ್ಲಂದು ಬಾಳ ಭ್ರಮಿಶಾಳ ॥

ಬಾಲನಿಲ್ಲೆಂಬೊ ಸುದ್ಧಿ ಮುಕ್ಕಣ್ಣ ಶಿವ ಕೇಳಿ

ಆ ಕ್ರಮದಿಂದಾಗಲಿ ತರುಳ ಬೇಡ್ಯಾನು ॥

ಕೋರಿಯ ಧರಿಸಿದ ಕೈ ಪಾವಾಡ ಧರಿಸಿದ ಕಲ್ಯಾಣ

ಧರೆಗಾಗಿ ಬಂದಿಳುದಾರು ॥

ಕಲ್ಯಾಣ ಧರೆಗಾಗಿ ಇಳುದಂತ ಪರಶಿವನು

ಅರೋರು ಮಂದೊಳಗೆ ಬಂದಾನು ॥

ಅರೋರು ಮಂದೊಳಗೆ ಇಳುದಂತ ಪರಶಿವನು

ಬಾವಿಗಡ್ಡಿಗೆ ಹೋಗಿ ಕುಂತಾನು ॥

ಅಮ್ಮವ್ವ ಶರಣೆ ತನ್ನೂಮ್ಮಾಯ ದಿನದಲ್ಲಿ

ಬಾವಿ ನೀರಿಗೆ ಬೇಗಂದೊರಟಾಳು ॥

ಬಾವಿ ನೀರಿಗೆ ಬೇಗಂದೊರಟಾಳು ಅಮ್ಮವ್ವ

ದಾರುಮಗ ನೀನೆಂದು ಕೇಳ್ಯಾಳು ॥

ತಂದಿಲ್ಲ ತಾಯಿಲ್ಲ ಬಂದಿಲ್ಲ ಬಳಗಿಲ್ಲ

ಹಿಂದೆ ಮುಂದೆ ನಮಗ್ಯಾರಿಲ್ಲ ॥

ಹಿಂದೆ ಮುಂದೆ ನಮಗ್ಯಾರಿಲ್ಲ ಹೊಂದೆನಂದು

ಬಾಳ ಮಾಡ್ಯಾನು ॥

ಅಮ್ಮವ್ವ ಶರಣಿ ತನ್ನೂಮ್ಮಾಯ ದಿನದಲ್ಲಿ

ಕೊಡ ತುಂಬಿಕೊಂಡು ಮ್ಯಾಕ ಬಂದಾಳ ॥

ಕೊಡ ತುಂಬಿಕೊಂಡು ಮ್ಯಾಕ ಬಂದಾಳು ಅಮ್ಮವ್ವ

ಕಂದಾನ ಕರೆದು ಮನೆಗೊಯ್ದೊಳು ॥

ಅವ್ವರಿಗೆ ನೀರೇನೆ ಕಾಶ್ಯಾಳು

ಕರಿದಾಗೆ ಮೈಯ್ಯಾನೆ ತೊಳಿದಾಳು ॥

ಪಂಚಾಂನ ಮತ್ಯಾಡಿ ಊಟ ಉಪಚಾರ ಮಾಡಿ

ಕಂದಾನ ಬಾಯನೆ ತೊಳುದಾಳು ॥

ಕಡಗಕಂಠ ಮ್ಯಾಲೆಂದಾಭರಣ ಇಟ್ಟಾಳು

ಆಟಕೆ ಹೋಗಪ್ಪ ಮಗನೆಂದಾಳು ॥

ಕಟ್ಟೇರಿ ಕುಂತಿರುವ ಕಸಿಕಾಮದವಗೆ

ಸುಲಿಗೆಯ ಕೊಟ್ಟೋಡಿ ಬಂದಾನು ॥

ಯಾರು ಹೊಡೆದರು ಮಗನೆ ಯಾರು ಬಡುದಾರೆಂದು

ಅಮ್ಮವ್ವ ಶರಣೆ ತಾ ಕೇಳ್ಯಾಳು ॥

ನೂರ ಚಂದ್ರನ ಮನೆಗೆ ಹಣ್ಣಾದ ನೂಲಿ ಕೊಸ್ತು

ಕೈತುಂಬ ಗೊಬ್ಬೆದ್ದು ಬಂದಾನು ॥

ಕೈತುಂಬ ಗೊಬ್ಬೆದ್ದು ಬಂದಾರೆ ಅಮ್ಮವ್ವ

ಕದುರೇಳ ಗಂಧಚ್ಚೆ ಕಾಶಾಳು ॥

ಕಗ್ಗಲ್ಲು ಗೌಡರವು ದನಗಳ ಕಾಯಲು ಹೋಗಿ

ಕಾಲ್ತುಂಬ ಮುಳ್ಳು ತುಳಿದು ಬಂದಾನು ॥

ಕಾಲ್ತುಂಬ ಮುಳ್ಳು ತುಳಿದು ಬಂದಾರೆ ಅಮ್ಮವ್ವ

ಹೆಗ್ಗಳದ ಹಾವಿಗೆ ಮಾಡಿಶಾಳು॥

ಅಮ್ಮವ್ವಳ ದೃಢ ಭಕುತಿ ನೋಡಬೇಕೆಂದು ಸ್ವಾಮಿ

ಮತ್ತೊಂದು ಮಾಯಾವು ಮ್ಯಾಡ್ಯಾನು ॥

ಕೈಕಾಲು ನಡುಗೀಸಿ ಕಣ್ಣುಗಳುಬ್ಬಿಸಿ

ಮರುಳು ಮಾತುಗಳಲ್ಲಿ ಆಡ್ಯಾನು ॥

ಸಾಕಿದ ಮಗ ನಿನಗೆ ಹ್ಯಾಕಿ ದ್ಯಾರಿಕ್ಯಾನೆಂದು

ಕಾಕು ಮಾಡು ಜನರು ನುಡುದಾರು ॥

ಕಾಕು ಮಾಡು ಜನರು ನುಡುದಾರು ಅಮ್ಮವ್ವ

ಸಾಕೆಂದು ಪ್ರಾಣವ ಬಿಟ್ಟಾಳು ॥

ನಡುವಿನ ಗೆಜ್ಜೆ ಕಟ್ಟಿಕೊಂಡು

ಬಾಗಿಲೊಳು ನಿಂತುಕೊಂಡು ನಲುದಾಡ್ಯಾನು ॥

ನಿನ್ನ ಬಾವಕೆ ನಾನು ಮೆಚ್ಚಿದೆನು ಅಮ್ಮವ್ವ

ಏನು ಬೇಡುವಿಯೋ ಬೇಡೆಂದಾನು ॥

ನನ್ನ ಭಾವಕೆ ನೀನು ಮೆಚ್ಚಿದರೆ ಪರಶಿವನೆ

ಕಾಲಿಲ್ಲದ ಕೈಲಾಸಕ್ಕೆ ಹೊಯ್ಯಂದು ॥

ದ್ಯಾವರು ಬಂದಾವೋ ಬನ್ನಿರೋ

**ಹರಳಯ್ಯ–ಬಸವಣ್ಣನ ಪದ**

ಕಲ್ಯಾಣ ಪಟ್ಟಣಕೆ ಬಲ್ಲಿದ ನಂಬಸವಣ್ಣ

ನಿಲ್ಲದೆಲೆ ಪಾವಾಡ ಗೆದ್ದಾನು ॥

ನಿಲ್ಲದೆಲೆ ಪಾವಾಡ ಗೆಲುವೋ ಬಸವಣ್ಣನ ಸುದ್ದಿ

ಕಲ್ಯಾಣ ದೊರೆಯೊಬ್ಬ ಕೇಳ್ಯಾನು ॥

ಕಲ್ಯಾಣ ದೊರೆಯೊಬ್ಬ ಊರವರಗಿರುವಂತೆ

ದಿಟ್ಟ ಹರಳಯ್ಯ ತಾ ಕೇಳ್ಯಾನು ॥

ದಿಟ್ಟ ಹರಳಯ್ಯನು ಕರುಣದಿಂದಲಿ ಕೇಳಿ

ಕಲ್ಯಾಣ ಬೀದೊಳಗೆ ಬಂದಾನು ॥

ಬರುವೂದ ಹರಳಯ್ಯ ಬಸವಣ್ಣನ ಕಂಡು

ಶರಣಂದಾನು ॥

ಶರಣಿಗೆ ಶರಣಯ್ಯ ಶಿವಶರಣಂದರಳಯ್ಯ

ಬಸವಣ್ಣ ತಾ ಶರಣಂದಾನು ॥

ಬಸವನಂದ ಶರಣು ಹೆಚ್ಚು ಆದಿತೆಂದು ಮತ್ತೆ

ಸಲೆಯಳ ಮುಂದೆ ಹೇಳ್ಯಾನು ॥

ಮಾಡಯ್ಯ ಮಜ್ಜಾಣ ಮನಿಯಾ ಮೀಸಲು ಮಾಡಿ

ರೂಢಿಗೀಶ್ವರನ ಗತಿಯನುತಲಿ ॥

ಬಲದ ಚರ್ಮವನೆ ಹರಳಯ್ಯ ತಗುದಾನು

ತಿದ್ದಿ ಮಾಡಿದನು ಚಮ್ಮಾವಿಗೆ ॥

ಮಾಡಿದ ಚಮ್ಮಾವಿಗೆ ನೋಡಾವಿಗೆ ಅಳವಲ್ಲಿ

ರೂಢಿಗೀಶ್ವರನೇ ಗತಿಯನು ತಾಲಿ ॥

ಮಾಡಿದ ಚಮ್ಮಾವಿಗೆ ಮಡಿಯಲ್ಲಿ ಕಟ್ಟಿಕೊಂಡು

ಮಂಡೆ ಮೇಲೆ ಹೊತ್ತುಕೊಂಡಾನು ॥

ಮಂಡೆ ಮೇಲೆ ಹೊತ್ತುಕೊಂಡಾನು ಹರಳಯ್ಯ

ಚೊಕ್ಕ ಚಿನ್ನದಾಗೆ ॥

ಅರಸೆದ್ದು ಕುಂತೆ ಅಪ್ಪಿಕೊಂಡಾಡುತ್ತಿದ್ದಾನು

ಮುಟ್ಟಿಗಿಟ್ಟಿರಯ್ಯಾ ಕೆಟ್ಟ ಹೊಲೆಯರು ನಾವು

ಮುಟ್ಟಾದಿರರಸೆ ಮಡುವಯ್ಯಾನು ॥

ಹೊಲೆಯಿಂದ ನೆಲೆಯುಂಟು ಹೊಲೆ ಇಲ್ಲದಿದ್ದರೆ ನೆಲೆಯಲ್ಲ

ನಮ್ಮ ಕಲ್ಯಾಣವು ॥

ವಿಕೃತನಾಮ ಸಂವತ್ಸರವು ಮೂವತ್ತಾರು

ಲೆಕ್ಕಮಣಿ ಇಲ್ಲಿಗೆ ಮುಗುದಾವು ॥

ಬೇದಾವು ನೇಳಿದ ಕೊಂಡಿಮೀಚಣ್ಣೆ ಬಸವಣ್ಣ

ಪವಾಡ ಗೆದ್ದಾನು ॥

ದ್ಯಾವರು ಬಂದಾವೋ ಬನ್ನಿರೋ

**ಗಾದಿಲಿಂಗಪ್ಪನ ಪದ**

ಗುಳೇದು ಪುರದಾಗ ಗುಡ್ಡಾದ ಬೈಲಾಗ

ದೊಡ್ಡ ಶಿವಶರಣಾರು ಹುಟ್ಯಾರು ॥

ಗುರುವಿನ ಮಗಳು ಸಾಂತಮ್ಮನ ಮನೆಯಲ್ಲಿ

ಮುಂದಾಲ ಕಾರುಣೀಕ ಹೇಳ್ಯಾನು ॥

ಮುಂದಾಲ ಕಾರುಣೀಕ ಹೇಳಿದ ಮಗಳಿಗೆ

ಹಿಂದಾಲ ಕಾತುಕ ತೋರ್ಯಾನು ॥

ಹಳೇಗುಳ್ಯೇವು ಬಂದಳದೀತು ಮಗಳೆ

ಹೊಸಗುಳೇವು ಮುಂದಾದೀತು ॥

ಗುಳೇದ ಲಕ್ಕಮ್ಮನ ಗುಡಿಯಲ್ಲಿ ಹೊದಾವು

ತುಂಬಿ ಬಂದಾಲು ಶ್ರೀ ಗಂಗಾ ॥

ಮೂರು ದಾರಿಯ ಕಲ್ತು ಒಂಟೆಮರಿ

ಗಿಡಕೆ ಇಲ್ಲಿ ಮಾಡಾಂದಾನು ॥

ಸಾಮಾಧಿ ಕ್ವಾಮಟಗಾರ ಲಕ್ಷ್ಮಣ್ಣನ ಕರೆಸಿ
ಇಲ್ಲಿ ಮಾಡಾಂದಾನು ಸಾಮಾಧಿ ॥
ಕಾಯವು ಬಿಟ್ಟು ಕಡೆಗೋಗು ಕಾಲಕ್ಕೆ
ಕೈವಾಲೆ ಮೇಲೆ ಹೊಯ್ಯಂದಾರು ॥
ಮದಸೊಕ್ಕಿದ ಮಾನ್ನವರು ಹೇಳಿದ ಮಾತುಗಳು
ಬಿಟ್ಟು ಕಟ್ಟಿದರು ಕಳ್ಳಿ ಸದಿಗೆ ॥
ಕಟ್ಟಿದ ಸದಿಗೆಗೆ ಮುಟ್ಟಿ ಹೊಯ್ಯಾಗ(ಹೊಂಟಾಗ)
ದಿಟ್ಟ ಮೂರುತಿ ಎದ್ದು ಕುಂತಾನು ॥
ದಿಟ್ಟ ಮೂರುತಿ ನನ್ನ ಗಾದಿಲಿಂಗಪ್ಪೊ
ದಿಗ್ಗಾನೆ ಎದ್ದು ತಾ ಕುಂತಾನು ॥
ಹಲ್ಲಾನೆ ಕಡುದಾನು ರವೆಗಣ್ಣು ಬಿಟ್ಟಾನು
ಕೈವಾತಿ ಮ್ಯಾಲೆ ಹೊಯಂದಾನು ॥
ಅಂದಿದಂತ ಮಾನ್ನವನ ಬದಿಯಲಿ ಕರಕೊಂಡು
ಮುಂಗೈ ತೋಳುಗಳು ಇಡಿಶಾನು ॥
ಅಳಿನ ತೋಳಿನ ಮ್ಯಾಲೆ ಜಾಣಲಿಂಗಪ್ಪ ಕುಂತು
ಸಾಮಾದಿಗೆ ಪೈಣಾಗಳಾಂದಾನು ॥
ಗಾದಿಲಿಂಗಪ್ಪ ಸಾಮಾದಿಗೆ ಬರುವಾಗ
ಗಂಧಾದ ಮಳೆಸ್ವಾನೆ ಸುರೂದಾವು ॥
ಶರಣ ಗಾದಿಲಿಂಗಪ್ಪ ಸಾಮಾಧಿಗೆ ಬರುವಾಗ
ಹುವ್ವಿನ ಮಳೆಸ್ವಾನೆ ಸುರುದಾವು ॥
ಮಠಪತಿ ಮಠದವರು ವೀರ ತಮ್ಮಟದವರು
ವಿಭೂತಿ ವೀಳ್ಯವು ಮಾಡ್ಯಾರು ॥
ಗುಳೇದು ಪುರುದಾಗ ಗುಡ್ಡಾದ ಬೈಲಾಗ
ದೊಡ್ಡ ಶರಣಾರು ಹುಟ್ಯಾರೋ
ದ್ಯಾವರು ಬಂದಾವೋ ಬನ್ನಿರೋ

### ಗಾದೆಗಳು

ಗಾದೆಗಳು ಎಲ್ಲ ಜನಪದ ಸಮುದಾಯಗಳಲ್ಲಿಯೂ ಕಂಡುಬರುವ ಜನಪ್ರಿಯ ಸಾಹಿತ್ಯ ಪ್ರಕಾರ. ಅಧ್ಯಯನಕ್ಕೆ ಆಯ್ದುಕೊಂಡ ಗಡಿ ಪರಿಸರದಲ್ಲಿ ಸಾಕಷ್ಟು ಗಾದೆಗಳು ದೊರೆತಿವೆ. ಅವುಗಳಲ್ಲಿ

ಕೆಲವು ಕುರುಬ ಸಮುದಾಯಕ್ಕೆ ನೇರ ಸಂಬಂಧಿಸಿದ್ದರೆ, ಮತ್ತೆ ಕೆಲವು ಸಾರ್ವತ್ರಿಕವಾಗಿಯೂ ಬಳಕೆಯಲ್ಲಿವೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕುರುಬ ವಕ್ತೃಗಳೇ ಹೇಳಿದ ಕೆಲವು ಗಾದೆಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

* **ಕುರುಬ ಕೆಟ್ಟು ಕುಂಚಿಟಿಗನಾದ**

ಕುರುಬರೇ ಕಾಲಾಂತರದಲ್ಲಿ ಕುಂಚಿಟಿಗರಾದರು. ಮೂಲತಃ ಸೋದರ ಸಮುದಾಯಗಳು ಕಾಲಾಂತರದಲ್ಲಿ ವೃತ್ತಿಯಾಧಾರಿತವಾಗಿ ಬದಲಾದದ್ದನ್ನು ಈ ಗಾದೆ ಅರ್ಥೈಸುತ್ತದೆ.

* **ಅಂಡು ತೊಳೆದರೆ ಹಿಂಡು ಹೆಚ್ಚಲ್ಲ**

ಕುರಿಗಳನ್ನು ಸಾಕುವುದು ತುಂಬಾ ತ್ರಾಸದಾಯಕವಾದುದು. ವರ್ಷಾಕಾಲವೂ ಅವುಗಳನ್ನು ಮೇಯಿಸುವ , ರೋಗರುಜನಿಗಳಿಂದ ಕಾಪಾಡುವ ಜವಾಬ್ದಾರಿ ಕುರಿಗಾರರದು. ಅವರು ತಮ್ಮ ಶುಭ್ರತೆಯತ್ತ ಗಮನ ಹರಿಸುವುದರ ಮೂಲಕ ಹಿಂಡನ್ನು ಸರಿಯಾಗಿ ನೋಡಿಕೊಳ್ಳದಿದ್ದರೆ ಹಿಂಡು ಹೆಚ್ಚುವುದಿಲ್ಲ ಎಂಬ ಅರ್ಥದಲ್ಲಿ ಗಾದೆ ರೂಢಿಯಲ್ಲಿದ್ದು, ಎಲ್ಲಾ ಪಶುಪಾಲನೆಗೂ ಈ ಗಾದೆ ಅನ್ವಯಿಸುತ್ತದೆ.

* **ಕುರುಹು ಬಲ್ಲವನು ಕುರುಬ**

ತಮ್ಮನ್ನು ಮತ್ತು ತಮ್ಮ ಕುರಿ ಮಂದೆಯನ್ನು ಕ್ರೂರ ಪ್ರಾಣಿಗಳಿಂದ, ಪ್ರಕೃತಿ ವಿಕೋಪಗಳಿಂದ ಒದಗಬಹುದಾದ ಅಪಾಯುಗಳನ್ನು ತಿಳಿದುಕೊಳ್ಳುವ ಮತ್ತು ರಕ್ಷಿಸಿಕೊಳ್ಳುವ ಮುಂದಾಲೋಚನೆಯ ನ್ನು ಅರಿತವರೆ ಕುರುಬರೆಂಬ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿದೆ.

* **ಚದಿವಿನ ವಾಡಿಕ್ಕಿಂತ ಸಾಕಲೋಡು ಮೇಲು**

**ಸಾಕಲೋನಿಕ್ಕಿಂತ ಮ್ಯಾಕಲೋಡು ಮೇಲು**

(ಓದಿದವನಿಗಿಂತ ಅಗಸ ಲೇಸು, ಅಗಸನಿಗಿಂತ ಕುರುಬನೇ

(ಕುರಿ, ಮೇಕೆ ಮೇಯಿಸುವವನು) ಲೇಸು

ವಿದ್ಯೆಕಲಿತವನಿಗಿಂತಲೂ ಪಾರಂಪರಿಕ ವೃತ್ತಿಗಳನ್ನು ಮಾಡಿಕೊಂಡು ಬರುವವರು ಉತ್ತಮ ಎಂಬ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿದೆ.

* **ಮಾರಮ್ಮಕು ಮೊಗಡು ಲೇಡು, ಬೀರಪ್ಪಕು ಬಾರ್ಯ ಲೇದು**

(ಮಾರಮ್ಮನಿಗೆ ಗಂಡನಿಲ್ಲ, ಬೀರಪ್ಪನಿಗೆ ಹೆಂಡತಿ ಇಲ್ಲ)

* **ಕೂಡದಲೆ ಕುರುಬ ಕೆಟ್ಟ ಹಾಡದಲೆ ದೊಂಬ ಕೆಟ್ಟ**

ಕುರಿಗಾರರು ಕುರಿಗಳನ್ನು ಮೇಯಿಸಲು ಮತ್ತು ಮಂದೆ ತರುಬಲು ಒಂದೆಡೆಯಲ್ಲಿಯೇ ಸಂಘಟನೆಯಿಂದ ಇರಬೇಕು. ಒಂಟಿಯಾಗಿದ್ದರೆ ಕ್ರೂರಪ್ರಾಣಿ ಮತ್ತು ಕಳ್ಳಕಾಕರಿಂದ ಕುರಿಸಂಪತ್ತನ್ನು ರಕ್ಷಿಸಿಕೊಳ್ಳಲು ಕಷ್ಟವಾಗುತ್ತದೆ. ಅದರಂತೆಯೇ ನಾಲ್ಕಾರು ಜನರು ಸೇರುವ ಸ್ಥಳದಲ್ಲಿ ತಮ್ಮ

ಕೌಶಲ್ಯಗಳನ್ನು ಪ್ರದರ್ಶಿಸಿ ಬದುಕಿನ ಬಂಡಿ ಸಾಗಿಸುವ ದೊಂಬರು ಜಗಳವಾಡಿ ಅಗಲಿದರೆ ಅವರ ಆಟಕ್ಕೆ ಸಂಚಕಾರ ಜೊತೆಗೆ ಆದಾಯವಿಲ್ಲದೆ ಉಪವಾಸ ಬೀಳಬೇಕಾಗುತ್ತದೆ ಎಂದರ್ಥ. ಮೊದಲು ಈ ಗಾದೆಯನ್ನು 'ಕುರುಬ ಕೂಡಿ ಕೆಟ್ಟ ದೊಂಬ ಅಗಲಿ ಕೆಟ್ಟ' ಎಂದು ಹೇಳುತ್ತಿದ್ದರು. ಆದರೇ ಅದು ಸರಿಯಲ್ಲ. ಏಕೆಂದರೆ ಕೂಡಿ ಬಾಳಿದರೆ ಮಾತ್ರ ಕುರುಬರು ತಮ್ಮ ಕುರಿಸಂಪತ್ತನ್ನು ಉಳಿಸಿ-ಬೆಳೆಸಲು ಸಾಧ್ಯ. ಹಾಗಾಗಿ ಮೇಲಿನ ಗಾದೆಯು ಸರಿಯಾದುದು ಎಂದು ವಿಠಲಾಪುರದ ನಿವೃತ್ತ ಶಿಕ್ಷಕರಾದ ಕೆ.ಎಂ. ಜಂಬಯ್ಯ ಅವರು ಹೇಳಿದರು.

**ಗುರುವು ಬಂದ ಮನೆ ಗುಡ್ಡ**

ಕುರುಬರ ಗುರುಗಳಾದ ಒಡೆಯರು ಭಕ್ತರ ಮನೆಗೆ ಬಂದು ಪ್ರಸಾದ ಸ್ವೀಕರಿಸಿ, ಕಾಣಿಕೆಗಳನ್ನು ಪಡೆದು ಆಶೀರ್ವದಿಸಿ ಹೋದರೆ, ಆ ಮನೆಯು ಸುಖ-ಸಂಪತ್ತಿನಿಂದ ತುಂಬುತ್ತದೆ ಎಂಬ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿದೆ.

**ಕುರುಬರ ಬಡತನ ತೋಳ ಏನು ಬಲ್ಲದು**

**ಕುರಿಯ ಒಳ್ಳೆತನ ತೋಳ ಏನು ಬಲ್ಲದು**

ತೋಳ ಕುರಿಗಳನ್ನು ತಿಂದು ಬದುಕುವ ಪ್ರಾಣಿ ಅದು ಕುರಿಗಳನ್ನು ತಿನ್ನಲು ಹವಣಿಸುತ್ತದೆಯೇ ಹೊರತು, ಕುರಿಯು ಸಾಧು ಪ್ರಾಣಿಯೆಂದಾಗಲಿ, ಕುರಿಗಾರರ ಕಷ್ಟಗಳನ್ನಾಗಲಿ ನೋಡುವುದಿಲ್ಲ. ಅದರ ಉದ್ದೇಶ ಮಾಂಸ ತಿನ್ನುವುದಷ್ಟೆ ಆಗಿರುತ್ತದೆ.

**ಕಟ್ಟಿ ಮರಿಸ್ತೆ ಗೊರ್ರೆ ಕರುಸ್ತುಂದಿ**

ಕುರಿ ಎಷ್ಟೇ ಸಾಧು ಪ್ರಾಣಿಯಾದರೂ ಕಟ್ಟಿಗೆ ಇಲ್ಲದೇ ಇರೋದನ್ನು ಮರೆತರೆ ಕಡಿಯುತ್ತದೆ. ಅಂದರೆ ಕುರಿಹಿಂಡಿನಲ್ಲಿ ಇರುವ ಟಗರುಗಳು ಕೊಬ್ಬಿನಿಂದ ಇರುತ್ತವೆ. ಅವಕ್ಕೆ ಸಲಿಗೆ ಕೊಟ್ಟರೆ ಹಾಯುತ್ತವೆ ಎಂದು ಹೇಳಬಹುದು.

**ಅಡವಿಕಿ ಪೋತೆ ನಕ್ಕಲ ಕಾಟಂ. ಇಂಟಿಕೊಸ್ತೆ ಪೆಂಡ್ಲಾಂ ಕಾಟಂ**

ಕುರಿ ದನಗಳನ್ನು ಮೇಯಿಸಲು ಅಡವಿಗೆ ಹೋದರೆ ಕ್ರೂರ ಪ್ರಾಣಿಗಳಾದ ತೋಳ-ನರಿಗಳ ಕಾಟದಿಂದ ಹಿಂಡನ್ನು ರಕ್ಷಿಸಿಕೊಂಡು ಬರಬೇಕು. ಹಗಲೆಲ್ಲಾ ಅಡವಿ ತಿರುಗಿ ಸಾಯಂಕಾಲ ಮನೆಗೆ ಬಂದರೆ ರಾತ್ರಿ ಹೆಂಡತಿಯ ಕಾಟ ಶುರುವಾಗುತ್ತದೆ. ಮದುವೆಯಾದವನು ಎರಡೂ ಕಾಟಗಳನ್ನು ಸಹಿಸಬೇಕು ಎಂಬ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿದೆ.

**ಕುಲಂ ದಾಟಿ ಪೋತೆ ಮಳ್ಳಿ ತಿರಿಗಿ ರಾದು**

ಕುಲಾಚಾರಗಳನ್ನು ಬಿಟ್ಟು ಹೋದರೆ ಮತ್ತೆ ಕುಲದಲ್ಲಿ ಸೇರಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ಕುಲದ

ಕಟ್ಟುಪಾಡುಗಳನ್ನು ಚಾಚೂತಪ್ಪದೆ ಪಾಲಿಸಬೇಕು. ಅದಕ್ಕೆ ವ್ಯತಿರಿಕ್ತವಾಗಿ ನಡೆದುಕೊಳ್ಳದೆ ಕುಲಾಚಾರಗಳನ್ನು ಶುದ್ಧವಾಗಿಟ್ಟುಕೊಳ್ಳುವ ಸಲುವಾಗಿ ಹುಟ್ಟಿಕೊಂಡಿದ್ದು.

**ಎರುವು ಏಸಿ ಯರ್ರಿವಾಡು ಪಂಟ ಪಂಡೆ**

ಕುರಿ-ದನಗಳ ಗೊಬ್ಬರವನ್ನು ಹೊಲಕ್ಕೆ ಹಾಕಿ ಬಿತ್ತನೆ ಮಾಡಿದರೆ ಕೃಷಿಯಲ್ಲಿ ಅನುಭವವಿಲ್ಲದ ಹುಚ್ಚನು ಉತ್ತಮ ಫಸಲು ಬೆಳೆಯಬಹುದು. ಅಂದರೆ ಕುರಿ-ದನಗಳ ಗೊಬ್ಬರದ ಸತುವು ಉಳುಮೆ ಹೇಗೆ ಆಗಿದ್ದರೂ ಬೆಳೆ ಪಡೆಯಲು ಕಷ್ಟವಾಗುವುದಿಲ್ಲ ಎಂಬ ಹಿನ್ನೆಲೆಯಲ್ಲಿ ಬಂದಿರುವುದು.

**ವಚ್ಚೆ ಕಂಟಕಾಲನ್ನಿ ಮಂಚಿದಾನಿಕೆ**

ಬರುವ ಕಷ್ಟಗಳೆಲ್ಲ ಒಳ್ಳೆಯದಕ್ಕೆ ಬರುತ್ತವೆ. ಅಂದರೆ ಆಗುವುದೆಲ್ಲಾ ಒಳ್ಳೆಯದಕ್ಕೆ ಎಂಬ ಹಿನ್ನೆಲೆಯಲ್ಲಿದೆ.

**ಪೆದ್ದಲು ಚೆಪ್ಪಿನ ಮಾಟ ಪೆರುಗು ಅನ್ನಮು**

ಹಿರಿಯರು ಹೇಳಿದ ಮಾತು ಮೊಸರನ್ನವಿದ್ದಂತೆ.

ಹೀಗೆ ಈ ಸಮುದಾಯವನ್ನೇ ಕುರಿತಾಗಿರುವ ಗಾದೆಗಳು ಅವರ ಸಾಮಾಜಿಕ, ಆರ್ಥಿಕ ಸಾಂಸ್ಕೃತಿಕ ಬದುಕನ್ನು ಬಿಂಬಿಸುವ ಪ್ರತೀಕಗಳಾಗಿವೆ. ಇವುಗಳಲ್ಲದೆ ಕೆಲವು ಅಶ್ಲೀಲವಾದ ಸಮುದಾಯಕ್ಕೆ ಮುಜುಗರ ತರುವಂತ ಗಾದೆಗಳೂ ಇವೆ. ಅವುಗಳನ್ನು ಹೊರತುಪಡಿಸಿ ಕೆಲವನ್ನಷ್ಟನ್ನೆ ಇಲ್ಲಿ ಕೊಡಲಾಗಿದೆ.

ಹಾಗೆಯೇ ಒಡಪುಗಳು, ಡೊಳ್ಳು ಕುಣಿತ, ಈರಗಾರರ ಕುಣಿತ, ಗೊರವರ ಕುಣಿತಗಳಂಥ ಪ್ರದರ್ಶನ ಕಲೆಗಳು ಇಲ್ಲಿವೆ. ಜೊತೆಗೆ ತೆಲಂಗಾಣ ಪ್ರದೇಶದಲ್ಲಿ ಒಗ್ಗುಕಥಾ ಪ್ರದರ್ಶನ ಕಲೆಯು ಶ್ರೀಮಂತ ಪರಂಪರೆಯನ್ನು ಹೊಂದಿದೆ. ಇವುಗಳೊಂದಿಗೆ ಬಯಲಾಟ, ರಂಗಭೂಮಿ, ಚಕ್ಕ ಭಜನೆಯ ಕಲೆಗಳು, ಕಲಾವಿದರು ಈ ಭಾಗದಲ್ಲಿ ಕಂಡುಬರುತ್ತಾರೆ.

**ಅಡಿಟಿಪ್ಪಣಿಗಳು**

೧. ಬಸವರಾಜ ಸಬರದ, ಜನಪದ ದೈವಗಳು, ಪು. ೧.
೨. ಹಾಡಿದವರು: ಪೂಜಾರಿ ದೊಡ್ಡಬಸಪ್ಪ, ವಯಸ್ಸು ೭೫, ಬಲ್ಲೂರು.
೩. ನೇಗಿನಹಾಳ ಎಂ.ಬಿ.,ಮಹಾರಾಷ್ಟ್ರದಲ್ಲಿ ಮೈಲಾರಲಿಂಗನ ಸಂಪ್ರದಾಯ. ಪು. ೧೮ (ನೇಗಿನಹಾಳ ಪ್ರಬಂಧಗಳು).
೪. ಗಣೇಶ್ ಕೆ.ಆರ್, ಶೇಷಶಾಸ್ತ್ರಿ ಆರ್, (ಸಂ), ಆಂಧ್ರಪ್ರದೇಶದ ಕನ್ನಡ ಶಾಸನಗಳು, ಪು. ೨೧೩. (ಕ.ವಿ.ವಿ ಶಾಸನ ಸಂಪುಟ-೫).
೫. ಕೊಟ್ರಶೆಟ್ಟಿ ಎಂ.ಜಿ.(ಸಂ), ಜಾನಪದ ಸಾಹಿತ್ಯ ದರ್ಶನ. (ಆಂಧ್ರಪ್ರದೇಶದಲ್ಲಿ ಮೈಲಾರ ಸಂಪ್ರದಾಯಗಳು). ಪು. ೧೧೧.

೬. ಅದೇ. ಪು. ೧೧೨.

೭. ಹಾಲಪ್ಪ ಲಿಂಗದಹಳ್ಳಿ, ಬಳ್ಳಾರಿ ಪರಿಸರದ ಹಾಲುಮತ ದೈವಗಳು, ಪು. ೧೮..

೮. ಹಾಡಿದವರು: ಪೂಜಾರಿ ದೊಡ್ಡಬಸಪ್ಪ, ವಯಸ್ಸು ೭೫, ಬಲ್ಲೂರು.

೯. ದೇವರ ಕೊಂಡಾರೆಡ್ಡಿ, (ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ ಬಳ್ಳಾರಿ ಜಿಲ್ಲೆ, ಪು. ೧೩೩.

೧೦. ಅದೇ, ಪು. ೧೩೪.

೧೧. ಹಾಲಪ್ಪ ಲಿಂಗದಹಳ್ಳಿ, ಬಳ್ಳಾರಿ ಪರಿಸರದ ಹಾಲುಮತ ದೈವಗಳು ಪು. ೧೬೮.

೧೨. ಹಾಲುಮತ ವ್ಯಾಸಂಗ-೫, ಸಮ್ಮೇಳನಾಧ್ಯಕ್ಷ ಭಾಷಣ, ಪು. ೧೨-೧೩.

೧೩. ಅದೇ-ಪು. ೧೩.

೧೪. ಸಿದ್ಧರಾಮ 'ಶಿವಯೋಗಿ'ಯಾದ ರೇವಣಸಿದ್ಧನನ್ನು 'ಶಿವಾಚಾರ್ಯ' ಮಾಡಿದರು. ಲೇಖನ ನೋಡಿ(ಲಿಂಗಾಯತ ೧-೪).

೧೫. ಹಾಡಿದವರು; ಸಿದ್ಧಲಿಂಗಯ್ಯಸ್ವಾಮಿ ಒಡೆಯರು, ವಯಸ್ಸು, ೬೮, ವೇಪಲಪರ್ತಿ, ಬ್ರಹ್ಮಸಮುದ್ರಂ ಮಂಡಲ.

೧೬. ಬಿರಾದಾರ ಬಿ.ಜಿ., ಕುರುಬರ ಗುರು ಒಡೆಯರು: ಸಾಂಸ್ಕೃತಿಕ ಅಧ್ಯಯನ, ಪು. ೧೧೬.

೧೭. ಚಂದ್ರಕಾಂತ ಬಿಜ್ಜರಗಿ, ಕುರುಬರ ಹೆಜ್ಜೆಗಳು, ಪು. ೩೮೦.

## ಅಧ್ಯಾಯ ಐದು

# ಗಡಿನಾಡ ಕುರುಬ ಸಮುದಾಯ: ಇತರ ಸಮುದಾಯಗಳೊಂದಿಗಿನ ತೌಲನಿಕ ಅಧ್ಯಯನ

ಭಾರತೀಯ ಸಾಮಾಜಿಕ ವ್ಯವಸ್ಥೆ ಸಂಕೀರ್ಣವಾದುದು. ಇಲ್ಲಿ ಸಾವಿರಾರು ಸಮುದಾಯಗಳು, ಪಂಗಡಗಳು, ಒಳಪಂಗಡಗಳು ತಮ್ಮವೇ ಆದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಚಹರೆಗಳೊಂದಿಗೆ ಜೀವಿಸುತ್ತ ಬಂದಿವೆ; ಬರುತ್ತಲಿವೆ. ಈ ಪರಂಪರೆಯ ಚಹರೆಗಳು ಪ್ರತಿ ಸಮುದಾಯಗಳ ಮಧ್ಯೆ ಬಿಡಿಸಲಾರದ ಭಾವನಾತ್ಮಕ ಸಂಬಂಧಗಳನ್ನು ಏರ್ಪಡಿಸಿರುವುದರಿಂದ ಗಟ್ಟಿಯಾದ ಸಾಂಸ್ಕೃತಿಕ ಭಾಂಧವ್ಯಗಳು ಕಾಣಲು ಸಾಧ್ಯವಾಗಿದೆ. ಹಾಗಾಗಿಯೇ ಮಾನವ ಸಂಘಜೀವಿ, ಸಮಾಜಜೀವಿ ಎಂದು ಅರಿಸ್ಟಾಟಲರು ಹೇಳಿದ ಮಾತು ಭಾರತದಲ್ಲಿ ಇಂದಿಗೂ ಪ್ರಸ್ತುತವೆನಿಸುತ್ತದೆ. ಅಂದರೆ ಸಮುದಾಯವೊಂದು ತನ್ನ ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡು ಬರಲು ಆಯಾ ಪರಿಸರದಲ್ಲಿರುವ ಇತರ ಸಮುದಾಯಗಳ ಸಹಕಾರ ಅತ್ಯಗತ್ಯವಾಗಿರುತ್ತದೆ. ಪ್ರಪಂಚದ ಯಾವ ರಾಷ್ಟ್ರಗಳಲ್ಲಿಯೂ ಕಾಣದ ಈ ಸಾಂಸ್ಕೃತಿಕ ಭಾಂದವ್ಯ ಭಾರತದಲ್ಲಿದೆ. ಆದುದರಿಂದಲೇ ವಿವಿಧತೆಯಲ್ಲಿ ಏಕತೆಯನ್ನು ಹೊಂದಿರುವ ರಾಷ್ಟ್ರವೆಂದು ಕರೆಯುವುದು. ಇಂದು ವಿವಿಧತೆಯಲ್ಲಿ ಏಕತೆ ಎಂಬ ಧೋರಣೆಯು ಅನೇಕ ಅರ್ಥಗಳಲ್ಲಿ ಬಳಕೆಯಾಗುತ್ತಿದೆ. ಆ ಚರ್ಚೆಗೆ ಹೋಗದೇ ಸಮುದಾಯಗಳ ಮಧ್ಯೆ ಸಾಂಸ್ಕೃತಿಕ ಕೊಳು–ಕೊಡು ವಿಷಯಗಳನ್ನು ಅಧ್ಯಯನಕ್ಕೆ ಆಯ್ದುಕೊಂಡ ಗಡಿನಾಡಿನಲ್ಲಿ ನೆಲೆಸಿರುವ ಕುರುಬ ಸಮುದಾಯವನ್ನು ಮುಖ್ಯವಾಗಿಟ್ಟುಕೊಂಡು ಇತರ ಸಮುದಾಯಗಳೊಂದಿಗೆ ಹೊಂದಿರುವ ತೌಲನಿಕ ಮತ್ತು ಸಾಂಸ್ಕೃತಿಕ ಸಂಬಂಧಗಳಷ್ಟೇ ಚರ್ಚೆಗೆ ಒಳಪಡಿಸಲಾಗಿದೆ.

ಅದಕ್ಕಿಂತಲೂ ಮೊದಲು ಈ ಸಮುದಾಯದ ಒಳಗಿನ ತೌಲನಿಕ ಅಂಶಗಳನ್ನು ಕುರಿತು ಚರ್ಚಿಸಿ ಮುಂದೆ ವಿಷಯಕ್ಕೆ ಬರುವುದು ಸೂಕ್ತವೆನಿಸುತ್ತದೆ. ಹಾಗಾಗಿ ಕುರುಬ ಸಮುದಾಯದೊಳಗಿನ

ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಸಂಬಂಧಗಳನ್ನು ಮೊದಲು ಚರ್ಚೆಗೆ ಒಳಪಡಿಸಲಾಗಿದೆ. ಭಾರತದಾದ್ಯಂತ ವಿವಿಧ ಹೆಸರುಗಳಿಂದ ಕರೆಯುವ ಕುರುಬ ಸಮುದಾಯವನ್ನು ಕುರಿತು ಪ್ಪಿ.ಆರ್. ಹನುಮಂತಯ್ಯ, ಶಂಬಾ ಜೋಶಿ, ಎಂ.ಎಂ. ಕಲಬುರ್ಗಿ, ಎಫ್.ಟಿ. ಹಳ್ಳಿಕೇರಿ, ಕೆ.ಎಂ. ಮೇತ್ರಿ, ಬಿ.ಜಿ. ಬಿರಾದಾರರನ್ನು ಒಳಗೊಂಡಂತೆ ಅನೇಕ ವಿದ್ವಾಂಸರು ಕುರುಬರು ಆರ್ಯರೋ-ದ್ರಾವಿಡರೋ ಎಂಬ ಪ್ರಶ್ನೆಗಳನ್ನಿಟ್ಟುಕೊಂಡು ಚರ್ಚಿಸಿದ್ದಾರೆ. ಸಾಮಾಜಿಕ, ಧಾರ್ಮಿಕ ವಿಧಿ-ವಿಧಾನ, ನಂಬುಗೆ ಆಚರಣೆಗಳನ್ನು ಅಧ್ಯಯನಕ್ಕೆ ಒಳಪಡಿಸಿ ಮೂಲ ದ್ರಾವಿಡ ಜನಾಂಗಕ್ಕೆ ಸೇರಿದವರೆಂದೇ ಬಹುತೇಕ ವಿದ್ವಾಂಸರು ಹೇಳಿರುವರು. ಈ ಎಳೆಯನ್ನು ಮಾನದಂಡವಾಗಿಟ್ಟು ಕೊಂಡು ಗಡಿನಾಡ ಪರಿಸರದಲ್ಲಿ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಪೂರಕವಾಗಿಯೇ ಆಕರಗಳು ದೊರೆತಿವೆ. ಕೆಲವೇ ಹಳ್ಳಿಗಳಲ್ಲಿ ಮಾತ್ರ ಈ ಸಮದಾಯ ವೈಷ್ಣವ ಆರಾಧನೆ ಮಾಡುವುದು ಕಂಡುಬರುತ್ತದೆ. ಉಳಿದಂತೆ ಸಿಗುವುದೆಲ್ಲ ಶೈವಾರಾಧನೆ. ಅಂದರೇ ಬೀರಪ್ಪ, ಮಲ್ಲಯ್ಯ, ರೇವಣಸಿದ್ಧ, ಬನಶಂಕರಿ, ಯಲ್ಲಮ್ಮ, ಮಾಳವ್ವ ಮುಂತಾದ ದೈವಗಳ ಆರಾಧನೆ.

ಮುಖ್ಯವಾಗಿ ಕಂಡುಬರುವ ಸಂಗತಿಯೆಂದರೆ ಸಮುದಾಯ ಸಂಖ್ಯಾದೃಷ್ಟಿಯಿಂದ. ಬೆಳೆದು ಬಂದಂತೆಲ್ಲ ಹಿರಿಯರು ತಮ್ಮ ಪರಂಪರೆಯನ್ನು ಉಳಿಸಿ-ಬೆಳೆಸುವ ಜೊತೆಗೆ ಗುರುತಿಸುವಿಕೆಯ ಸಲುವಾಗಿ ಕುರುಬರನ್ನು ಬೆಡಗು/ಗೋತ್ರಗಳಾಗಿ ವಿಂಗಡಿಸಿದರು. ಇಂದು ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ೫೦೦ಕ್ಕೂ ಅಧಿಕವಾದ ಕುರುಬರ ಬೆಡಗುಗಳಿವೆ. ಅಧ್ಯಯನಕ್ಕೆ ಆಯ್ದುಕೊಂಡ ಗಡಿ ಪರಿಸರದಲ್ಲಿ ೨೦೦ಕ್ಕೂ ಹೆಚ್ಚು ಬೆಡಗುಗಳಿವೆ. ಒಂದೊಂದು ಬೆಡಗು ಜನಸಂಖ್ಯೆ ಬೆಳೆದಂತೆಲ್ಲ ಅವುಗಳಲ್ಲಿಯೇ ಕವಲುಗಳಾಗಿ ಬೆಡಗುಗಳಾಗಿವೆ. ಅವು ತಮ್ಮ ಮೂಲ ಬೆಡಗಿನ ರೀತಿ-ನೀತಿಗಳನ್ನು ಚಾಚುತಪ್ಪದೇ ಪಾಲಿಸಿಕೊಂಡು ಬರುತ್ತಿವೆ. ಅಂತಹ ಬೆಡಗುಗಳು ಇಂದಿಗೂ ಸೋದರ ಸಂಬಂಧಿ ಬೆಡಗುಗಳಾಗಿದ್ದು, ವೈವಾಹಿಕ ಸಂಬಂಧಗಳನ್ನು ಬೆಳೆಸುವಂತಿಲ್ಲ. ಈ ಪರಿಸರದಲ್ಲಿ ದೊರೆಯುವ ಅಣ್ಣ-ತಮ್ಮಂದಿರಂದು ಗುರುತಿಸಿಕೊಳ್ಳುವ ಬೆಡಗುಗಳು ಹೀಗಿವೆ.

**ಸೋದರರು**

೧. ಭಂಡಾರದ ಕುರುಬರು

೨. ಬಂಡೆ ಬನ್ನೆಲಾರು

೩. ಜಂಬೆ ಬನ್ನೆಲಾರು

೪. ಐಗಳೇರು

೫. ಮೂರುಣ್ಗೆಯರು

೧. ಗೋಸೆಲಾರು ಕುರುಬರು

೨. ಸುಲುಪನ್ ಕುರುಬರು

೩. ಗೌಡ್ಲಾರು ಕುರುಬರು

೧. ಬೆಲ್ಲದ ಕುರುಬರು

೨. ಬೆಳ್ಳಿ ಕುರುಬರು

೩. ಬ್ಯಾಲದ ಕುರುಬರು

೧. ಉಲ್ಲೇನ ಕುರುಬರು

೨. ಹೆಬ್ಬಲಿ ಕುರುಬರು

೩. ಬಿಜ್ಜನ ಕುರುಬರು

೧. ಬಿಲ್ಲನ ಕುರುಬರು

೨. ಸೆಜಲ ಕುರುಬರು

೩. ಬನ್ನೆಲಾರು

೧. ಎಡವಲಾರು

೨. ಕೋಟೆಲಾರು

೧. ಗೋಸೆಲಾರು

೨. ಹಾಲು ಕುರುಬರು

೩. ತುಪ್ಪದ ಕುರುಬರು

೪. ಕೆಂಚಲಾರು

೧. ಅಳ್ಳೇನು ಕುರುಬರು

೨. ಗೌಡ ಕುರುಬರು

೩. ಬಾಗನ ಕುರುಬರು

೪. ಮಜ್ಜಿಗೆ ಕುರುಬರು

೫. ಹಾಲು ಕುರುಬರು

೧. ತುರುಬಿನವರು

೨. ಬಂಡಾರದವರು

೧. ರಾಯಲ ಕುರುಬರು

೨. ಸುಲುಪನ ಕುರುಬರು

ಮುಂತಾದ ಬೆಡಗುಗಳವರು ಮೂಲದಲ್ಲಿ ಒಂದೇ ಆಗಿದ್ದು, ಕಾಲಾಂತರದಲ್ಲಿ ಕವಲೊಡೆದು ಬೇರೆಯ ಹೆಸರಿನೊಂದಿಗೆ ಗುರುತಿಸಿಕೊಳ್ಳುತ್ತಾರೆ. ಆದರೂ ಇವರಲ್ಲಿ ವೈವಾಹಿಕ ಸಂಬಂಧಗಳನ್ನು ಬೆಳೆಸದಿರುವುದು ಕಂಡುಬರುತ್ತದೆ. ಇವುಗಳಲ್ಲದೇ ಒಂದೇ ಬೆಡಗು ನಾನಾ ಹೆಸರುಗಳಿಂದ ಕರೆಯಿಸಿಕೊಳ್ಳುವ ನಿದರ್ಶನಗಳು ದೊರೆಯುತ್ತವೆ. ಬಾಗನ ಕುರುಬರಲ್ಲಿ ಕಂಚಿನ ಬಾಗನ ಕುರುಬರು, ಮಣ್ಣು ಬಾಗನ ಕುರುಬರು ಎಂದು, ಮಜ್ಜಿಗೆ ಕುರುಬರು ನೀರುಮಜ್ಜಿಗೆ, ಗಟ್ಟಿಮಜ್ಜಿಗೆ ಕುರುಬರು, ಬನ್ನೆಲಾರು–ಬಂಡೆ ಬನ್ನೆಲಾರು, ಜಂಬೆ ಬನ್ನೆಲಾರು ಎಂಬುದಾಗಿ ಕರೆಯಿಸಿಕೊಳ್ಳುತ್ತಾರೆ.

ಹೀಗೆ ಕವಲಾದ ಬೆಡಗುಗಳಲ್ಲಿ ಒಂದಾದ ಮಜ್ಜಿಗೆ ಕುರುಬರು ಭಾಗವಾದ ಬಗೆಯನ್ನು ತಿಳಿಸುವ ಐತಿಹ್ಯವೊಂದು ಹೀಗಿದೆ. ಮಜ್ಜಿಗೆ ಕುರುಬ ಬೆಡಗಿನ ಅಣ್ಣ–ತಮ್ಮ ದಿನಾಲು ಉಳುಮೆ ಮಾಡಲು ಹೊಲಕ್ಕೆ ಹೋಗುತ್ತಿದ್ದರು. ಅವರಿಗೆ ಬುತ್ತಿಗಂಟನ್ನು ತೆಗೆದುಕೊಂಡು ಬರುತ್ತಿದ್ದ ತಾಯಿಯು ಹಿರಿಯ ಮಗನಿಗೆ ನೀರುಮಜ್ಜಿಗೆಯನ್ನು, ಚಿಕ್ಕ ಮಗನಿಗೆ ಗಟ್ಟಿಮಜ್ಜಿಗೆಯನ್ನು ಊಟಕ್ಕೆ ಬಡಿಸುತ್ತಿದ್ದಳು. ಆ ಸೋದರರೇ ಕಾಲಾಂತರದಲ್ಲಿ ನೀರುಮಜ್ಜಿಗೆ, ಗಟ್ಟಿಮಜ್ಜಿಗೆ ಕುರುಬರೆಂದು ಕರೆಯಿಸಿಕೊಳ್ಳುವರು.

ಒಂದೇ ಒಕ್ಕಲಿನ ಅಣ್ಣ–ತಮ್ಮಂದಿರಾದ ಇವರ ದೈವದ ವಿಷಯಕ್ಕೆ ಬಂದಾಗ ಬೇರೆ ಬೇರೆ ದೈವಗಳಿಗೆ ನಡೆದುಕೊಳ್ಳುವುದನ್ನು ಕಾಣಬಹುದು. ಉದಾಹರಣೆಗೆ ಹಾಲು, ಮಜ್ಜಿಗೆ ಕುರುಬರ ಸೋದರರೆಂದು ಗುರುತಿಸಿಕೊಳ್ಳುವ ಗೌಡ ಕುರುಬರು ಚನ್ನಕೇಶವಸ್ವಾಮಿಯನ್ನು ಆರಾಧಿಸುವರು. ಅಂದರೆ ಹಾಲು, ಮಜ್ಜಿಗೆ, ಅಳೇನ ಕುರುಬರು ಶೈವಾರಾಧಕರಾದರೇ ಗೌಡ ಕುರುಬರು ವೈಷ್ಣವ ಆರಾಧಕರು. ಅದರಂತೆಯೇ ಈ ಪರಿಸರದಲ್ಲಿ ಅತೀ ದೊಡ್ಡ ಬೆಡಗುಗಳು ಒಂದಕ್ಕಿಂತ ಹೆಚ್ಚು ದೈವಗಳನ್ನು ಆರಾಧಿಸುವುದನ್ನು ಕಾಣಬಹುದು. ಅವುಗಳಲ್ಲಿ ಬನ್ನೆಲಾರು ಎಂಬ ಒಕ್ಕಲಿನವರು ನರಗಲ್ಲಪ್ಪ, ಕುರುಡಿ ಬೀರಪ್ಪ, ಆಗಲೂರಪ್ಪ, ನಂದೆಳ್ಳಪ್ಪ ಎಂಬಿತ್ಯಾದಿ ಹೆಸರುಗಳಿಂದ ಬೀರಪ್ಪನನ್ನು ವಿವಿಧ ಪ್ರದೇಶಗಳಲ್ಲಿ ಆರಾಧಿಸುವರು. ಹಾಗಾಗಿಯೇ ಬನ್ನೆಲಾರು ಬೆಡಗಿನವರನ್ನು ನೂರಾರು ದೇವರುಗಳ ಒಕ್ಕಲೆಂದು ಕರೆಯುತ್ತಾರೆ. ಬ್ಯಾಲದ ಕುರುಬರು ಬಚ್ಚಲ ಕಲ್ಲಪ್ಪ, ಕಾಡುಸಿದ್ಧಪ್ಪ ದೈವಗಳನ್ನು, ಮಲ್ಲೆಲಾರು ಉಜ್ಜಿನಪ್ಪ, ಯಡವಾಲಪ್ಪ, ಸೋಮಲಿಂಗೇಶ್ವರ, ನನ್ನೂರಪ್ಪ, ಕೊರಕೊಡಪ್ಪ, ಕೆಂಚಪ್ಪ ದೇವರುಗಳನ್ನು, ದೊಮ್ಮೆಲಾರು ದೊಡ್ಡ ವಸಿಕೇರಪ್ಪ, ಸಣ್ಣ ವಸಿಕೇರಪ್ಪ ದೈವಗಳನ್ನು, ಬುಲ್ಲೇನ ಕುರುಬರು ತಗರ ಕುಂಟೆಯ ಪೆದ್ದಯ್ಯಸ್ವಾಮಿ, ಈರಣ್ಣಸ್ವಾಮಿ ದೈವಗಳನ್ನು ಆರಾಧಿಸುವರು. ಹೀಗೆ ಒಂದಕ್ಕಿಂತ ಹೆಚ್ಚು ದೈವಗಳನ್ನು ಆರಾಧಿಸುವ ಬೆಡಗುಗಳು ಈ ಪರಿಸರದಲ್ಲಿವೆ. ಗಮನಿಸಬೇಕಾದುದೆಂದರೇ ಆ ದೈವಗಳೆಲ್ಲ ಬೀರಪ್ಪನ ಪರ್ಯಾಯ ಹೆಸರುಗಳೇ ಆಗಿವೆ. ಉಳಿದಂತೆ ಆಯಾ ಬೆಡಗಿಗೆ ಸಂಬಂಧಿಸಿದ ದೈವಗಳಿರುವುದು ನೋಡಬಹುದು. ಉದಾಹರಣೆಗೆ ಸುಲುಪನ್

ಕುರುಬರಿಗೆ ಕಾಮಸಮುದ್ರದ ಕರಿಯಣ್ಣ ದೇವರು, ಸೆಜಲ ಕುರುಬರಿಗೆ ಚನ್ನಿಗ ದೇವರು, ಗೌಡನ ಕುರುಬರಿಗೆ ಚನ್ನಕೇಶವ ದೇವರು, ಹಾಲು ಕುರುಬರಿಗೆ ಸಿರಿವಾಳದಪ್ಪ, ಮೊಂಡು ಕುರುಬರು, ಕಾಟ್ಟೆ ಕರಿಯಣ್ಣ, ರಾಯಲ ಕುರುಬರಿಗೆ ಮೈಲಾರಲಿಂಗಸ್ವಾಮಿ, ಬೀರ್ಲಾರು ಬೆಡಗಿಗೆ ಬಲ್ಲೂರಪ್ಪ, ಇಕ್ಕಳ ಕುರುಬರು ಆನೆಗುಂದಿ ಬೀರಪ್ಪ ಮುಂತಾದ ಬೆಡಗು ಮತ್ತು ದೈವಗಳನ್ನು ಹೆಸರಿಸಬಹುದು. ಅದರಂತೆಯೇ ಎರಡು ಬೆಡಗುಗಳು ಒಂದೇ ದೈವವನ್ನು ಆರಾಧಿಸುವ ನಿದರ್ಶನಗಳು ಸಾಕಷ್ಟು ದೊರೆಯುತ್ತವೆ. ತುರುಬಿನವರು, ಬಂಡಾರದವರು, ನಾಗಲಪುರದಯ್ಯನನ್ನು, ಕೆಂಚಲಾರು, ಎಕ್ಕೆಲೋರು ರಾಕೆಟ್ಲಪ್ಪನನ್ನು ಆರಾಧಿಸುವರು.

ಕುರುಬರಿರುವ ಪ್ರತಿ ಗ್ರಾಮಗಳಲ್ಲಿಯೂ ಅವರ ಆರಾಧ್ಯ ದೈವಗಳಿವೆ. ಊರ ಹೊರಗಿನ ಗುಡಿಯನ್ನು ಲಿಂಗದ ಗುಡಿಯೆಂದು ಕರೆಯುವರು. ಅಲ್ಲಿಗೆ ದಸರ-ಯುಗಾದಿಗಳಂಥ ವಿಶೇಷ ದಿನಗಳಲ್ಲಿ ಮಾತ್ರ ಪೂಜೆ ಸಲ್ಲಿಸಲು ತೆರಳುವರು. ಕೆಲವೆಡೆ ಈ ಲಿಂಗದ ಗುಡಿಗಳು ನ್ಯಾಯ ತಿರ್ಮಾನದ ಕಟ್ಟೆಮನೆಗಳಾಗಿಯೂ ಕಾರ್ಯ ನಿರ್ವಹಿಸುತ್ತವೆ. ಅಲ್ಲಿ ಉದ್ಭವ ಲಿಂಗ ಅಥವಾ ಪ್ರತಿಷ್ಠಾಪಿಸಿದ ಲಿಂಗಗಲಿರುತ್ತವೆ. ಅದು ಬೀರಪ್ಪನ ಪ್ರಾಚೀನ ನೆಲೆಯಾಗಿರುತ್ತದೆ. ಇನ್ನೂ ಊರಲ್ಲಿನ ದೇವಾಲಯವು ಅಲೆಮಾರಿತನವನ್ನು ಸಂಪೂರ್ಣವಾಗಿ ನಿಲ್ಲಿಸಿ, ಜನರೊಂದಿಗೆ ಊರಲ್ಲಿ ಶಾಶ್ವತವಾಗಿ ನೆಲೆಸಿದ ನಂತರ ಕಟ್ಟಿಸಿಕೊಂಡವುಗಳು. ಇಲ್ಲಿ ಪ್ರತಿದಿನ ಪೂಜೆ-ಪುನಸ್ಕಾರಗಳು ನಡೆಯುತ್ತದೆ. ಇಲ್ಲಿರುವ ದೈವಗಳು ಬೆಳ್ಳಿಯ ಪಾಲಕಿ ದೇವರುಗಳಾಗಿರುವುದು ಹೆಚ್ಚಾಗಿ ಕಂಡುಬರುತ್ತವೆ. ಬೆಳ್ಳಿಯ ಮೂರ್ತಿಶಿಲ್ಪವನ್ನು ಹೊಂದಿರುವ ದೈವದ ಒಕ್ಕಲಿನ ಅಣ್ಣ-ತಮ್ಮಂದಿರು ಬೆಳ್ಳಿಯ ಆಭರಣಗಳನ್ನು ಧರಿಸುವಂತಿಲ್ಲ. ಹಾಗೆಯೇ ಇವರನ್ನು ಮದುವೆಯಾಗಿ ಬರುವ ಸ್ತ್ರೀಯರು ಮದುವೆಯ ನಂತರ ಬೆಳ್ಳಿಯ ಯಾವುದೇ ಆಭರಣಗಳನ್ನು ಧರಿಸುವಂತಿಲ್ಲ ಎಂಬ ಅಲಿಖಿತ ನಿಯಮಗಳನ್ನು ಚಾಚುತಪ್ಪದೇ ಪಾಲಿಸಿಕೊಂಡು ಬರುತ್ತಿದ್ದಾರೆ.

ಕುರುಬರು ವೈವಾಹಿಕ ಸಂಬಂಧಗಳನ್ನು ಬೆಳೆಸುವಾಗ ಕೆಲವು ನಿಯಮಗಳನ್ನು ತಪ್ಪದೇ ಪಾಲಿಸುವರು. ಉದಾಹರಣೆಗೆ ಮಿಂಚು ಕುರುಬರು ಎಂಬ ಬೆಡಗಿನೊಂದಿಗೆ ಕೆಲ ಬೆಡಗುಗಳು ಸಂಬಂಧ ಬೆಳೆಸುವುದಿಲ್ಲ. ಒಂದು ವೇಳೆ ಸಂಬಂಧ ಬೆಳೆಸಿದರೂ ಸಾಮಾಜಿಕ, ಧಾರ್ಮಿಕ ಆಚರಣೆಗಳಲ್ಲಿ ಪರಸ್ಪರರು ಬಾಗವಹಿಸುವುದಿಲ್ಲ. ಅವರಲ್ಲಿ ಕೇವಲ ಊಟೋಪಚಾರಗಳು ಮಾತ್ರ ನಡೆಯುತ್ತದೆ. ಇಂಥ ಸಂಬಂಧಗಳು ಅಲ್ಲಲ್ಲಿ ಕಂಡುಬರುತ್ತವೆ. ಇನ್ನೂ ಒಡೆಯರು ಕುರುಬರೊಂದಿಗೆ ಸಂಬಂಧ ಬೆಳೆಸುವರಾದರೂ ಮದುವೆ ನಂತರ ಒಡೆಯರ ಮನೆಯ ಹೆಣ್ಣುಮಗಳು ಸಾಮಾನ್ಯ ಕುರುಬರ ಹೆಣ್ಣಾಗಿಯೂ, ಒಡೆಯನ ಮನೆಗೆ ಮದುವೆಯಾಗಿ ಹೋದ ಕುರುಬರ ಹೆಣ್ಣುಮಗಳು ಒಡೆಯರಮ್ಮನಾಗಿ ತವರುಮನೆಯವರನ್ನು ಒಳಗೊಂಡಂತೆ ಎಲ್ಲರಿಗೂ ಗುರುವಾಗುತ್ತಾಳೆ.

ಈ ಭಾಗದಲ್ಲಿನ ಕುರುಬರು ತಮ್ಮ ದೈವಗಳಿಗೆ ೫, ೭, ೯ ವರ್ಷಗಳಿಗೊಮ್ಮೆ ದೊಡ್ಡದೇವರ ಜಾತ್ರೆ ನಡೆಸುವರು. ಆ ಸಮಯದಲ್ಲಿ ಹೊಸ ಪೂಜಾರಿಯ ನೇಮಕ ಮಾಡಲಾಗುತ್ತದೆ. ಆಗ ಅಕ್ಕಪಕ್ಕದ ಹಳ್ಳಿಗಳ ದೈವಗಳನ್ನು ಭಂಡಾರಕ್ಕೆ ಕರೆಯುವರು. ಬಂದ ದೇವರುಗಳನ್ನು ಮುಂದೆ ಕೂರಿಸಿ, ಹಂಪೆಯ ತುಂಗಭದ್ರ ನದಿಯ ತಿರುಗುಮುಗುಡುವಿನ ಹತ್ತಿರ ಬಂದು ದೈವಕ್ಕೆ ಜೀವಕಾಳು ತುಂಬಿಸಿ, ಪೂಜಾರಿಯಾಗುವ ಹುಡುಗನನ್ನು ಶುದ್ಧಿ ಮಾಡಿಕೊಂಡು ಹೋಗುವ ಪದ್ಧತಿಯೂ ಹಿಂದಿನಿಂದಲೂ ಪರಿಸರದ ಕುರುಬರಲ್ಲಿದೆ. ಇವರಂತೆಯೇ ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಬಹುಕಾಲ ದೇವರನ್ನು ಮಾಡದೇ ಬಿಟ್ಟು ಸಂದರ್ಭದಲ್ಲಿ ಮತ್ತೆ ದೇವರು ಮಾಡಿದಾಗ ಇಲ್ಲಿಗೆ ಬಂದು ದೇವರನ್ನು ಶುದ್ಧಿ ಮಾಡಿ, ಜೀವಕಾಳು ತುಂಬಿಸಿಕೊಂಡು ಹೋಗುವ ಪರಂಪರೆ ಇರುವುದನ್ನು ಗಮನಿಸಬಹುದು. ಆದರೆ ಹಲಕುಂದಿಯು ಸೇರಿದಂತೆ ಕೆಲ ಹಳ್ಳಿಗಳಲ್ಲಿರುವ ಕುರುಬ ದೈವಗಳ ಜಾತ್ರೆಯ ಸಮಯದಲ್ಲಿ ಹಂಪೆಗೆ ಬರುವುದಿಲ್ಲ. ಏಕೆಂದರೆ ಆಯಾ ದೇವಾಲಯಗಳಿಯೇ ನೂರಾರು ಲಿಂಗಗಳಿವೆ. ಹಂಪೆಗಿಂತಲೂ ತಮ್ಮ ದೇವರು ಶಕ್ತಿಯುತವಾದುದೆಂಬ ನಂಬುಗೆಯ ಜೊತೆಗೆ ಹಂಪೆಗೆ ಹೋಗಿ ಬಂದರೇ ಒಳಿತಾಗುವುದಿಲ್ಲ ಎಂಬ ಪ್ರತೀತಿ ಅವರಲ್ಲಿದೆ. ಹಾಗಾಗಿ ದ್ಯಾವರ ಮಾಡುವಾಗ ಹಂಪೆಗೆ ಹೋಗದೇ ಊರ ಪಕ್ಕದಲ್ಲಿನ ಹಳ್ಳ ಅಥವಾ ಬಾವಿಗೆ ಹೋಗಿ ದೇವರ ಆಚರಣಾ ಕಾರ್ಯಕ್ರಮಗಳನ್ನು ಮಾಡುತ್ತಾರೆ.

ಚಳ್ಳಕೆರೆ ತಾಲೂಕಿನ ಚೌಳೂರು, ಪಿ. ಮಹದೇವಪುರ, ಪಗಡಲಬಂಡೆ, ಕಾಮಸಮುದ್ರ, ಮೊಳಕಾಲ್ಮೂರು ತಾಲೂಕಿನ ಮೊಗಲಹಳ್ಳಿ, ಕೊಂಡ್ಲಹಳ್ಳಿ ಕಡೆ ಉಡೇವುಗಳಂಥ ಗ್ರಾಮಗಳಲ್ಲಿ ದಸರೆಯಲ್ಲಿ ಊರಲ್ಲಿನ ಎಲ್ಲ ಬೆಡಗಿನವರು ಸೇರಿ ದೇವಾಲಯದಲ್ಲಿಯೇ ಹಿರಿಯರ ಹಬ್ಬವನ್ನು ಆಚರಿಸುವರು. ಈ ಪರಂಪರೆಯೂ ರಾಯದುರ್ಗ, ಗುಮ್ಮಗಟ್ಟ, ಬ್ರಹ್ಮಸಮುದ್ರಂ ಮಂಡಲಗಳಲ್ಲಿಯೂ ಕಂಡುಬರುತ್ತದೆ. ಹೀಗೆ ಮಾಡುವ ಉದ್ದೇಶ ತಾವೆಲ್ಲರೂ ಒಂದೇ ಮೂಲಕ್ಕೆ ಸೇರಿದವರೆಂಬ ಭಾವನೆಯನ್ನು ಒಂದೆಡೆ ಕಲೆತುತುಂಬುವುದಾಗಿದೆ. ಇನ್ನೂ ಕೆಲವೆಡೆಯ ಕುರುಬರಲ್ಲಿ ಮೀಸಲು ಹಾಲು ಅರ್ಪಿಸುವಂತಹ ಆಚರಣೆಗಳಿವೆ. ಊಟೋಪಚಾರಕ್ಕೆ ಸಂಬಂಧಿಸಿದಂತೆಯೂ ಸಾಕಷ್ಟು ನಿಷಿದ್ಧಗಳಿವೆ. ಕೆಲವರು ನವಣೆಯನ್ನು ತಿನ್ನುವಂತಿಲ್ಲ. ಮತ್ತೆ ಕೆಲವೆಡೆ ಹೊಸದಾಗಿ ಬೆಳೆದ ಕಾಳುಗಳನ್ನು(ತೊಗರಿ, ಹುರುಳಿ, ಹಲಸಂದಿ) ಕಾಳುಹಬ್ಬ(ಗುಗ್ಗರಿ ಹಬ್ಬ) ಮಾಡುವವರೆಗೂ ತಿನ್ನುವಂತಿಲ್ಲ. ಇಂತಹ ಸಾಕಷ್ಟು ವಿಷಯಗಳನ್ನು ಅವರಲ್ಲಿಯೇ ನಡೆಯುತ್ತವೆ. ಅವುಗಳ ಸಂಕ್ಷಿಪ್ತ ಪರಿಚಯವನ್ನು ಮಾತ್ರ ಮಾಡಲಾಗಿದೆ.

ಇನ್ನೂ ಕುರುಬ ಸಮುದಾಯ ಇತರ ಸಮುದಾಯಗಳೊಂದಿಗೆ ಹೊಂದಿರುವ ತೌಲನಿಕತೆಯನ್ನು ಗಮನಿಸುವುದಾದರೇ ಸಮುದಾಯವೊಂದು ಏಕಾಂಗಿಯಾಗಿ ಜೀವಿಸಲಾರದು. ಅದಕ್ಕೆ ಸಮಾಜದಲ್ಲಿನ

ಇತರ ಸಮುದಾಯಗಳ ಸಹಕಾರ ಅತ್ಯಗತ್ಯ. ಅದನ್ನು ಮುಖ್ಯವಾಗಿಟ್ಟುಕೊಂಡು ಕುರುಬ ಸಮುದಾಯ ಇತರ ಸಮುದಾಯಗಳೊಂದಿಗೆ ಹೊಂದಿರುವ ಸಂಬಂಧಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಕುರುಬರು-ಲಿಂಗಾಯತರು**

ಪ್ರಾಚೀನ ಕರ್ನಾಟಕದಲ್ಲಿ ವೈದಿಕ, ಜೈನ ಲಿಂಗಾಯತ-ಈ ಮೂರು ಸಮುದಾಯಗಳು ತಮ್ಮದೇ ಆದ ಸಿದ್ಧಾಂತವನ್ನು ರೂಪಿಸಿಕೊಂಡು ಧರ್ಮಗಳೆನಿಸಿವೆ. ಮಿಕ್ಕಂತೆ ಒಕ್ಕಲಿಗ, ಕುರುಬ, ಬೇಡ, ಗೊಲ್ಲ ಮೊದಲಾದ ಹಿಂದುಳಿದ, ದಲಿತರಂಥ ಅಸ್ಪೃಶ್ಯ ಸಮಾಜಗಳು ಇಂಥ ಯಾವುದೇ ಸಿದ್ಧಾಂತಗಳನ್ನು ರೂಪಿಸಿಕೊಳ್ಳದೇ ಪ್ರಾದೇಶಿಕ ದೇಸಿ ದೈವಗಳನ್ನು ಆರಾಧಿಸುವವರಾಗಿದ್ದು, ಅವು ಕೇವಲ ಸಂಪ್ರದಾಯಗಳೆನಿಸಿವೆ. ವೈದಿಕ ಧರ್ಮ ಅಬ್ರಾಹ್ಮಣರಿಗೆ ಮತಾಂತರ ಮತ್ತು ಮಂತ್ರದೀಕ್ಷೆಯಾಗಲಿ ನೀಡಲಿಲ್ಲ. ಅದರಲ್ಲಿ ಶ್ರೀವೈಷ್ಣವರಲ್ಲಿ ಮಾತ್ರ ಮಂತ್ರಧೀಕ್ಷೆಗೆ ಅವಕಾಶ ನೀಡಲಾಗಿದೆಯಾದರೂ ಮತಾಂತರ ಧೀಕ್ಷೆಯನ್ನಲ್ಲ. ಜೈನಧರ್ಮ ಬ್ರಾಹ್ಮಣರಿಗೆ ಮತಾಂತರ ದೀಕ್ಷೆ ನೀಡಿ ಉಳಿದವರಿಗೆ ಮಂತ್ರದೀಕ್ಷೆ ನೀಡಿದೆ. ಉದಾಹರಣೆಗೆ ಬ್ರಾಹ್ಮಣನಾಗಿದ್ದ ಪಂಪ ಜೈನಧರ್ಮೀಯನಾದ. ಬಳೆಗಾರ ವೃತ್ತಿಯ ರನ್ನ ಮಂತ್ರದೀಕ್ಷೆ ಪಡೆದ ಜೈನಧರ್ಮಿಯನಾದುದನ್ನು ಕಾಣಬಹುದು. ಇದರಿಂದಾಗಿಯೇ ಈ ಎರಡು ಧರ್ಮಗಳು ಮುಂದಿನ ಕಾಲಕ್ಕೆ ಬೆಳೆದುಬರಲು ಸಾಧ್ಯವಾಗಿಲ್ಲ. ೧೨ನೆಯ ಶತಮಾನದ ಲಿಂಗಾಯತ ಧರ್ಮವೂ ಎಲ್ಲ ಜನಸಮುದಾಯಗಳಿಗೂ ಮಂತ್ರದೀಕ್ಷೆ-ಮತಾಂತರ ದೀಕ್ಷೆ ಎರಡನ್ನು ನೀಡುವ ಮುಖೇನ ಸ್ವತಂತ್ರ ಧರ್ಮವೆನ್ನುವಷ್ಟರ ಮಟ್ಟಿಗೆ ಬೆಳೆದುಬಂದಿತು. ಲಿಂಗಾಯತ ಧರ್ಮ ಹಿಂದೂ ಧರ್ಮದ ಒಂದು ಭಾಗವಲ್ಲ ಅದೊಂದು ಸ್ವತಂತ್ರಧರ್ಮ ಎಂಬುದರ ಕುರಿತಾಗಿ ಇತ್ತೀಚೆಗೆ ವಾದ-ವಿವಾದಗಳು ನಡೆಯುತ್ತಿವೆ. ಆ ಚರ್ಚೆಯ ಫಲಿತಗಳ ವಿವರಣೆಗೆ ಹೋಗದೇ ಲಿಂಗಾಯತ-ಕುರುಬ ಸಮುದಾಯಗಳ ನಡುವಿನ ಸಂಬಂಧಗಳನ್ನಷ್ಟೆ ಇಲ್ಲಿ ಹೇಳಲಾಗಿದೆ.

ಮೂಲತಃ ಉತ್ತರ ಕರ್ನಾಟಕದಲ್ಲಿ ದಟ್ಟವಾಗಿದ್ದ ಕುರುಬ ಸಮುದಾಯ ಲಿಂಗಾಯತರೊಂದಿಗೆ ಅತೀ ಬೇಗ ಬೆರೆತುಹೋಯಿತು. ಹಾಗಾಗಿಯೇ ಅಲ್ಲಿಂದ ಪಶುಪಾಲನೆಗಾಗಿ ಮಧ್ಯ ಕರ್ನಾಟಕದತ್ತ ವಲಸೆ ಬಂದ ನಂತರವೂ ಆಚರಣೆಗಳು ಅಲ್ಪ-ಸ್ವಲ್ಪ ವ್ಯತ್ಯಾಸಗಳಿದ್ದರೂ ಹೋಲಿಕೆಗಳು ಒಂದೇ ರೀತಿಯಲ್ಲಿವೆ. ಇದರಿಂದಾಗಿಯೇ "ವೀರಶೈವರಲ್ಲಿ ವೀರಭದ್ರನ ಪುರವಂತರಂತೆ, ಕುರುಬರಲ್ಲಿ ವೀರ(ಈರ)ಗಾರರು ಕಂಡುಬರುತ್ತಾರೆ. ಉತ್ಸವ, ಮಂಗಲ ಕಾರ್ಯಗಳಲ್ಲಿ ಇವರು ತೊಡುವ ವೇಷ, ಹಿಡಿಯುವ ಆಯುಧ, ಹೆಜ್ಜೆ ಹಾಕುವ ಕುಣಿತ, ಸಾರುವ ಘೋಷಣೆಗಳಲ್ಲಿ ಅಂತಹ ವ್ಯತ್ಯಾಸವೇ ಕಂಡುಬರುವುದಿಲ್ಲ. ಜನನ, ಮದುವೆ, ಮರಣ ಇತ್ಯಾದಿ ಸಂಸ್ಕಾರಗಳು ಪರಸ್ಪರ ಹೋಲುತ್ತವೆ. ಮದುವೆ ಮೊದಲಾದ ಸಂದರ್ಭಗಳಲ್ಲಿ ಮಂತ್ರಕ್ಕೆ ಬದಲು ಹಾಡು, ಗದ್ದುಗೆಗಾಗಿ

ಕಂಬಳಿ, ಮರಣದಲ್ಲಿ ಹೂಳುವುದು ಇತ್ಯಾದಿಗಳೆಲ್ಲ ಒಂದೇ ಬಗೆಯಾಗಿವೆ. ಕುರುಬರ ಗುರುಗಳನ್ನು ಒಡೆಯರೆಂದು ಕರೆಯುತ್ತಾರೆ. ಈ ಹೆಸರು ಕೆಲವು ಲಿಂಗಾಯತ ಜಂಗಮ ಕುಟುಂಬಗಳಿಗೂ ಇರುವುದು ಇವೆರಡರ ಸಂಬಂಧವನ್ನು ಸೂಚಿಸುತ್ತದೆ. ಕುರುಬರ ಮಂಗಲಕಾರ್ಯದಲ್ಲಿ ಆ ಸಮಾಜದ ಗುರುಗಳಾದ ಒಡೆಯರು ಪೌರೋಹಿತ್ಯ ವಹಿಸುತ್ತಾರೆ. ಕೆಲವೊಮ್ಮೆ ಲಿಂಗಾಯತ ಜಂಗಮರು ವಹಿಸುತ್ತಾರೆ. ಕುರುಬರಲ್ಲಿನ ಹಂಡೆ ಕುರುಬರು ಲಿಂಗಧಾರಿಗಳು, ವಿಭೂತಿಧಾರಿಗಳು, ಶಾಖಾಹಾರಿಗಳಾಗಿದ್ದು, ಒಂದರ್ಥದಲ್ಲಿ ಲಿಂಗಾಯತರಂತೆ ಬಾಳುತ್ತಿದ್ದಾರೆ."[೧] ರೇವಣಸಿದ್ಧನ ಪೂಜಾರಿಗಳಾದ ಶಾಂತೊಡೆಯರು ಕುರುಬರಲ್ಲಿಯೇ ವೈವಾಹಿಕ ಸಂಬಂಧಗಳನ್ನು ಬೆಳೆಸುವುದು ಕಂಡುಬಂದರೇ, ಸಿದ್ಧರಾಮನ ಅನುಯಾಯಿಗಳಾದ ಮಂಕೊಡೆಯರು ಸಾದಕುರುಬರೊಂದಿಗೆ ಮಾತ್ರವೇ ವೈವಾಹಿಕ ಸಂಬಂಧಗಳನ್ನು ಬೆಳೆಸುವರು. ಇನ್ನೂ ಅಮೋಘಸಿದ್ಧನ ಪರಿವಾರವಾದ ಅಮ್ಮಿಗಿಒಡೆಯರು, ಒಡೆಯ ಮನೆತನಗಳೊಂದಿಗೆ ಮಾತ್ರವೇ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಾರೆ. ಈ ಒಡೆಯರು ಕುರುಬ ಸಮುದಾಯಕ್ಕೆ ಗುರುಗಳು ಆಗಿರುವುದರ ಜೊತೆಗೆ ಶಾಖಾಹಾರಿಗಳಾಗಿದ್ದು, ಅವರು ಸಾಮಾಜಿಕ, ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿಕೊಡುವರು.

ಕುರುಬರು ಆರಾಧಿಸುವ ಬೀರಪ್ಪ, ಮೈಲಾರಲಿಂಗ, ರೇವಣಸಿದ್ಧ, ಸಿದ್ಧರಾಮ, ಅಮೋಘಸಿದ್ಧ, ಮಾಳಿಂಗರಾಯ, ಮಾಯವ್ವ ಮುಂತಾದ ದೈವಗಳ ಚರಿತ್ರೆಯು ಶಿವನ ಅವತಾರ ಅಥವಾ ಆತನ ಪರಿವಾರದಂತೆ ಚಿತ್ರಿತವಾಗಿರುವುದನ್ನು ಡೊಳ್ಳಿನ ಹಾಡುಗಳು, ಪುರಾಣಗಳು ಬಿಂಬಿಸುತ್ತವೆ. ಹಾಗೆಯೇ ಬೀರಪ್ಪ ವೀರಭದ್ರನಾಗಿ, ಮಲ್ಲಯ್ಯ ಮಲ್ಲಿಕಾರ್ಜುನನಾಗಿ, ರೇವಣಸಿದ್ಧ ರೇಣುಕಾಚಾರ್ಯ ನಾಗಿ ಲಿಂಗಾಯತರಲ್ಲಿ ಪೂಜೆಗೊಳ್ಳುವುದನ್ನು ಇತಿಹಾಸದ ಪುಟಗಳು ತಿಳಿಸುತ್ತವೆ. ಪೂಜಾರಿಯನ್ನು ನೇಮಿಸದಿರುವ ಕುರುಬ ದೈವಗಳನ್ನು ಪೂಜಿಸಲು ಲಿಂಗಾಯತರನ್ನು ಮಾತ್ರವೇ ನೇಮಿಸುವುದನ್ನು ಈ ಭಾಗದಲ್ಲಿ ಹೆಚ್ಚಾಗಿ ಕಾಣಬಹುದು. ಉದಾಹರಣೆಗೆ ಶೀರ್ಪಿಯ ರೇವಣಸಿದ್ಧನ ಮಠಕ್ಕೆ, ಓಬಳಾಪುರಂನ ರೇವಣಸಿದ್ಧನ ಮಠಕ್ಕೆ, 'ಸಿಂದ್ವಾಳದ' ಮಠಕ್ಕೆ, ಅದರಂತೆಯೇ ಬೀರಪ್ಪನ ಸಾಕಷ್ಟು ದೇವಾಲಯಗಳಿಗೂ ಹಾಗೆಯೇ ಮಲ್ಲಯ್ಯನಿಗೂ ಪೂಜೆ ಮಾಡುವ ಸಾಕಷ್ಟು ನಿದರ್ಶನಗಳು ಈ ಪರಿಸರದಲ್ಲಿ ದೊರೆಯತ್ತದೆ. ಹೀಗೆ ಪೂಜೆ ಮಾಡಲು ನೇಮಿಸಿದಾತನಿಗೆ ತಿಂಗಳಿಗೆ ಇಷ್ಟೆಂದು ಹಣ ಅಥವಾ ಧವಸ ಧಾನ್ಯಗಳನ್ನು ನೀಡುವರು. ಇನ್ನೂ ಕುರುಬರಲ್ಲಿನ ಸಾಕಷ್ಟು ಬೆಡಗುಗಳು ಲಿಂಗಾಯತರಲ್ಲಿಯೂ ಕಂಡುಬರುತ್ತದೆ.

**ಕುರುಬರು–ಗೊಲ್ಲರು**

ಈ ಎರಡು ಸಮುದಾಯಗಳು ಪಶುಪಾಲಕರು. ಗೊಲ್ಲರು ಪಶುಪಾಲಕರಾದರೇ ಕುರುಬರ ಮೇಷ ಪಾಲಕರು. ಇತ್ತೀಚಿನ ದಿನಗಳಲ್ಲಿ ಗೊಲ್ಲರು ಪಶುಪಾಲನೆಗಿಂತಲೂ ಕುರಿ ಸಾಕಾಣಿಕೆಯತ್ತ

ಸಾಗಿ ಬಂದಿರುವುದು ಕಂಡುಬರುತ್ತದೆ. ಅದರ ಕುರಿತಾಗಿರುವ ಐತಿಹ್ಯವೊಂದನ್ನು ತೀ.ನಂ. ಶಂಕರನಾರಾಯಣ ಅವರು ಈ ರೀತಿಯಲ್ಲಿ ವಿಶ್ಲೇಷಿಸಿದ್ದಾರೆ. "ಹುತ್ತದ ಕೊವೆಯಿಂದ ದಷ್ಟಪುಟ್ಟವಾದ ಕುರಿಗಳು ಹಿಂಡು ಹಿಂಡಾಗಿ ಹೊರನುಗ್ಗಿ ಬರುವುದನ್ನು ಕಂಡು ಹೆದರಿದ ಕುರುಬರ ಹುಡುಗ ಸಾಕಿ ಸಲಹಲು ದಾರಿ ಕಾಣದಾದಾಗ ಕಾಡುಗೊಲ್ಲರವನು ಕುರಿಗಳ ಉಸ್ತುವಾರಿ ನೋಡಿಕೊಳ್ಳುವುದಾಗಿ ತಿಳಿಸುತ್ತಾನೆ."[೨] ಮತ್ತೆ ಕೆಲವೆಡೆಯಲ್ಲಿ ಹೇಳುವಂತೆ ಮಲ್ಲಯ್ಯನಿಗೆ ಕುರಿಕಾಯಲು ಸಹಾಯಕನಾದ ಬೈಯಣ್ಣ ಗೊಲ್ಲರವನೆಂದು ಹೇಳುವರು. ಈ ಹೇಳಿಕೆಯನ್ನು ಪುಷ್ಟೀಕರಿಸುತ್ತದೆ. ಎಡ್ಗರ್ ಥರ್‌ಸ್ಟನ್ ಅವರ ಮಾತು. ಕಾಡುಗೊಲ್ಲರು ಉತ್ತರ ಭಾರತದಿಂದ ಬಂದವರೆಂದೂ, ಅವರ ಸಂಪ್ರದಾಯಗಳು ಕಾಡುಕುರುಬರ ಸಂಪ್ರದಾಯಗಳನ್ನು ಹೋಲುತ್ತವೆ ಎಂದು ಹೇಳಿದ್ದಾರೆ. ಕುರುಬರಲ್ಲಿ ಹತ್ತಿಕಂಕಣ-ಉಣ್ಣೆಕಂಕಣಗಳು ಇರುವಂತೆಯೇ ಗೊಲ್ಲರಲ್ಲಿ ಕಾಡುಗೊಲ್ಲರು ಊರುಗೊಲ್ಲರಿದ್ದಾರೆ. ಪರಸ್ಪರರಲ್ಲಿ ವೈವಾಹಿಕ ಸಂಬಂಧಗಳು ಬೆಳೆಸುವುದಿಲ್ಲ. ಮದುವೆಯಲ್ಲಿ ಸುರಿಗೆ ಸುತ್ತುವುದು ಇಬ್ಬರಲ್ಲಿಯೂ ಕಂಡುಬರುವ ಪ್ರಮುಖ ಕಾರ್ಯವಾಗಿದೆ.

ವೃತ್ತಿಯ ಹಿನ್ನೆಲೆಯಲ್ಲಿ ಗೊಲ್ಲ. ಗೋಪಾಲಕ. ಪಶುಪಾಲಕ. ದನಗಾಹಿ. ಗೋಪಾಲ. ಕಾಡಿನಗೊಲ್ಲ ಮುಂತಾಗಿ ಕರ್ನಾಟಕದಲ್ಲಿ ಕರೆಯುವರು. ಆಂಧ್ರಪ್ರದೇಶದಲ್ಲಿ ಕುರುಬ ಮತ್ತು ಗೊಲ್ಲರನ್ನು ಪಾಲವಾಡು, ಗೊಲ್ಲವಾಡು, ಕುರುಮವಾರು, ಯಾದವರೆಂದು ಹೇಳುವರು. ಮಲ್ಲಯ್ಯನನ್ನು ಕುರುಬರಿಗಿಂತಲೂ ಹೆಚ್ಚಾಗಿ ಆರಾಧಿಸುವರು ಕೆಂಪುಗೊಲ್ಲರು. ಗೊಲ್ಲರ ಐತಿಹಾಸಿಕ ಹಿನ್ನೆಲೆಯೊಂದರಲ್ಲಿ ಗೊಲ್ಲರು ದೆಹಲಿ ಮತ್ತು ಸುತ್ತಮುತ್ತಲ ಪ್ರದೇಶಗಳಲ್ಲಿ ವಾಸಿಸುತ್ತಿದ್ದರು. ಅಲ್ಲಿನ ಮುಸ್ಲಿಮರ ಉಪಟಳ ತಾಳದೇ ದಕ್ಷಿಣದ ಕಡೆ ವಲಸೆ ಬಂದರು. ಮತ್ತೊಂದರಲ್ಲಿ ದೆಹಲಿಯಲ್ಲಿದ್ದ ಸಮಯದಲ್ಲಿ ಈ ಸಮುದಾಯದ ಹೆಣ್ಣು ಮಕ್ಕಳಿಬ್ಬರು ಪಟ್ಟಣದಲ್ಲಿ ಹಾಲು-ಮೊಸರು-ತುಪ್ಪ ಮಾರುತ್ತಿದ್ದಾಗ ಅವರನ್ನು ನೋಡಿದ ದೆಹಲಿ ಸುಲ್ತಾನ ಮೋಹಿತನಾಗಿ ಮದುವೆಯಾಗಲು ಹೇಳಿ ಕಳುಹಿಸಿದನು. ಗೋಕುಲದ ಹೆಣ್ಣುಮಕ್ಕಳನ್ನು ತುರುಕರಿಗೆ ಕೊಟ್ಟು ಮದುವೆ ಮಾಡಿ ತಮ್ಮ ಹಾಲಿನಂಥ ಕುಲವನ್ನು ನೀರಾಗಿಸುವುದು ಬೇಡ ಎಂದು ಅಲ್ಲಿಂದ ರಾತ್ರೋರಾತ್ರಿ ದಕ್ಷಿಣದ ಕಡೆಗೆ ವಲಸೆ ಬಂದರೆಂದು ಹೇಳುತ್ತದೆ. ಈ ಕಥೆಗಳು ಕುರುಬರಲ್ಲಿಯೂ ಚಾಲ್ತಿಯಲ್ಲಿವೆ.

ಗಡಿನಾಡ ಪರಿಸರದಲ್ಲಿ ಗೊಲ್ಲ-ಕುರುಬ-ಬೇಡರು ನಡೆದುಕೊಳ್ಳುವ ದೈವ ಪಾತಪ್ಪ ಅಥವಾ ಪಾತಲಿಂಗಪ್ಪ ಕಲ್ಯಾಣದುರ್ಗಂನ ಹತ್ತಿರ ವರ್ಲಿಕೋಡಿಹಳ್ಳಿಯಲ್ಲಿ ಪಾತಪ್ಪನ ಮೂಲ ದೇವಾಲಯವಿದೆ. ಆತನ ಅನುಯಾಯಿಗಳನ್ನು ಪೋತುರಾಜರೆಂದು ಕರೆಯುವರು. ಪೋತುರಾಜರಾಗುವವರು ಹುಟ್ಟಿನಿಂದ ತಲೆಗೂದಲನ್ನು ಕತ್ತರಿಸುವಂತಿಲ್ಲ. ಬ್ರಹ್ಮಸಮುದ್ರಂ, ಕಲ್ಯಾಣದುರ್ಗಂ, ಶೆಟ್ಟೂರು,

ಬೆಳಗುಪ್ಪ ಮಂಡಲಗಳಲ್ಲಿ ಕುರುಬರ ಪೋತುರಾಜರು ಕಂಡುಬಂದರೇ, ಪಾವಗಡ, ಹಿರಿಯೂರು, ಕುಂದುರ್ಪಿ, ಕಂಬದೂರು ಭಾಗದಲ್ಲಿ ಗೊಲ್ಲ ಸಮುದಾಯದ ಪೋತುರಾಜರಿದ್ದಾರೆ. ಉಳಿದೆಡೆ ನಾಯಕ ಸಮುದಾಯದವರೇ ಹೆಚ್ಚಾಗಿ ಕಂಡುಬರುತ್ತಾರೆ. ಯಾವುದೇ ಗ್ರಾಮದಲ್ಲಾದರೂ ದ್ಯಾವರ ನಡೆದು ಗಾವು ಸಿಗಿಯುವ ಕಾರ್ಯವಿದ್ದರೇ ಇವರಿಗೆ ವೀಳ್ಯ ಕೊಟ್ಟು ಕರೆಯುವರು. ಯಾರನ್ನು ಕರೆಯುವರೋ ಅವರ ಜೊತೆಗೆ ಜಾತಿಬೇದವಿಲ್ಲದೇ ಎಲ್ಲರೂ ಸೇರಿಕೊಂಡೇ ಆ ಧಾರ್ಮಿಕ ಕಾರ್ಯ ಮುಗಿಸಿ ಬರುವರು.

ಕುರುಬರಿಗೆ ಕುರಿಗಳ ಹಿಂಡು ಸೃಷ್ಟಿಯಾಗಿ ದೊರೆತರೂ ಕುರಿ ಸಾಕಾಣಿಕೆಯೂ ಗೊಲ್ಲರಿಗೆ ಹೊಣೆಯಾಯಿತು. ಅದಕ್ಕೆ ಸಂಬಂಧಿಸಿದಂತೆ ಕಾಳೇಗೌಡ ನಾಗವಾರರು ಕುರುಬರಿಂದ ಕುರಿಗಳು ಗೊಲ್ಲರ ಪಾಲಾಗಿ, ಅವುಗಳ ತುಪ್ಪಟ ತೆಗೆದು ಕಂಬಳಿ ನೇಯುವ ಕೆಲಸ ಕುರುಬರಿಗೆ ಉಳಿಯಿತೆಂದು ಹೇಳಿರುವರು. ಅದಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದಲ್ಲಿ ದೊರೆತ ಐತಿಹ್ಯವೊಂದು ಈ ರೀತಿಯಲ್ಲಿದೆ.

ಗೊಲ್ಲರು ಕಾಯುತ್ತಿದ್ದ ಕುರಿಗಳನ್ನು ವರ್ಷಕ್ಕೆ ಎರಡು ಬಾರಿ ಕುರಿ ಉಣ್ಣೆ ಕತ್ತರಿಸಲು ಕುರುಬರಾತನು ಬರುತ್ತಿದ್ದನು. ಹೀಗೆ ಉಣ್ಣೆ ಕತ್ತರಿಸಲು ಬರುತ್ತಿದ್ದ ಕುರುಬರಾತನು ಪ್ರತಿಬಾರಿಯು ಕುರಿಮರಿಯೊಂದನ್ನು ಉಣ್ಣೆಯಲ್ಲಿ ಬಚ್ಚಿಟ್ಟುಕೊಂಡು ಹೋಗುತ್ತಿದ್ದನು. ಪ್ರತಿಬಾರಿಯು ಕುರಿಮರಿಯೊಂದು ಕಡಿಮೆಯಾಗುತ್ತಿದ್ದುದ್ದನ್ನು ಗಮನಿಸಿದ ಗೊಲ್ಲರವನು ನೇರವಾಗಿ ಹೇಳದೇ ಮುಂದಿನ ಸಲ ಕುರಿ ಉಣ್ಣೆ ಕತ್ತರಿಸಲು ಬಂದಾಗ ಅವನಿಂದ ಪ್ರಮಾಣ ಮಾಡಿಸುವುದನ್ನು ಕಲಿತನು. ಉಣ್ಣೆ ಕತ್ತರಿಸಿದಾದ ನಂತರ ಕರಿಯ ಕಂಬಳಿ ಗದ್ದುಗೆ ಹಾಸಿ ಉಂಡಾಡು ಪದ್ಮಣ್ಣ, ಬೀರಪ್ಪ, ಶಾಂತಮುತ್ತಯ್ಯ, ರೇವಣಸಿದ್ಧರನ್ನು ನೆನೆದು ಹಾಲು–ಬಾನ ಚೆಲ್ಲಿ ಕುರಿ ಹಿಂಡಿನ ಸುತ್ತಲೂ ಪೂಜಿಸುವ ಮುಖೇನ ಕುರಿ ಹಿಂಡು ಹೆಚ್ಚಲೆಂದು ಪೂಜಿಸುವನು. ಹಾಲು–ಅನ್ನ ಚೆಲ್ಲಿ ಪ್ರಮಾಣ ಮಾಡುವುದು ಜೊತೆಗೆ ತಮ್ಮ ದೈವಗಳನ್ನು ನೆನೆದು ಹೇಳುವುದಿಲ್ಲ. ಏಕೆಂದರೆ ದೇವರೆಂದರೇ ಅವರಿಗೆ ಅಷ್ಟು ಶ್ರದ್ಧಾಭಕ್ತಿಯೆಂದು ಈ ರೀತಿ ಮಾಡಿದನೆಂದು ಹೇಳುವರು. ಅಂದಿನಿಂದ ಅವರಲ್ಲಿ ಒಂದು ಒಪ್ಪಂದವಾಯಿತು. ಅದರಂತೆ ಉಣ್ಣೆ ಕತ್ತರಿಸಿದಾಗ ಒಂದು ಕುರಿಮರಿ ನೀಡುವುದು ಅದರ ಬದಲಾಗಿ ಕಂಬಳಿಯನ್ನು ಪಡೆಯುವುದು ಕ್ರಮವಾಗಿ ನಡದುಕೊಂಡು ಬರುತ್ತಿದೆ.

ಇಂದಿನ ಆಧುನಿಕ ಯುಗದಲ್ಲಿ ಸಮುದಾಯವೊಂದರ ಪಾರಂಪರಿಕ ವೃತ್ತಿಯನ್ನು ಮತ್ತೊಂದು ಸಮುದಾಯ ಮಾಡುವುದನ್ನು ಕಾಣಬಹುದು. ಉದಾಹರಣೆಗೆ ಕುರುಬರ ಕುರಿಸಾಕಾಣಿಕೆಯನ್ನು ಕಾಡುಗೊಲ್ಲರು, ಮ್ಯಾಸಬೇಡರು ಇಂದು ಹೆಚ್ಚಾಗಿ ಮಾಡುತ್ತಿರುವುದನ್ನು ನೋಡಬಹುದಾದರೂ, ಕುರಿ ಉಣ್ಣೆ ಕತ್ತರಿಸುವ ಕೆಲಸನ್ನು ಬೇರೆಯವರಾರೂ ಮಾಡುತ್ತಿಲ್ಲ. ಅದು ಕುರುಬ ಸಮುದಾಯಕ್ಕೆ

ಮಾತ್ರವೇ ಇಂದಿಗೂ ಸೀಮಿತವಾದುದು. ಏಕೆಂದರೆ ಬೇರೆಯವರು ಕುರಿ ಉಣ್ಣೆ ಕತ್ತರಿಸಿದರೇ ಒಳಿತಾಗುವುದಿಲ್ಲ ಎಂಬ ನಂಬುಗೆ ಈ ಭಾಗದಲ್ಲಿ ಬಲವಾಗಿದೆ. ಕುರಿ ಹಿಂಡು ಮೊದಲು ದೊರೆತಿರುವುದು ಕುರುಬರಿಗೆ. ಹಾಗಾಗಿ ಅವರು ಮಾತ್ರ ಕಾಲು ಕೆಳಗೆ ಮಲಗಿಸಿಕೊಂಡು ಉಣ್ಣೆ ಕತ್ತರಿಸಬಹುದು. ಉಳಿದವರು ಕಾಲಿಂದ ಮುಟ್ಟುವಂತಿಲ್ಲ. ಅವು ಸಾಕ್ಷಾತ್ ಶಿವನ ಅವತಾರವಾದ ಸಿದ್ಧಲಿಂಗ ಎಂಬುದವರ ನಂಬುಗೆ. ಕುರುಬರಂತೆಯೇ ಗೊಲ್ಲರಲ್ಲಿ ಜುಂಜಪ್ಪ, ಎತ್ತಪ್ಪ ಸಾಂಸ್ಕೃತಿಕ ವೀರರು. ಅವರ ಕುರಿತು ಕಾವ್ಯಗಳು ಮೌಖಿಕವಾಗಿ ಈ ಪರಿಸರದಲ್ಲಿ ದೊರೆಯುತ್ತವೆ.

### ಕುರುಬರು–ಕುಂಚಿಟಿಗರು

ಗಡಿನಾಡ ಜಿಲ್ಲೆಗಳಾದ ಚಿತ್ರದುರ್ಗ–ತುಮಕೂರುಗಳ ಪೂರ್ವಭಾಗದಲ್ಲಿ ಮತ್ತು ಅನಂತಪುರಂ ಜಿಲ್ಲೆಯಲ್ಲಿ ಕುಂಚಿಟಿಗರು ದಟ್ಟವಾಗಿ ನೆಲೆಸಿರುವರು. ಪಶುಪಾಲನೆಯ ಕಾಲಘಟ್ಟದಲ್ಲಿ ಪಶುಪಾಲನೆಯಲ್ಲಿ ತೊಡಗಿದ್ದ ಕಾಡುಗೊಲ್ಲರು ಮ್ಯಾಸಬೇಡರನ್ನು ಒಳಗೊಂಡಂತೆ ಇವರು ಪಶುಪಾಲಕ ಸಂಸ್ಕೃತಿ ಅವನತವಾಗ ತೊಡಗಿದಂತೆ ಸಹಜವಾಗಿ ಕುರಿಸಾಕಾಣಿಕೆಯತ್ತ ಸಾಗಿಬಂದಿರುವರು. ವರ್ಷಕ್ಕೆರಡು ಬಾರಿ ಕುರಿಯ ಉಣ್ಣೆಯನ್ನು ಕತ್ತರಿಸುವ ಅನಿವಾರ್ಯತೆಯಿಂದ ಇವರು ಕುರುಬರ ಸಂಬಂಧಕ್ಕೆ ಬಂದಂತೆ ಕಂಡುಬರುತ್ತದೆ ಎಂದು ಮೀರಾಸಾಬಿಹಳ್ಳಿ ಶಿವಣ್ಣ ಅವರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಇತಿಹಾಸದ ಮೂಲೆಯಲ್ಲಿನ ಸಂಗತಿಗಳು ಅಲ್ಲಲ್ಲಿ ಪಶುಪಾಲಕ ಸಮುದಾಯಗಳು ಮೂಲತಃ ಒಂದೇ ಕುಟುಂಬ ವರ್ಗಕ್ಕೆ ಅಥವಾ ಸೋದರ ಸಂಬಂಧಿಗಳಾಗಿರುವ ಸಾಧ್ಯತೆಯ ಸುಳುವುಗಳನ್ನು ತಿಳಿಸುತ್ತವೆ. ಪಶುಪಾಲಕರಲ್ಲಿರುವ ಸಾಂಸ್ಕೃತಿಕ ವೀರರ ಪರಿಕಲ್ಪನೆಯು ಈ ಸಮುದಾಯದಲ್ಲಿ ಕಂಡುಬರುವುದು ಅದಕ್ಕೆ ಪುಷ್ಟಿ ನೀಡುತ್ತವೆ.

ಕುರುಬ, ಗೊಲ್ಲ, ಬೇಡರಂತೆಯೇ ಇವರು ವಲಸೆ ಬಂದ ಕಥೆಯು ಒಂದೇ ಬಗೆಯದಾಗಿದೆ. ಆ ಐತಿಹ್ಯವನ್ನು ಸಂಗ್ರಹ ರೂಪದಲ್ಲಿ ಕೊಡಲಾಗಿದೆ. "ಇಂದ್ರಪ್ರಸ್ಥದ ಬಳಿಯ ದ್ವಾರಕಪುರದ ರಾಜನಾಗಿ ಉಂಡೆ ಎತ್ತರಾಯ ಆಳ್ವಿಕೆ ಮಾಡುತ್ತಿದ್ದನು. ಧಾನ್ಯದ ಧನಿಕರಾಯನು ಅವನ ಪ್ರಧಾನಮಂತ್ರಿಯಾಗಿದ್ದನು. ತಮ್ಮ ಪಾರಂಪರಿಕ ಪಶುಪಾಲನ ವೃತ್ತಿಯ ಜೊತೆಗೆ ಹಾಲು–ಮೊಸರು–ತುಪ್ಪ ಮಾರಿಕೊಂಡು ಜೀವಿಸುತ್ತಿದ್ದರು. ತುಪ್ಪವನ್ನು ಗಾರೆಗಚ್ಚಿನ ಹಗೇವುಗಳಲ್ಲಿ ಸಂಗ್ರಹಿಸುತ್ತಿದ್ದರು. ರಾಮಟೆಂಕೆ ವರಹಗಳು ಇವರಲ್ಲಿ ಕಾಲು ಮುರಿದುಕೊಂಡು ಬಿದ್ದಿದ್ದವು; ಅಷ್ಟು ಶ್ರೀಮಂತಿಕೆಯಿತ್ತು. ಇವರ ಹೆಣ್ಣುಮಕ್ಕಳು ದೆಹಲಿ ಪಟ್ಟಣಕ್ಕೆ ಹಾಲು ಮಾರಲು ಹೋಗಿದ್ದಾಗ ಬಾದಶಹನ ಕಣ್ಣಿಗೆ ಬಿದ್ದರು. ಅವರ ಸೌಂದರ್ಯಕ್ಕೆ ಮಾರು ಹೋದ ರಾಜ ಮದುವೆ ಮಾಡಕೊಡಲು ಹೇಳಿ ಕಳುಹಿಸಿದನು. ಅದಕ್ಕೆ ಒಪ್ಪದಿದ್ದಾಗ ಹಾಲು ಮಾರಲು ಬಂದವರನ್ನು ಸೆರೆ ಹಿಡಿಯಲು ಸೈನಿಕರಿಗೆ ತಿಳಿಸಿದನು. ದೊಡ್ಡಭೈರಮ್ಮ ಎಂಬಾಕೆ ಸೆರೆ ಸಿಕ್ಕು, ಉಳಿದವರು ತಪ್ಪಿಸಿಕೊಂಡು ಬಂದು ನಡೆದ

ಘಟನೆಯನ್ನು ಹಿರಿಯರಿಗೆ ತಿಳಿಸಿದರು. ತಮ್ಮ ಹಾಲಿನಂಥ ಕುಲ ನೀರಾಗುವುದು ಬೇಡ ಎಂದು ರಾತ್ರೋರಾತ್ರಿ ನೂರಾರು ಗಾಡಿಗಳಲ್ಲಿ ಕಾಡುಗೊಲ್ಲರು, ಕುರುಬರು, ಬೇಡರು ಅಲ್ಲಿಂದ ಹೊರಟು ಬಂದರು. ಬರುವ ದಾರಿಯಲ್ಲಿ ಗಂಗೆ ತುಂಬಿ ಹರಿಯುತ್ತಿದ್ದಳು. ದಾರಿ ಕೇಳಲಾಗಿ ನರಬಲಿ ಕೋರುತ್ತಾಳೆ. ಯಾರು ಮುಂದೆ ಬರದಿದ್ದಾಗ ಅಲ್ಲೆ ಕುರಿ ಕಾಯುತ್ತಿದ್ದ ಕುರುಬರ ಬೊಪ್ಪರಾಯ ನಾನು ಗಂಗೆಗೆ ಅರ್ಪಿತನಾಗುತ್ತೇನೆ. ಆದರೇ ಸತ್ತ ನನ್ನ ಮುಂಡಕ್ಕೆ ನಿಮ್ಮ ಕುಂಚಿಟಿಗರ ಕುಲದ ಹೆಣ್ಣುಕೊಟ್ಟು ಧಾರೆ ಎರೆಯಬೇಕು ಎಂದು ಷರತ್ತು ಹಾಕುತ್ತಾನೆ. ಉಂಡೆ ಎತ್ತರಾಯನು ತನ್ನ ಚಿಕ್ಕ ಮಗಳು ಚಿಕ್ಕಭೈರಮ್ಮನನ್ನು ಕೊಟ್ಟು ಮದುವೆ ಮಾಡುವೆನೆಂದು ವಾಗ್ದಾನ ಮಾಡುತ್ತಾನೆ. ಬೊಪ್ಪೆರಾಯ ಶಿರಸ್ಸನ್ನು ಕತ್ತರಿಸಿ ಗಂಗೆಗೆ ಆರತಿ ಬೆಳಗುತ್ತಾನೆ. ಗಂಗೆ ದಾರಿ ಬಿಡುತ್ತಾಳೆ. ಆಗ ಎಲ್ಲರು ಹೊಳೆ ದಾಟುವರು. ಇವರನ್ನು ಹಿಂಬಾಲಿಸಿ ಬಂದ ಬಾದಶಹ ತುಂಬಿ ಹರಿಯುವ ನದಿಯನ್ನು ನೋಡಿ ಹಿಂತಿರುಗುತ್ತಾನೆ.

ಈಚೆ ದಡಕ್ಕೆ ಬಂದ ನಂತರ ಕೊಟ್ಟ ಮಾತಿನ ಪ್ರಕಾರ ಬೊಪ್ಪರಾಯನ ಮುಂಡಕ್ಕೆ ಚಿಕ್ಕಭೈರಮ್ಮ ಮದುವೆ ಮಾಡುವರು. ಆಶ್ಚರ್ಯಕರ ಎಂಬಂತೆ ಬೇರೆಯಾದ ರುಂಡ ಮುಂಡ ಕಲೆತು ಬೊಪ್ಪರಾಯ ಬದುಕುತ್ತಾನೆ. ಜಲದಲ್ಲಿ ದಾರಿ ಬಿಡಿಸಿದನೆಂಬ ಕಾರಣಕ್ಕೆ ಆತನನ್ನು ಜಲಧಿ ಬೊಪ್ಪರಾಯನೆಂದು ಕರೆಯುವರು. ಆತನ ಮುಂದಿನ ಸಂತತಿಯನ್ನು ಜಲದೇನವರು ಎಂಬ ಬೆಡಗಿನಿಂದ ಗುರುತಿಸಲಾಗುತ್ತದೆ. ಮುಂದೇ ಆತನೇ ಕುಂಚಿಟಿಗರ ಸಾಂಸ್ಕೃತಿಕ ವೀರನಾಗಿ ಆರಾಧ್ಯ ದೈವವಾಗುತ್ತಾನೆ."[3] ಈ ಕಾರಣದಿಂದಾಗಿಯೇ ಮದುವೆಯಂಥ ಕಾರ್ಯದಲ್ಲಿ ಮೊದಲ ವೀಳ್ಯವನ್ನು ಎತ್ತಿಕೊಡುವುದು ಬೊಪ್ಪರಾಯನಿಗೆ ಸಲ್ಲುತ್ತಿದೆ. ಹೀಗೆ ಪರಸ್ಪರ ಸಾಂಸ್ಕೃತಿಕ ಕೊಳು-ಕೊಡೆಯ ಮೂಲಕ ಕುರುಬ ಸಮುದಾಯಕ್ಕೆ ಅದರಲ್ಲಿಯೂ ಉಣ್ಣೆಕಂಕಣದ ಕುರುಬರೊಂದಿಗೆ ಇವರ ಅವಿನಾಭಾವ ಸಂಬಂಧವನ್ನು ನೋಡಬಹುದಾಗಿದೆ. ಏಕೆಂದರೆ ಮದುವೆಯಲ್ಲಿ ಕೈಗೆ ಉಣ್ಣೆಯ ಕಂಕಣವನ್ನು ಕಟ್ಟುವುದು ಅವರ ಸಂಪ್ರದಾಯವಾಗಿದೆ. ಇವರಲ್ಲಿ ಸಾಕಷ್ಟು ಬೆಡಗುಗಳು ಕಂಡುಬರುತ್ತದೆ.

**ಕುರುಬರು-ಬೇಡರು**

ಬುಡಕಟ್ಟು ಮೂಲದಿಂದ ಬಂದ ಗೊಲ್ಲ, ಬೇಡ, ಕುರುಬ, ಕುಂಚಿಟಿಗ ಮೊದಲಾದ ಸಮುದಾಯಗಳ ಸಾಂಸ್ಕೃತಿಕ ಅನನ್ಯತೆಯಿಂದ ಈ ನಾಡಿನ ಸಾಮಾಜೀಕರಣವು ಹಲವು ವೈಶಿಷ್ಟ್ಯಗಳಿಂದ ಕೂಡಿದೆ. ಮೂಲತಃ ಮಾತೃಸಂಸ್ಕೃತಿಯಿಂದ ಬಂದ ಈ ಸಮುದಾಯಗಳು ಕಾಲಕ್ರಮೇಣವಾಗಿ ಪಿತೃಪ್ರಧಾನ ಸಂಸ್ಕೃತಿಯತ್ತ ಸಾಗಿಬಂದವುಗಳು. ಹಾಗಾಗಿಯೇ ಇಂದಿಗೂ ಮಹಿಳೆಯರಿಗೆ ವಿಶೇಷ ಸ್ಥಾನಮಾನಗಳು ಇಲ್ಲಿವೆ. ಈ ಸಮುದಾಯಗಳಲ್ಲಿ ಮಧ್ಯಕಾಲೀನ ಕರ್ನಾಟಕದ ಇತಿಹಾಸದ ಪುಟಗಳಲ್ಲಿ ಕುರುಬರು-ಬೇಡರು ಪ್ರಮುಖವಾಗಿರುವರು. "ನಾಡಿನ

ಇತಿಹಾಸ, ಸಾಹಿತ್ಯ, ಸಂಸ್ಕೃತಿಯಲ್ಲಿ ಈ ಎರಡೂ ಜಾತಿಗಳು ಎಷ್ಟು ಒಂದಕ್ಕೊಂದು ಹೆಣೆದುಕೊಂಡಿವೆಯೆಂದರೇ ಕೆಲ ರಾಜಸಂಸ್ಥಾನಗಳು, ಪಾಳೆಯಪಟ್ಟುಗಳು, ಧಾರ್ಮಿಕ ವ್ಯಕ್ತಿಗಳು ಕುರುಬರೋ-ಬೇಡರೋ ಎಂಬ ವಾದ ವಿವಾದಕ್ಕೆ ಎಡೆಮಾಡಿದೆ... ವಿದ್ವಾಂಸರ ಈ ವಾದ-ವಿವಾದಗಳು ಬೇಡರು ಅಥವಾ ಕುರುಬರು ಎಂದು ಮಂಡಿತವಾಗಿದೆಯೇ ಹೊರತು ಈ ಎರಡೂ ಜಾತಿಗಳನ್ನು ಬಿಟ್ಟು ಬೇರೆ ಜಾತಿಗಳೆಂದು ಯಾರು ಹೇಳಿಲ್ಲ."[೪] ಅಷ್ಟರಮಟ್ಟಿಗಿನ ಸಾಮ್ಯತೆಗಳು ಇವೆರಡರ ಮಧ್ಯದಲ್ಲಿವೆ.

ಕರ್ನಾಟಕದಲ್ಲಿನ ಮೂರನೆಯ ಅತಿ ದೊಡ್ಡ ಸಮುದಾಯವಾದ ಕುರುಬರು, ನಾಲ್ಕನೆಯ ಅತಿದೊಡ್ಡ ಸಮುದಾಯವಾದ ಬೇಡರು ರಾಜ್ಯದ ಉದ್ದಗಲಕ್ಕೂ ವ್ಯಾಪಿಸಿದ್ದಾರೆ. ಕುರುಬರಂತೆಯೇ ಬೇಡರಲ್ಲಿಯೂ ಮ್ಯಾಸಬೇಡರು, ಊರುಬೇಡರು, ಬೇಡಗಂಪಳ, ಪಾಳೆಯಗಾರರು ಎಂಬ ವಿಭಾಗಗಳಿದ್ದು, ಅವರಲ್ಲಿ ಪರಸ್ಪರ ಕೊಳು-ಕೊಡೆಯು ನಡೆಯುವುದಿಲ್ಲ. ಪಾಳೆಯಗಾರರು ವೀರಶೈವರಾಗಿ ಪರಿವರ್ತಿತವಾಗಿರುವುದು ಹೆಚ್ಚಾಗಿ ಕಂಡುಬರುತ್ತದೆ. ಅವರು ವೈವಾಹಿಕ ಸಂಬಂಧಗಳನ್ನು ಅವರಲ್ಲಿಯೇ ಅಂದರೆ ಪಾಳೆಯಗಾರರು ಪಾಳೆಯಗಾರರೊಂದಿಗೆ ಸಂಬಂಧ ಬೆಳೆಸುತ್ತಾರೆ. ಉದಾಹರಣೆಗೆ ಸುರಪುರದ ಅರಸರು ಚಿತ್ರದುರ್ಗ, ನಿಡುಗಲ್ಲಿ, ಗುಡೇಕೋಟೆಯ ಪಾಳೆಯಗಾರರೊಂದಿಗೆ ಸಂಬಂಧ ಬೆಳೆಸುವರು. ಇತ್ತೀಚೆಗೆ ಬದಲಾವಣೆಗಳಾಗುತ್ತಿವೆ ಎಂದರೂ ಅದು ಅಷ್ಟಾಗಿಲ್ಲವೆಂಬುದು ಕಂಡುಬರುತ್ತದೆ.

ಅಧ್ಯಯನಕ್ಕೆ ಆಯ್ದುಕೊಂಡ ಗಡಿ ಪರಿಸರದಲ್ಲಿ ಕುರುಬರಂತೆಯೇ ಕುರಿಸಾಕಾಣಿಕೆಯನ್ನು ಮಾಡುವವರು ಮ್ಯಾಸಬೇಡರು. ಗುಂತಕಲ್ಲು, ಗೂಳ್ಯಂಪಾಳ್ಯಂ ಸುತ್ತಮುತ್ತಲ ಪರಿಸರದಲ್ಲಿರುವ ಕುರುಬರು ನವಣೆಯನ್ನು ಮುಟ್ಟುವಂತಿಲ್ಲ ಮತ್ತು ಊಟಕ್ಕೆ ಬಳಸುವಂತಿಲ್ಲ. ಅದರಂತೆಯೇ ಬೇಡರಲ್ಲಿನ ಕೆಲ ಬೇಡಗಿನವರು ಮೊಳಕಾಲ್ಮೂರು ತಾಲೂಕಿನಲ್ಲಿ ನವಣೆಯನ್ನು ಬಳಸುವಂತಿಲ್ಲ ಮತ್ತು ನವಣೆ ಬೆಳೆದ ಹೊಲದಲ್ಲಿ ನಡೆದು ಹೋಗುವುದಿಲ್ಲ. ಚಳ್ಳಕೆರೆಯಲ್ಲಿನ ನಾಯಕರು ಆರಾಧಿಸುವ ಚಳ್ಳಕೇರಮ್ಮ ಬಿಜ್ಜನ ಕುರುಬರ ಮನೆದೇವತೆಯಾಗಿದ್ದಾಳೆ. ಬೇಡರು ಆರಾಧಿಸುವ ಹನುಮಂತನಹಳ್ಳಿ ಕಾವಲಿನಲ್ಲಿರುವ ತುಮ್ಮಲದಲ್ಲಿರುವ ನಾಗರ ದೈವಕ್ಕೆ ಪ್ರತಿವರ್ಷವೂ ಕೊಂಡ್ಲಹಳ್ಳಿ, ಮೊಗಲಹಳ್ಳಿ, ಕಡೆಉಡೇವು ಗ್ರಾಮಗಳಲ್ಲಿನ ಉಲ್ಲೇನ ಕುರುಬರು ಒಂಭತ್ತು ದಿನಗಳು ಮೀಸಲು ಹಾಲು ಇಟ್ಟು ಅದನ್ನು ಮೊಸರು-ತುಪ್ಪ ಮಾಡಿಕೊಂಡು ಬಂದು ಇಲ್ಲಿ ದೈವಕ್ಕೆ ನೈವೇದ್ಯ ಅರ್ಪಿಸಿ ನಂತರ ಅಲ್ಲಿಯೇ ಅಡುಗೆ ಮಾಡಿ ಪ್ರಸಾದ ಸ್ವೀಕರಿಸುವರು. ಉಳಿದ ಎಡೆಯನ್ನು ಅಣ್ಣ-ತಮ್ಮಂದಿರು ಮಾತ್ರವೇ ಊರಿಗೆ ತಂದು ಸ್ವೀಕರಿಸುತ್ತಾರೆ

ಸೆಜಲ ಕುರುಬರು ಎಂಬ ಬೆಡಗಿನವರು ಆರಾಧಿಸುವ ಚನ್ನಿಗದೇವರು ಬೇಡರದು. ಅದು ದೊರೆತ ಕುರಿತಾಗಿರುವ ಐತಿಹ್ಯವೊಂದು ಈ ರೀತಿಯಲ್ಲಿದೆ. ಕಾಡಲ್ಲಿ ಅಲೆಯುತ್ತಿದ್ದ ಸಮಯದಲ್ಲಿ

ಈ ಭಾಗದಲ್ಲಿ ಮುಸ್ಲಿಂಮರ ಧಾಳಿಯು ಹೆಚ್ಚಾಗಿತ್ತು. ಅದರಿಂದ ತಮ್ಮ ದೈವಗಳನ್ನು ಉಳಿಸಿಕೊಳ್ಳುವ ಸಲುವಾಗಿ ಬೇಡರು ಬಾವಿಯೊಂದರಲ್ಲಿ ಬಚ್ಚಿಟ್ಟಿದ್ದರು. ಧಾಳಿ ಕಡಿಮೆಯಾದ ನಂತರದ ದಿನಗಳಲ್ಲಿ ಆ ದೇವರುಗಳನ್ನು ತೆಗೆದುಕೊಂಡು ಹೋದರು. ಹೋಗುವಾಗ ಚನ್ನಿಗದೇವರನ್ನು ಮರೆತು ಬಾವಿಯಲ್ಲಿಯೇ ಬಿಟ್ಟು ಹೋಗಿದ್ದರು. ತಮ್ಮ ಬೆಡಗಿಗೆ ದೇವರಿಲ್ಲದ್ದರಿಂದ ಬಾವಿಯಲ್ಲಿದ್ದ ಚೆನ್ನಿಗದೇವರನ್ನು ತೆಗೆದುಕೊಂಡು ತಮ್ಮ ದೈವವಾಗಿಸಿಕೊಂಡಿರುವರೆಂದು ತಮ್ಮ ಬೆಡಗಿಗೆ ದೇವರು ದೊರೆತ ಮೂಲ ಕಥೆಯನ್ನು ಕೋನಸಾಗರದ ಶಿಕ್ಷಕರಾದ ಮೋಹನ್ ಕುಮಾರ್ ಅವರು ತಿಳಿಸಿದರು. ಹಾಗಾಗಿಯೇ ಈ ಗುಡಿಯು ಮ್ಯಾಸಬೇಡ ದೈವಗಳ ದೇವರಗಳ ದೇವಾಲಯಗಳ ಮಾದರಿಯಲ್ಲಿಯೇ ಕಾಂಸಿ ಹುಲ್ಲನ್ನು ಬಳಸಿ ದೇವಾಲಯ ನಿರ್ಮಿಸಿ, ಸುತ್ತಲೂ ಪೌಳಿಯನ್ನು ನಿರ್ಮಿಸಿರುವರು. ಇತ್ತೀಚೆಗೆ ಅದನ್ನು ಹೊಸದಾಗಿ ಕಟ್ಟಬೇಕೆಂದುಕೊಂಡಿರುವರು. ಈ ದೇವರು ನಾಗರೆಡ್ಡಿಪಲ್ಲಿಯಲ್ಲಿದ್ದು, ಸೆಜಲ ಕುರುಬರೆಲ್ಲರೂ ಇಲ್ಲಿಗೆ ನಡೆದುಕೊಳ್ಳುವರು. ನವಣೆ ಹಬ್ಬ ಇಲ್ಲಿ ನಡೆಯುವ ಪ್ರಮುಖ ಧಾರ್ಮಿಕ ಉತ್ಸವವಾಗಿದೆ.

ಬಳ್ಳಾರಿಯ ತಾಳೂರಿನಲ್ಲಿರುವ ನಾಯಕರು ಇಲ್ಲಿನ ತಾಳೂರಪ್ಪನಿಗೆ ಶಿಶುಮಕ್ಕಳಾಗಿ ಸೇವೆ ಸಲ್ಲಿಸುವರು. ಹಿಂದೆ ಈ ಊರಿನ ಪಾಳೆಯಗಾರನಿಗೂ ಮತ್ತೊಬ್ಬ ಪಾಳೆಯಗಾರನಿಗೂ ಯುದ್ಧ ನಡೆದು, ಆ ಯುದ್ಧದಲ್ಲಿ ಊರಿನಲ್ಲಿದ್ದ ಎಲ್ಲ ಬೇಡರು ಸತ್ತು ಹೋದರು. ಒಬ್ಬ ಹುಡುಗನು ಮಾತ್ರ ಉಳಿದಿದ್ದನು. ಆ ಹುಡುಗನನ್ನು ಕುರುಬರ ಹಿರಿಯನೊಬ್ಬ ತನ್ನ ಮಕ್ಕಳೊಂದಿಗೆ ಸಾಕಿ–ಸಲಹಿ, ದೊಡ್ಡವನಾದ ನಂತರ ಮದುವೆ ಮಾಡಿದನು. ಕಾಲಾಂತರದಲ್ಲಿ ಆ ಹಿರಿಯರಾತ ಮತ್ತು ಆತ ಸಾಕಿದ್ದ ಬೇಡರ ಸಣ್ಣಕೇರಪ್ಪನು ಸತ್ತು ಹೋದರು. ತಾಳೂರಪ್ಪನ ದೇವಾಲಯದ ಪಕ್ಕದಲ್ಲಿಯೇ ಈ ಸಣ್ಣಕೇರಪ್ಪನ ದೇವಾಲಯವನ್ನು ನಿರ್ಮಿಸಿ ಇಲ್ಲಿನ ಬೇಡರು ಆತನನ್ನು ತಮ್ಮ ಸಾಂಸ್ಕೃತಿಕ ನಾಯಕನನ್ನಾಗಿಸಿಕೊಳ್ಳುವ ಜೊತೆಗೆ ತಮ್ಮನ್ನು ಸಾಕಿದವರ ಮೇಲಿನ ಪ್ರೀತಿಗಾಗಿ ಇಂದಿಗೂ ತಾಳೂರಪ್ಪನ ಶಿಶುಮಕ್ಕಳಾಗಿ ನಡೆದುಕೊಳ್ಳುವರು. ತಮ್ಮ ಧಾರ್ಮಿಕ ಆಚರಣೆಗಳೆಲ್ಲವೂ ಅವರೊಂದಿಗೆ ಕಲೆತು ಆಚರಿಸಿಕೊಂಡು ಬರುತ್ತಿದ್ದಾರೆ. ಉದಾಹರಣೆಗೆ ಮಿಥುನಕ್ಕೆ ಹಾಕುವುದು, ಹರಕೆ ತೀರಿಸುವುದು, ಡೊಳ್ಳು ತಂಡದೊಂದಿಗೆ ಜೀರುಗೋಲು ಹಿಡಿದುಕೊಂಡು ಬರುವುದು. ದೇವರ ಗುಡಿಯನ್ನು ಸಿಂಗರಿಸುವುದರಿಂದ ಹಿಡಿದು ಎಲ್ಲಾ ಕಾರ್ಯಗಳಲ್ಲಿಯೂ ಒಂದಾಗಿ ಸೇರುವರು.

ತೆಕ್ಕಲಕೋಟೆಯ ವರವಿನ ಮಲ್ಲಯ್ಯನಿಗೆ ಪ್ರತಿವರ್ಷ ನಡೆಯುವ ಜಾತ್ರೆಗೆ ಹೊಳಗುಂದಿಯಲ್ಲಿರುವ ಬೇಡರು ಬಂದು ಗಂಗಮಾಳಮ್ಮನಿಗೆ ಕುಂಭಸೇವೆಯನ್ನು ನೆರವೇರಿಸುವರು. ಆ ಆದಿದೇವತೆಯಾದ ಗಂಗಿಮಾಳಮ್ಮನನ್ನು ತಮ್ಮ ಮನೆಮಗಳೆಂದು ಆರಾಧಿಸುವರು. ಈ ಭಾಗದಲ್ಲಿರುವ ಕುರುಬರ

ದೇವರುಗಳಿಗೆ ಬೇಡರು, ಬೇಡರ ದೇವರುಗಳಿಗೆ ನಡೆಮುಕೊಳ್ಳುವುದು ನಡೆಯುತ್ತದೆ. ಜೋರೆದೇವರು, ಜಗಲೂರು ಪಾಪನಾಯಕ, ಗಾದಿಲಿಂಗಪ್ಪ, ಮೀನಗುಂದಿಯ ಮಲ್ಲಯ್ಯ, ಗೌರಸಮುದ್ರ ಮಾರಮ್ಮ ಮುಂತಾದ ದೇವರುಗಳಿಗೆ ಜವಳ ತೆಗೆಸುವ, ಬೇಟೆ ಮಾಡಿ ಹರಕೆ ತೀರಿಸುವ ಸಂಪ್ರದಾಯಗಳಿವೆ. ಜೊತೆಗೆ ಇವರಿಬ್ಬರಲ್ಲಿಯೂ ಸಾಮ್ಯತೆಯಿರುವ ಬೆಡಗುಗಳು ಸಾಕಷ್ಟು ದೊರೆಯುತ್ತವೆ. ಅವು ಹಾಲು, ಮೊಸರು, ಪಶು-ಪ್ರಾಣಿಗಳಿಗೆ ಸಂಬಂಧಿಸಿದವಾಗಿದ್ದು, ಒಂದೇ ರೀತಿಯಲ್ಲಿರುವುದು ಕಂಡುಬರುತ್ತದೆ.

**ಕುರುಬರು-ಮಡಿವಾಳರು**

ಈ ಗಡಿ ಪರಿಸರದಲ್ಲಿ ಮಡಿವಾಳರ ಮನೆಮಾತು ಕುರುಬರಂತೆಯೇ ಕನ್ನಡವಾಗಿದೆ. ಇವರು ಕುರುಬರ ಸಾಮಾಜಿಕ ಧಾರ್ಮಿಕ ಕೆಲ ಕಾರ್ಯಗಳಲ್ಲಿ ಪ್ರಮುಖ ಪಾತ್ರ ವಹಿಸುವರು. ಇವರಲ್ಲಿನ ಹೆಣ್ಣುಮಗಳು ಮೈನೆರೆದಾಗ ಸೂತಕವನ್ನು ತೆಗೆಯುವ ಕಾರ್ಯವನ್ನು ಮಡಿವಾಳಗಿತ್ತಿಯು ನೆರವೇರಿಸುವಳು. ಕುರುಬರಲ್ಲಿ ಮೈನೆರೆದ ಹೆಣ್ಣುಮಗಳನ್ನು ೭ ದಿನಗಳಿಂದ ೧೬ ದಿನಗಳವರೆಗೆ ಮನೆಯ ಹೊರಗೆ ಕೂರಿಸುವರು. ಶಾಸ್ತ್ರಗಳೆಲ್ಲ ಮುಗಿದ ನಂತರ ಆ ಬಟ್ಟೆಗಳನ್ನು ಮಡಿವಾಳರಿಗೆ ನೀಡುವರು. ಹಿಂದೆ ಚಿಕ್ಕವಯಸ್ಸಿಗೆ ಮದುವೆಗಳು ನಡೆಯುತ್ತಿದ್ದುದರಿಂದಾಗಿ ಅವರ ಮದುವೆಯ ಧಾರೆ ಬಟ್ಟೆಗಳನ್ನು ಮಡಿವಾಳರಿಗೆ ನೀಡುವ ಪದ್ಧತಿಯೂ ಇತ್ತು.

ದೇವರು ಮಾಡುವ ಸಂದರ್ಭದಲ್ಲಿ ಪಂಜಿನ ದೊಡ್ಡ ಬತ್ತಿಗಳನ್ನು ದೇವರ ಮುಂದೆ ಇಟ್ಟುಕೊಂಡು ಹೋಗು ಜೊತೆಗೆ ದೇವರಿಗೆ ಮಡಿಬಟ್ಟೆಗಳನ್ನು ಹಾಸುವ ಕೆಲಸವನ್ನು ಮಾಡುತ್ತಿದ್ದರು. ಅದಕ್ಕಾಗಿ ಆಯಾ ಸಮುದಾಯಗಳಿಂದ ಆಯವನ್ನು ಪಡೆಯುವುದು ನಡೆಯುತ್ತಿತ್ತು. ಒಟ್ಟಿನಲ್ಲಿ ಕುರುಬರ ಸಾಮಾಜಿಕ-ಧಾರ್ಮಿಕ ಈ ಕಾರ್ಯಕ್ರಮಗಳಲ್ಲಿ ಮಡಿವಾಳರು ಪ್ರಮುಖರಾಗಿರುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ಈ ಪದ್ಧತಿಗಳು ಇಲ್ಲವೆನ್ನಿಸುವಷ್ಟರ ಮಟ್ಟಿಗೆ ಕಣ್ಮರೆಯಾಗಿವೆ. ಅಲ್ಲಲ್ಲಿ ಇನ್ನೂ ಇವೆಯಾದರೂ ಕಡಿಮೆಯೆಂದೇ ಹೇಳಬಹುದು.

**ಕುರುಬರು-ಮಾದಿಗರು**

ಭಾರತದ ಮೂಲನಿವಾಸಿ ಸಮುದಾಯಗಳಲ್ಲಿ ಒಂದಾದ ಮಾದಿಗ ಸಮುದಾಯ ಕಾಲಾಂತರದಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ತುಳಿತಕ್ಕೊಳಗಾಯಿತು. ಮಾಡುವ ವೃತ್ತಿಯಿಂದ ಬೆಳೆಯುತ್ತ ಅಸ್ಪೃಶ್ಯ ಜಾತಿಯಾಗಿ ಬದಲಾಗುತ್ತ ಬಂದಿತ್ತು. ೧೨ನೆಯ ಶತಮಾನದಲ್ಲಿ ನಡೆದ ಶರಣ ಕ್ರಾಂತಿಯು ಎಲ್ಲ ಜಾತಿಗಳನ್ನು ವೀರಶೈವ ಧರ್ಮದತ್ತ ಬರಲು ಪ್ರೇರೆಪಿಸಿದವು. ಏಕೆಂದರೆ ಲಿಂಗಾಯಿತವು ಎಲ್ಲ ಜಾತಿಗಳಿಗೂ ಮಂತ್ರಧೀಕ್ಷೆ ಮತ್ತು ಮತಾಂತರ ಧೀಕ್ಷೆಗಳೆರಡನ್ನು ನೀಡಿದ್ದರಿಂದ ಎಲ್ಲರೂ

ಅತ್ತ ವಾಲಿ ಬಂದರು. ಅಂದಿನ ಸಾಮಾಜಿಕ, ಧಾರ್ಮಿಕ, ರಾಜಕೀಯ ಸಂಗತಿಗಳನ್ನು ಕುರಿತು ಸಾಕಷ್ಟು ಸಂಖ್ಯೆಯಲ್ಲಿ ಸೃಜನ, ಸೃಜನೇತರ ಕೃತಿಗಳು ಹೊರಬಂದಿವೆ. ಅವುಗಳಲ್ಲಿ ಮೇಲು-ಕೀಳು ಹೋಗಲಾಡಿಸಿ ಸಮಾನತೆಯ ತರಲು ಪ್ರಯತ್ನಿಸುವ ವಿಷಯಗಳು ಒಂದೆಡೆಯಾದರೆ. ಮೂಲಭೂತತನವನ್ನು ಬಿಟ್ಟುಕೊಡದ ಪಟಭದ್ರಹಿತಾಶಕ್ತಿಗಳು ಮತ್ತೊಂದೆಡೆ ಇರುವುದನ್ನು ಗುರತಿಸಬಹುದು. ಆ ಪ್ರಗತಿಪರ ಸಾಮಾಜಿಕ ಕ್ರಾಂತಿಯು ಯಶಸ್ವಿಯಾಗಿದ್ದರೇ ಇಂದಿನ ಸಾಮಾಜಿಕ, ರಾಜಕೀಯ, ಧಾರ್ಮಿಕತೆಯ ಸಂಗತಿಗಳು ಮತ್ತೊಂದು ತೆರನಾಗಿ ಇತಿಹಾಸದಲ್ಲಿ ನೋಡಬಹು ದಾಗಿತ್ತು. ಆದರೆ ಬಸವಣ್ಣನ ಮರಣಾನಂತರದಲ್ಲಿ ಯಶಸ್ವಿಯಾಗದೇ ತಿರುವುಗಳನ್ನು ಪಡೆಯುತ್ತ ಸಾಗಿ ಬಂದಿದ್ದು ವಿಪರ್ಯಾಸವೆಂದೇ ಹೇಳಬೇಕು.

ಈ ಸಾಮಾಜಿಕ ಅಂತರವು ಸಮುದಾಯಗಳ ಮಧ್ಯೆಯ ಅಂತರವನ್ನು ಬೆಳೆಸುತ್ತಲೇ ಬಂದಿತು. ಸಮುದಾಯಗಳ ವೃತ್ತಿಗಳು ಜಾತಿಗಳಾಗಿ ಅವರು ಮಾಡುವ ಕೆಲಸಗಳು ಅವರನ್ನು ಸ್ಪೃಶ್ಯ ಅಸ್ಪೃಶ್ಯರನ್ನಾಗಿಸಿದೆ. ತನ್ನ ಕಾಯಕದಿಂದ ಅಸ್ಪೃಶ್ಯತೆ ಸಮುದಾಯವೆಂದು ಕರೆಸಿಕೊಂಡಿದೆ. ತನ್ನ ಜೀವನ ನಿರ್ವಹಣೆಗಾಗಿ ಉಳಿದ ಸಮುದಾಯಗಳಿಗೆ ಸೇವೆ ಸಲ್ಲಿಸುವ ಮೂಲಕ ಬದುಕುತ್ತಿದೆ. ಅದರಂತೆಯೇ ಕುರುಬರೊಂದಿಗೆ ಮಾದಿಗ ಸಮುದಾಯ ಸಾಂಸ್ಕೃತಿಕ ಅನನ್ಯತೆಯು ಭಿನ್ನವಾದುದೆಂದೇ ಹೇಳಬೇಕಾಗುತ್ತದೆ. ಏಕೆಂದರೆ ಕುರಿಕಾಯುವ ಕಾಯಕ ಮಾಡುತ್ತಿದ್ದ ಕುರುಬರು ಅಡವಿಯಲ್ಲಿ ಅಲೆಯುತ್ತಿದ್ದರಿಂದ ಅವರಿಗೆ ಚಪ್ಪಲಿ ಒಲಿದುಕೊಡಲು ಮಾದಿಗರಾತನನ್ನು ಆಯಾಗಾರನನ್ನಾಗಿ ನೇಮಿಸಿಕೊಳ್ಳುವ ಪದ್ಧತಿಯಿತ್ತು.

ಸುಲುಪನ್ ಕುರುಬರ ಕುರಿತಾದ ಐತಿಹ್ಯವೊಂದು ಇವರೊಂದಿಗೆ ಹೊಂದಿರುವ ಸಂಬಂಧವನ್ನು ಈ ರೀತಿಯಲ್ಲಿ ಹೇಳುತ್ತದೆ. ಹಂಪಿ ಪ್ರದೇಶದಲ್ಲಿ ಸುಲುಪನ್ ಕುರುಬರ ಪೂರ್ವಜರು ಕುರಿ ಕಾಯುತ್ತ ನೆಲೆಸಿದ್ದರು. ಅಲ್ಲಿದ್ದ ಕರಿಯ ಲಿಂಗದ ಗುಡಿಗೆ ದಿನಾಲು ಹಾಲು-ಮೊಸರಿನಿಂದ ಪೂಜೆ ಮಾಡುತ್ತಿದ್ದರು. ಅಲ್ಲಿಂದ ಮುಂದಕ್ಕೆ ಬರುವಾಗ ಆ ದೇವರು ನಾನು ನಿಮ್ಮೊಂದಿಗೆ ಬರುತ್ತೇನೆ ಕರೆದುಕೊಂಡು ಹೋಗಿರೆಂದು ಹೇಳಿತು. ಆ ಪ್ರಕಾರವಾಗಿ ದೇವರನ್ನು ತೆಗೆದುಕೊಂಡು ಹೋಗುವ ಸುದ್ದಿ ತಿಳಿದು ಅಲ್ಲಿದ್ದ ಗೌಡನು ತನ್ನ ಸೈನ್ಯದೊಂದಿಗೆ ಇವರನ್ನು ಹಿಂಬಾಲಿಸಿಕೊಂಡು ಬಂದನು. ಅವರಿಂದ ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲ ಎಂದರಿತವರು ಆ ಕರಿಯಣ್ಣ ದೇವರನ್ನು ತಮ್ಮ ಜೊತೆಗಿದ್ದ ಮಾದಿಗರಾತನ ಚಪ್ಪಲಿ ರಿಪೇರಿ ಮಾಡುವ ಚೀಲದಲ್ಲಿ ಬಚ್ಚಿಟ್ಟರು. ಬಂದವರಿಗೆ ದೇವರು ಕಾಣದೇ ಬರಿಗೈಯಲ್ಲಿ ಹಿಂತಿರುಗಿದರು. ಅಲ್ಲಿಂದ ಬಂದವರು ಕಾಮಸಮುದ್ರದಲ್ಲಿ ಪ್ರತಿಷ್ಠಾಪಿಸಿಕೊಂಡು ಕರಿಯಣ್ಣ ದೇವರೆಂದು ಆರಾಧಿಸುತ್ತಾರೆ. ಅವರೊಂದಿಗೆ ಇದ್ದ ಮಾದಗಿರಾತನ ಸಂತತಿಯು ಇಂದು ಕಾಮಸಮುದ್ರದ ಪಕ್ಕದಲ್ಲಿರುವ ಜಾಜೂರು ಗ್ರಾಮದಲ್ಲಿದ್ದಾರೆ. ಅವರು ಕರಿಯಮ್ಮ ದೇವಿಯನ್ನು ಆರಾಧಿಸುತ್ತಾರೆ. ಪ್ರಸ್ತುತ ನಾಯಕರು ಈ ದೇವತೆಯ ಪೂಜಾರಿಗಳಾಗಿದ್ದು,

ಅಲ್ಲಿ ಪ್ರತಿವರ್ಷ ನಡೆಯುವ ಕರಿಯಮ್ಮನ ಜಾತ್ರೆಯಲ್ಲಿ ಕೋಣವನ್ನು ಬಲಿ ಕೊಡಲಾಗುತ್ತದೆ. ಆ ಕೋಣವನ್ನು ಕಡಿಯುವುದು ಕಾಮಸಮುದ್ರದ ಸುಲುಪನ್ ಕುರುಬರ ಗೊಂಚಿಗಾರರು. ನಂತರ ಅದನ್ನು ಮಾದಿಗರೆಲ್ಲ ಪಾಲು ಮಾಡಿಕೊಳ್ಳುತ್ತಾರೆ. ಆಗ ಸುಲುಪನ್ ಕುರುಬರಿಗೆ ಕಾಮಸಮುದ್ರದ ಕರಿಉಣ್ಣನ ಒಂದು ಪಾಲನ್ನು ಎತ್ತಿಕೊಡುತ್ತಾರೆ. ಹಾಗಾಗಿಯೇ ಇವರನ್ನು ದೊಡ್ಡ ಮಾದಿಗರೆಂದು ಬೀಗರು ಕುಚೇಷ್ಟೆ ಮಾಡುತ್ತಾರೆ.

ಮಾದಿಗರು ಕುರುಬರ ವ್ಯಕ್ತಿಗಳು ಸತ್ತಾಗ ಸಾವು ಸುದ್ದಿ ಮುಟ್ಟಿಸುವ ಕಾರ್ಯದಿಂದ ಹಿಡಿದು ನಂತರ ಕುಣಿ ತೆಗೆಯಲು ಅಳತೆ ಮಾಡಿಕೊಡುವರು. ಏಕೆಂದರೆ ಪ್ರತಿಯೊಬ್ಬರ ಚಪ್ಪಲಿ ಹೊಲಿದು ಕೊಡುವುದರಿಂದ ಆತನ ಎತ್ತರ, ಅಳತೆ ಗೊತ್ತಿರುತ್ತದೆ ಎಂಬುದು ಇದರ ಹಿಂದಿದೆ. ಒಟ್ಟಿನಲ್ಲಿ ಈ ಪರಿಸರದಲ್ಲಿ ಕುರುಬರಲ್ಲದೇ, ಗೊಲ್ಲರು, ಬೇಡರು ಮುಂತಾದ ಸಮುದಾಯಗಳು ತಮ್ಮೆಲ್ಲ ಕಾರ್ಯಗಳಿಗೂ ಮಾದಿಗರ ಪಾತ್ರ ಪ್ರಮುಖವಾದುದು. ಆಯಾ ದೈವಗಳಲ್ಲಿ ಒಂದೊಂದು ರೀತಿಯ ಆಚರಣೆಗಳಲ್ಲಿ ಅವರಿಗೂ ಪಾಲು ನೀಡಿರುವುದನ್ನು ಈ ಭಾಗದಲ್ಲಿ ಕಂಡುಬರುತ್ತದೆ. ಅದರಂತೆಯೇ ಕುರುಬರಲ್ಲಿ ರೇವಣಸಿದ್ಧನ ಗುರುಪರಂಪರೆಯಿದ್ದಂತೆ, ಮಾದಿಗ ಸಮುದಾಯದಲ್ಲಿ ಬಾಲಬಸಪ್ಪ ಎಂಬ ಗುರು ಪರಂಪರೆಯಿಂದೆ. ಅವರು ಮಾದಿಗ ಸಮುದಾಯಕ್ಕೆ ಗುರುಗಳಾಗಿ ಕಾಯ ನಿರ್ವಹಿಸುವರು. ಬಾಲಬಸಪ್ಪನ ಕಾವ್ಯಗಳು ಮೌಖಿಕವಾಗಿ ದೊರೆಯುತ್ತಿದ್ದು, ಅವು ಈ ಪರಂಪರೆಯ ಕುರಿತು ಸಮಗ್ರ ಚಿತ್ರಣವನ್ನು ಕಟ್ಟಿಕೊಡುತ್ತವೆ.

ಈ ಮೇಲೆ ಚರ್ಚಿಸಿದ ಸಮುದಾಯಗಳಲ್ಲದೇ ರೆಡ್ಡಿಗರು ಮರಾಠಿಗರು, ಪೆರಿಕೆಯವರು ಕುರುಬರ ಆರಾಧ್ಯದೈವ ಮಲ್ಲಯ್ಯನನ್ನು ಮನೆದೇವರಾಗಿ ಆರಾಧಿಸುವರು. ಉಪ್ಪಾರ, ಚಲುವಾದಿಗಳಂತಹ ಸಮುದಾಯಗಳವರು ಗೊರವರಾಗಿ ಸೇವೆ ಸಲ್ಲಿಸುವುದು ಕಂಡುಬರುತ್ತದೆ. ಒಟ್ಟಿನಲ್ಲಿ ಕುರುಬ ಸಮುದಾಯ ಕೆಲ ಸಣ್ಣಪುಟ್ಟ ವಿರಸಗಳಿದ್ದರೂ, ಈ ಭಾಗದಲ್ಲಿ ಎಲ್ಲರೊಂದಿಗೂ ಅನ್ಯೋನ್ಯವಾಗಿ ಬದುಕುತ್ತಿರುವುದು ಈ ಭಾಗದಲ್ಲಿ ಕಂಡುಬರುತ್ತದೆ.

**ಕೊನೆಟಿಪ್ಪಣಿಗಳು**

೧. ಕಲಬುರ್ಗಿ ಎಂ.ಎಂ., ಮಾರ್ಗ, ಸಂಪುಟ ೪, ಪು.೩೮೨-೩೮೩

೨. ಶಂಕರನಾರಾಯಣ ತೀ.ನಂ., ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು, ಪು.೮೨.

೩. ಮೀರಾಸಾಬಿಹಳ್ಳಿ ಶಿವಣ್ಣ, ಮ್ಯಾಸಮಂಡಲ, ಪು. ೧೧೯, ೧೨೦

೪. ಲಕ್ಕಪ್ಪಗೌಡ ಎಚ್.ಜೆ.(ಸಂ) ಹಾಲಕೆನೆ, ಪು. ೧೯೨

# ಅಧ್ಯಾಯ ಆರು

# ಗಡಿನಾಡ ಕುರುಬ ಸಮುದಾಯದ ಸಮಸ್ಯೆ ಮತ್ತು ಸವಾಲುಗಳು

ವೇದಾವತಿ-ತುಂಗಭದ್ರ ನದಿಗಳ ಮಧ್ಯದಲ್ಲಿ ನೆಲೆಸಿರುವ ಕುರುಬ ಸಮುದಾಯ ಆರ್ಥಿಕ, ರಾಜಕೀಯ, ಶೈಕ್ಷಣಿಕ ಮತ್ತು ಸಂಘಟನಾತ್ಮಕವಾಗಿಯೂ, ಉಳಿದ ಕರ್ನಾಟಕದಲ್ಲಿನ ಕುರುಬರಿಗೆ ಹೋಲಿಸಿದರೆ ತೀರಾ ಹಿಂದುಳಿದಿರುವುದು ಕಂಡುಬರುತ್ತದೆ. ಮೂಲತಃ ಕುರಿಸಾಕಾಣಿಕೆ, ಕಂಬಳಿನೇಯ್ಗೆ ಮತ್ತು ಕೃಷಿಯಿಂದ ಜೀವಿಸುತ್ತಿರುವ ಈ ಪರಿಸರವು ಕುರುಚಲು ಕಾಡು, ಬೆಟ್ಟ-ಗುಡ್ಡಗಳಿಂದ ಕೂಡಿದ ಬಯಲುಸೀಮೆ. ಈ ಪರಿಸರದಲ್ಲಿ ನೀರಾವರಿ ಸೌಲಭ್ಯ ವಿಲ್ಲದಿರುವುದರಿಂದ ಒಣ ಬೇಸಾಯದಿಂದ ವರ್ಷಕ್ಕೆ ಒಂದು ಬೆಳೆ ಮಾತ್ರ ಬೆಳೆಯುವರು. ಅದು ಮುಂಗಾರು ಮಳೆಗೆ ಬಿತ್ತನೆಯಾದರೆ ಹಿಂಗಾರು ಮಳೆಗೆ ಕೊಯ್ಲಿಗೆ ಬರುತ್ತದೆ. ಅವರು ಕುರಿಸಾಕಾಣಿಕೆಗಾಗಿ ಮೇವು-ನೀರು ಹರಸುತ್ತ ಬಂದು ನೆಲೆಸಿದ ಕಾರಣಕ್ಕಾಗಿ ಕುರಿಸಾಕಣೆಗೆ ನೀಡಿದ ಪ್ರಾಶಸ್ತ್ಯವನ್ನು ಕೃಷಿಗೆ ನೀಡಿದ್ದು ತೀರಾ ಇತ್ತೀಚೆಗೆ. ಹಾಗಾಗಿಯೇ ಕೃಷಿಭೂಮಿಗಳು ಕಲ್ಲು, ಬಂಡೆಗಳನ್ನು ಹೊಂದಿದ್ದು, ಸಮತಟ್ಟಿಲ್ಲದವಾಗಿವೆ. ಈ ಪಾರಂಪರಿಕ ವೃತ್ತಿಗಳಿಂದು ಪ್ರಪಂಚೀಕರಣದ ಪ್ರಭಾವಕ್ಕೆ ಒಳಗಾಗಿ ಬದಲಾಗುತ್ತಿವೆ. ಆದರೂ ಬೇರೆ ಲಾಭದಾಯಕ ವೃತ್ತಿಗಳತ್ತ ಹೊರಳಲು ಈ ಸಮುದಾಯ ಮುಂದಾಗುತ್ತಿಲ್ಲ. ಇತ್ತಿತ್ತಲಾಗಿ ಯುವ ಜನತೆ ನಗರಗಳತ್ತ ಬಂದು ದುಡಿಯುತ್ತಿರುವರಾದರೂ ಆ ಉದ್ಯೋಗಗಳಿಂದ ಆರ್ಥಿಕವಾಗಿ ಬೆಳೆಯಲು ಸಾಧ್ಯವಾಗುತ್ತಿಲ್ಲ. ಪ್ರಸ್ತುತ ಈ ಅಧ್ಯಾಯದಲ್ಲಿ ಕುರುಬ ಸಮುದಾಯದ ಸಮಸ್ಯೆಗಳನ್ನು ಒಂದೊಂದಾಗಿ ಚರ್ಚಿಸೋಣ.

### ಆರ್ಥಿಕ ಸಮಸ್ಯೆಗಳು

ಪಶುಪಾಲನೆ ಕಷ್ಟಕರ ವೃತ್ತಿಯಾಗಿದ್ದರೂ, ಅದನ್ನೇ ಮಾಡುತ್ತ ಬರುತ್ತಿರುವ ಸಮುದಾಯ ಇತ್ತೀಚಿನ ದಿನಗಳಲ್ಲಿ ಕಾಯ್ದಿರಿಸಿದ ಹುಲ್ಲುಗಾವಲು(ಗೋಮಾಳ)ಗಳು ಕೈಗಾರಿಕೆ ಕಂದಾಯ ಕಾಯ್ದೆಯ

ಅನ್ವಯ ೧೦೦ ಜಾನುವಾರುಗಳಿಗೆ ೩೦ ಎಕರೆ ಭೂಮಿ ಮೀಸಲು ಎಂಬ ಕಾಯ್ದೆಯಿದ್ದರೂ, ಅವು ಕೃಷಿ, ಕೈಗಾರಿಕೆಗಳಿಗಾಗಿ ಪರಿವರ್ತನೆ ಆಗುತ್ತಿರುವುದರಿಂದ ದನ-ಕುರಿಗಳಿಗೆ ಆಹಾರ ಸಿಗುವುದು ಕಷ್ಟವಾಗುತ್ತಿದೆ. ಇದರಿಂದಾಗುವ ಸಮಸ್ಯೆಗಳನ್ನು ಕುರಿತು ಮಂಕಡ್ ಅವರು "The Forests are being Cut down So they are Slowely Giuing up their Original Occupation and take to agriculture They take to Cultivate for Others as Servants and get a Settled Sun of money of their Work"[೧] ಎಂದು ಹೇಳಿರುವರು. ಪಶುಪಾಲನೆಗಾಗಿ ಮೀಸಲಾಗಿದ್ದ ಹುಲ್ಲುಗಾವಲುಗಳು ನಿಧಾನವಾಗಿ ಕೃಷಿ ಭೂಮಿಗಳಾಗಿ ಬದಲಾದವು. ನಂತರ ಅವನ್ನು ಕೇಂದ್ರ ಮತ್ತು ರಾಜ್ಯ ಸರಕಾರಗಳು ಬಂಡವಾಳಶಾಹಿಗಳೊಂದಿಗೆ ಸೇರಿಕೊಂಡು ಕೈಗಾರಿಕೆಗಳಿಗೆ ಬಳಸುತ್ತಿವೆ.

ಚಳ್ಳಕೆರೆ ತಾಲೂಕಿನಲ್ಲಿ ಮೈಸೂರು ಮಹಾರಾಜರ ಕಾಲದಿಂದಲೂ ಪಶುಪಾಲನೆಗಾಗಿಯೇ ಕಾಯ್ದಿರಿಸಿದ ಅಮೃತ ಮಹಲ್ ಕಾವಲನ್ನು ಕೇಂದ್ರ ಸರಕಾರವು ರಾಜ್ಯ ಸರಕಾರದೊಂದಿಗೆ ಸೇರಿ ಪೈಲೆಟ್‌ರಹಿತ ಯುದ್ಧವಿಮಾನ ತರಬೇತಿ ಕೇಂದ್ರ, ಅಣುಸ್ಥಾವರಗಳಂಥ ಅಪಾಯಕಾರಿ ಉದ್ದಿಮೆಗಳನ್ನು ಸ್ಥಾಪಿಸುವ ಸಲುವಾಗಿ ೨೦ ಸಾವಿರ ಎಕರೆಗಳನ್ನು ಪಡೆದಿದೆ. ಆ ಮುಖೇನ ಈ ಭಾಗದಲ್ಲಿ ಪಶುಪಾಲನೆ ಅದರಲ್ಲಿಯೂ ಕುರಿಸಾಕಾಣಿಕೆಯನ್ನು ನಂಬಿ ಬದುಕುತ್ತಿದ್ದ ಕುರುಬ ಸಮುದಾಯವನ್ನು ಒಳಗೊಂಡಂತೆ ಪಶುಪಾಲಕ ಸಮುದಾಯಗಳ ಆರ್ಥಿಕತೆಯ ಮೇಲೆ ದುಷ್ಪರಿಣಾಮಗಳನ್ನು ಬೀರಿದೆ.

ಬಳ್ಳಾರಿ ಜಿಲ್ಲೆ ಮತ್ತು ಡಿ. ಹಿರೇಹಾಳ, ಓಬುಳಾಪುರಂ ಸುತ್ತಮುತ್ತಲ ಹಳ್ಳಿಗಳ ಕೃಷಿಭೂಮಿಯನ್ನು ಒಳಗೊಂಡಂತೆ ಬೆಟ್ಟ-ಗುಡ್ಡಗಳಿಂದು ಗಣಿಗಾರಿಕೆಗಾಗಿ ಬಳಕೆಯಾಗುತ್ತಿವೆ. ಅದಕ್ಕಾಗಿ ಕೃಷಿಭೂಮಿಗಳನ್ನು ಖರೀದಿಸಿ ಸುತ್ತಲೂ ತಂತಿಬೇಲಿ ಇಲ್ಲವೆ ಕಾಂಪೌಂಡುಗಳನ್ನು ನಿರ್ಮಿಸಿದ್ದಾರೆ. ಇದರಿಂದಾಗಿ ರಾಯದುರ್ಗಂನ ಕಡೆಯಿಂದ ವಲಸೆ ಬರುತ್ತಿದ್ದ ಕುರಿಗಾರರಿಗೆ ಸಮಸ್ಯೆಯಾಗಿದೆ. ಜೊತೆಗೆ ಅಲ್ಲಿಂದ ಬರುವ ಕಲುಷಿತ ನೀರನ್ನು ಕುಡಿದು ಕುರಿಗಳು ರೋಗ-ರುಜಿನಗಳಿಗೆ ತುತ್ತಾಗುತ್ತವೆ. ಹದಿನೈದು-ಇಪ್ಪತ್ತು ವರ್ಷಗಳ ಕೆಳಗೆ ಕುರಿಗಳಿಗೆ ಸಾಕಷ್ಟು ಮೇವು-ನೀರು ದೊರೆಯುತ್ತಿದ್ದ ಈ ಪರಿಸರವಿಂದು ಕುರಿಸಾಕಾಣಿಕೆಯ ಬದುಕನ್ನು ಅತಂತ್ರವಾಗಿಸಿದೆ. ಡಿ. ಹಿರೇಹಾಳ, ಓಬುಳಾಪುರಂ, ಬಸಾಪುರ, ವಿಠಲಾಪುರ, ಮಲಪನಗುಡಿಗಳನ್ನು ಒಳಗೊಂಡಂತೆ ಅನೇಕ ಹಳ್ಳಿಗಳಲ್ಲಿ ಸಾವಿರಾರು ಎಕರೆಯ ಕೃಷಿಭೂಮಿಯು ಗಣಿಗಾರಿಕೆಗಾಗಿ ಬಂಡವಾಳಶಾಹಿಗಳ ಪಾಲಾಗಿದೆ. ಭೂಮಿಯನ್ನು ಖರೀದಿಸುವಾಗ ಅಲ್ಲಿನ ರೈತರಿಗೆ ಆಸೆ-ಆಮಿಷಗಳನ್ನು ಒಡ್ಡಿ, ಬೆದರಿಸಿಯೂ ಪಡೆದ ಉದಾಹರಣೆಗಳು ಕ್ಷೇತ್ರಕಾರ್ಯ ಸಂದರ್ಭದಲ್ಲಿ ದೊರೆತಿವೆ. ರಾಯದುರ್ಗಂ ಸುತ್ತಮುತ್ತಲು ೧೨ ಸಾವಿರಕ್ಕೂ ಅಧಿಕ ಎಕರೆಗಳ ವಿಸ್ತೀರ್ಣತೆಯ ಗೋಮಾಳದ ೭ ಸಾವಿರಕ್ಕೂ ಹೆಚ್ಚು ಭೂಮಿ ಆಂಧ್ರ ಸರ್ಕಾರ ಕೈಗಾರಿಕೆಗಳ

ಸ್ಥಾಪನೆಗಾಗಿ ಖಾಸಗಿಯವರಿಗೆ ನೀಡುತ್ತಿರುವ ಹುನ್ನಾರಗಳು ನಡೆಯುತ್ತಿವೆ ಎಂದು ಹೇಳುವರು. ಅದು ಕಾರ್ಯಗತವಾದರೆ ಪಶುಪಾಲನೆ ಮಾಡುತ್ತಾ ಜೀವಿಸುತ್ತಿದ್ದವರ ಬದುಕನ್ನು ಇನ್ನೂ ಅತಂತ್ರ ವಾಗಿಸುತ್ತದೆ.

ಮೊಳಕಾಲ್ಮೂರು ತಾಲೂಕಿನಲ್ಲಿದ್ದ ೩೫ ಹುಲ್ಲುಗಾವಲುಗಳಲ್ಲಿ ಇಂದು ಉಳಿದಿರುವುದು ೬-೭ ಮಾತ್ರವೇ. ಹಾಗಾಗಿ ಕುರಿಸಾಕಾಣಿಕೆಗೆ ಮೇವು-ನೀರು ಕೊರತೆ ಉಂಟಾಗಿದೆ. ಹುಲ್ಲುಗಾವಲುಗಳು ಕೃಷಿಭೂಮಿಗಳಾದರೆ ವರ್ಷದಲ್ಲಿ ೬ ತಿಂಗಳ ಮಟ್ಟಿಗಾದರೂ ಕೂಳೆ ರೂಪದಲ್ಲಿ ಮೇವು ದೊರೆಯುತ್ತದೆ. ಆದರೆ ಆ ಭೂಮಿ ಗಣಿಗಾರಿಕೆ, ಕೈಗಾರಿಕೆಗಳಿಗೆ ಬಳಕೆಯಾಗುತ್ತಿರುವುದು ಇಲ್ಲಿನ ಕುರುಬರ ಬದುಕನ್ನು ಅತಂತ್ರವಾಗಿಸಿದೆ. ಕುರಿಸಾಕಾಣಿಕೆ ಮಾಡಲು ಉತ್ತಮ ಪರಿಸರವಾಗಿದ್ದರೂ, ಈ ಕಾರಣಗಳಿಂದಾಗಿಯೇ ಸಮುದಾಯದಲ್ಲಿಂದು ಕುರಿಸಾಕಾಣಿಕೆ ಮಾಡುವವರ ಸಂಖ್ಯೆ ಕಡಿಮೆಯಾಗುತ್ತ ಬರುತ್ತಲಿದೆ.

ಇಷ್ಟೆಲ್ಲ ಕಷ್ಟಕರವಾಗಿದ್ದರೂ ಕುರಿಸಾಕಣೆ ಮುಂದುವರಿಸಿಕೊಂಡು ಬಂದಿರುವವರಿಗೆ ಬೇರೆಯದೇ ಸಮಸ್ಯೆಗಳಿವೆ. ಕುರಿಗಳಿಗೆ ಬರುವ ಸಣ್ಣಪುಟ್ಟ ರೋಗಗಳಿಗೆ ಪಾರಂಪರಿಕ ಚಿಕಿತ್ಸೆ ನೀಡುತ್ತಾರಾದರೂ. ವೈರಸ್, ಬ್ಯಾಕ್ಟೀರಿಯಾ, ಬೂಸ್ಟ್, ಪ್ರೋಟೋ ಜೋವ್(ಏಕಾಣು ಜೀವಿ) ಕೀಟಗಳಿಂದ ಬರುವ ಸಾಂಕ್ರಾಮಿಕ ರೋಗಗಳನ್ನು ಗುರುತಿಸಿ ಚಿಕಿತ್ಸೆ ಕೊಡಿಸುವಲ್ಲಿ ಎಡವುತ್ತಿರುವುದು ವಾಸ್ತವ ಸಂಗತಿ. ಮತ್ತೊಂದು ಕುರಿಗಳು ಇಂಥ ಸಾಂಕ್ರಾಮಿಕ ರೋಗಗಳಿಗೆ ತುತ್ತಾದಾಗ ಪಶುವೈದ್ಯರಿಗೆ ದುಬಾರಿ ಹಣವನ್ನು ನೀಡಿ ಮಂದೆ ಹತ್ತಿರ ಕರೆತರಬೇಕಾಗುತ್ತದೆ. ಬಂದ ವೈದ್ಯರು ಖಾಸಗಿ ಔಷಧಾಲಯಗಳಲ್ಲಿ ಔಷಧಿ ತರಲು ತಿಳಿಸುವರು. ಹಾಗೆಯೇ ಇಂಜೆಕ್ಷನ್ ಮಾಡಲು ಕುರಿವೊಂದಕ್ಕೆ ೩ರಿಂದ ೫ ರೂಪಾಯಿಗಳನ್ನು ನೀಡಬೇಕು. ಯಾವ ಕಾಲಕ್ಕೆ ಯಾವ ಔಷಧಿಯನ್ನು ನೀಡಬೇಕೆಂಬ ಅರಿವು ಇಲ್ಲದಿರುವುದು, ಮತ್ತೆ ತಂದ ಔಷಧಿಯನ್ನು ನೀಡಬೇಕಾದ ಪ್ರಮಾಣಕ್ಕಿಂತ ಹೆಚ್ಚಾಗಿ ಅಥವಾ ಕಡಿಮೆಯಾಗಿ ಕೊಡುವುದರಿಂದ ಕುರಿಗಳನ್ನು ಕಳೆದುಕೊಳ್ಳುವ ನಿದರ್ಶನಗಳಿವೆ. ಮಾರುಕಟ್ಟೆಯ ಸಮಸ್ಯೆಗಳು, ಕುರಿಗಳಿಗೆ ಭದ್ರತೆಯ ಕೊರತೆ, ಕುಡಿಯುವ ನೀರು ಮತ್ತು ಆರೋಗ್ಯ ಸಮಸ್ಯೆಗಳು, ಉತ್ತಮ ತಳಿಗಳ ಕೊರತೆಗಳಂಥ ಸಮಸ್ಯೆಗಳು ಕುರಿಸಾಕಾಣಿಕೆಯಿಂದ ಸಮುದಾಯವನ್ನು ವಿಮುಖವಾಗಿಸಿ, ಆರ್ಥಿಕ ಸ್ಥಿತಿಯನ್ನು ದುಸ್ಥಿತಿಗೆ ತಳ್ಳಿವೆ.

ಕುರಿಸಾಕಣೆಯಂತೆಯೇ ಕಂಬಳಿ ನೇಯ್ಗೆಯು ಕುರುಬ ಸಮುದಾಯದ ಪಾರಂಪರಿಕ ವೃತ್ತಿಯಾಗಿದೆ. ೧೯೯೦ರ ದಶಕದಿಂದ ಬೀಸತೊಡಗಿರುವ ಪ್ರಪಂಚೀಕರಣದ ಗಾಳಿಯು ಕಂಬಳಿ ಉದ್ದಿಮೆಯನ್ನು ನೆಲಕಚ್ಚಿಸಿದೆ. ಹಾಗಾಗಿ ಕಂಬಳಿ ನೇಯ್ಗೆ ಉದ್ದಿಮೆಯು ಲಾಭ-ನಷ್ಟಗಳ ನಡುವೆ ಕಳೆದು ಹೋಗುತ್ತಲಿದೆ. ಚಿಕ್ಕ ಮತ್ತು ಗುಡಿ ಕೈಗಾರಿಕೆಗಳು ಭಾರತದ ಅರ್ಥವ್ಯವಸ್ಥೆಯ ತಳಹದಿಗಳು.

ಗಾಂಧೀಜಿ ಅವರು ಹೇಳಿರುವ ಭಾರತದ ಏಳ್ಗೆಯು ಗೃಹಕೈಗಾರಿಕೆಗಳಿಂದ ಮಾತ್ರ ಸಾಧ್ಯವೆಂಬ ಮಾತನ್ನು ಬುಡಮೇಲಾಗಿಸಿದೆ. ಹಾಗಾಗಿಯೇ ಹಿಂದೆ ಕುರುಬ ಸಮುದಾಯವಿರುವ ಪ್ರತಿ ಮನೆಯ ಮುಂದೆ ಇದ್ದ ಮಗ್ಗಗಳು ಇಂದು ನಿಂತು ಹೋಗಿವೆ. ಈ ಭಾಗದಲ್ಲಿ ಚಳ್ಳಕೆರೆ, ಮೊಳಕಾಲ್ಮೂರು, ಗುಮ್ಮಗುಟ್ಟ, ಬ್ರಹ್ಮಸಮುದ್ರಂ, ಶೆಟ್ಟೂರು ಮಂಡಲಗಳನ್ನು ಹೊರತುಪಡಿಸಿದರೆ, ಮೊಳಕಾಲ್ಮೂರು ಉತ್ತರ ಭಾಗ, ಸಂಡೂರು, ಬಳ್ಳಾರಿ, ಸಿರುಗುಪ್ಪ, ಗುಂತಕಲ್ಲು, ಡಿ. ಹಿರೇಹಾಳ, ಬೊಮ್ಮನಹಾಳ್, ಆಲೂರು, ಆದೋನಿ, ಹಾಲಹರವಿ, ಗೂಳ್ಯಂಗಳನ್ನು ಒಳಗೊಂಡಂತೆ ಕಂಬಳಿ ನೇಯ್ಗೆ ಸಂಪೂರ್ಣವಾಗಿ ನಿಂತುಹೋಗಿದೆ. ಕರ್ನಾಟಕಕ್ಕೆ ಹೋಲಿಸಿದರೆ ಆಂಧ್ರಪ್ರದೇಶದಲ್ಲಿ ಕಂಬಳಿ ಉದ್ದಿಮೆಯು ತುಂಬಾ ಕಡಿಮೆಯಾಗಿದೆ. ಏಕೆಂದರೆ ರೇಷ್ಮೆ ನೇಕಾರಿಕೆಗೆ ಕೊಟ್ಟ ಪ್ರಾಶಸ್ತ್ಯವನ್ನು ಕಂಬಳಿ ನೇಯ್ಗೆಗೆ ಕೊಡದಿರುವುದು. ಅಲ್ಲಿನ ಸರಕಾರ ಕಂಬಳಿ ನೇಯ್ಗೆಯು ನೇಕಾರಿಕೆಯಲ್ಲಿ ಬರುವುದಿಲ್ಲ ಎಂದು ಹೇಳಿರುವುದರಿಂದಾಗಿಯೇ ಅನಂತಪುರಂ ಜಿಲ್ಲೆಯಲ್ಲಿದ್ದ ೧೯ ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘಗಳು ಇಂದು ಸಂಪೂರ್ಣವಾಗಿ ನಿಂತುಹೋಗಿವೆ. ಒಂದು ಕಾಲಕ್ಕೆ ಕಂಬಳಿ ನೇಯ್ಗೆಯನ್ನೆ ವೃತ್ತಿಯಾಗಿಸಿಕೊಂಡು ಬದುಕುತ್ತಿದ್ದ ಸಮುದಾಯ ಆರ್ಥಿಕವಾಗಿ ಮುಂದುವರಿದಿತ್ತು. ಆದರೆ ಆಧುನಿಕ ರಗ್ಗು ಬೆಡ್‌ಶೀಟ್‌ಗಳು ಪಾರಂಪರಿಕ ಕಂಬಳಿಯನ್ನು ಮೂಲೆಗೆ ತಳ್ಳಿವೆ.

ಇತ್ತೀಚಿನ ವರ್ಷಗಳಲ್ಲಿ ಕುರಿಸಾಕಣೆ, ಕಂಬಳಿ ನೇಯ್ಗೆಯೊಂದಿಗೆ ಕೃಷಿಯತ್ತಲೂ ಸಾಗಿ ಬಂದಿರುವ ಸಮುದಾಯಕ್ಕೆ ಮಳೆಯಾಶ್ರಿತ ಒಣಬೇಸಾಯವೇ ಆಧಾರವಾಗಿದೆ. ಹಾಗಾಗಿ ವರ್ಷಕ್ಕೆ ಒಂದು ಫಸಲು ಬೆಳೆಯುವರು. ಅದು ಮುಂಗಾರು ಮಳೆಗೆ ಬಿತ್ತನೆಯಾದರೆ ಹಿಂಗಾರು ಮಳೆಗೆ ಕೊಯ್ಲಾಗುತ್ತದೆ. ಇಲ್ಲಿ ಆಹಾರ ಧಾನ್ಯಗಳನ್ನು ಬೆಳೆದುಕೊಳ್ಳುವರು. ಈ ಭಾಗದ ಮುಖ್ಯ ವಾಣಿಜ್ಯ ಬೆಳೆ ಶೇಂಗಾ. ಕುರುಬರು ಎಲ್ಲೆಲ್ಲಿ ಕೃಷಿಯನ್ನೆ ಪ್ರಧಾನ ವೃತ್ತಿಯಾಗಿಸಿಕೊಂಡಿರುವರೋ ಆ ಗ್ರಾಮಗಳಲ್ಲಿ ಕುರಿಸಾಕಣೆ, ಕಂಬಳಿ ನೇಯ್ಗೆಯು ಕಡಿಮೆಯಾಗಿದೆ. ಎಲ್ಲ ಕಡೆಯು ಸಣ್ಣ ಇಡುವಳಿದಾರ ರಾಗಿರುವುದರಿಂದ ಬ್ಯಾಂಕ್‌ನಂತಹ ಹಣಕಾಸು ಸಂಸ್ಥೆಗಳು ಸಾಲ ಸೌಲಭ್ಯ ನೀಡುತ್ತಿಲ್ಲ. ಇದರಿಂದಾಗಿ ಕೃಷಿ ಚಟುವಟಿಕೆಗಳಿಗಾಗಿ ಚಿತ್ರದುರ್ಗ, ಚಳ್ಳಕೆರೆ, ರಾಯದುರ್ಗದಲ್ಲಿನ ಶೇಂಗಾ ಮಾರಾಟ ವ್ಯಾಪಾರಿಗಳಿಂದ ಮುಂಗಡವಾಗಿ ಬಾಕಿ ಪಡೆಯುವರು. ಫಸಲು ಬಂದಾಗ ಅವರಿಗೆ ಮಾರಾಟ ಮಾಡಬೇಕು. ಮೊದಲೇ ಸಾಲ ನೀಡಿದ್ದರಿಂದ ಕಡಿಮೆ ಬೆಲೆಗೆ ವ್ಯಾಪಾರಿಗಳು ಕೊಂಡುಕೊಳ್ಳುತ್ತಾರೆ. ಇದರಿಂದಾಗಿ ಲಾಭದ ಅಂಶ ಕಡಿಮೆ ಬರುತ್ತದೆ. ಬೆಳೆ ಕಟಾವು ಮಾಡಿದ ಸಂದರ್ಭದಲ್ಲಿ ಬರುವ ಕೇಡು ಮಳೆಗಳಿಂದ ಬೆಳೆದ ಫಸಲು ಕೈಗೆ ಸಿಗದಿರುವ ಸಂದರ್ಭಗಳು ಹೆಚ್ಚಿವೆ. ಸರಕಾರ ರೈತರ ಬೆಳೆಗಳಿಗೆ ನಿಗದಿ ಬೆಲೆ ನಿರ್ಧರಿಸದಿರುವುದು, ಮಾರ್ಕೆಟಿನಲ್ಲಿ ವ್ಯಾಪಾರಸ್ಥರೆ ಬೆಲೆ ನಿಗದಿಪಡಿಸುವುದು ಅವರ ಆರ್ಥಿಕ ಬದುಕನ್ನು ಇನ್ನೂ ಕಗ್ಗಂಟಾಗಿಸಿದೆ.

ಒಟ್ಟಾರೆಯಾಗಿ ಹುಲ್ಲುಗಾವಲುಗಳ ಸಮಸ್ಯೆ, ಕಂಬಳಿ ತಯಾರಿಕೆಯಲ್ಲಿನ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯದಿರುವುದು, ಪಾರಂಪರಿಕ ಕೃಷಿಯಿಂದ ಆರ್ಥಿಕವಾಗಿ ಬೆಳೆಯಲು ಸಾಧ್ಯವಾಗದಿರುವುದು ಈ ಪರಿಸರದಲ್ಲಿನ ಕುರುಬ ಸಮುದಾಯದ ಆರ್ಥಿಕತೆಯನ್ನು ಬಿಗಡಾಯಿಸಿದೆ. ಕುರಿಗಳಿಂದ ನೇರವಾಗಿ ಉಣ್ಣೆಯನ್ನು ಕತ್ತರಿಸಿ ತಂದು ಕಂಬಳಿ ನೇಯ್ಗೆಗೆ ಬಳಸಲು ಇಂದಿನ ಯುವಕರು ಮುಂದಾಗುತ್ತಿಲ್ಲ. ಜೊತೆಗೆ ಕಂಬಳಿಯೊಂದನ್ನು ತಯಾರಿಸಲು ನಾಲ್ಕು ಜನರು ಒಂದು ದಿನಪೂರ್ತಿ ದುಡಿಯಬೇಕು. ಅದಕ್ಕೆ ದೊರೆಯುವುದು ೪೦೦ರಿಂದ ೫೦೦ ರೂಪಾಯಿಗಳು. ಆ ನಾಲ್ಕು ಜನರು ಬೇರೆ ಕೆಲಸಕ್ಕೆ ಹೋದರೆ ಒಬ್ಬರಿಗೆ ೨೦೦ ರೂಪಾಯಿಗಳಾದರೂ ೮೦೦ರಿಂದ ೧೦೦೦ ರೂಪಾಯಿಗಳವರೆಗೆ ದುಡಿಯಬಹುದು. ಮತ್ತು ಇಂದಿನ ಆಧುನಿಕ ಜಗತ್ತು ಪಾರಂಪರಿಕ ಕಂಬಳಿಗಳನ್ನು ಖರೀದಿಸಲು ಹಿಂದೇಟು ಹಾಕುತ್ತಿರುವುದರಿಂದ ಈ ವೃತ್ತಿಯನ್ನು ಬಿಟ್ಟು ಪರ್ಯಾಯ ವೃತ್ತಿಗಳನ್ನು ಹರಸಿ ಬೆಂಗಳೂರು, ಹೈದರಾಬಾದ್, ಮುಂಬೈ ನಗರಗಳತ್ತ ವಲಸೆ ಹೋಗುತ್ತಿರುವುದು ಪ್ರತಿ ಗ್ರಾಮಗಳಲ್ಲಿಯೂ ಕಂಡುಬರುತ್ತದೆ.

**ಶೈಕ್ಷಣಿಕ ಸಮಸ್ಯೆಗಳು**

ಶಿಕ್ಷಣವು ಅಭಿವೃದ್ಧಿಯ ಮೂಲ ಮಂತ್ರ ಹಾಗೂ ಸಾಮಾಜಿಕ ಪರಿವರ್ತನೆಯ ಮೂಲ ಸಾಧನ. ಇದು "ಪ್ರಾಣಿ ರೂಪದಲ್ಲಿರುವ ಮಾನವನನ್ನು ಮಾನವತ್ವದೆಡೆಗೆ ಒಯ್ಯುವ ಸಾಧನ"[೨] ವಾಗಿದೆ. ಇದು ಸಾಮಾಜಿಕ ಚಲನೆಯ ವಾಹಕವಾಗಿದ್ದು, ಮೇಲ್ಮುಖ ಚಲನೆಗೆ ಅನುವು ಮಾಡಿಕೊಡುತ್ತದೆ. ದೇಶವೊಂದರ ಸರ್ವತೋಮುಖ ಬೆಳವಣಿಗೆಯು ಶಿಕ್ಷಣವನ್ನು ಅವಲಂಭಿಸಿದೆ. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಜ್ಞಾನವು ಒಂದು ಪ್ರಮುಖ ಕೊರತೆಯ ಸಂಪನ್ಮೂಲವೆಂದು ದೊಡ್ಡನಗೌಡ ಪಾಟೀಲರು ಹೇಳಿರುವರು. ಇದನ್ನು ಗಮನಿಸಿದಾಗ ದೇಶವೊಂದರ ಅಭಿವೃದ್ಧಿ ಅಲ್ಲಿನ ಜನರ ಶೈಕ್ಷಣಿಕ ಪ್ರಗತಿಯನ್ನು ಅವಲಂಬಿಸಿದರೇ, ಸಮುದಾಯವೊಂದರ ಅಭಿವೃದ್ಧಿಯು ಆ ಸಮುದಾಯದ ಶೈಕ್ಷಣಿಕ ಪ್ರಗತಿಯನ್ನು ಅವಲಂಬಿಸಿರುತ್ತದೆ. ಸಮುದಾಯವೊಂದರ ಆರ್ಥಿಕ, ರಾಜಕೀಯ ಅಭಿವೃದ್ಧಿಯು ಅದು ಪಡೆದ ಶಿಕ್ಷಣವನ್ನು ಅವಲಂಭಿಸಿರುತ್ತದೆ ಎಂದೇ ಹೇಳಬೇಕಾಗುತ್ತದೆ. ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡು ಗಡಿ ಪರಿಸರದಲ್ಲಿ ನೆಲೆಸಿರುವ ಕುರುಬ ಸಮುದಾಯದ ಶೈಕ್ಷಣಿಕ ಪ್ರಗತಿಯು ಅತ್ಯಂತ ಹಿಂದುಳಿದಿದೆ. ಇವರ ಸಾಕ್ಷರತೆಯ ಪ್ರಮಾಣ ಎರಡು ರಾಜ್ಯಗಳ ಸಾಕ್ಷರತಾ ಪ್ರಮಾಣಕ್ಕಿಂತ ತುಂಬಾ ಕೆಳಗಿದೆ. ಇನ್ನೂ ಶಿಕ್ಷಣ ಪಡೆದು ಉದ್ಯೋಗಗಳಿಗೆ ಸೇರಿದವರ ಪ್ರಮಾಣ ಶೇಕಡ ೧ಕ್ಕಿಂತಲೂ ಕಡಿಮೆಯಿದೆ. ಇದನ್ನು ನಾಲ್ಕನೆಯ ಅಧ್ಯಾಯದ 'ಶೈಕ್ಷಣಿಕ ಸ್ಥಿತಿಗತಿ'ಯಲ್ಲಿ ಕೋಷ್ಟಕ ನೀಡಿ ವಿವರಿಸಲಾಗಿದೆ.

ಇತ್ತೀಚಿನ ವರ್ಷಗಳಲ್ಲಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ೧೪ ವರ್ಷದವರೆಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಕೊಡಬೇಕೆಂಬ ನಿಯಮ ಜಾರಿಗೆ ತಂದಿದೆ. ಸಮುದಾಯ ಇತ್ತೀಚಿನ

ದಿನಗಳಲ್ಲಿ ಮಕ್ಕಳಿಗೆ ಶಿಕ್ಷಣ ಕೊಡಿಸಲು ಆಸಕ್ತಿ ತೋರಿಸುತ್ತಿದ್ದು, ಪ್ರೌಢ ಶಾಲೆಯವರೆಗೆ ಶಿಕ್ಷಣ ಕೊಡಿಸುತ್ತಿದ್ದಾರೆ. ಗಡಿ ಗ್ರಾಮಗಳಲ್ಲಿ ಪದವಿಪೂರ್ವ, ಪದವಿ ಕಾಲೇಜುಗಳಿಲ್ಲದ್ದರಿಂದ ಮುಂದಿನ ವಿದ್ಯಾಭ್ಯಾಸಕ್ಕೆ ತಾಲೂಕು, ಮಂಡಲ, ಜಿಲ್ಲಾ ಕೇಂದ್ರಗಳಿಗೆ ಕಳುಹಿಸಬೇಕಾಗುತ್ತದೆ. ಆದುದರಿಂದ ಪ್ರೌಢ ಶಿಕ್ಷಣದ ನಂತರ ಮುಂದಿನ ವಿದ್ಯಾಭ್ಯಾಸಕ್ಕೆ ಕಳುಹಿಸುವುದು ಕಡಿಮೆ. ಅದರಲ್ಲಿಯೂ ಮಹಿಳೆಯರನ್ನು ಕಳುಹಿಸುವ ಸಂಖ್ಯೆ ತುಂಬಾ ಕಡಿಮೆಯಿದೆ. ಕರ್ನಾಟಕಕ್ಕೆ ಹೋಲಿಸಿದರೆ ಆಂಧ್ರಪ್ರದೇಶದ ಗಡಿಯಲ್ಲಿ ಶೈಕ್ಷಣಿಕ ಪ್ರಗತಿಯು ದುರ್ಬಲವಾಗಿದೆ.

ಗಡಿ ಪರಿಸರದಲ್ಲಿನ ಕುರುಬರು ತೆಲುಗು ಮಾಧ್ಯಮಕ್ಕಿಂತಲೂ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಕೊಡಿಸಲು ಆಸಕ್ತಿ ತೋರಿಸುತ್ತಾರೆ. ಒಂದು ವರದಿಯಲ್ಲಿ ಉಲ್ಲೇಖಿಸಿರುವ ಅಂಕಿಸಂಖ್ಯೆ ಪ್ರಕಾರ ಆಂಧ್ರಪ್ರದೇಶದಲ್ಲಿ ಒಟ್ಟು ೮೪ ಕನ್ನಡ ಶಾಲೆಗಳಿದ್ದವು. ಅನಂತಪುರಂ ಜಿಲ್ಲೆಯಲ್ಲಿ ೧೮, ಕರ್ನೂಲು ಜಿಲ್ಲೆಯಲ್ಲಿ ೨೦ ಕನ್ನಡ ಶಾಲೆಗಳಿವೆ. ಈ ಶಾಲೆಗಳಲ್ಲಿ ಪ್ರಾಥಮಿಕ ಮತ್ತು ಪ್ರೌಢಶಾಲೆಯವರೆಗೆ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಪಡೆದು, ಮುಂದಿನ ಪದವಿ ಪೂರ್ವ ಶಿಕ್ಷಣಕ್ಕೆ ಕರ್ನಾಟಕಕ್ಕೆ ಬರಬೇಕಾಗುತ್ತದೆ. ಆಂಧ್ರಪ್ರದೇಶದಲ್ಲಿ ಕನ್ನಡ ಮಾಧ್ಯಮದಲ್ಲಿ ಕಲೆತು ನಂತರ ಉನ್ನತ ಶಿಕ್ಷಣ ಪಡೆದರೂ ಅವರು ಕನ್ನಡ ಭಾಷಾ ಶಾಲೆಗಳಲ್ಲಿ ಉಪಾಧ್ಯಾಯರಾಗಲು ಮಾತ್ರ ಅರ್ಹರಾಗಿರುತ್ತಾರೆ. ಉಳಿದಂತೆ ಯಾವುದೇ ಉದ್ಯೋಗಗಳಿಗೂ ಅವರು ಅರ್ಜಿ ಸಲ್ಲಿಸಲು ಆಂಧ್ರಪ್ರದೇಶ ಸರಕಾರ ಅವಕಾಶ ಕಲ್ಪಿಸಿಲ್ಲ. ಅದರಿಂದಾಗಿಯೇ ಕುರುಬರು ತಮ್ಮ ಮಕ್ಕಳನ್ನು ಕರ್ನಾಟಕದಲ್ಲಿರುವ ತಮ್ಮ ಸಂಬಂಧಿಕರ ಮನೆಗಳಲ್ಲಿ, ಇಲ್ಲವೇ ಹಾಸ್ಟೆಲ್‌ಗಳಲ್ಲಿಟ್ಟು ಕರ್ನಾಟಕದಲ್ಲಿಯೇ ೧ನೆಯ ತರಗತಿಯಿಂದಲೇ ಕನ್ನಡ ಮಾಧ್ಯಮದಲ್ಲಿ ಕಲಿಸುತ್ತಿದ್ದಾರೆ. ಆಂಧ್ರಪ್ರದೇಶದಲ್ಲಿ ೧ರಿಂದ ೧೦ನೆಯ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಕಲಿತವರು ಅತ್ತ ಆಂಧ್ರಪ್ರದೇಶ ಸರಕಾರಕ್ಕೂ, ಇತ್ತ ಕರ್ನಾಟಕ ಸರಕಾರಕ್ಕೂ ಬೇಡದವರಾಗಿದ್ದಾರೆ. ಕನ್ನಡದಲ್ಲಿ ಕಲಿತಿರುವುದರಿಂದ ಕರ್ನಾಟಕ ಸರಕಾರಗಳು ಅವರಿಗೆ ಉದ್ಯೋಗದಲ್ಲಿ ಅವಕಾಶಗಳನ್ನು ಕಲ್ಪಿಸಿಕೊಡಬೇಕಾಗಿದೆ. ಹಾಗಾದಾಗ ಮಾತ್ರ ಅಲ್ಲಿರುವ ಸಮುದಾಯವು ಉದ್ಯೋಗ ಪಡೆಯುವ ಮುಖೇನ ಅಭಿವೃದ್ಧಿಯತ್ತ ಸಾಗಲು ಸಾಧ್ಯವಾಗುತ್ತದೆ.

ಮೂಲತಃ ದೈವಭಕ್ತರಾದ ಕುರುಬರು ತಮ್ಮ ದೈವಗಳಿಗೆ ಪೂಜಾರಿಯಾಗುವ, ಸೇವೆ ಮಾಡುವ ಸೇವಾಗಾರರಾಗಿರುವ ಹುಡುಗನು ಓದಿನಲ್ಲಿ ಎಷ್ಟೇ ಬುದ್ಧಿವಂತನಾಗಿದ್ದರೂ, ಎಲ್ಲರೊಂದಿಗೆ ಶಾಲೆ, ಕಾಲೇಜುಗಳಲ್ಲಿ ಕಲಿಯುವ ಸಮಯದಲ್ಲಿ ಮಲಿನವಾದರೆ ತಮ್ಮ ದೈವಗಳಿಗೆ ಅಪಚಾರ ಮಾಡಿದಂತೆ ಎಂಬ ಧಾರ್ಮಿಕ ನಂಬುಗೆಗಳಿಂದ ಶಾಲಾ-ಕಾಲೇಜುಗಳನ್ನು ಬಿಡಿಸಿದ ಉದಾಹರಣೆ ಗಳಿವೆ. ಸರಕಾರಿ ನೌಕರಿ ಸಿಕ್ಕರೂ ಹೋಗದಿರುವ ನಿದರ್ಶನಗಳು ಸಾಕಷ್ಟು ದೊರೆಯುತ್ತವೆ. ಉದಾಹರಣೆಗೆ ಪೆದ್ದವುಲ್ತಿಯ ಕಾರಮಂಚಪ್ಪ ಎಂಬಾತನಿಗೆ ಸರಕಾರಿ ಉದ್ಯೋಗ ದೊರೆತಿತ್ತು.

ಆದರೆ ದೇವರ ಸೇವೆ ಮಾಡುವ ಮನೆತನದ ನೀನು ಉದ್ಯೋಗಕ್ಕೆ ಹೋದರೆ ಒಳ್ಳೆಯದಾಗುವುದಿಲ್ಲ ಎಂದು ಗುರುಗಳು ಹೇಳಿದ್ದರಿಂದ ನೌಕರಿಗೆ ಸೇರಲಿಲ್ಲವೆಂದು ಹೇಳಿದರು. ಹಾಗೆಯೇ ಗುಂಡಿಗೇನಪಲ್ಲಿಯಲ್ಲಿ 'ಪೋತುರಾಜನಾಗಿ ದೀಕ್ಷೆ ಪಡೆದ ಯುವಕನೊಬ್ಬ ದ್ವಿತೀಯ ಪಿಯುಸಿಯಲ್ಲಿ ಶೇಕಡ ೮೫ಕ್ಕೂ ಹೆಚ್ಚು ಪರ್ಸೆಂಟ್ ಅಂಕಗಳನ್ನು ಗಳಿಸಿದ್ದರೂ, ಪೋತುರಾಜನಾದ ವ್ಯಕ್ತಿ ಹುಟ್ಟಿನಿಂದ ತಲೆಗೂದಲನ್ನು ಕತ್ತರಿಸಿಕೊಳ್ಳುವಂತಿಲ್ಲ. ಹಾಗಾಗಿ ಕಾಲೇಜಿನಲ್ಲಿ ಸ್ನೇಹಿತರು ಗೇಲಿ ಮಾಡುವರೆಂಬ ಕಾರಣಕ್ಕೆ ವಿದ್ಯಾಭ್ಯಾಸವನ್ನು ಅರ್ಧಕ್ಕೆ ನಿಲ್ಲಿಸಿದನು. ಇವು ಎರಡು ಉದಾಹರಣೆಗಳಷ್ಟೇ. ಇಂತಹ ಧಾರ್ಮಿಕ, ಸಾಮಾಜಿಕ ನಂಬುಗೆಗಳಿಂದ ವಿದ್ಯಾಭ್ಯಾಸ ಮತ್ತು ನೌಕರಿಯನ್ನು ತ್ಯಜಿಸಿದ ನಿದರ್ಶನಗಳು ಈ ಭಾಗದಲ್ಲಿ ಸಾಕಷ್ಟು ದೊರೆಯುತ್ತವೆ.

**ರಾಜಕೀಯ ಸಮಸ್ಯೆಗಳು**

ಸ್ವಾತಂತ್ರ್ಯ ನಂತರ ಭಾರತದಲ್ಲಿ ಪ್ರಜಾಪ್ರಭುತ್ವ ಸರಕಾರ ಅಸ್ತಿತ್ವಕ್ಕೆ ಬಂದ ಮೊದಲ ಕಾಲ ಘಟ್ಟದಲ್ಲಿ ಈ ಸಮುದಾಯವು ತಮ್ಮ ಗುರುಒಡೆಯರು, ಯಜಮಾನ, ಹೆಗ್ಗಡೆ, ಗೌಡರಂಥವರು ಹೇಳಿದ ವ್ಯಕ್ತಿಗೆ ಮತ ಹಾಕುತ್ತ ಬಂದರು. ಕಾಲಕ್ರಮೇಣ ಆ ಮುಖಂಡನಿಂದಲೇ ಸಮುದಾಯಕ್ಕೆ ದ್ರೋಹವಾಗ ತೊಡಗಿದಾಗ ಅದರ ವಿರುದ್ಧ ಜಾಗೃತರಾದರು. ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡ ಗಡಿ ಪರಿಸರದ ಚಳ್ಳಕೆರೆ, ಮೊಳಕಾಲ್ಮೂರು, ಸಂಡೂರು, ಬಳ್ಳಾರಿ ಗ್ರಾಮೀಣ, ಸಿರುಗುಪ್ಪ ವಿಧಾನಸಭಾ ಕ್ಷೇತ್ರಗಳು ಮತ್ತು ಬಳ್ಳಾರಿ ಲೋಕಸಭೆಯು ಪರಿಶಿಷ್ಟ ಪಂಗಡಕ್ಕೆ ಮೀಸಲಾದ ಕ್ಷೇತ್ರ. ಇನ್ನು ಚಿತ್ರದುರ್ಗ ಲೋಕಸಭೆಯು ಪರಿಶಿಷ್ಟ ಜಾತಿಗೆ ಮೀಸಲಾದ ಕ್ಷೇತ್ರವಾಗಿದೆ. ಕಲ್ಯಾಣದುರ್ಗಂ, ರಾಯದುರ್ಗಂ, ಆಲೂರು, ಆದೋನಿಗಳಲ್ಲಿಯೂ ಸಮುದಾಯದ ವಿಧಾನಸಭಾ ಸದಸ್ಯರಿಲ್ಲ. ಒಟ್ಟು ಅಧ್ಯಯನ ಕ್ಷೇತ್ರದಲ್ಲಿ ಒಬ್ಬರು ಸಮುದಾಯದ ಎಂ.ಎಲ್.ಎ.ಗಳಿಲ್ಲ. ಅಧ್ಯಯನ ವ್ಯಾಪ್ತಿಯನ್ನು ಹೊರತುಪಡಿಸಿ ನೋಡಿದಾಗ ಅನಂತಪುರಂ ಜಿಲ್ಲೆಯ ಪೆನುಗೊಂಡ ಕ್ಷೇತ್ರದಲ್ಲಿ ಬಿ.ಕೆ. ಪಾರ್ಥಸಾರಥಿ ಅವರು, ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ಕ್ಷೇತ್ರದಲ್ಲಿ ಬಿ.ಜಿ. ಗೋವಿಂದಪ್ಪ ಅವರು ಸಮುದಾಯದ ವಿಧಾನಸಭಾ ಸದಸ್ಯರಿರುವುದು ಸಮಾಧಾನಕರವಾದ ಸಂಗತಿ.

ರಾಜ್ಯದಲ್ಲಿ ೧೯೯೨ಕ್ಕೆ ಮೊದಲು ಹಿಂದುಳಿದ ಸಮುದಾಯಗಳಿಗೆ ಸ್ಥಳೀಯ ಸಂಸ್ಥೆಗಳಲ್ಲಿ ಯಾವುದೇ ರಾಜಕೀಯ ಮೀಸಲಾತಿ ಇರಲಿಲ್ಲ. ೧೯೯೨ರಲ್ಲಿ ಸಂವಿಧಾನಕ್ಕೆ ೭೩ನೇ ತಿದ್ದುಪಡಿ ತಂದು ಪಂಚಾಯತ್ ರಾಜ್ಯ ವ್ಯವಸ್ಥೆಯಲ್ಲಿ ಬದಲಾವಣೆ ತರಲಾಯಿತು. ಹಿಂದುಳಿದ ಬಿ. ವರ್ಗವೆಂದು ಕರೆಯಲ್ಪಡುವ ಮೂಲಕ ಅವಕಾಶಗಳು ದೊರೆತವು. ಹಾಗಾಗಿ ಈ ಸಮುದಾಯ ಗ್ರಾಮಪಂಚಾಯ್ತಿ, ತಾಲೂಕು ಪಂಚಾಯ್ತಿ, ಜಿಲ್ಲಾ ಪಂಚಾಯ್ತಿ, ನಗರಸಭೆ, ಪುರಸಭೆ, ನಗರ ಪಾಲಿಕೆ, ಮಹಾನಗರ ಪಾಲಿಕೆಗಳಲ್ಲಿ ಕುರುಬರು ಸ್ಪರ್ಧಿಸುವಂತೆ ಮಾಡಿತು. ಸ್ಥಳೀಯ ಸಂಸ್ಥೆಗಳಲ್ಲಿ

ಅಧಿಕಾರವನ್ನು ಪಡೆದಿದೆಯಾದರೂ ಜನಸಂಖ್ಯೆಯ ದೃಷ್ಟಿಯಿಂದ ತುಂಬಾ ಕಡಿಮೆಯೆಂದೇ ಹೇಳಬೇಕಾಗುತ್ತದೆ. ಒಟ್ಟಾರೆಯಾಗಿ ಈ ಪರಿಸರದಲ್ಲಿರುವ ಸಮುದಾಯವನ್ನು ರಾಜಕೀಯವಾಗಿ ಸಂಘಟಿಸುವ ಮುಖೇನ ಆರ್ಥಿಕ, ಶೈಕ್ಷಣಿಕವಾಗಿ ಬೆಳೆಯುವ ಜೊತೆಗೆ ಪ್ರೇರೇಪಿಸುವ ಕಾರ್ಯಗಳು ಜರೂರಾಗಿ ಮಾಡಬೇಕಿದೆ. ಅದಕ್ಕಾಗಿ ಸಮುದಾಯದ ಮುಖಂಡರು, ಶಿಕ್ಷಣ ಪಡೆದವರು, ಸಂಘ-ಸಂಸ್ಥೆಗಳಿಗೆ ಪುನಶ್ಚೇತನ ನೀಡಿ ದುಡಿಯಬೇಕಿದೆ.

## ಪರಿಹಾರೋಪಾಯಗಳು

ಬ್ರಿಟಿಷರ ಆಗಮನದಿಂದಾಗಿ ಭಾರತದ ವಿವಿಧ ಸಮುದಾಯಗಳ ಸಂಘಟನೆ ಮತ್ತು ಅಭಿವೃದ್ಧಿಗಾಗಿ ಅನೇಕ ವಿಧಾಯಕ ಯೋಜನೆಗಳನ್ನು ಕಳೆದ ಶತಮಾನದ ಆರಂಭದಲ್ಲಿಯೇ ರೂಪಿಸಲಾಯಿತು. ಆ ಯೋಜನೆಗಳ ಅನುಷ್ಠಾನದಿಂದಾಗಿ ಸಮುದಾಯಗಳಲ್ಲಿ ಮಹತ್ತರವಾದ ಬೆಳವಣಿಗೆಗಳು ಕಂಡುಬಂದವು. ವಿಶೇಷವಾಗಿ ಸಮುದಾಯಗಳ ಐತಿಹಾಸಿಕ ಹಿನ್ನೆಲೆ, ಸಾಂಸ್ಕೃತಿಕ ಅನನ್ಯತೆಯನ್ನು ಅರಿತುಕೊಳ್ಳುವ ಪ್ರಯತ್ನ ಮಾಡಲಾಯಿತು. ಈ ಪ್ರಯತ್ನಕ್ಕೆ ನಾಂದಿ ಹಾಡಿದವರು ವಿದೇಶಿ ವಿದ್ವಾಂಸರು. ಹಾಗಾಗಿಯೇ ಸಮುದಾಯಗಳಿಂದು ಎಲ್ಲಾ ರಂಗಗಳಲ್ಲಿಯೂ ಬೆಳೆದುಬರುವ ಮುಖೇನ ತಮ್ಮ ಅಸ್ಮಿತೆಯ ಹುಡುಕಾಟ ನಡೆಸುತ್ತಿವೆ. ಅಂತಹ ಸಮುದಾಯಗಳಲ್ಲಿ ಕುರುಬ ಸಮುದಾಯವು ಒಂದಾಗಿದೆ. ಜನಸಂಖ್ಯಾದೃಷ್ಟಿಯಿಂದ ದೊಡ್ಡ ಸಮುದಾಯವಾಗಿದ್ದರೂ, ಸಕಷ್ಟು ಸಮಸ್ಯೆಗಳು ಹಿಂದುಳಿಯುವಂತೆ ಮಾಡಿದೆ. ಮೇಲಿನ ಬರೆಹದಲ್ಲಿ ಕರ್ನಾಟಕ ಆಂಧ್ರ ಗಡಿ ಪರಿಸರದಲ್ಲಿನ ಕುರುಬ ಸಮುದಾಯದ ಸಮಸ್ಯೆಗಳನ್ನು ಕುರಿತು ಚರ್ಚಿಸಲಾಗಿದೆ. ಸಮುದಾಯವಿಂದು ಸಮಸ್ಯೆಗಳನ್ನು ಸವಾಲಾಗಿ ಸ್ವೀಕರಿಸಿ ಪರಿಹಾರಗಳನ್ನು ಕಂಡುಕೊಳ್ಳಬೇಕಾದ ಜರೂರತ್ತಿದೆ. ಆ ಸಮಸ್ಯೆಗಳಿಗೆ ಪರಿಹಾರೋಪಾಯಕ್ಕೆ ಕಾರಣವಾಗಬಹುದಾದ ಕೆಲವು ಸಾಧ್ಯತೆಗಳನ್ನು ಈ ಕೆಳಗಿನ ಅಂಶಗಳ ಮುಖೇನ ವಿಶ್ಲೇಷಿಸಲಾಗಿದೆ.

## ಹುಲ್ಲುಗಾವಲುಗಳನ್ನು ಮೀಸಲಾಗಿಡುವುದು

ಕುರುಬರ ಪಾರಂಪರಿಕ ವೃತ್ತಿ ಕುರಿಸಾಕಾಣಿಕೆ ಇಂದು ಈ ಪರಿಸರದಲ್ಲಿರುವ ಗೋಮಾಳ, ಕಾಯ್ದಿರಿಸಿದ ಅರಣ್ಯಗಳಿಂದು ಗಣಿಗಾರಿಕೆ ಮತ್ತು ಕೈಗಾರಿಕೆಗಳ ಉದ್ದೇಶಕ್ಕೆ ಬದಲಾಗಿವೆ. ಅದಕ್ಕೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ಉತ್ತೇಜನ ನೀಡುತ್ತಿವೆ. ಪಶುಪಾಲನೆಯ ದೃಷ್ಟಿಯಿಂದ ಇಂಥ ಭೂಮಿಗಳನ್ನು ದನ-ಕುರಿಗಳ ಮೇವು-ನೀರಿಗಾಗಿ ಮೀಸಲಿರಿಸುವ ಕೆಲಸಗಳನ್ನು ಸರಕಾರಗಳು ಮಾಡಬೇಕಿದೆ. ಹೀಗೆ ಮಾಡಿದಾಗ ನಮ್ಮ ದೇಸಿ ತಳಿಗಳು ಉಳಿಯುವ ಜೊತೆಗೆ ಪಶುಪಾಲಕ ಸಮುದಾಯಗಳು ಆರ್ಥಿಕವಾಗಿ ಸದೃಢವಾಗುವ ಮೂಲಕ ದೇಶ ಪ್ರಗತಿಯತ್ತ ಸಾಗಿಬರಲು ಸಹಾಯಕವಾಗುತ್ತದೆ.

## ಕುರಿ–ಮೇಕೆಗಳಿಗೆ ಮಾರುಕಟ್ಟೆ ವ್ಯವಸ್ಥೆ

ಮೂಲತಃ ಕಷ್ಟಕರವಾಗಿರುವ ಕುರಿಸಾಕಾಣಿಕೆಯನ್ನು ಮಾಡುತ್ತಿರುವ ಸಮುದಾಯಕ್ಕೆ ಬರುವ ಲಾಭದ ಪಾಲು ಕಡಿಮೆಯಿದೆ. ಮಧ್ಯವರ್ತಿ ವ್ಯಾಪಾರಿಗಳ ಉಪಟಳವು ಹೆಚ್ಚಾಗಿದೆ. ಆದ್ದರಿಂದ ಕೃಷಿ ಉತ್ಪನ್ನ ಮಾರುಕಟ್ಟೆಯ ಮಾದರಿಯಲ್ಲಿ ಕುರಿ–ಮೇಕೆ ಉತ್ಪನ್ನಗಳ ಮಾರುಕಟ್ಟೆ ಕಾಯ್ದೆ ಜಾರಿ ಮಾಡುವ ಮೂಲಕ ಕುರಿಗಳ ನೈಜ ಬೆಲೆಯ ಲಾಭವು ನೇರವಾಗಿ ಕುರಿಗಾರರಿಗೆ ಸಿಗುವಂತೆ ಮಾಡಬೇಕು.

## ಕಂಬಳಿ ಉದ್ಯಮಕ್ಕೆ ಕಾಯಕಲ್ಪ

ಚಳ್ಳಕೆರೆ, ಮೊಳಕಾಲ್ಮೂರು, ಗುಮ್ಮಗಟ್ಟ, ಬ್ರಹ್ಮಸಮುದ್ರಂ, ಶೆಟ್ಟೂರು ಸುತ್ತಮುತ್ತಲ ಪ್ರದೇಶಗಳನ್ನು ಹೊರತುಪಡಿಸಿದರೆ ಉಳಿದೆಡೆ ಕಂಬಳಿ ನೇಯ್ಗೆಯು ಸಂಪೂರ್ಣವಾಗಿ ನಿಂತು ಹೋಗಿದೆ. ಕುರುಗೋಡು, ಸಿರುಗುಪ್ಪ, ಡಿ. ಹಿರೇಹಾಳ, ಗುಂತಕಲ್ಲು, ಆಲೂರು, ಆದೋನಿ ಪ್ರದೇಶಗಳಲ್ಲಿ ಇಂದು ಖಾಲಿ ಮಗ್ಗಗಳಿವೆ. ಅಲ್ಲಿ ಹಿಂದೆ ಕಂಬಳಿ ನೇಯ್ಗೆ ಮಾಡುತ್ತಿದ್ದ ಕುರುಹುಗಳಿವು. ಇನ್ನೂ ಅನಂತಪುರಂ ಜಿಲ್ಲೆಯಲ್ಲಿ ೧೬ಕ್ಕೂ ಹೆಚ್ಚು ಉಣ್ಣೆ ಕೈಮಗ್ಗ ಸಹಕಾರ ಸಂಘಗಳಿದ್ದವು. ಅವು ಸಂಪೂರ್ಣವಾಗಿ ನಿಂತು ಹೋಗಿವೆ. ಆಧುನಿಕ ಉಪಕರಣ ಮತ್ತು ಯಂತ್ರಗಳನ್ನು ಬಳಸಿಕೊಂಡು ಕಂಬಳಿಗಳನ್ನು ತಯಾರಿಸುವ ಮುಖೇನ ಆಧುನಿಕ ಜಗತ್ತಿಗೆ ಸ್ಪರ್ಧೆಯನ್ನು ಒಡ್ಡುವಂತೆ ತಯಾರಿಸುವತ್ತ ಸಾಗಬೇಕಾದ ಕೆಲಸಗಳನ್ನು ಸರಕಾರ, ಸಂಘ–ಸಂಸ್ಥೆಗಳು ಮಾಡಬೇಕಾಗಿದೆ.

## ಶಿಕ್ಷಣ ಸಂಸ್ಥೆಗಳ ಸ್ಥಾಪನೆ

ಕುರುಬ ಸಮುದಾಯ ಈ ಭಾಗದಲ್ಲಿ ಶೈಕ್ಷಣಿಕವಾಗಿ ತೀರಾ ಹಿಂದುಳಿದಿದೆ. ಸಮುದಾಯದಲ್ಲಿನ ಮುಖಂಡರು, ಬಂಡವಾಳಶಾಹಿಗಳು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಮುಖೇನವಾಗಿ ಈ ಭಾಗದಲ್ಲಿನ ಸಮುದಾಯವನ್ನು ಅಕ್ಷರ ಜಗತ್ತಿಗೆ ಕರೆತಂದು ಆರ್ಥಿಕವಾಗಿ ಬೆಳೆಯಲು ಪ್ರೋತ್ಸಾಹಿಸಬೇಕಿದೆ. ಆ ಮೂಲಕ ಸಮುದಾಯವನ್ನು ಅಭಿವೃದ್ಧಿ ಪಥದತ್ತ ತರಬೇಕು. ಹಾಗೆಯೇ ಬಡ ಮಕ್ಕಳಿಗಾಗಿ ತಾಲೂಕು, ಜಿಲ್ಲಾ ಮಟ್ಟದಲ್ಲಿ ವಸತಿ ನಿಲಯಗಳನ್ನು ಸ್ಥಾಪಿಸಬೇಕು. ತಾಂತ್ರಿಕ, ವೈದ್ಯಕೀಯ ಮತ್ತು ವೃತ್ತಿಪರ ಕಾಲೇಜುಗಳನ್ನು ತೆರೆದು ಗುಣಾತ್ಮಕ ಶಿಕ್ಷಣ ಕೊಡುವ ಮೂಲಕ ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಬೆಳೆಯುವಂತೆ ಪ್ರೋತ್ಸಾಹಿಸಬೇಕು.

## ಗಡಿ ಪ್ರದೇಶಕ್ಕೆ ವಿಶೇಷ ಅನುದಾನ ನೀಡುವುದು

ಗಡಿನಾಡು ಎಂದಿಗೂ ಅವಜ್ಞೆಗೆ ಒಳಗಾದ ಪ್ರದೇಶ. ಈ ಪ್ರದೇಶಗಳಿಗೆ ವಿಶೇಷ ಅನುದಾನಗಳನ್ನು ನೀಡುವ ಮೂಲಕ ಅಲ್ಲಿರುವ ಸಮುದಾಯಗಳನ್ನು ಆರ್ಥಿಕವಾಗಿ, ಶೈಕ್ಷಣಿಕವಾಗಿ ಬೆಳೆಸುವಂತಹ ಯೋಜನೆಗಳನ್ನು ರೂಪಿಸಬೇಕು. ಆ ಮೂಲಕ ಪ್ರಗತಿಯತ್ತ ತರಲು ಪ್ರಯತ್ನಿಸಬೇಕು.

## ಮೂಲ ಗುರು ಪರಂಪರೆ ಉಳಿಸಿ–ಬೆಳೆಸುವುದು

ಕರ್ನಾಟಕದಲ್ಲಿ ಕುರುಬರಿಗೆ ಮೂರು ಗುರು ಪರಂಪರೆಗಳಿವೆ. ಈ ಭಾಗದಲ್ಲಿ ರೇವಣಸಿದ್ಧ ಗುರು ಪರಂಪರೆ ಮಾತ್ರ ಕಂಡುಬರುತ್ತದೆ. ೧೯೯೨ರಲ್ಲಿ ಸ್ಥಾಪನೆಯಾದ ಕಾಗಿನೆಲೆ ಕನಕ ಗುರುಪೀಠ ಸ್ಥಾಪನೆಯಾದಂದಿನಿಂದ ಮೂಲ ಗುರು ಪರಂಪರೆಯನ್ನು ಸಮುದಾಯ ಮರೆಯುತ್ತಿದೆ. ಹಾಗಾಗಿ ಮೂಲ ಪರಂಪರೆಯ ಕುರಿತು ಸಮುದಾಯಕ್ಕೆ ಜಾಗೃತಿ ಮೂಡಿಸಲು ವಿಶೇಷ ಉಪನ್ಯಾಸಗಳನ್ನು ಏರ್ಪಡಿಸುವ ಮುಖೇನ ಭಕ್ತವರ್ಗವು ಒಡೆಯರಿಗೆ ಪ್ರತಿವರ್ಷ ಸಲ್ಲಿಸುವ ಕಾಣಿಕೆಯನ್ನು ಕೊಡಲು ಮುಂದೆ ಬರಬೇಕು. ಹಾಗೆಯೇ ಸಮುದಾಯದಲ್ಲಿರುವ ರಾಜಕಾರಣಿಗಳು ಈ ಮಠಗಳನ್ನು ಅಭಿವೃದ್ಧಿಪಡಿಸಿ, ಅಲ್ಲಿ ಮದುವೆ ಛತ್ರಗಳನ್ನು ನಿರ್ಮಿಸಿಕೊಡುವುದರ ಮೂಲಕ ಕೆಲ ಶಾಶ್ವತ ಸಂಪತ್ತು ಮಠಕ್ಕೆ ದೊರೆಯುವ ಜೊತೆಗೆ ಆದಾಯ ಬರುವಂತೆ ಮಾಡಬೇಕಾಗಿದೆ.

## ಡೊಳ್ಳಿನ ಹಾಡುಗಳ ಸಂಗ್ರಹ ಮತ್ತು ಪ್ರಕಟಣೆ

ಈ ಗಡಿ ಪರಿಸರದಲ್ಲಿ ಮೂಲ ಧಾಟಿಯಲ್ಲಿಯೇ ಸಾವಿರಕ್ಕೂ ಅಧಿಕ ಡೊಳ್ಳಿನ ಹಾಡುಗಳು ದೊರೆಯುತ್ತವೆ. ಅವನ್ನು ಹಾಡುವ ಹಾಡುಗಾರರು ೬೦ ವರ್ಷಗಳ ವಯಸ್ಸು ಮೀರಿದವರೇ ಹೆಚ್ಚಾಗಿರುವರು. ಆ ಹಾಡುಗಳನ್ನೆಲ್ಲ ಸಂಗ್ರಹಿಸಿ ಪ್ರಕಟಿಸಬೇಕು. ಹಾಗೆಯೇ ಅವರಿಗೆ ಸರಕಾರದಿಂದ ಬರುವ ಮಾಸಾಶನ ಕೊಡಿಸುವ ಕೆಲಸಗಳನ್ನು ಮಾಡಬೇಕು. ಹಾಗೆಯೇ ಅವರನ್ನು ಸನ್ಮಾನಿಸಿ ಗೌರವಿಸುವಂತಾಗಬೇಕು. ಅಲ್ಲಿ ಸಿಗುವ ಬೀರಪ್ಪ ಮತ್ತು ಮಲ್ಲಯ್ಯನಿಗೆ ಸಂಬಂಧಿಸಿದ ಕಥೆಗಳಿಗೂ ಇಲ್ಲಿನ ಕಥೆಗಳನ್ನು ತುಲನಾತ್ಮಕವಾಗಿ ನೋಡಬೇಕು. ಇಂಥ ಕೆಲವು ರಚನಾತ್ಮಕ ಕಾರ್ಯಗಳನ್ನು ಹಮ್ಮಿಕೊಳ್ಳುವ ಮೂಲಕ ಗಡಿನಾಡ ಕುರುಬ ಸಮುದಾಯದಲ್ಲಿನ ಸಮಸ್ಯೆಗಳನ್ನು ಬಹುಮಟ್ಟಿಗೆ ಪರಿಹರಿಸಿಕೊಳ್ಳಲು ಸಾಧ್ಯವಾಗುತ್ತದೆ.

### ಕೊನೆಟಿಪ್ಪಣಿಗಳು

೧. Mankad B. L., Rabaris of Kathiwad- A Social Study, p.no. 79

೨. ಎಚ್ಚಾರ್ಕೆ, ಭಾರತದ ಅರ್ಥವ್ಯವಸ್ಥೆ, ಪು. ೫೦೬

# ಅಧ್ಯಾಯ ಏಳು

# ಸಮಾರೋಪ

ಭಾರತದ ಪ್ರಾಚೀನ ಸಮುದಾಯಗಳಲ್ಲಿ ಕುರುಬ ಸಮುದಾಯವೂ ಒಂದು. ಕುರಿ ಸಾಕಾಣಿಕೆ, ಕಂಬಳಿ ನೇಯ್ಗೆ ಮತ್ತು ಕೃಷಿಯನ್ನು ಪಾರಂಪರಿಕ ವೃತ್ತಿಗಳನ್ನಾಗಿ ಮಾಡಿಕೊಂಡಿರುವ ಈ ಸಮುದಾಯವನ್ನು ಭಾರತದಾದ್ಯಂತ ವಿವಿಧ ಹೆಸರುಗಳಿಂದ ಗುರುತಿಸುವರು. ವೆರಿಯನ್ ಎಲ್ವಿನ್ ಅವರು ಉತ್ತರ ಭಾರತದ ಹಿಂದುಳಿದ ಮತ್ತು ಬುಡಕಟ್ಟು ಸಮುದಾಯಗಳ ಕುರಿತು ಅಧ್ಯಯನ ಮಾಡಿದ್ದರೆ, ದಕ್ಷಿಣ ಭಾರತದಲ್ಲಿನ ಸಮುದಾಯಗಳ ಕುರಿತು ಥರ್ಸ್ಟನ್, ಅನಂತ ಕೃಷ್ಣ ಅಯ್ಯರ್ ಅವರ ಬರಹಗಳೇ ಮೊದಲಿನವು. ಅದರಲ್ಲಿಯೂ ಕುರುಬ ಸಮುದಾಯದ ಇತಿಹಾಸ, ಉಪಪಂಗಡಗಳು, ಆಚರಣೆ ಸಂಪ್ರದಾಯ, ಜೀವನ ವಿಧಾನಗಳನ್ನು ಕುರಿತು ಥರ್ಸ್ಟನ್ ಅವರು Castes and Tribes of Southern India ಎಂಬ ಸಂಪುಟಗಳಲ್ಲಿ ದಾಖಲಿಸಿದ್ದಾರೆ. ಅನಂತರದಲ್ಲಿ ದೇಸೀ ವಿದ್ವಾಂಸರು ಸಮುದಾಯದ ಪಾರಂಪರಿಕ ವೃತ್ತಿಗಳು, ದೈವಗಳು, ನಂಬುಗೆ ಆಚರಣೆ ಸಂಪ್ರದಾಯಗಳನ್ನು ಕುರಿತಂತೆ ಅಧ್ಯಯನ ಮಾಡಿದ್ದಾರೆ. ಈ ಸಮುದಾಯದ ಮೂಲ ಮತ್ತು ಸಾಂಸ್ಕೃತಿಕ ಚಹರೆಗಳಿಗೆ ಸಂಬಂಧಿಸಿದಂತೆ ಸಾಹಿತ್ಯಿಕ ಆಕರಗಳು, ಶಾಸನ, ದಾಖಲೆಪತ್ರಗಳು, ಕಡತಗಳು ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತವೆ. ಹಾಗೆಯೇ ಮೌಖಿಕ ಸಾಹಿತ್ಯವೂ ಹೇರಳವಾಗಿದೆ.

ಕುರುಬ ಸಮುದಾಯದ ಸಾಮಾಜಿಕ ಸಂಬಂಧಗಳು, ನಂಬುಗೆ-ಆಚರಣೆ-ಸಂಪ್ರದಾಯಗಳು, ದೈವಾರಾಧನೆ, ಕಲೆ, ಸಾಹಿತ್ಯದಂತಹ ಅಂಶಗಳಲ್ಲಿ ಸಾಂಸ್ಕೃತಿಕ ವೈಶಿಷ್ಟ್ಯಗಳಿದ್ದು, ಅವನ್ನು ಯಥಾವತ್ತಾಗಿ ಇಂದಿಗೂ ಉಳಿಸಿಕೊಂಡು ಬಂದಿರುವುದು ಮತ್ತೊಂದು ಹೆಚ್ಚುಗಾರಿಕೆಯಾಗಿದೆ. ಹೀಗೆ ತನ್ನದೇ ಆದ ಪರಂಪರೆಯೊಂದಿಗೆ ಭಾರತದಾದ್ಯಂತ ಪಸರಿಸಿರುವ ಈ ಸಮುದಾಯದ ಚರಿತ್ರೆ, ದೈವಗಳು, ಗುರುಪರಂಪರೆ, ಡೊಳ್ಳಿನ ಹಾಡುಗಳ ಕುರಿತು ಅಧ್ಯಯನಗಳಾಗಿವೆ. ಆದರೆ ಇದುವರೆಗೂ ಅಧ್ಯಯನಕ್ಕೊಳಪಡದ ಕರ್ನಾಟಕ ಆಂಧ್ರಪ್ರದೇಶದ ಗಡಿಯಲ್ಲಿ ನೆಲೆಸಿರುವ ಕುರುಬರ ಚರಿತ್ರೆ

ಸಂಸ್ಕೃತಿಯನ್ನು ಕುರಿತಾದ ಅಧ್ಯಯನಗಳು ನಡೆದಿಲ್ಲ. ಈ ಹಿನ್ನೆಲೆಯಲ್ಲಿ "ಕರ್ನಾಟಕ-ಆಂಧ್ರಪ್ರದೇಶದ ಗಡಿನಾಡ ಕುರುಬ ಸಮುದಾಯ: ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯನ್ನು ಇಟ್ಟುಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ವೇದಾವತಿ ತುಂಗಭದ್ರಾ ನದಿಗಳ ಮಧ್ಯದಲ್ಲಿನ ಗಡಿ ಪರಿಸರದಲ್ಲಿ ವಾಸಿಸುತ್ತಿರುವ ಕುರುಬ ಸಮುದಾಯದ ಗ್ರಾಮಗಳು ಅವುಗಳ ಭೌಗೋಳಿಕ ಹಿನ್ನೆಲೆಯನ್ನು ಗುರುತಿಸಲಾಗಿದೆ. ಆ ಮೂಲಕ ಅವರ ಜೀವನ ಕ್ರಮ, ಸಂಪ್ರದಾಯ, ಆಚರಣೆ, ನಂಬುಗೆ-ನಡವಳಿಕೆ, ಕುಲಪದ್ಧತಿ, ದೈವಾಚರಣೆ, ಗುರು ಪರಂಪರೆ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಮತ್ತು ಮೌಖಿಕ ಪರಂಪರೆಯನ್ನು ಒಳಗೊಂಡಂತೆ ದೊರೆಯುವ ಸಂಗತಿಗಳನ್ನು ವರ್ತಮಾನದ ಹಿನ್ನೆಲೆಯಲ್ಲಿಟ್ಟು ವಿವರಿಸಿಕೊಳ್ಳುವ ಅಗತ್ಯವಿದೆ. ಹಾಗಾಗಿ ಈ ಪ್ರದೇಶದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು ಸಂಗ್ರಹಿಸಿ ತಂದ ಪ್ರಾಥಮಿಕ ಆಕರಗಳನ್ನು ಮತ್ತು ಪೂರಕ ಆಕರಗಳನ್ನು ಬಳಸಿಕೊಂಡು ವಿವರಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಹೀಗೆ ವಿಭಿನ್ನ ಚಹರೆಗಳಿಂದ ಗುರುತಿಸಿಕೊಂಡಿರುವ ಕುರುಬ ಸಮುದಾಯವು ನೆಲೆಸಿರುವಂತಹ ಕರ್ನಾಟಕ ಆಂಧ್ರ ಗಡಿ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಸಂಗ್ರಹಿಸಿದ ಮಾಹಿತಿಯನ್ನು ಮತ್ತು ಆನುಷಂಗಿಕ ಮಾಹಿತಿಯೊಂದಿಗೆ ಕೆಳಗಿನ ಫಲಿತಗಳನ್ನು ಕಂಡುಕೊಳ್ಳಲಾಗಿದೆ.

* ಈ ಪ್ರದೇಶಕ್ಕೆ ಕುರುಬರು ಉತ್ತರದಿಂದ ವಲಸೆ ಬಂದವರೆಂದೇ ಅವರು ಹೇಳುವ ಕಥೆಗಳಲ್ಲಿ ಕಂಡುಬರುವ ಪ್ರಮುಖ ಅಂಶವಾಗಿದೆ. ಮೂಲತಃ ಪಶುಪಾಲಕರಾದ ಇವರು ತಮ್ಮ ಕುರಿಗಳೊಂದಿಗೆ ಮೇವು, ನೀರು ಅರಸುತ್ತಾ ಬಂದವರು. ಇಲ್ಲಿನ ಹವಾಗುಣವೂ ಸಹ ತುಂಬಾ ಶಾಖದಿಂದ ಕೂಡಿದ್ದು ಇಲ್ಲಿನ ಮಳೆಯ ಪ್ರಮಾಣ ಕಡಿಮೆ. ಹಾಗಾಗಿ ಈ ಬಯಲುಸೀಮೆ ಕುರಿ ಸಾಕಾಣಿಕೆ ಮಾಡಲು ಅತ್ಯುತ್ತಮ ಹವಾಗುಣ ಹೊಂದಿರುವ ಪ್ರದೇಶವಾಗಿದೆ. ಅದರಿಂದಾಗಿಯೇ ಈ ಪರಿಸರದಲ್ಲಿ ಕುರುಬರಂತೆಯೇ ಗೊಲ್ಲ, ಮ್ಯಾಸಬೇಡರು ಅಧಿಕವಾಗಿ ನೆಲೆಸಿರುವುದು ಕಂಡುಬರುತ್ತದೆ. ಈ ಮೂರೂ ಸಮುದಾಯಗಳ ಮೂಲವನ್ನು ಹೇಳುವ ಕಥೆಯಂತೆ "ದೆಹಲಿ ಸುತ್ತಮುತ್ತಲ ಹಳ್ಳಿಗಳಲ್ಲಿ ನೆಲೆಸಿದ್ದ ಇವರು, ಪಶುಪಾಲನೆ, ಹಾಲಿನ ಉತ್ಪನ್ನಗಳನ್ನು ಮಾರಾಟ ಮಾಡುತ್ತಾ ಜೀವನ ಸಾಗಿಸುತ್ತಿದ್ದರು. ಒಮ್ಮೆ ದೆಹಲಿ ಪಟ್ಟಣಕ್ಕೆ ಹಾಲು ಮೊಸರು ಮಾರಲು ಹೋದ ಈ ಸಮುದಾಯದ ಹೆಣ್ಣುಮಕ್ಕಳ ಮೇಲೆ ಸುಲ್ತಾನನ ಕಣ್ಣು ಬಿತ್ತು. ಅವರನ್ನು ತನಗೆ ಮದುವೆ ಮಾಡಿಕೊಡಬೇಕೆಂದು ಹೇಳಿ ಕಳುಹಿಸಿದನು. ಹಾಲಿನಂಥ ಕುಲವನ್ನು ನೀರಾಗಿಸುವುದು ಬೇಡವೆಂಬ ಉದ್ದೇಶದಿಂದ ರಾತ್ರೋರಾತ್ರಿ ದಕ್ಷಿಣದತ್ತ ಸಾಗಿ ಬಂದರು. ಬರುವಾಗ ಗಂಗಾ ಮಾತೆಯು ಹರಿಯುವುದನ್ನು ನಿಲ್ಲಿಸಿ ದಾಟಿ ಹೋಗಲು ದಾರಿ ಬಿಟ್ಟಳು ಎಂಬ ಸಂಗತಿಗಳು ದೊರೆಯುತ್ತವೆ. ಹೀಗೆ ದೆಹಲಿಯಲ್ಲಿ ಪ್ರಾರಂಭವಾಗುವ

ಕಥೆಯು ಮತ್ತೆ ಜೀವಂತವಾಗಿ ಪ್ರತ್ಯಕ್ಷವಾಗುವುದು ಹಂಪೆಯ ಹತ್ತಿರ ಪಶುಪಾಲನೆ ಮಾಡುತ್ತಾ ನೆಲೆಸಿದರು" ಎಂಬಲ್ಲಿಗೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ತಿಳಿಯುವುದೇನೆಂದರೆ ಇವರು ಉತ್ತರ ಭಾರತದ ದೆಹಲಿ ಸುಲ್ತಾನನಿಂದ ಹಿಂಸೆಗೆ ಒಳಗಾಗಿ ದಕ್ಷಿಣಕ್ಕೆ ಬಂದವರಲ್ಲ. ಬದಲಾಗಿ ಈ ಸಮುದಾಯದವರು ಇಲ್ಲಿನ ಸ್ಥಳೀಯ ನಿವಾಸಿಗಳೇ ಆಗಿದ್ದು ಅಂದಿನ ಸಂದರ್ಭದ ಉತ್ತರ ಕರ್ನಾಟಕದಲ್ಲಿದ್ದ ಆದಿಲ್‌ಷಾಹಿಗಳ ಧಾಳಿಗೆ ತುತ್ತಾಗಿ ಕರ್ನಾಟಕ ಮತ್ತು ಆಂಧ್ರಪ್ರದೇಶದ ನಾನಾ ಭಾಗಗಳಿಗೆ ವಿಸ್ತರಿಸಿಕೊಂಡವರಾಗಿದ್ದಾರೆ.

* ಹಂಪಿ ಪರಿಸರವು ಪ್ರಾಚೀನ ಪಶುಪಾಲನೆ ಕೇಂದ್ರವಾಗಿತ್ತು ಎಂಬುದಕ್ಕೆ ಸಾಕಷ್ಟು ಕುರುಹುಗಳು ಇಲ್ಲಿ ದೊರೆಯುತ್ತವೆ. ಕುರುಬ, ಗೊಲ್ಲ, ಬೇಡರು ಇಲ್ಲಿಂದ ಚದುರಿದರು ಎಂಬುದಕ್ಕೆ ನಿದರ್ಶನವೆಂಬಂತೆ ಇಂದಿಗೂ ಅವರು ಆಚರಿಸುವ ದೇವರ ಉತ್ಸವ, ಜಾತ್ರೆಗಳು, ಹೊಸ ಪೂಜಾರಿಯನ್ನು ನೇಮಿಸುವ ಸಂದರ್ಭಗಳಲ್ಲಿ ಇಲ್ಲಿಗೆ ಬಂದು ತುಂಗಭದ್ರಾ ನದಿಗೆ ಪೂಜೆ ಸಲ್ಲಿಸಿ ನಂತರ ತಮ್ಮ ಗ್ರಾಮಗಳಿಗೆ ತೆರಳಿ ದೇವರ ಆಚರಣೆಗಳನ್ನು ಮಾಡುವುದು ಇಂದಿಗೂ ಅವರಲ್ಲಿ ಕಂಡುಬರುವುದು. ಇದು ಈ ಸಮುದಾಯಗಳು ತಮ್ಮ ಮೂಲ ನೆಲೆಯಾದ ಹಂಪಿಯೊಂದಿಗೆ ಹೊಂದಿರುವ ಧಾರ್ಮಿಕ, ಸಾಂಸ್ಕೃತಿಕ ಬಾಂಧವ್ಯವನ್ನು ಸೂಚಿಸುತ್ತದೆ. ಮೂಲತಃ ಪಶುಪಾಲಕರಾದ ಕುರುಬ, ಗೊಲ್ಲ ಮತ್ತು ಬೇಡ ಸಮುದಾಯಗಳು ಹಲವು ಕವಲುಗಳಾಗಿ ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಚದುರಿವೆ. ಈ ಸಮುದಾಯಗಳಲ್ಲಿನ ಕವಲುಗಳೆಂದರೆ, ಕುರುಬರಲ್ಲಿ ಉಣ್ಣೆಕಂಕಣ, ಹತ್ತಿಕಂಕಣವೆಂದು, ಗೊಲ್ಲರಲ್ಲಿ ಕಾಡುಗೊಲ್ಲ, ಊರುಗೊಲ್ಲರೆಂದು ಮತ್ತು ಬೇಡರಲ್ಲಿ ಮ್ಯಾಸಬೇಡ, ಊರುಬೇಡರೆಂದು ಭಾಗವಾಗಿರುವರು. ಪರಸ್ಪರರಲ್ಲಿ ವೈವಾಹಿಕ ಕೊಡುಕೊಳುವಿಕೆ ಧಾರ್ಮಿಕವಾದ ಕೆಲವು ನಿರ್ಭಂಧಗಳಿವೆ. ಅವುಗಳನ್ನು ಬಗೆಹರಿಸಿಕೊಳ್ಳುವ ಕೆಲಸವನ್ನು ಇಂದು ನಿಧಾನವಾಗಿಯಾದರೂ ಈ ಸಮುದಾಯಗಳು ಮಾಡುತ್ತಿವೆ. ಹಾಗಾದಾಗ ಮಾತ್ರ ತಾವು ಆರ್ಥಿಕ, ರಾಜಕೀಯ, ಶೈಕ್ಷಣಿಕವಾಗಿ ಅಭಿವೃದ್ಧಿ ಸಾಧಿಸಲು ಸಾಧ್ಯವೆಂಬ ಅರಿವು ಬರುತ್ತಿರುವುದು ಆಶಾದಾಯಕವಾಗಿದೆ.

* ಕುರುಬರ ಜೀವನ ಕ್ರಮದ ಮೊದಲ ಲಕ್ಷಣವೆಂದರೆ ತಮ್ಮ ಕುಲದ ಗುರು ಒಡೆಯ, ಗೌಡ, ಯಜಮಾನ, ಹಿರಿಯರಿಗೆ ಗೌರವ ತೋರಿಸುವರು. ಹಿರಿಯರು ಹಾಕಿಕೊಟ್ಟ ಪಾರಂಪರಿಕ ಮಾರ್ಗದಲ್ಲಿಯೇ ನಡೆದುಕೊಂಡು ಬರುತ್ತಿದ್ದಾರೆ. ಕಟ್ಟೆಮನೆ ಮತ್ತು ಗುರು ಮನೆಗಳು ಇವರ ಪ್ರಾಚೀನ ನ್ಯಾಯಪದ್ಧತಿಯ ಕೇಂದ್ರಗಳಾಗಿವೆ. ಉಳಿದ ಭಾಗದಲ್ಲಿರುವ ಕುರುಬರಿಗೆ ಗುರುಮನೆಗಳು ಮಾತ್ರವೇ ನ್ಯಾಯ ತೀರ್ಮಾನದ ಕೇಂದ್ರಗಳಾಗಿದ್ದರೆ, ಈ ಪರಿಸರದಲ್ಲಿ ಪ್ರತೀ ಬೆಡಗಿಗೂ ಒಂದೊಂದು ಕಟ್ಟೆ ಮನೆಯಿದೆ. ಅವು ಊರ ಹೊರ ವಲಯದಲ್ಲಿರುವ ಬೀರಪ್ಪನ ಲಿಂಗದ

ಗುಡಿಗಳೇ ಆಗಿವೆ. ಸಮುದಾಯದ ಪರಸ್ಪರರಲ್ಲಿನ ಯಾವುದೇ ವ್ಯಾಜ್ಯಗಳನ್ನು ಕುಲದ ಹಿರಿಯರು, ಗೌಡ, ಯಜಮಾನ ಸೇರಿ ಬಗೆಹರಿಸಿ ಇಲ್ಲಿಯೇ ನ್ಯಾಯ ತೀರ್ಮಾನಗಳನ್ನು ಮಾಡುತ್ತಾರೆ. ಇಲ್ಲಿ ಬಗೆ ಹರಿಯದ ವ್ಯಾಜ್ಯಗಳು ಗುರುಮನೆಗೆ ವರ್ಗಾಯಿಸಲ್ಪಡುತ್ತವೆ. ಗುರುಮನೆಯಲ್ಲಿ ಕೊಡುವ ತೀರ್ಮಾನವೇ ಅಂತಿಮವಾಗಿದ್ದು, ಅದಕ್ಕೆ ಎಲ್ಲರೂ ಬದ್ಧರಾಗಿರುತ್ತಾರೆ. ಈ ಪಾರಂಪರಿಕ ನ್ಯಾಯ ಪದ್ಧತಿಯು ಇಂದಿನ ನ್ಯಾಯಾಲಯಗಳನ್ನು ನೆನಪಿಸುತ್ತದೆ.

* ಕುರುಬರಲ್ಲಿ ನೂರಾರು ಬೆಡಗುಗಳಿದ್ದು ಅವು ನೆಲ, ಜಲ, ಗಿಡ-ಮರ, ಕುರಿ, ಹಾಲು, ದೈವ ಮುಂತಾದ ನಾಮಗಳಿಂದ ಗುರುತಿಸಿಕೊಂಡಿವೆ. ಪ್ರತಿಯೊಂದರ ಮೂಲಕ್ಕೆ ಸಂಬಂಧಿಸಿದಂತೆ ಐತಿಹ್ಯ, ಕಥೆಗಳು ದೊರೆಯುತ್ತವೆ. ಅವುಗಳಲ್ಲಿ ಸೋದರ ಸಂಬಂಧಿಗಳೆಂದು ಗುರುತಿಸಿಕೊಂಡಿರುವ ಬೆಡಗು(ಸಗೋತ್ರ)ಗಳಲ್ಲಿ ವಿವಾಹ ನಿಷಿದ್ಧ. ಕುರುಬ ಮತ್ತು ಅವರ ಗುರುಗಳಾದ ಒಡೆಯರಲ್ಲಿ ಹುಟ್ಟು ಸಾವಿನ ಮಧ್ಯದಲ್ಲಿನ ಆಚರಣೆಗಳಿಗೆ ಸಂಬಂಧಿಸಿದಂತೆ ಸಾಕಷ್ಟು ಭಿನ್ನತೆಗಳಿವೆ. ಇನ್ನು ದೈವಾರಾಧನೆಗೆ ಸಂಬಂಧಿಸಿದಂತೆ ಸಾಕಷ್ಟು ಐತಿಹ್ಯ, ಡೊಳ್ಳಿನ ಹಾಡು, ಒಗ್ಗು ಕಥೆಗಳು ಈ ಭಾಗದಲ್ಲಿ ಸಿಗುತ್ತವೆ. ಅವು ಸಾಮಾನ್ಯವಾಗಿ ಜನಿಸಿ ಅಸಾಮಾನ್ಯವಾಗಿ ಬೆಳೆದು ನಂತರ ದೈವತ್ವಕ್ಕೇರಿದ ಸಾಂಸ್ಕೃತಿಕ ವೀರರಾದ ಬೀರಪ್ಪ, ಮೈಲಾರಲಿಂಗ, ರೇವಣಸಿದ್ಧ, ಮಾಯವ್ವ, ಯಲ್ಲಮ್ಮ, ಮಾಳಮ್ಮ ಮುಂತಾದವರ ಚರಿತ್ರೆಯನ್ನು ತಿಳಿಸಿಕೊಡುತ್ತವೆ. ಕರ್ನಾಟಕ-ಆಂಧ್ರ ಗಡಿ ಭಾಗದಲ್ಲಿ ಅತೀ ಹೆಚ್ಚು ಪೂಜೆಗೊಳ್ಳುವ ದೈವವೆಂದರೆ ಬೀರಪ್ಪ. ಪ್ರತಿಯೊಂದು ಬೆಡಗಿನವರು ಒಂದೊಂದು ಹೆಸರಿನಿಂದ ಆರಾಧಿಸುವುದು ಕಂಡುಬರುತ್ತದೆ. ಇನ್ನು ಬಳ್ಳಾರಿ ಮತ್ತು ಕರ್ನೂಲು ಜಿಲ್ಲೆಗಳಲ್ಲಿ ಬೀರಪ್ಪ ನೆಲೆಗೊಂಡಿರುವ ಗ್ರಾಮಗಳಲ್ಲಿ ಆಯಾ ಊರಿನ ಹೆಸರಿನೊಂದಿಗೆ ಗುರುತಿಸುವರು ಮತ್ತು ಆರಾಧಿಸುವರು. ಕರ್ನಾಟಕದಲ್ಲಿ ಕುರುಬರಿಗೆ ಸಂಬಂಧಿಸಿದ ಪ್ರಾಚೀನ ಮೂರು ಗುರುಪರಂಪರೆಗಳಿವೆ. ಈ ಭಾಗದಲ್ಲಿ ರೇವಣಸಿದ್ಧ ಪರಂಪರೆ ಮಾತ್ರ ಕಂಡುಬರುತ್ತದೆ.

* ಕುರುಬರಲ್ಲಿ ಮುಖ್ಯವಾಗಿ ಉಣ್ಣೆಕಂಕಣ-ಹತ್ತಿಕಂಕಣ ಎಂಬ ಎರಡು ಉಪಪಂಗಡಗಳಿವೆ. ಅವು ಬೆಳೆದು ಬೆಡಗು ಅಥವಾ ಗೋತ್ರಗಳಾಗಿ ಕವಲೊಡೆದು ಸಾವಿರಕ್ಕೂ ಅಧಿಕವಾಗಿದ್ದು, ಅಧ್ಯಯನಕ್ಕೆ ಆಯ್ದುಕೊಂಡ ಪರಿಸರದಲ್ಲಿ ೨೦೦ಕ್ಕೂ ಅಧಿಕವಾಗಿ ಕಂಡುಬರುತ್ತವೆ. ಅವರಲ್ಲಿಯೇ ಶ್ರೇಷ್ಠ-ಕನಿಷ್ಠಗಳೆಂಬ ಭೇದಗಳಿದ್ದವು. ಇತ್ತೀಚಿನ ವರ್ಷಗಳಲ್ಲಿ ಮೂಲತಃ ತಾವೆಲ್ಲರೂ ಒಂದೇ ಎಂಬ ಭಾವನೆಗಳು ಮೂಡುತ್ತಿವೆ.

* ಕಾಯ್ದಿರಿಸಿದ ಅರಣ್ಯ, ಗೋಮಾಳ ಭೂಮಿಗಳನ್ನು ಬಂಡವಾಳಶಾಹಿಗಳು ಕೇಂದ್ರ ಮತ್ತು ರಾಜ್ಯ ಸರಕಾರಗಳ ಸಹಾಯದೊಂದಿಗೆ ಪಡೆದು ಕೈಗಾರಿಕೆಗಳನ್ನು ಸ್ಥಾಪಿಸಿದುದು ಒಂದೆಡೆಯಾದರೆ, ಕೇಂದ್ರ ಸರಕಾರವೇ ಪಶುಪಾಲನೆಗಾಗಿ ಮೀಸಲಾಗಿದ್ದ ಅಮೃತ ಮಹಲ್

ಕಾವಲಿನಲ್ಲಿ ಪೈಲೆಟ್ ರಹಿತ ಯುದ್ಧ ವಿಮಾನ ತರಬೇತಿ ಕೇಂದ್ರ, ಅಣು ಸ್ಥಾವರದಂಥ ಮಾನವನಿಗೆ ಮಾರಕವಾದ, ಪಶುಪಾಲನೆಗೆ ಕಂಟಕವಾದ ಉದ್ದಿಮೆಗಳನ್ನು ಸ್ಥಾಪಿಸುತ್ತಿದೆ. ಇನ್ನೂ ಬಳ್ಳಾರಿಯ ಸುತ್ತಮುತ್ತಲಿನ ಕೃಷಿ ಭೂಮಿಗಳು ಗಣಿಗಾರಿಕೆಗಾಗಿ ಖಾಸಗೀಯವರ ಪಾಲಾಗಿವೆ. ಇದರಿಂದಾಗಿ ಸಮೃದ್ಧವಾಗಿದ್ದ ಭೂಮಿ ಬರಡಾಗುತ್ತಿದೆ. ಇಂದು ಉಳಿದಿರುವ ಹುಲ್ಲುಗಾವಲು, ಗೋಮಾಳ, ಕೃಷಿ ಭೂಮಿಗಳನ್ನು ಉಳಿಸುವ ಕೆಲಸಗಳನ್ನು ಸರಕಾರಗಳು ಮಾಡಬೇಕಿದೆ.

* ಕಂಬಳಿ ನೇಯ್ಗೆಗೆ ಬೇಕಾದ ಕಚ್ಚಾ ಉಣ್ಣೆಯನ್ನು ಕುರಿಗಳಿಂದ ನೇರವಾಗಿ ಕತ್ತರಿಸಿಕೊಂಡು ತರುವವರ ಸಂಖ್ಯೆ ಕಡಿಮೆಯಾಗಿದೆ. ಇಲ್ಲಿ ಪರಂಪರಾಗತ ಪದ್ಧತಿಯಲ್ಲಿಯೇ ಕಂಬಳಿ ನೇಯುವುದರಿಂದ ಆಧುನಿಕ ವಸ್ತುಗಳ ಪೈಪೋಟಿಯಿಂದ ಕಂಬಳಿ ಉದ್ಯಮ ನೆಲಕಚ್ಚಿದೆ. ಇದಕ್ಕಾಗಿ ಸರಕಾರಗಳು ತಮ್ಮ ಅಧೀನದಲ್ಲಿರುವ ಸಂಸ್ಥೆಗಳಿಗೆ ಕಂಬಳಿ ಉತ್ಪನ್ನಗಳನ್ನು ಖರೀಧಿಸುವಂತೆ ಆದೇಶಿಸಬೇಕು. ಮುಚ್ಚಿಹೋಗಿರುವ ಉಣ್ಣೆ ಕೈಮಗ್ಗ ನೇಕಾರ ಸಂಘಗಳಿಗೆ ಪುನರ್‌ಚೇತನ ನೀಡುವ ಮುಖೇನ ಪ್ರಗತಿಪಥದತ್ತ ತಂದು ನೇಕಾರರ ಆರ್ಥಿಕ ಬದುಕನ್ನು ಸುಧಾರಿಸಬೇಕು.
* ಹಿಂದುಳಿದ ಕುರುಬ ಸಮುದಾಯದ ಶೈಕ್ಷಣಿಕ ಪ್ರಗತಿಯು ತೀರಾ ಕಡಿಮೆಯಿದೆ. ಸಮುದಾಯ ಆರ್ಥಿಕ, ರಾಜಕೀಯವಾಗಿ ಅಭಿವೃದ್ಧಿಯಾಗಲು ಸಂಘಟನಾತ್ಮಕವಾಗಿ ಬೆಳೆಯಲು ಶಿಕ್ಷಣ ಮೂಲ ಮಂತ್ರ. ಶೈಕ್ಷಣಿಕವಾಗಿ ತಾಂತ್ರಿಕ, ವೈದ್ಯಕೀಯ ಹಾಗೂ ವೃತ್ತಿಪರ ತರಬೇತಿ ಕಾಲೇಜುಗಳನ್ನು ಸ್ಥಾಪಿಸಿ ಸಮುದಾಯದ ಅಭಿವೃದ್ಧಿಗೆ ನೆರವಾಗಬೇಕು. ಅದಕ್ಕೆ ಪೂರಕವಾಗಿ ವಸತಿ ನಿಲಯಗಳನ್ನು ತಾಲೂಕು, ಜಿಲ್ಲಾ ಮಟ್ಟದಲ್ಲಿ ಸ್ಥಾಪಿಸಿ ಸಮುದಾಯ ಉನ್ನತ ಶಿಕ್ಷಣ ಪಡೆಯಲು ಅವಕಾಶಗಳನ್ನು ಒದಗಿಸಬೇಕು. ಕನ್ನಡ ಮನೆಮಾತಾದ ಕುರುಬರು ವ್ಯವಹಾರಕ್ಕೆ ತೆಲುಗನ್ನು ಬಳಸುವರು. ಹಾಗಾಗಿ ತಮ್ಮ ಮಕ್ಕಳನ್ನು ಕನ್ನಡ ಮಾಧ್ಯಮದಲ್ಲಿ ಓದಿಸಲು ಆಸಕ್ತಿ ತೋರಿಸುವರು. ಆಂಧ್ರದಲ್ಲಿ ಪ್ರೌಢಶಾಲೆಯವರೆಗೆ ಮಾತ್ರ ಕನ್ನಡ ಮಾಧ್ಯಮ ಶಾಲೆಗಳಿವೆ. ಮುಂದಿನ ವಿದ್ಯಾಭ್ಯಾಸಕ್ಕೆ ಕರ್ನಾಟಕಕ್ಕೆ ಬರುತ್ತಾರೆ. ಕನ್ನಡ ಮಾಧ್ಯಮದಲ್ಲಿ ಓದಿದವರು ಅಲ್ಲಿರುವ ಕನ್ನಡ ಶಾಲೆಗಳ ಶಿಕ್ಷಕರಾಗಲು ಮಾತ್ರ ಅರ್ಹರಾಗಿರುತ್ತಾರೆ. ಉಳಿದ ಯಾವುದೇ ಹುದ್ದೆಗಳಿಗೆ ಸೇರಲು ಅವಕಾಶವಿಲ್ಲ. ಆಂಧ್ರಪ್ರದೇಶದಲ್ಲಿ ಕಲಿತವರೆಂಬ ಕಾರಣಕ್ಕೆ ಕರ್ನಾಟಕದಲ್ಲಿಯೂ ಓದಿಗೆ ಅವಕಾಶಗಳಿಲ್ಲದೇ ಅವರ ಬದುಕನ್ನು ಅತಂತ್ರವಾಗಿಸಿರುವ ಮೂಲಕ ನಿರುದ್ಯೋಗಿಗಳಾಗಿರುವುದು ಹೆಚ್ಚಾಗಿದೆ.
* ರಾಜಕೀಯವಾಗಿಯೂ ಸಮುದಾಯ ಸಕ್ರಿಯವಾಗಿ ಭಾಗವಹಿಸಬೇಕಿದೆ. ಆ ಮೂಲಕ ಅವರಲ್ಲಿನ ಎಲ್ಲರಿಗೂ ಸರಕಾರದ ಸವಲತ್ತುಗಳು ದೊರೆಯುವಂತೆ ಮಾಡುವ ಕೆಲಸಗಳು ರಾಜಕಾರಣಿ

ಗಳಿಂದಾಗಬೇಕು. ಯಾವುದೇ ಪಕ್ಷದಲ್ಲಿದ್ದರೂ ಸಮುದಾಯದ ಅಭಿವೃದ್ಧಿಯ ವಿಷಯದಲ್ಲಿ ಒಂದಾಗಬೇಕು.

* ಕಲ್ಯಾಣದುರ್ಗಂನ ಹತ್ತಿರದಲ್ಲಿರುವ ವರ್ಲಿಕೋಡಿಪಲ್ಲಿ ಎಂಬಲ್ಲಿ ಪಾತಪ್ಪ ಅಥವಾ ಪಾತಲಿಂಗಪ್ಪನ ದೇವಾಲಯವಿದೆ. ಆತನ ಆರಾಧಕ ಮತ್ತು ಸೇವಾಗಾರರನ್ನು ಪೋತುರಾಜರೆಂದು ಕರೆಯುವರು. ಬ್ರಹ್ಮಸಮುದ್ರಂ, ಗುಮ್ಮಗಟ್ಟ ಮಂಡಲಂಗಳಲ್ಲಿ ಗುಂಡಿಗೇನಪಲ್ಲಿ, ಕಡೇ ಉಡೇವು, ನಾಗಸಮುದ್ರ, ಬಾದನಪಲ್ಲಿಗಳನ್ನು ಒಳಗೊಂಡಂತೆ ಕುರುಬ ಸಮುದಾಯದ ಪೋತುರಾಜರಿದ್ದಾರೆ. ಮ್ಯಾಸಬೇಡರಲ್ಲಿ ಒಂದು ಕುಲವೇ ಪೋತುರಾಜರದಿದೆ. ಕಲ್ಯಾಣದುರ್ಗಂ, ಪಾವಗಡದ ಕೆಲವೆಡೆ ಗೊಲ್ಲರ ಪೋತುರಾಜರಿದ್ದಾರೆ. ಯಾವುದಾದರೂ ಗ್ರಾಮದಲ್ಲಿ ಗಾವು ಸಿಗಿಯುವ ಆಚರಣೆಯಿದ್ದರೇ ಯಾವುದೇ ಸಮುದಾಯದ ದೈವವಾಗಿದ್ದರೂ ಈ ಆಚರಣೆಯನ್ನು ನಡೆಸಿಕೊಡುವವರು ಪೋತುರಾಜರು. ಅದಕ್ಕಾಗಿ ಪೋತುರಾಜರಿಗೆ ವೀಳ್ಯ ಕೊಟ್ಟು ಆಮಂತ್ರಿಸುತ್ತಾರೆ. ಈ ಧಾರ್ಮಿಕ ಆಚರಣೆಯನ್ನು ಎಲ್ಲರೂ ಸೇರಿ ನಡೆಸಿಕೊಡುವರು. ಏಕೆಂದರೆ ಪೋತುರಾಜ ಧೀಕ್ಷೆ ಪಡೆದವರು ಯಾವುದೇ ಜಾತಿಯವರಾಗಿದ್ದರೂ ತಾವೆಲ್ಲರೂ ಒಂದೇ ಒಕ್ಕಲಿನವರೆಂಬ ಭಾವನೆ ಅವರಲ್ಲಿದೆ. ಗಂಡಿಗೇನಪಲ್ಲಿ ಮತ್ತು ಕಡೇಉಡೇವು ಪಾತಪ್ಪನಗುಡಿ ಗ್ರಾಮಗಳಲ್ಲಿ ಪಾತಪ್ಪನ ಗುಡಿಗಳಿವೆ. ಕಡೇಉಡೇವಿನಲ್ಲಿ ಪಾತಪ್ಪನ ಚಿಕ್ಕ ದೇವಾಲಯದಲ್ಲಿ ಸಾಲಾಗಿ ಮೂರು ಲಿಂಗಗಳು ಉದ್ಭವಿಸಿವೆ. ಪ್ರತೀ ವರ್ಷವೂ ಪಾತಪ್ಪನಗುಡಿ ಗ್ರಾಮದಲ್ಲಿ ಗಾವು ಸಿಗಿಯುವ ಕಾರ್ಯ ನಡೆಯುತ್ತದೆ. ಗಾವು ಸಿಗಿಯುವ ವೇಳೆಯಲ್ಲಿ ಅಳ್ಳೇನ ಕುರುಬರು ತಣ್ಣೀರ ಬಿಂದಿಗೆಯನ್ನು ಹೊತ್ತು ತರಬೇಕಾದುದು ಪದ್ಧತಿ. ಬಿಸಿ ಮುದ್ದೆಯನ್ನು ಗಾವು ಸಿಗಿಯುವ ಸ್ಥಳದ ಸುತ್ತಲೂ ಚೆಲ್ಲುತ್ತಾರೆ. ಅದನ್ನು ಆರಿಸಿಕೊಂಡು ಬಂದು ತಮ್ಮ ಹೊಲಗಳಿಗೆ ತೆಗೆದುಕೊಂಡು ಹೋಗಿ ಚೆಲ್ಲುತ್ತಾರೆ. ಇದರಿಂದ ಫಸಲು ಹುಲುಸಾಗಿ ಬೆಳೆಯುತ್ತದೆ ಮತ್ತು ದುಷ್ಟಶಕ್ತಿಗಳ ಕಾಟ ಬರದಂತೆ ತಡೆಯುತ್ತದೆ ಎಂಬ ನಂಬುಗೆಯು ಈ ಭಾಗದಲ್ಲಿದೆ.

* ಕುರುಬರು ಆರಾಧಿಸುವ ದೈವಗಳಲ್ಲಿ ಬೀರಪ್ಪ, ಮೈಲಾರಲಿಂಗ ಪ್ರಮುಖರಾಗಿದ್ದು, ಅವರ ಆಚರಣೆಗಳು ಈ ಭಾಗದಲ್ಲಿ ಹೆಚ್ಚಾಗಿವೆ. ಡೊಳ್ಳಿನ ಹಾಡು ಮತ್ತು ಒಗ್ಗುಕಥೆಗಳಲ್ಲಿ ಅವರ ಕುರಿತು ವಿಭಿನ್ನವಾದ ಕಥೆಗಳಿವೆ. ಬೀರಪ್ಪನ ಕಥೆಯು ಆಂಧ್ರಪ್ರದೇಶದಲ್ಲಿ ಮಲ್ಲಯ್ಯನಿಗೆ ವರ್ಗಾಯಿಸಲ್ಪಟ್ಟಿದೆ. ಅಲ್ಲಿ ಕುರಿಗಳು ದೊರೆಯುವುದು ಮಲ್ಲಯ್ಯನಿಗೆ. ಬೀರಪ್ಪನನ್ನು ಸಲಹುವುದು ಮಾಳಮ್ಮಳಾದರೆ, ಮಲ್ಲಯ್ಯನನ್ನು ಸಲಹುವುದು ಮಹಾಂಕಾಳಿಯಾಗಿದ್ದಾಳೆ. ಇಲ್ಲಿ ಬೀರಪ್ಪನಿಗೆ ಕನ್ನಿಕಾಮವ್ವ ಒಬ್ಬಳೇ ಹೆಂಡತಿ. ಮಲ್ಲಯ್ಯನಿಗೆ ಜೇಟಿ, ಪಶುಪಾಲನೆ ಮತ್ತು ಕೃಷಿ ಸಂಸ್ಕೃತಿಯನ್ನು ಬಿಂಬಿಸುವಂತೆ ಮೂರುಜನ ಪತ್ನಿಯರಿರುವುದನ್ನು ತಿಳಿಸುತ್ತವೆ.

* ಗೊಲ್ಲಂನ ಗಾದಿಲಿಂಗಪ್ಪ ಕುರುಬ ಸಮುದಾಯದಲ್ಲಿ ಜನಿಸಿ ತನ್ನ ಸಮಾಜಮುಖಿ ಕಾರ್ಯಗಳು ಮತ್ತು ಪವಾಡಗಳಿಂದ ದೈವತ್ವಕ್ಕೇರಿದ ಅವಧೂತ ಪರಂಪರೆಯ ಸಂತ. ಆತನು ಕುರುಬರಿಗೆ ಆರಾಧ್ಯ ಪುರುಷನಾಗಿದ್ದಾನೆ. ಬಳ್ಳಾರಿ, ಕರ್ನೂಲು, ಅನಂತಪುರಂ ಜಿಲ್ಲೆಗಳಲ್ಲಿ ಎಲ್ಲ ಸಮುದಾಯಗಳು ಆತನನ್ನು ಆರಾಧಿಸುತ್ತಾರೆ. ಇನ್ನು ನಾಯಕನಹಟ್ಟಿ ತಿಪ್ಪಯ್ಯನು ಎಲ್ಲ ಸಮುದಾಯಗಳಿಗೂ ದೈವವಾಗಿದ್ದು, ಆ ಹೆಸರುಗಳನ್ನು ಎಲ್ಲರೂ ಇಟ್ಟುಕೊಳ್ಳುವುದನ್ನು ಕಾಣಬಹುದು.
* ಕುರುಬ ಸಮುದಾಯ ಆರ್ಥಿಕವಾಗಿ ಹಿಂದುಳಿದಿದ್ದರೂ, ಮೌಖಿಕವಾಗಿ ಶ್ರೀಮಂತ ಪರಂಪರೆಯನ್ನು ಹೊಂದಿದೆ. ಕ್ಷೇತ್ರಕಾರ್ಯದಲ್ಲಿ ಇಲ್ಲಿರುವ ದೈವಗಳಾದ ಬೀರಪ್ಪ, ಮಲ್ಲಯ್ಯ, ಕಲ್ಲುಡಿಯಪ್ಪ, ರಾಮಪ್ಪ, ವಸಿಕೇರಪ್ಪ, ಬಲ್ಲೂರಪ್ಪಗಳಂಥಹ ದೈವಗಳಿಗೆ ರೇವಣಸಿದ್ಧ, ಬಸವಣ್ಣ, ಗಾದಿಲಿಂಗಪ್ಪನಿಗೆ ಸಂಬಂಧಿಸಿದಂತೆ ೧೨೦ಕ್ಕೂ ಅಧಿಕವಾಗಿ ಡೊಳ್ಳಿನ ಹಾಡುಗಳು ದೊರೆತಿವೆ. ಈ ಹಾಡುಗಳು ಮೂಲ ಧಾಟಿಯನ್ನು ಇಂದಿಗೂ ಉಳಿಸಿಕೊಂಡು ಬಂದಿವೆ. ಇವುಗಳ ಜೊತೆಗೆ ಬೀರಪ್ಪನ ಸಂಧಿ, ಮಲೆಯಮ್ಮನ ಸಂಧಿ, ಎಂಬ ಕಾವ್ಯವೊಂದು ಡೊಳ್ಳಿನ ಹಾಡುಗಳ ರೂಪದಲ್ಲಿ ದೊರೆತಿದೆ. ಅದು ಬೀರಪ್ಪನ ಕುರಿತಂತೆ ಇದುವರೆಗೆ ಸಿಗದಂತಹ ಭಿನ್ನವಾದ ಚರಿತ್ರೆಯನ್ನು ಮತ್ತು ಪವಾಡಗಳನ್ನು ತಿಳಿಸುತ್ತದೆ.

ಕುರುಬ ಸಮುದಾಯದ ಹುಟ್ಟು, ಪರಂಪರೆ ಮತ್ತು ದೈವಗಳಿಗೆ ಸಂಬಂಧಿಸಿದಂತೆ ಆಂಧ್ರಪ್ರದೇಶದಲ್ಲಿ ಡೊಳ್ಳಿನ ಹಾಡುಗಳು ಮತ್ತು ತೆಲಂಗಾಣದಲ್ಲಿ ಒಗ್ಗು ಕಥೆಗಳು ಸಾಕಷ್ಟು ದೊರೆಯುತ್ತವೆ. ಶ್ರೀಮಂತ ಪರಂಪರೆಯನ್ನು ಹೊಂದಿರುವ ಅವುಗಳನ್ನು ಜಾಗತೀಕರಣದ ಈ ಸಂದರ್ಭದಲ್ಲಿ ಆಧುನಿಕ ಪರಿಕರ(ಆಡಿಯೋ,ವೀಡಿಯೋ)ಗಳನ್ನು ಬಳಸಿಕೊಂಡು ಡೊಳ್ಳಿನ ಹಾಡು/ಒಗ್ಗುಕಥೆಗಳನ್ನು ಹಾಡುವವರಿಂದ ಹಾಡಿಸಿ ಸಂಗ್ರಹಿಸುವುದು, ಅವುಗಳನ್ನು ಕ್ರಮಬದ್ಧವಾಗಿ ಅರ್ಥೈಸಿ ಲಿಖಿತ ರೂಪದಲ್ಲಿ ಪ್ರಕಟಿಸುವ ಕಾರ್ಯ ಆಗಬೇಕಾಗಿದೆ. ಜೊತೆಗೆ ಅವುಗಳನ್ನು ಇತರೆ ಭಾಷೆಗಳಿಗೆ ಅನುವಾದಿಸುವುದರ ಮೂಲಕ ಸಮುದಾಯದ ಅನನ್ಯತೆಯನ್ನು ಪರಿಚಯಿಸುವ ಕಾರ್ಯ ಮಾಡಬೇಕಿದೆ.

ಕರ್ನಾಟಕಾಂಧ್ರ ಗಡಿ ಪರಿಸರದಲ್ಲಿ ನಡೆಯುವ ಸಮುದಾಯದ ಧಾರ್ಮಿಕ ಆಚರಣೆಗಳನ್ನು ವಿಡಿಯೋ ಚಿತ್ರೀಕರಣ ಮಾಡುವುದರ ಮೂಲಕ ಒಂದೆಡೆ ಸಂಗ್ರಹಿಸುವುದು. ಆ ಮುಖೇನ ಅಲ್ಲಿನ ವೈಶಿಷ್ಟ್ಯಗಳನ್ನು ಗುರುತಿಸುವುದು ಜೊತೆಗೆ ಅವುಗಳನ್ನು ಇತರೆಡೆಗಳಲ್ಲಿ ನಡೆಯುವ ಸಮುದಾಯದ ಆಚರಣೆಗಳೊಂದಿಗೆ ತುಲನಾತ್ಮಕವಾಗಿ ನೋಡುವುದರ ಮೂಲಕ ಸಾಮ್ಯತೆಗಳನ್ನು ಗುರುತಿಸುವ ಕಾರ್ಯ ನಡೆಯಬೇಕಾಗಿದೆ.

